# ಭರತೇಶವೈಭವ ಸಂಗ್ರಹ

ಸಂಪಾದಕ
**ಟಿ. ಎಸ್. ಶಾಮರಾವ್, ಎಂ.ಎ.,**



---

ಪ್ರಸಾರಾಂಗ
**ಮೈಸೂರು ವಿಶ್ವವಿದ್ಯಾನಿಲಯ**
೧೯೬೨

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೬೨

ಪ್ರಧಾನ ಸಂಪಾದಕ
ಡಾ|| ಕೆ ವಿ. ಪುಟ್ಟಪ್ಪ, ಎಂ ಎ , ಡಿ ಲಿಟ್

# ಭರತೇಶವೈಭವ ಸಂಗ್ರಹ

ಸಂಪಾದಕ
ಟಿ ಎಸ್ ಶಾಮರಾವ್, ಎಂ ಎ ,




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೨

# ಮುನ್ನುಡಿ

ಕಾವ್ಯ, ವಸ್ತು ಮತ್ತು ದರ್ಶನದ ದೃಷ್ಟಿಯಿಂದ ನೋಡುವುದಾದರೆ ಭರತೇಶ ವೈಭವದ ಕರ್ತೃವಾದ ರತ್ನಾಕರನರ್ಣಿ ಹಿಂದಿನ ಮಹಾಕವಿಗಳ ಪಂಕ್ತಿಯಲ್ಲಿ ಪ್ರಥಮ ಶ್ರೇಣಿಗೆ ಏರುವಂತೆ ತೋರುತ್ತದೆ ಆದರೆ ರೀತಿಯ ಕೊನೆಯ ವಾದವಾದ ಭಾಷೆ ಮತ್ತು ಛಂದಸ್ಸುಗಳ ದೃಷ್ಟಿಯಿಂದ ಆ ಸ್ಥಾನ ಆ ಎತ್ತರದಲ್ಲಿಯೇ ಏರಿಳಿತಗಳಿಲ್ಲದೆ ಇರಬಲ್ಲುದೆಂದು ಹೇಳಲಾಗುವುದಿಲ್ಲ ಹೀಗಿದ್ದರೂ ರತ್ನಾಕರನರ್ಣಿ ನಿಜವಾಗಿಯೂ ಮಹಾಕವಿ ಎಂಬ ಹೆಸರಿಗೆ ಆದರ ಸಂಪೂರ್ಣಾರ್ಥದಲ್ಲಿ ಅರ್ಹನಾಗುತ್ತಾನೆ , ಇದು ಔಪಚಾರಿಕವಲ್ಲ

ಭರತೇಶವೈಭವದಲ್ಲಿ ತ್ಯಾಗ ಭೋಗಗಳ ಸಮನ್ವಯದ ಯೋಗದರ್ಶನವನ್ನು ಕವಿ ಸುಂದರವಾಗಿ ಪ್ರತಿಮಿಸಿದ್ದಾನೆ ಅಷ್ಟೆ ಅಲ್ಲ, ಕವಿ ಆದರ್ಶವನ್ನು ಭರತನ ಜೀವನದಲ್ಲಿ ಮಾತ್ರವೇ ಅಲ್ಲದೆ ಇಡೀ ಕಾವ್ಯದ ವಿವರ ವಿವರಗಳಲ್ಲೆಲ್ಲ ಬುದ್ಧಿಪೂರ್ವಕ ವಾಗಿ ಪ್ರತಿಮಿಸಿರುವುದನ್ನು ನೋಡಿದರಂತೂ ಇಂತಹ ಕಾವ್ಯಸೃಷ್ಟಿ ಜಗತ್ತಿನ ಮಹತ್ತಾದ ಸಾಹಿತ್ಯದಲ್ಲೂ ಅಗಿರುವಂತೆ ಕಾಣುವುದಿಲ್ಲ ಆ ದೃಷ್ಟಿಯಿಂದ ಈ ಕೃತಿ ಜಗತ್‌ಕೃತಿ ಸಿದ್ಧವ್ಯಕ್ತಿಗೆ ಜೀವನವೆಲ್ಲ ಉಪಾಸನೆ , ಅವನಿಗೆ ಅಲ್ಪ ಎಂಬುದಿಲ್ಲ ಅತ್ಯಂತ ಸಾಮಾನ್ಯ ಜೀವನದ ಅತ್ಯಂತ ಸಾಮಾನ್ಯ ಘಟನೆಗಳೂ ಮಹತ್ವ ಪೂರ್ಣ ವಾದುವು , ಅಂಥವನು ಲೋಕವ್ಯವಹಾರದಲ್ಲೂ ಅಲೋಕವ್ಯವಹಾರಿಯಾಗುತ್ತಾನೆ— ಎಂಬುದನ್ನು ಕವಿ ಭರತೇಶನ ಜೀವನದಲ್ಲಿ ಎತ್ತಿ ತೋರಿದ್ದಾನೆ ಭಗವದ್‌ಗೀತೆಯಲ್ಲಿ ಹೇಳುವ ಸ್ಥಿತಪ್ರಜ್ಞನನ್ನು ಕವಿ ಭರತನಲ್ಲಿ ಸೃಷ್ಟಿಸಿದ್ದಾನ ಕರ್ಮದಲ್ಲಿದ್ದೂ ನಿಷ್ಕರ್ಮಿ ಯಾಗಿರುವ, ನಿಷ್ಕರ್ಮಿಯಾಗಿದ್ದೂ ಲೋಕ ಸಂಗ್ರಹ ಹಿತಾರ್ಥವಾಗಿ ಕರ್ಮಿಯಾಗುವ ನಿಷ್ಕಾಮ ಕರ್ಮಿಯನ್ನು ಕವಿ ಭರತನಲ್ಲಿ ಕಾಣಿಸಿದ್ದಾನೆ

ಸಕ್ತಾ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಽಸಕ್ತ ಶ್ಚಿಕೀರ್ಷುರ್ಲೋಕ ಸಂಗ್ರಹಮ್॥ ೩–೨೫

ತನ್ನ ಕರ್ಮೇಂದ್ರಿಯಗಳಿಂದ ಸರ್ವ ಕರ್ಮವನ್ನು ಮಾಡಿಸಿದರೂ ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿರುವುದರಿಂದ ಭರತ ಜೀವನ್ಮುಕ್ತನಾಗಿದ್ದಾನೆ.

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೩–೭

ಭೂಮಂಡಲಾಧಿಪತಿಯಾಗಿ ಸಿಂಹವಿಷ್ಟರಮಂಡಿತನಾಗಿ ಶೋಭಿಸುವಾಗಲೂ

''ಗಾನಮದ್ದಳೆಗೆ ತಾಳಲಯಕೆ ನರ್ತಿಪ ಮಂದ | ಯಾನೆಗೆ ಶಿರದ ಕುಂಭದೊಳು |
ಧ್ಯಾನವಿಪ್ಪಂತೆ ರಾಜ್ಯದೊಳಿರ್ದು ಮುಕ್ತಿ ಸಂ । ಧಾನದೊಳಗೆ ಅವನ ನೆನಹು ॥

—ಇರುತ್ತದೆ

“ಮಾಂಡಳಿಕರ ಕೈಯ ಹಡಪ ಹಾವುಗೆ ಕುಂಚ ಗಿಂಡಿ ಹಿಡಿಸಿಕೊಂಬ” ಇವನು ತನ್ನ ಗುರುವಿನ ಬರವನ್ನು ತಿಳಿದೊಡನೆ “ಗಂಡಗರ್ವವ ಬಿಟ್ಟು ನಡೆದನು— ಗುರುವಿಗೆ ಗಿಂಡಿಯಾಳಿಗದನನಾಗಿ ” ಬಂದ ಗುರುವಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ ಆವರ ಪ್ರದಕ್ಷಿಣೆ ಬರುವಾಗಲೂ ಅವನು ತನ್ನೊಳಗಿನ ಪರಮಹಂಸನನ್ನೂ ಪ್ರದಕ್ಷಿಣೆ ಬರುತ್ತಾನೆ

ಬಲಗೊಂಡಮರೆ ಮೂರು ಬಾರಿ ತನ್ನೊಳು ತಾನು | ಗೇವೇರಿ ಮುನಿಗಳಿರ್ಪರಿಗೆ |
ನಲಿದೆರಗಿದನು ನಿದಾನದೆಡೆಗೆ ದೀಪ | ಕಳಿಕೆ ತಾರಗೆಯಂದದೊಳು ||

ಗುರುಪ್ರಸಾದವನ್ನು ತನ್ನ ತೊಂಬತ್ತಾರು ಸಹಸ್ರ ಸತೀವೃಂದದ ಮಧ್ಯೆ ಕುಳಿತು ಅವರೆಲ್ಲರಿಗೂ ಹಂಚಿ ಅದನ್ನು ತಾನೂ ಸ್ವೀಕರಿಸುತ್ತಿದ್ದರೂ, ಅವನ ಎದೆಯ ಸಂಧಾನ ಗುರುಹಂಸನಾಥನೊಡನೆ ಜೊತೆಜೊತೆಯಲ್ಲೆ ನಿರಂತರವಾಗಿ ನಡೆದಿರುತ್ತದೆ

ಹರಿಪಾಠ ಒಟ್ಟಿಲಿಗಳಿಗೆ ಬಾಯ್ದೆರೆದಾಗ | ಕರತಲ ಸಂಧಾನವಿಹುದು |
ಗುರುಹಂಸನಾಥಗೆ ಸಿದ್ಧಲೋಕಕೆ ಪೋಗಿ | ಬರುತಿಹುದೆದೆಯ ಸಂಧಾನ ||

ಈ ಎಲ್ಲ ತಪಸ್ಸಿಗಿಂತಲೂ ಮಹತ್ತರವಾದೊಂದು ತಪಸ್ಸನ್ನು ಅದರ ಸಿದ್ಧಿಯನ್ನು ಭರತ ತನ್ನ ಸತಿ ಕುಸುಮಾಜಿಯೊಡನೆ ಸುಖಿಸುವಂದು ನಡೆಸುತ್ತಿದ್ದ ಆತ್ಮ ಪರಮಾತ್ಮ ರತಿಯಲ್ಲಿ ದರ್ಶಿಸಬಹುದು

ಸಂಕಲ್ಪವಿಲ್ಲ ವಿಕಲ್ಪವಿಲ್ಲೊಂದರ | ಸೋಂಕಿಲ್ಲ ತನ್ನನೆ ತಾನು
ಸೋಂಕಿ ತನ್ನೊಳು ಹುಟ್ಟಿದಾನಂದರಸದೊಳು | ತೇಂಕಾಡುತಿದ್ದನಾ ಬೋಗಿ ||

ಹೀಗೆ ಭರತನ ಜೀವನದಲ್ಲಿ ಲೋಕವ್ಯವಹಾರವೆಲ್ಲವೂ ಅಲೋಕವ್ಯವಹಾರ ವಾಗಿಯೆ ಇವೆ ಅಂತಾಗಿ, ಕಾವ್ಯದಲ್ಲಿ ಪ್ರಧಾನತಃ ಭರತನ ಜೀವನದಲ್ಲಿ ಮೈದೋ ರುವ ಶೃಂಗಾರ ಸಾಮಾನ್ಯ ಜನರ ದೃಷ್ಟಿಯಲ್ಲಿ ಅಶ್ಲೀಲವೆಂಬಂತೆ ಕಂಡರೂ ದರ್ಶನದ ಔನ್ನತ್ಯದಿಂದ ಪರಿಗಣಿತವಾದಾಗ ಅದು ಗಾಂಭೀರ್ಯವಾಗಿ ತೋರುತ್ತದೆ ‘‘ಮಹಿಮೆ ತಾಂ ಮಾಳ್ಪುದನಿತುಂ ಮಹತ್ ಕಲೆಯಲ್ತೆ !” ಕವಿಯೆ ಅದನ್ನು ಹೇಳುತ್ತಾನೆ

‘‘ಮಾರ್ಗವಲ್ಲೆಂಬಂತೆ ತೋರ್ಪುದನ್ಯರಿಗೆ ಸ | ನ್ಮಾರ್ಗದೊಳವನಿರುತಿಹನು |
ಆರ್ಗೆ ತಿಳಿಯಬಹುದಾತ್ಮವಿಜ್ಞಾನಿಯಂ | ತರ್ಗತವನು ಜಿನ ಬಲ್ಲ ||’’
‘‘ಗೂಳಿ ನಡೆವ ಹಜ್ಜೆ ತೋರುವುದಲ್ಲದೆ | ಗಾಳಿಯ ಹಜ್ಜೆ ತೋರುವುದೆ !’’ ಎಂದು

ಷೋಡಶ ಸಹಸ್ರ ಸತೀಲೋಲನಾದ ಭಾಗವತದ ಶ್ರೀಕೃಷ್ಣನನ್ನು ಈ ಭರತ ನೆನಪಿಗೆ ತರುತ್ತಾನೆ ಇಬ್ಬರನ್ನೂ ವರ್ಣಿಸುವಂತಹ ಪಂಕ್ತಿಗಳನ್ನು ಗೀತೆಯಿಂದಲೇ

---

*‘‘ ಶ್ರೀರಾಮಾಯಣ ದರ್ಶನಂ’’ ಅಯೋಧ್ಯಾ ಸಂಪುಟ ಪುಟ ೧೫೯
ಸಂಚಿಕೆ ; ಪಾದುಕಾ ಕಿರೀಟಿ ಪಂಕ್ತಿ : ೬೮

ಉದ್ಧರಿಸಬಹುದೆಂದು ತೋರುತ್ತದೆ ಆದಕ್ಕೆ ಮೊದಲು ಈ ಕವಿ ಭರತನನ್ನು ವರ್ಣಿಸಿರುವ ಒಂದು ಪದ್ಯವನ್ನು ನೋಡಬಹುದು

ಭೋಗ ವಿಚಾರವು ಬೇಕು ನೃಪತಿಗಾತ್ಮ | ಯೋಗ ವಿಚಾರವು ವೇಕು ॥
ರಾಗರಸಿಕನಾಗಬೇಕು ಭಾವಿಸೆ ವೀತ | ರಾಗರಸಿಕನಾಗಬೇಕು ||

ಕರ್ಮದಲ್ಲಿ ಅಕರ್ಮವನ್ನೂ, ಅಕರ್ಮದಲ್ಲಿ ಕರ್ಮವನ್ನೂ ಮಾಡುವ, ಎಲ್ಲರಂತೆ ಎಲ್ಲ ಕರ್ಮವನ್ನೂ ಮಾಡಿದರೂ ಅವೆಲ್ಲವನ್ನೂ ಪರಮಾತ್ಮನಲ್ಲಿ ಅರ್ಪಿಸಿ ತಾವರೆಯ ಎಲೆಯಂತೆ ನೀರಿಗಂಟದೆ ಇರುವ ಜೀವನ್ಮುಕ್ತನನ್ನು ಭಗವದ್ಗೀತೆಯ ಈ ಶ್ಲೋಕಗಳ ವರ್ಣಿಸುತ್ತವೆ

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸಯುಕ್ತ ಕೃತ್ಸ್ನ ಕರ್ಮಕೃತ್ ೪–೧೮
ನೈವ ಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ || ೫–೮
ಪ್ರಲಪನ್ವಿಸೃಜನ್ ಗೃಹ್ಣನ್ ಉನ್ಮಿಷನ್ ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ೫–೯
ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ || ೫–೧೦

ಬೃಹತ್ತಿನ ದೃಷ್ಟಿಯಲ್ಲಿಲ್ಲದಿದ್ದರೂ ಗುಣದ ಔನ್ನತ್ಯದಲ್ಲಿ ಇದನ್ನೆ ಹೋಲುವ ಹರಿಹರನ ನಂಬಿಯಣ್ಣನ ರಗಳೆಯಲ್ಲಿ ಇದೇ ದರ್ಶನ ಪ್ರತಿಮಿತವಾಗಿರುವುದನ್ನು ಕಾಣುತ್ತೇವೆ ಅಲ್ಲಿ "ಮಾಡಿತೆಲ್ಲಂ ಪೂಜೆಯಾಗಿ, ಆಡಿತೆಲ್ಲಂ ಸ್ತುತಿಯಾಗಿ" ಪರಿಣಾಮಗೊಳ್ಳುವುದನ್ನೂ "ಕಾಮ ರತಿಕ್ರೀಡಾ ಕಾರ್ಯಂ ಶಿವಾರ್ಪಿತ ಕಾರಣ" ವಾಗುವುದನ್ನೂ ಕವಿ ನಂಬಿಯ ಜೀವನದಲ್ಲಿ ಕಾಣಿಸಿದ್ದಾನೆ ಹರಿಹರನೆ ನಂಬಿಯನ್ನು ಹೀಗೆ ಒಂದೆ ವೃತ್ತದಲ್ಲಿ ವರ್ಣಿಸಿದ್ದಾನೆ

ನೋಡುವ ಚೆಲ್ವಮಂ, ನುಡಿವ ವಾಕ್ಯಮುಮಂ, ಮನದುಳ್ಳಿದಕ್ಕಟಿಂ
ಕೂಡುವ ಸೌಖ್ಯಮಂ, ತನಗೆ ಬಂದ ಮಹೋನ್ನತ ಸಂಪದಂಗಳಂ,
ಪಾಡಿಸುವಳ್ತಿಯಂ, ಸವಿವ ಸರ್ವ ಪದಾರ್ಥ ಸುಖಂಗಳಂ, ಕರಂ
ಕೂಡೆ ಶಿವಾರ್ಪಿತಂಗುಡುತ ಸೌಂದರನೊಪ್ಪುತಿರಲ್ ನಿರಂತರಂ"

ಹೀಗೆ ಭರತೇಶವೈಭವದ ವಸ್ತು ದರ್ಶನಗಳು ಗಹನವಾದುವು ಆದರೆ ಮೊದಲೆ ಹೇಳಿದಂತೆ ಆದರ ಭಾಷೆ ಮತ್ತು ಛಂದಸ್ಸು ಆ ಭಾರವನ್ನು ಆನಲು ಸಮರ್ಥವಾಗಿವೆ ಎಂದು ಹೇಳಲು ಕಷ್ಟವಾಗುತ್ತದೆ. ಹಡಗಿನಲ್ಲಿ ದಾಟಬೇಕಾದ ಸಾಗರವನ್ನು

ಹರಿಗೋಲಿನಲ್ಲಿ ದಾಟಲು ಹೊರಟಂತಿವೆ ಈ ಸಾಹಸ ಎಲ್ಲಿ ಸಾಮಾನ್ಯ ಸಾಧಾರಣ ಸಂಸಾರದ ಮೃದು ಲಲಿತ ವ್ಯಾಪಾರಗಳನ್ನು ಕವಿ ಚಿತ್ರಿಸಲು ಹೊರಟಿದ್ದಾನೆಯೋ ಅಲ್ಲೆಲ್ಲ ಅದು ಅತ್ಯಂತ ಸಮರ್ಪಕವಾಗಿಯೇ ಇದ್ದರೂ ಸಮಗ್ರ ಕಾವ್ಯದ ದೃಷ್ಟಿಯಿಂದ ಹೇಳುವುದಾದರೆ, ಅಂದರೆ ಯುದ್ಧ ಮೊದಲಾದ ವೀರ ರೌದ್ರಾದಿ ರಸಗಳನ್ನು ಚಿತ್ರಿಸುವಾಗ ಈ ರೀತಿ ಅಥವಾ ವಿಧಾನ ಹೊತ್ತಹೊರೆಯ ಗುರುಭಾರಕ್ಕೆ ಕುಸಿಯುವಂತೆ ಕಾಣುತ್ತದೆ

ಆದರೂ ಒಂದು ದೃಷ್ಟಿಯಿಂದ ಇವನ್ನು ಸಮರ್ಥಿಸಲೂಬಹುದು ಸಾಮಾನ್ಯ ಹಳ್ಳಿಗರಿಗೂ ಪ್ರಿಯವಾಗುವಂತೆ ಸುಲಭವಾದ ರೀತಿಯಲ್ಲಿ ಹೇಳುವುದೆ ಕವಿಯ ಮುಖ್ಯೋದ್ದೇಶವಾಗಿತ್ತೆನ್ನುವುದಾದರೆ ತನ್ನ ಉದ್ದೇಶಸಾಧನೆಗೆ ಅವನು ಹಿಡಿದ ಹಾದಿಯೆ ಸರಿಯಾಗಿರಬಹುದು ಆದುದರಿಂದಲೆ "ಹಾಡುಗಬ್ಬ"ವನ್ನು ರಚಿಸುವುದಕ್ಕೆ ಕೈಹಾಕಿರಬೇಕು —

ಕವಿಗಳೆಲ್ಲ ಮೆಚ್ಚುವ ಹಾಡುಗಬ್ಬವ | ಕಬ್ಬದೆ ಹೊರೆನರಿವೆರಡು |
ಕವಿ ಸಂತರವೆ ಕೂ ಮಿವರಂತೆ ರಚಿಸಲಿ | ಕಬ್ಬ ಪೇಳ್ವೆ ಸರಸ್ವತಿಯೆ ||
ಅಪ್ಪುದಪ್ಪ ಕನ್ನಡದೆ ಕನ್ನಡಿಗರು । ರಮ್ಯ ಮಂಚಿರೆಯಿರೆ ದಿಂಗಾ |
ಅದ ಪ್ರಿಯ ಮಂಚಿ ಪ್ರೌಢಾಸಿಂದು ತ... ರು | ಮೆಚ್ಚುವ್ವಿ ಕೇಳ್ವೆಂಕನ್ನಾ ||
ದೇಶೀಯ ಶಿರಿಯಸಮಾನ ಮಾರ್ಗಾದಿವ | ರೋಷಗಿಕ್ಕಿ ಕಿವಿಪ್ರಳ್ಳದಂಕ ।
ಕೆವಿ ವಿದ್ವಾದರವಿಲ್ಲದೆ ಕೆಂಪದರ ಕೇಳಿ | ಓಲೆಯೊಳೆ ಹಾಡುಗಬ್ಬದೊಳು ||
ಸಕಲ ಲಕ್ಷಣವು ಪಸ್ತುಕಕ ಮಾರ್ಕಕಿಷ್ಟು | ಪಿಕೆವಾದರು ದೋಷವಿಲ್ಲ |
ಸಕಲ ಲಕ್ಷಣಕಾಗಿ ಒರ ಸುವಾಸಿದರೆ ಪ್ರ | ಸ್ತುಕದ ಎದರೆಕಾಯಹುದು ||

ಹಿಂದಿನ ಕನ್ನಡ ಸಾಹಿತ್ಯದಲ್ಲಿ ಹಳೆಯ ಕಥೆ ಮತ್ತು ವಿಷಯ ಇವುಗಳಿಂದ ಅತ್ಯಂತ ಸ್ವತಂತ್ರವಾದ ದರ್ಶನವಸ್ತುವನ್ನು ಸೃಷ್ಟಿಸಿ ತನ್ನದೆ ಆದ ಒಂದು ನೂತನ ಮಾರ್ಗದಿಂದ ಭರತೇಶವೈಭವದಂತಹ ಬೃಹತ್ಪ್ರಮಾಣದ ಮಹಾಕೃತಿಯನ್ನಾಗಿಸಿದ ಮಹಾಕವಿಯ ಕೀರ್ತಿ ರತ್ನಾಕರವರ್ಣಿಗೊಬ್ಬನಿಗೆ ಸಲ್ಲುತ್ತದೆ

ಕಥಾಸರಣಿಗೆ ಅಡಚಣೆಯಾಗದಂತೆ, ಕವಿಯ ದರ್ಶನಕ್ಕೆ ಭಂಗ ಬರದಂತೆ, ಮೂಲದ ಸ್ವಾರಸ್ಯ ಕೆಡದಂತೆ ಬೃಹದ್‌ಗಾತ್ರದ ಮಹಾಕಾವ್ಯವನ್ನು ಎಚ್ಚರಿಕೆಯಿಂದ, ಶ್ರದ್ಧೆಯಿಂದ ಸಂಗ್ರಹಿಸಿ, ಜೊತೆಗೆ ಕವಿಕಾವ್ಯ ವಿಮರ್ಶೆಯನ್ನು ಒದಗಿಸಿಕೊಟ್ಟು ಉಪಕರಿಸಿರುವ ಶ್ರೀ ತ ಸು ಶಾಮರಾಯರಿಗೆ ವಂದನೆ ಸಲ್ಲಬೇಕಾಗಿದೆ

೧–೮–೧೯೫೫
ಮೈಸೂರು

ಕೆ ವಿ ಪುಟ್ಟಪ್ಪ
ಪ್ರಧಾನ ಸಂಪಾದಕ

# ವಿಷಯ ಸೂಚಿಕೆ

# ಪೀಠಿಕೆ

## ಕವಿಚರಿತ್ರೆ

ಭರತೇಶ ವೈಭವವನ್ನು ಬರೆದ ಕವಿ ರತ್ನಾಕರವರ್ಣಿ ಈತನು ಅಪರಾಜಿತೇಶ್ವರ ಶತಕ, ತ್ರಿಲೋಕ ಶತಕ, ರತ್ನಾಕರಾಧೀಶ್ವರ ಶತಕ—ಎಂಬ ಶತಕತ್ರಯವನ್ನೂ 'ಎರಡುಸಾವಿರ ಗ್ರಂಥದಷ್ಟು ಅಧ್ಯಾತ್ಮಗೀತೆ' ಗಳನ್ನೂ ರಚಿಸಿದ್ದಾನೆ ಭರತೇಶ ವೈಭವದಿಂದ ಕವಿಯ ವಿಷಯವಾಗಿ ಕೆಲವು ಸಂಗತಿಗಳು ತಿಳಿದುಬರುತ್ತವೆ ಅವುಗಳ ಸಾರವನ್ನು ಇಲ್ಲಿ ಕೊಡಬಹುದು

ಕವಿಗೆ ರತ್ನಾಕರವರ್ಣಿ, ರತ್ನಾಕರಸಿದ್ಧ, ರತ್ನಾಕರ ಅಣ್ಣ—ಎಂಬ ಪರ್ಯಾಯ ನಾಮಗಳಿದ್ದವಾದರೂ 'ರತ್ನಾಕರಸಿದ್ಧ' ಎಂಬುದು ಆತನ ಮೆಚ್ಚಿಗೆಯ ಹೆಸರು "ಸಿದ್ಧಪದಕ ಸೋತೆನಾಗಿ ರತ್ನಾಕರ । ಸಿದ್ಧನೆಂದೆನಲೊಲ್ವೆ " ಎಂದು ಹೇಳಿಕೊಂಡಿದ್ದಾನೆ ಸಿದ್ಧಪದಕ್ಕೆ ಸೋತ ಸುಸಂಸ್ಕೃತ ಜೀವಿಯಾದ ರತ್ನಾಕರನಿಗೆ "ಆವುಯ, ಜನನ ಮರಣವುಳ್ಳ ಜನಕರ ! ನಾಮುವ " ಹೇಳಿಕೊಂಡು ಹೆಮ್ಮೆ ಪಡುವುದು ಸರಿಗಾಣಲಿಲ್ಲ 'ಶ್ರೀ ಮಂದರಸ್ವಾಮಿ ನನ್ನಯ್ಯ' ಎಂದು ನುಡಿಯುತ್ತಾನೆ ತನ್ನ ನಾಡು ಕರ್ಣಾಟ ಸುಕ್ಷೇತ್ರ ವಂಶ ಕ್ಷತ್ರಿಯವಂಶ ಈತನಿಗೆ ಶ್ರೀಶುಚಿದೀಕ್ಷೆಯನ್ನು ಕೊಟ್ಟವನು 'ದೇಶಿಗಣಾಗ್ರಣಿ ಚಾರುಕೀರ್ತ್ಯಾಚಾರ್ಯ' 'ಮೋಕ್ಷಾಗ್ರಗುರು ಹಂಸನಾಥ' ಮೋಕ್ಷಾಗ್ರಗುರುವಿನ ಆಜ್ಞೆಗೆ ತಲೆಬಾಗಿಯೇ ಆತ್ಮಲೀಲಾರ್ಥವಾಗ 'ಭರತೇಶ ವೈಭವವೆಂಬ ಕಾವ್ಯವನಿದ । ನೊರೆ'ದದ್ದು ಜೈನಕವಿಗಳೆಲ್ಲರೂ ಪ್ರಾಯಿಕವಾಗಿ ಸ್ತೋತ್ರಮಾಡುವ ಗುರುಪರಂಪರೆಯ ಗೋಜಿಗೇ ಈತ ಹೋಗಿಲ್ಲ

ಕವಿಯ ಜೀವನದಮೇಲೆ ಬೆಳಕನ್ನು ಬೀರುವ ಎರಡನೆಯ ಸಾಧನ ದೇವಚಂದ್ರನ **ರಾಜಾವಳೀಕಥೆ.** ಈ ಗ್ರಂಥದಿಂದ ರತ್ನಾಕರನು ಸೂರ್ಯವಂಶದ ರಾಜಕುಲದವನೆಂದೂ, ದೇವರಾಜನೆಂಬುವನ ಮಗನೆಂದೂ ತಿಳಿಯಬರುತ್ತದೆ ಈತನು 'ಬಾಲಕಾಲದೊಳೆ ಕಾವ್ಯಾಲಂಕಾರ ಲಕ್ಷಣಶಾಸ್ತ್ರದೊಳತಿನಿಪುಣನಾಗಿ' ಪರಮಾಗಮಗಳನ್ನೆಲ್ಲಾ ಹೃದ್ಗತಮಾಡಿಕೊಂಡು ಕವೀಶ್ವರನಾಗಿ ಸೋಮವಂಶದ ಭೈರಸ ಒಡೆಯರ ಸಭೆಯಲ್ಲಿ ಶೃಂಗಾರಕವಿಯೆಂದು ಪ್ರಖ್ಯಾತಿಪಡೆದಿದ್ದನು. ಯೋಗರತ್ನಾಕರ ಶಾಸ್ತ್ರಾಭ್ಯಾಸದಿಂದ ದಶವಾಯುಗಳನ್ನೂ ಸಾಧಿಸಿದ್ದ ಈತನನ್ನು ಕಂಡು ಭೈರಸ ಒಡೆಯರ ಮಗಳು ಮೋಹಪರವಶಳಾದಳು ರತ್ನಾಕರನು ತನ್ನ ಯೋಗಾಭ್ಯಾಸ ಬಲದಿಂದ ಸೌಧಾಗ್ರವನ್ನು ಏರಿ ಗವಾಕ್ಷಿಯಿಂದ ಒಳಗೆ ಇಳಿದು 'ಅವಳೊಳೆ ನೇಹಂ ಮಾಡುತ್ತಿದ್ದನು' ರಾಜನಿಗೆ ಇದು ಗೊತ್ತಾಯಿತು ಆತನು ರತ್ನಾಕರನನ್ನು ಹಿಡಿದು ಶಿಕ್ಷಿಸಬೇಕೆಂಬ ಪ್ರಯತ್ನದಲ್ಲಿರಲು, ಇದನ್ನರಿತ ರತ್ನಾಕರವರ್ಣಿ ಆ ರಾತ್ರಿಯೇ

ತನ್ನ ಗುರುವಾದ ಮಹೇಂದ್ರಕೀರ್ತಿಯ ಬಳಿಗೆ ಓಡಿಹೋಗಿ, ಅಣುವ್ರತದೀಕ್ಷೆಯನ್ನು ಕೈಕೊಂಡು ಅಧ್ಯಾತ್ಮತತ್ವ ತತ್ಪರನಾದನು ಅಲ್ಲಿ 'ವಿಜಯಕೀರ್ತಿಗಳೆಂಬ ಪಟ್ಟಾಚಾರ್ಯರ ಶಿಷ್ಯರಾದ ವಿಜಯಣ್ಣಗಳು ದ್ವಾದಶಾನುಪ್ರೇಕ್ಷೆಗಳಂ ಕನ್ನಡದಿಂ ಸಂಗೀತಮಾಗಿ ವೃತ್ತವಚನದಿಂ ಮಾಡಿ ಆನೆಯಮೇಲೆ ಪ್ರಭಾವನೆಯಂ' ಮಾಡಿಸಿದರು ಇದನ್ನು ಕಂಡು ರತ್ನಾಕರನು ಭರತೇಶ್ವರಚರಿತೆಯನ್ನು ಎಂಭತ್ತುನಾಲ್ಕು ಸಂಧಿಗಳಷ್ಟು ಬರೆದು ವಿಜಯಣ್ಣನ ಕಾವ್ಯಕ್ಕೆ ದೊರೆತ ಪುರಸ್ಕಾರವನ್ನು ತನ್ನ ಕಾವ್ಯಕ್ಕೂ ದಯಪಾಲಿಸುವಂತೆ ಗುರುಗಳನ್ನು ಬೇಡಿದನು ಆದರೆ ಪಟ್ಟಾಚಾರ್ಯರು 'ಇದರೊಳೆರಡು ಮೂರು ವಾಕ್ಯಂ ಪುರಾಣಕ್ಕೆ ವಿರೋಧಮಿರ್ಪುದು, ಅದರಿಂದೆ ಆಗವು ಆಗದು' ಎಂದು ಹೇಳಿದರು ಅದೇ ನೆಪದಿಂದ ಪಟ್ಟಾಚಾರ್ಯರಿಗೂ ರತ್ನಾಕರನಿಗೂ ಸಂವಾದ ಬೆಳೆದು ಚರ್ಚೆಯಾಯಿತು. ಕುಪಿತರಾದ ಆಚಾರ್ಯರು ಕವಿಯನ್ನು ತಿರಸ್ಕರಿಸಿ ಏಳುನೂರು ಶ್ರಾವಕರಲ್ಲಿ ಆತನಿಗೆ ಭಿಕ್ಷೆ ದೊರೆಯದಂತೆ ಮಾಡಿದರು ಸೇರಿಗೆ ಸವ್ವಾಸೇರಿನಂತಿದ್ದ ರತ್ನಾಕರನು ತನ್ನ ತಂಗಿಯಿಂದ ಆಹಾರವನ್ನು ಪಡೆಯುತ್ತಾ ಇದ್ದು, ತನಗಾದ ಅನ್ಯಾಯಕ್ಕೆ ಜಿನಸಮಯವನ್ನೇ ಗುರಿಮಾಡಿ ವೀರಶೈವಮತಕ್ಕೆ ಸೇರಿದನು 'ಆತ್ಮಜ್ಞಾನಿಗೆ ಜಾತಿ ಕುಲಮಾವುದೊಡಂ ಸಮಮೆಂದು' ಲಿಂಗಧಾರಣೆ ಮಾಡಿಕೊಂಡು ವೀರಶೈವ ಶಾಸ್ತ್ರಪುರಾಣಗಳ ಪರಿಚಯವನ್ನು ಪಡೆದನು ಆದರೆ ಕೆಲವು ದಿನಗಳಲ್ಲಿಯೇ ಕೋಪವು ಉಪಶಮಿಸಿ ಪುನಃ ಜೈನಮತಾವಲಂಬಿಯಾಗಿ ಸನ್ಮಾರ್ಗದಲ್ಲಿ ನಂಬಿ ನಡೆದನು. "ರತ್ನಾಕರ ಶತಕಂ, ಅಪರಾಜಿತ ಶತಕಂ, ತ್ರಿಲೋಕ ಶತಕಂ, ಅಧ್ಯಾತ್ಮಗೀತಂಗಳ್" ಎರಡುಸಾವಿರ ಗ್ರಂಥದಷ್ಟು ಪೇಳಿದಂ ಶಕ ವರುಷ ೧೪೭೯ ಸಂದಿರ್ದುದು ರಾಜ ಒಡೆಯರ ಕಾಲವಾದಮೇಲೆ ಚಾಮರಾಜನ ಕಾಲದಲ್ಲಿ ಸಭೆಯಲ್ಲಿ ರತ್ನಾಕರಾರ್ಯ ವಿರಚಿತ ಭರತೇಶ್ವರ ಚರಿತೆ ಎಂಭತ್ತುನಾಲ್ಕು ಸಂಧಿಯನೋದಿದರು.

ಕವಿಯ ವಿಚಾರವಾದ ದಂತಕಥೆಯೊಂದು ಜನಜನಿತವಾಗಿ ಪ್ರಚಾರದಲ್ಲಿರುವಂತೆ ಶ್ರೀಮಾನ್ ಉಗ್ರಾಣದ ಮಂಗೇಶರಾಯರು ಸಂಪಾದಿಸಿರುವ ಭರತೇಶ ವೈಭವ ಗ್ರಂಥದ ಮುನ್ನುಡಿಯಿಂದ ತಿಳಿದುಬರುತ್ತದೆ. ಚಾರುಕೀರ್ತಿಯೋಗಿಯಿಂದ ಎಳೆವಯದಲ್ಲಿಯೇ ದೀಕ್ಷೆ ಪಡೆದ ರತ್ನಾಕರನು ದಿನದಿನಕ್ಕೂ ಉದಿತೋದಿತನಾಗಿ ಕೀರ್ತಿಶಾಲಿಯಾಗುತ್ತಾ ತನ್ನ ಶಿಷ್ಯ ಸಮುದಾಯದಿಂದ ಪರಿವೇಷ್ಟಿತನಾಗಿರಲು ಕೆಲವು ಕುಹಕಿಗಳು ಮಾತ್ಸರ್ಯದಿಂದ ಆತನು ಮಲಗುವ ಮಂಚದ ಕೆಳಗೆ ಒಬ್ಬ ವೇಶ್ಯೆಯನ್ನು ಬೈಚಿಟ್ಟು ಆತನ ಹೆಸರಿಗೆ ಕಳಂಕವನ್ನು ತಂದೊಡ್ಡಲು ಪ್ರಯತ್ನಿಸಿದರು ಅವಮಾನಿತನಾದ ರತ್ನಾಕರನು ಶಿಷ್ಯರ ಬೇಡಿಕೆಗಳೆಲ್ಲವನ್ನೂ ನಿರಾಕರಿಸಿ ನೆಟ್ಟನೆ ನಡೆದು ಹೊಳೆಯನ್ನು ಸೇರಿ, ಜಿನಧರ್ಮಕ್ಕೆ ಜಲಾಂಜಲಿಯಿತ್ತೆನೆಂದು ಘೋಷಿಸಿ, ನೀರಿನಲ್ಲಿ ಮುಳುಗಿ ಗುಹಾಕಿ ಮೇಲೆದ್ದು ಘಟ್ಟದ ಮೇಲಕ್ಕೆ ಹೋದನು ಅಲ್ಲಿ ಶೈವಗ್ರಂಥವೊಂದನ್ನು ಆನೆಯಮೇಲಿರಿಸಿ ಮೆರೆಸುತ್ತಿದ್ದುದನ್ನು ಕಂಡು, ಆ ಗ್ರಂಥವು ಕೇವಲ ನೀರಸವಾದುದೆಂದು ಎಲ್ಲರ ಮುಂದೆ ಮುಚ್ಚುಮರೆಯಿಲ್ಲದೆ ತನ್ನ ಅಭಿಪ್ರಾಯವನ್ನು ಸಾರಿದನು.

ಕುಪಿತರಾದ ಜನರು ರಾಜನಲ್ಲಿ ದೂರಿದರು ರಾಜನು ರತ್ನಾಕರನನ್ನು ಕರೆಸಿ ಈ ವಿಚಾರದಲ್ಲಿ ಪ್ರಶ್ನಿಸಲು, ಆತನು ನಿರ್ಭಯನಾಗಿ, ಒಂಭತ್ತು ತಿಂಗಳ ಅವಧಿಯೊಳಗಾಗಿ ಭರತೇಶವೈಭವವೆಂಬ ಹತ್ತುಸಹಸ್ರ ಪದ್ಯಗಳನ್ನೊಳಗೊಂಡ ಮಹಾಗ್ರಂಥವನ್ನು ಬರೆದು ರಾಜನನ್ನೂ ಆತನ ಸಭಾಸದಸರನ್ನೂ ಮೆಚ್ಚಿಸಿದನು ಅನಂತರ, ರಾಜನ ಬೇಡಿಕೆಯಂತೆ ವೀರಶೈವ ಮತವನ್ನವಲಂಬಿಸಿದನು ಆದರೂ ತನ್ನ ಮರಣಾನಂತರ ಉತ್ತರಕ್ರಿಯೆಗಳನ್ನು ಜೈನರೇ ನಡಸಬೇಕೆಂದು ತಿಳಿಸಿದುದಲ್ಲದೆ, ಸಾಯುವ ಮುನ್ನ ತಾನು ಮನಸಾ ಜೈನನಾಗಿಯೇ ಇದ್ದನೆಂಬುದನ್ನೂ, ತಾನು ಕೊರಳಲ್ಲಿ ಕಟ್ಟಿಕೊಂಡಿದ್ದುದು ಕೇವಲ ಒಂದು ಗೋಟಡಿಕೆಯೇ ಹೊರತು ಲಿಂಗವಲ್ಲವೆಂಬುದನ್ನೂ ಎಲ್ಲರಿಗೂ ಪ್ರತ್ಯಕ್ಷ ಪ್ರಮಾಣ ಮಾಡಿಕೊಟ್ಟನು

ಮೇಲಿನ ಎರಡು ಕಥೆಗಳಿಂದಲೂ ರತ್ನಾಕರನು ಶೃಂಗಾರಕ್ಕೆ ಮನಸೋತ ರಸಿಕ ಜೀವಿಯೆಂಬ ಭಾವನೆ ಜನರ ಮನಸ್ಸಿನಲ್ಲಿ ಬೇರೂರಿ ಪರಂಪರಾಗತವಾಗಿ ಬೆಳೆಯುತ್ತಾ ಬಂದಿರುವಂತೆ ತೋರುತ್ತದೆ. ಭರತೇಶ ವೈಭವವನ್ನು ಓದಿದವರಿಗೆ ಇದರಲ್ಲಿ ಸ್ವಲ್ಪ ಕಥ್ಯಾಂಶವೂ ಇರುವಂತೆ ತೋರುತ್ತದೆ ಅನುಭವವೇದ್ಯವಾದ ರಸಿಕಜೀವನವನ್ನು ಕವಿ ಕನ್ನಡಿಸುತ್ತಿರುವನೆಂದು ಹೇಳಿದರೂ ಹೇಳಬಹುದು ಕವಿಯು ನಿರ್ದುಷ್ಟವಾದ ರಸಿಕಜೀವನವನ್ನು ನಡೆಸಿರಬಹುದು ಅಷ್ಟುಮಾತ್ರಕ್ಕೆ ಆತನಲ್ಲಿ ಅಲ್ಲಸಲ್ಲದ ಆರೋಪವನ್ನು ಹೊರಿಸುವುದು ಎಷ್ಟು ಯೋಗ್ಯವಾದುದೋ ಹೇಳುವುದು ಕಷ್ಟ ಕಾಳಿದಾಸನ ಶೃಂಗಾರರಸ ನಿರ್ಮಾಣ ನೈಪುಣ್ಯವನ್ನು ಕಂಡು ಜನತೆ ಹಲವು ಕಥೆಗಳನ್ನು ಹೆಣೆದಿರುವಂತೆ ರತ್ನಾಕರನ ವಿಚಾರದಲ್ಲಿಯೂ ಏಕೆ ಮಾಡಿರಬಾರದು? ಆದರೆ ಮೇಲಿನ ಕಥೆಗಳಲ್ಲಿ ಕಾಣಬರುತ್ತಿರುವ, ಜೈನಮತೀಯನಾದ ಈ ಕವಿ ಒಮ್ಮೆ ವೀರಶೈವಮತವನ್ನು ಅವಲಂಬಿಸಿದ್ದನೆಂಬ ಮಾತು ಬಹುಮಟ್ಟಿಗೆ ನಿಲ್ಲಬಲ್ಲುದೆಂದು ತೋರುತ್ತದೆ. ಕವಿಯು ವೀರಶೈವಮತಕ್ಕೆ ಸೇರಿದ್ದನೆಂದು ನಿಷ್ಕೃಷ್ಟವಾಗಿ ತಿಳಿಸುವಷ್ಟು ಸಾಧನಸಾಮಗ್ರಿಗಳಾವುವೂ ಈಗ ದೊರೆತಿಲ್ಲ ಆದರೂ ಜೈನಮತಸ್ಥನಾದ ದೇವಚಂದ್ರನೇ ಸ್ವಮತಸ್ಥನಾದ ಕವಿಯ ವಿಷಯದಲ್ಲಿ ಈ ಮಾತನ್ನು ಹೇಳಿರುವುದೂ, ಕವಿಯು ಸಂಪ್ರದಾಯಬದ್ಧವಾದ ಪುರಾಣ ಕಥಾಕಟ್ಟಡದಲ್ಲಿ ಧೈರ್ಯದಿಂದ ಬೇಕಾದ ಬದಲಾವಣೆಗಳನ್ನು ಮಾಡಿಕೊಂಡು ಕವಿನಿರಂಕುಶಮತಿಯನ್ನು ಮೆರೆದಿರುವುದೂ, ಭೋಗಾಂಗ, ಯೋಗಾಂಗ, ತ್ಯಾಗಾಂಗಗಳೆಂಬ ಅಂಗತ್ರಯಗಳನ್ನೂ ಯೋಗ–ಭೋಗಗಳ ಸಾಮರಸ್ಯ ಸಿದ್ಧಾಂತವನ್ನೂ ತನ್ನ ಗ್ರಂಥದಲ್ಲಿ ಅಳವಡಿಸಿಕೊಂಡಿರುವುದೂ, 'ಉಂಡುಪವಾಸಿ, ಬಳಸಿ ಬ್ರಹ್ಮಚಾರಿ' ಇತ್ಯಾದಿ ವಾಕ್ಯಭಾಗಗಳನ್ನೂ 'ಮೊಲೆಯಮೇಲಿದ್ದ ಯೋಗಿಗಳುಂಟು' ಇತ್ಯಾದಿ ವಾಕ್ಯಗಳನ್ನೂ ಬಳಸಿರುವುದೂ ನೋಡಿದರೆ ಕವಿಯ ಬಗೆಗಣ್ಣಿನೆದುರು ಆ ಮತದ ತತ್ವಗಳು ತಕ್ಕಷ್ಟು ತಾಂಡವವಾಡಿ ಕವಿಯ ಆಸಕ್ತಿಯನ್ನು ಸೆಳೆದಿದ್ದವೇನೋ ಎನ್ನಿಸುತ್ತದೆ ಇದೂ ಅಲ್ಲದೆ ಪಾಲ್ಕುರಿಕೆ ಸೋಮನಾಥವಿರಚಿತವೆಂದು ಪ್ರಸಿದ್ಧವಾಗಿರುವ 'ಸೋಮೇಶ್ವರ ಶತಕವು' ರತ್ನಾಕರ ವಿರಚಿತವೆಂಬ ಪ್ರತೀತಿ

ಇದೆ. ಆ ಗ್ರಂಥದ ಪುರಾತನ ತಾಳೆಪತ್ರವೊಂದರಲ್ಲಿ ಈ ಕೆಳಗಿನ ಪದ್ಯವಿರುವುದಾಗಿಯೂ ಹೇಳುತ್ತಾರೆ.

> ವರಸಮ್ಯಕ್ತ್ವ ಸುಧರ್ಮ ಜೈನ ಮತದೊಳ್ತಾಂ ಪುಟ್ಟಿಯಾ ದೀಕ್ಷೆಯಂ ।
> ಧರಿಸೀ ಸಂಸ್ಕೃತ ಕಾವ್ಯಶಾಸ್ತ್ರಗಳನುಂ ನಿರ್ಮಾಣಮಂ ಮಾಡುತಂ ॥
> ವರ ರತ್ನಾಕರ ಯೋಗಿಯೆಂದು ನಿರುತಂ ವೈರಾಗ್ಯ ಬಂದೇರಲಾಂ ।
> ಹರದೀಕ್ಷಾಪ್ರತನಾದೆನೈ ಹರಹರಾ ಶ್ರೀಚೆನ್ನಸೋಮೇಶ್ವರಾ ॥

ಇದನ್ನು ನೋಡಿದರೆ ಕವಿಯು ವೀರಶೈವ ಮತಕ್ಕೆ ಸೇರಿದ್ದಾಗ ಸೋಮೇಶ್ವರ ಶತಕವನ್ನು ಬರೆದಿರಬಹುದೆಂದು ಅನುಮಾನಿಸಲು ಅಸ್ಪದವಿದೆ. ಶೈಲಿಯಲ್ಲಿಯೂ ರತ್ನಾಕರಶತಕ-ಸೋಮೇಶ್ವರಶತಕಗಳು ಪರಸ್ಪರ ಹೋಲುತ್ತವೆ. ಆದರೂ ಇಷ್ಟ ರಿಂದಲೇ ಘಂಟಾಘೋಷವಾಗಿ 'ಇದಮಿತ್ಥಂ' ಎಂದು ಹೇಳಲು ಸಾಧ್ಯವಿಲ್ಲ. ಕವಿಯ ಅನುಭವಸಾಗರವನ್ನು ಸಾಮಾನ್ಯ ಜನರ ನಂಬಿಕೆ ಸಂಪ್ರದಾಯಗಳ ಹೊಳೆಗಳೆಲ್ಲವೂ ಸೇರಿರಬಹುದಾದರೂ ಅವನು ಅವುಗಳ ಹಂಗಿನ ಎಲ್ಲೆಗಳಿಗೆ ಅಳವಡದವನು. ಆದುದ ರಿಂದ ಇನ್ನೂ ನಿಷ್ಕೃಷ್ಟವಾದ ಪ್ರಮಾಣಗಳು ದೊರೆಯುವವರೆಗೆ ಈ ಮತಾಂತರದ ಕಥೆಯನ್ನು ಅಡ್ಡ ಗೋಡೆಯಮೇಲಿನ ದೀಪದಂತಿಟ್ಟಿರುವುದು ಒಳ್ಳೆಯದು.

ಭರತೇಶವೈಭವದ ಕೊನೆಯಲ್ಲಿ ತನ್ನ ಗ್ರಂಥವು "ವೃಷಭಮಾಸದಿ ತೊಡಗಿತು ಕುಂಭಮಾಸ ಸ | ದ್ವಿಷಯದಿ ಕೃತಿ ಪೂರ್ಣವಾಯ್ತು" ಎಂಬ ಕವಿಯ ಹೇಳಿಕೆಯೇ ಒಂಭತ್ತು ತಿಂಗಳುಗಳಲ್ಲಿ ಆ ಹತ್ತುಸಹಸ್ರಪದ್ಯಗಳ ಬೃಹದ್ಗ್ರಂಥವು ರಚಿತವಾಯ್ತೆಂಬ ಅಭಿಪ್ರಾಯಕ್ಕೆ ಆಧಾರ. ಈ ಆಧಾರದಮೇಲೆಯೆ ದಂತಕಥೆ ಅಂಕುರಿಸಿ ಚಿಗುರಿರು ವುದು. ಈ ಸಂದರ್ಭದಲ್ಲಿ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ಪ್ರಬುದ್ಧಕರ್ಣಾಟಕದ ೨೩ ನೆಯ ಸಂಪುಟದ ೪ ನೆಯ ಸಂಚಿಕೆಯಲ್ಲಿ ಬರೆದಿರುವ 'ಪಂಪನಲ್ಲಿ ಭವ್ಯತೆ' ಎಂಬ ಲೇಖನದ ನೆನಪು ಬರುತ್ತದೆ. ಪಂಪನು ತನ್ನ ಮಹಾಕಾವ್ಯಗಳಲ್ಲಿ ಒಂದನ್ನು ಆರು ತಿಂಗಳಿನಲ್ಲಿಯೂ ಮತ್ತೊಂದನ್ನು ಮೂರು ತಿಂಗಳಿನಲ್ಲಿಯೂ ಬರೆದನೆಂಬುದರ ವಿವರಣೆ ಯನ್ನು ಅವರು ಹೀಗೆ ಕೊಟ್ಟಿದ್ದಾರೆ—"ರಚನಾ ಸಮಯದ ನಿಮಿಷಗಳನ್ನೂ, ಗಂಟೆಗಳನ್ನೂ ಕೂಡಿಸಿ, ಬಂದ ಹೊತ್ತಿನ ಮೊತ್ತವನ್ನು ತಿಂಗಳುಗಳಾಗಿ ಭಾಗಿಸಿರುವ ನೆಂದುಕೊಂಡರೆ ನಮ್ಮ ಆಶ್ಚರ್ಯ ವಿಸ್ಮಯದ ಎಲ್ಲೆಯನ್ನು ಮುಟ್ಟದಿರಬಹುದು. ಹಾಗಲ್ಲದೆ, ಸಮಗ್ರಕೃತಿಯನ್ನೂ, ಅದನ್ನು ಉತ್ತುಬಿತ್ತುವ ಮೊತ್ತಮೊದಲಿಂದ ಹಿಡಿದು ರಸಾನ್ನಭೋಜನದ ಸಮಾರಾಧನೆಯ ಸಿದ್ಧಿಯ ತುತ್ತತುದಿಯವರೆಗೂ, ಮೂರು ಮತ್ತು ಆರು ತಿಂಗಳಲ್ಲಿ ಮುಗಿಸಿದನೆಂದರೆ ನಂಬುಗೆ ತತ್ತರಿಸುತ್ತದೆ. ಪವಾಡ ಸಂದರ್ಶನದಂತಾಗುತ್ತದೆ." ಪಂಪನ ವಿಚಾರದಲ್ಲಿ ಹೇಳಿದ ಮಾತು ರತ್ನಾಕರನ ವಿಚಾರದಲ್ಲಿ ಸತ್ಯಕ್ಕೆ ಮತ್ತೂ ಹತ್ತಿರವೆಂದೇ ಹೇಳಬೇಕು. ಪಂಪನು ಭಾರತಕ್ಕೆ ಆರು ತಿಂಗಳ ಕಾಲ ಹಿಡಿಯಿತೆಂದು ಮಗುಂ ಆಗಿ ಹೇಳಿದ್ದಾನೆ. ರತ್ನಾಕರ ವೃಷಭ-ಕುಂಭ

ಮಾಸಗಳ ಅಂತರದಲ್ಲಿ ಬರೆದುದೆಂದು ಸ್ಪಷ್ಟವಾಗಿ ಹೇಳಿದ್ದಾನೆ ಆದರೆ ಯಾವ ವೃಷಭಮಾಸದಲ್ಲಿ ಮೊದಲಾಯಿತು ? ಯಾವ ಕುಂಭಮಾಸದಲ್ಲಿ ಕೊನೆಯಾಯಿತು ? ಕವಿಯ ಲೆಕ್ಕಣಿಕೆಯ ಓಟದಲ್ಲಿ ನಮಗೆ ಯಾವ ಸಂದೇಹವೂ ಇಲ್ಲವಾದರೂ ವೃಷಭ ಮಾಸ ಕುಂಭಮಾಸಗಳು ಬೇರೆ ಬೇರೆಯ ವರ್ಷದ ಮಾಸಗಳೆಂದು ತೋರುತ್ತದೆ ಹಾಗಿಲ್ಲದಿದ್ದರೆ ಶ್ರೀಮಾನ್ ಪುಟ್ಟಪ್ಪನವರು ಹೇಳುವಂತೆ ಇದೊಂದು ಪವಾಡ ಸಂದರ್ಶನ ವಾದೀತು

ಕವಿಯು ಈರ್ಷೆಯಿಂದ ಕಾವ್ಯಕರ್ಮಕ್ಕೆ ಕೈಹಾಕಿದನೆಂಬ ಮಾತಿನಲ್ಲೂ ಹೆಚ್ಚು ಹುರುಳಿದ್ದಂತೆ ತೋರುವುದಿಲ್ಲ ಭರತೇಶವೈಭವದ ಕೊನೆಯಲ್ಲಿ ಕವಿ ಆಡಿರುವ ಮಾತು ಗಳ ಧಾಟಿಯೇ ಇದಕ್ಕೂ ಮೂಲವೆಂದು ತೋರುತ್ತದೆ ಆತನ ಕಾವ್ಯಸ್ಫೂರ್ತಿಯನ್ನು ಕಂಡು ಹಲವರು ಕರುಬಿದಂತೆ, ಕಟುವಾಗಿ ಟೀಕೆಮಾಡಿದಂತೆ ಕಾಣುತ್ತದೆ ಆದಕ್ಕಾಗಿ ಕವಿ ನೊಂದಮನದಿಂದ ನಾಲ್ಕು ಮಾತುಗಳನ್ನು ತೋಡಿಕೊಳ್ಳುತ್ತಾನೆ ತಾನು 'ಕೀರ್ತಿಯ ಬಯಸಿ' ಕಾವ್ಯವನ್ನು ಉಸುರಲಿಲ್ಲವಂತೆ , ಕೀರ್ತಿ ತಾನಾಗಿಯೆ ಬರುತ್ತದಂತೆ ಇದನ್ನು ಕಂಡು "ಕೀರ್ತಿಯ ಬಯಸಿ ಕಣ್ಣುಸುರಾಗಿ ಕೆಲಬರು | ಧೂರ್ತರು ಪೇಚಾಡುತಿಹರು " ಅಷ್ಟಕ್ಕೇ ಬಿಡದೆ ಅವರು ಕವಿಕರ್ಮಕ್ಕೂ ತೊಡಗು ತ್ತಾರೆ ಆದರೆ ಕವಿತೆ ಸಾಗುವುದೂ ಇಲ್ಲ, ಕಿವಿಗೆ ಶೋಭಿಸುವುದೂ ಇಲ್ಲ ಇದರಿಂದ ಕಸಿವಿಸಿಗೊಂಡು ರತ್ನಾಕರನ ಕವಿತೆಯನ್ನು 'ಬಿಡು ಹೊಸಕವಿತೆಯನೆಂದು ಪೂರ್ವದ ಶಾಸ್ತ್ರ | ಗಡಬಡೆ ಮಾಡುವರೊಡನೆ' ಮತ್ತೊಬ್ಬರ ತಂಟೆ ತಗಾದೆಗಳಿಲ್ಲದೆ ತಾನಿರು ತ್ತಿದ್ದರೂ ಅವನಮೇಲಿನ ಅಸೂಯಾಪರರು ಅಲ್ಲಸಲ್ಲದ ಪಟಾಟೋಪಗಳನ್ನು ನಡಸುತ್ತಾ "ನೆರಪಿ ಹೊತ್ತಗೆಗಳ ಕೊರೆಗಟ್ಟಿ ಭವಸೇನ | ಗುರುಗಳೆಂತವೆರಾಡು ತಿಹರು " ಕವಿ ಅತ್ತ ಕಡೆ ಕಣ್ಣು ಹಾಕದೆ ತನಗೆ ತಾನು ಆತ್ಮನಿರೀಕ್ಷಣೆಯಲ್ಲಿ ನಿರತ ನಾಗಿರುವನು ಆ ಸಮಯದಲ್ಲಿ ಅವನ ನಿಂದಕರು "ಮೈಯ ಬೆತ್ತಲೆಮಾಡಿ ಮನವ ಕತ್ತಲೆಮಾಡಿ ಹುಯ್ಯಲಿಡುತ ಸುತ್ತುತಿಹರು " ಏನೇನು ಮಾಡಿದರೂ ಎಷ್ಟೆಷ್ಟು ಬಿದ್ದು ಬಿದ್ದು ಹೊರಳಾಡಿದರೂ ರತ್ನಾಕರಕವಿಗೆ ಕೀರ್ತಿ ಬರುತ್ತಲೇ ಇದೆ , ತಮಗೆ ಮಾತ್ರ ಇಲ್ಲ ಆದ್ದರಿಂದ ರತ್ನಾಕರನ ಕಾವ್ಯಗಳನ್ನೆಲ್ಲಾ ಹೊಲಸು ಕಾವ್ಯಗಳೆಂದು ಜರೆದರು ಆದರೂ ಕವಿ ಅವರನ್ನು ಪ್ರತಿಭಟಿಸಲಿಲ್ಲವಂತೆ ಏಕೆ ಪ್ರತಿಭಟಿಸಬೇಕು, ತನ್ನ ಕಾರ್ಯವನ್ನು ಗಂಧರ್ವರೇ ಮಾಡುವಾಗ ? "ಬುಧರು ರಾಜರ್ಕಳೆ ನೊಂಕಿದ ರವರ " ತಾನೇನು ಮಾತ್ಸರ್ಯಕ್ಕೆ ಕಾವ್ಯ ಹೇಳಿದವನಲ್ಲವಾದುದರಿಂದ 'ಮೋನ ದೊಳಿದ್ದ' ತನ್ನ ಕಾವ್ಯಗಳನ್ನು 'ಮುನಿಗಳು ನೃಪರು ವಿದ್ವಾಂಸರು ಕೊಂಡೊಯ್ದು ರೊಲಿದು' ಇತರರು ಸ್ಪರ್ಧಿಸಬಂದರೆ ಕವಿಗೆ ಸ್ವಲ್ಪವೂ ಹೆದರಿಕೆಯಿಲ್ಲವಂತೆ ಏಕೆಂದರೆ ಇತರರು ಒಂದು ತಿಂಗಳು ಓದಿದ ಶಾಸ್ತ್ರ ಈತನಿಗೆ ಒಂದು ದಿನದಲ್ಲಿಯೇ ಅವಗತವಾಗುತ್ತದೆಯಂತೆ ಇಷ್ಟಾದರೂ ತನ್ನ ಮೂಗನ್ನೆ ಮೇಲೆ ಮಾಡಿಕೊಂಡಿರ ಬೇಕೆಂಬ ಹಟಮಾರಿತನವೇನೂ ಇಲ್ಲ, ರತ್ನಾಕರನಿಗೆ. ತಾನೇನೂ ಸರ್ವಜ್ಞನಲ್ಲ ;

ತನ್ನ ಮಾತುಗಳೇ ಕಡೆಯ ಸಿದ್ಧಾಂತವಲ್ಲ. ಪರಮರಹಸ್ಯ ಎಷ್ಟೋ ಇದೆ 'ಆತ್ಮನ ಮಾಹಾತ್ಮ್ಯ ಪರಿಮಿತವಲ್ಲ' ತಾನು ಕಾವ್ಯ ಬರೆಯುತ್ತಿರುವುದು ಇನ್ನೊಬ್ಬರ ಬೋಧನೆಗಾಗಿ ಅಲ್ಲ, ಆತ್ಮ ಲೀಲಾರ್ಥವಾಗಿ ಆದ್ದರಿಂದ ಬೇಕಾದರೆ ಆಲಿಸಬಹುದು, ಬೇಡವಾದರೆ ಪರಾಕು ಮಾಡಬಹುದು' ಕವಿಗೆ ಅದರಿಂದ ಸಂತೋಷವೂ ಇಲ್ಲ; ಸಂಕಟವೂ ಇಲ್ಲ

ಇದರಿಂದ ಕವಿಯ ಕೀರ್ತಿಯನ್ನು ಕಂಡು ಕರುಬಿ ಕಸಿವಿಸಿಗೊಳ್ಳುತ್ತಿದ್ದ ಜನರಿದ್ದರೆಂದು ಗೊತ್ತಾಗುತ್ತದೆಯೆ ಹೊರತು ಕವಿಯು ಯಾವುದೊಂದು ಗ್ರಂಥದಮೇಲಿನ ಹುರುಡಿನಿಂದ ಕಾವ್ಯವನ್ನು ಬರೆದನೆಂದು ಹೇಳಲಾಗುವುದಿಲ್ಲ

ರಾಜಾವಳೀ ಕಥೆಯಲ್ಲಿ ಹಲವು ಐತಿಹಾಸಿಕ ಸಂಗತಿಗಳು ಉದಾಹೃತವಾಗಿವೆ. ರತ್ನಾಕರನು ತಾಯ್ತಂದೆಗಳ ವಿಚಾರವಾಗಿ ಮೌನವನ್ನು ವಹಿಸಿ "ಶ್ರೀ ಮಂದರಸ್ವಾಮಿ ನನ್ನಯ್ಯ" ಎಂದು ಹೇಳಿಕೊಂಡಿದ್ದಾನಷ್ಟೆ! ದೇವಚಂದ್ರನು ಕವಿಯು ತಂದೆ ಸೂರ್ಯ ವಂಶಕ್ಕೆ ಸೇರಿದ ದೇವರಾಜನೆಂದು ತಿಳುಹಿಸುತ್ತಾನೆ ಅಲ್ಲದೆ ಕವಿಯು ಸೋಮವಂಶದ ಭೈರಸ ಒಡೆಯರ ಆಶ್ರಯದಲ್ಲಿದ್ದನೆಂದೂ ತಿಳಿಸುತ್ತಾನೆ ಮೇಲೆ ಉದಾಹರಿಸಿರುವ ಕವಿಯ ಮಾತುಗಳಿಂದಲೇ ಆತನು ಯಾವುದೋ ಒಂದು ರಾಜಾಸ್ಥಾನದಲ್ಲಿದ್ದನೆಂದು ತಿಳಿದುಬರುತ್ತದೆ ದೇವಚಂದ್ರನು ಸಂದೇಹಕ್ಕೆ ಎಡೆಯಿಲ್ಲದಂತೆ ಅದನ್ನು ಸ್ಪಷ್ಟಪಡಿಸುತ್ತಾನೆ ಕವಿಯು 'ತ್ರಿಲೋಕಶತಕ'ದಲ್ಲಿ ತನ್ನ ಊರು ವೇಣುಪುರ (ಮೂಡುಬಿದಿರೆ) ಎಂದು ಹೇಳಿಕೊಂಡಿರುವುದರಿಂದ ಅದರ ಸಮೀಪದಲ್ಲಿಯೇ ಇರುವ ಕಾರ್ಕಳದಲ್ಲಿ ಸುಮಾರು ೫೦೦ ವರ್ಷಗಳವರೆಗೆ ಆಳುತ್ತಿದ್ದ ಭೈರಸ ವಂಶದವರು ಕವಿಗೆ ಆಶ್ರಯದಾತರಾಗಿದ್ದರೆಂದು ನಂಬಲು ಬೇಕಾದಷ್ಟು ಅವಕಾಶವಿದೆ. ಇಂಥ ಭೈರಸ ಒಡೆಯನ ಆಸ್ಥಾನದಲ್ಲಿಯೇ ಇದ್ದನೆಂದು ನಿಶ್ಚಯಿಸುವ ಮುನ್ನ ಕವಿಯ ಕಾಲವನ್ನು ನಿಶ್ಚಯಿಸುವುದು ಅಗತ್ಯ

ರತ್ನಾಕರಶತಕದ ಸಂಪಾದಕರುಗಳಾದ ಶ್ರೀ ಎಸ್ ಜಿ ನರಸಿಂಹಾಚಾರ್ ಮತ್ತು ಎಂ ಎ. ರಾಮಾನುಜಯ್ಯಂಗಾರ್—ಇವರು ಕವಿಯ ಕಾಲವನ್ನು '೧೫ನೆಯ ಶತಮಾನದ ಅಂತ್ಯ ಮತ್ತು ೧೬ನೆಯ ಶತಮಾನದ ಆದಿಭಾಗ' ಎಂದು ನಿರ್ಧರಿಸಿದ್ದಾರೆ ಇದಕ್ಕೆ ಇವರಿಗಿರುವ ಆಧಾರ ಮೂಡುಬಿದರೆಯ ಕೈ ಬರಹದ ಪ್ರತಿಯೊಂದರ ಕೊನೆಯಲ್ಲಿ ಕಂಡುಬರುವ ಈ ಕೆಳಗಿನ ಪದ್ಯಗಳು—

ಶ್ರೀ ಶಕವರ್ಷವು ಸಾಸಿರದ್ವೆನೂರ | ಲೇಸೆಂಬತ್ತೆರಡನೆಯ |
ಶ್ರೀ ಶಾರ್ವರಿ ವರ್ಷದ ಶುಭಕರನಿಜ | ವೈಶಾಖ ಶುದ್ಧ ಪಂಚಮಿಯ|
ಭೃಗುವಾರ ಪುನರ್ವಸು ತಾರಾಯುತ ಗಂಡ | ಮಿಗೆ ಯೋಗ ವಣಿಜಾಕರಣಾ |
ಮೃಗಪತಿ ಲಗ್ನವೆಸೆಯಲು ಲಿಖಿತವಾಯ್ತು | ಸುಗುಣ ಭರತರಾಜಕೃತಿಯು||

ಮೇಲಿನ ಪದ್ಯಗಳಿಂದ ಕವಿಯು ಗ್ರಂಥವನ್ನು ರಚಿಸಿ ಮುಗಿಸಿದ ಕಾಲವು ಸೂಚಿತ

ವಾಗಿದೆಯೆಂದು ಇಟ್ಟುಕೊಳ್ಳುವುದಾದರೆ ಆ ಕಾಲ ಶಾ ಶ ೧೫೮೫ ಎಂದರೆ ಕ್ರಿ. ಶ ೧೬೬೦ ಎಂದಾಗುತ್ತದೆ (೧೭ ನೆಯ ಶತಮಾನ) ಆದ್ದರಿಂದ ರತ್ನಾಕರ ಶತಕದ ಸಂಪಾದಕರುಗಳ ನಿರ್ಧಾರ ಅರ್ಥವಿಲ್ಲದುದಾಗುತ್ತದೆ ಕವಿಚರಿತೆಕಾರರಾದ ದಿವಂಗತ ಶ್ರೀ ಆರ್ ನರಸಿಂಹಾಚಾರ್ಯರವರು ಈ ಅಭಿಪ್ರಾಯವನ್ನು ಕುರಿತು 'ಭರತೇಶ್ವರ ಚರಿತೆ'ಯ ಕಡೆಯಲ್ಲಿ ಗ್ರಂಥವು ಪೂರ್ತಿಯಾದ ಮೇಲೆ ಕೆಲವು ಪದ್ಯಗಳಲ್ಲಿ ಆವನೋ ಒಬ್ಬನು ಶಕ ೧೫೮೨ ಶಾರ್ವರಿಯಲ್ಲಿ ಎಂದರೆ ಕ್ರಿ ಶ ೧೬೮೦ ರಲ್ಲಿ ಪ್ರತಿ ಮಾಡಿದಂತೆ (ಲಿಖಿಯಿಸಿದಂ) ಹೇಳಿರುವುದನ್ನು ನೋಡಿ ಇದೇ ಗ್ರಂಥ ರಚನಾ ಕಾಲವೆಂದು ಕೆಲವರು ಭ್ರಮಿಸಿರುವಂತೆ ಕಾಣಬರುತ್ತದೆ' ಎಂದು ಹೇಳಿ 'ತ್ರಿಲೋಕ ಶತಕ'ದಲ್ಲಿ ಕಂಡುಬರುವ ಕೆಳಗಿನ ಪದ್ಯದ ಆಧಾರದಿಂದ ಕವಿಯ ಕಾಲವನ್ನು ಕ್ರಿ ಶ ೧೫೫೭ ಎಂದು ನಿರ್ಧರಿಸಿದ್ದಾರೆ

> ಮಣಿ ಶೈಲಂ ಗತಿ ಯಿಂದು ಶಾಲಿಶಕ ಕಾಲಂ ಸಂದಿರಲ್ ತೌಳವಾಂ ।
> ಗಣದೊಳ್ವೇಣು ಪುರಾಂಕದೊಳ್ ಸೃಜಿಸಿದಂ ರತ್ನಾಕರಾರ್ಯ೯೦ ನಿಜೇ ।
> ಕ್ಷಣ ತಾತ್ಪರ್ಯಮಿದೀ ತ್ರಿಲೋಕ ಶತಕಂ

"ಮಣಿ ಶೈಲಂ ಗತಿ ಯಿಂದು ಶಾಲಿಶಕ ಕಾಲಂ" ಎಂಬಲ್ಲಿ ಮಣಿ ೯, ಶೈಲ ೭, ಇಂದು. ೧, ಎಂಬುದರಲ್ಲಿ ಸಂಶಯವೇನೂ ಇಲ್ಲ 'ಗತಿ' ಎಂಬಲ್ಲಿ ಕವಿಚರಿತೆಕಾರರು ಭೂತ ಸಂಖ್ಯೆ ೪ ಎಂಬುದು (ಗತಿ ಚತುರ್ಗತಿಗಳು ೪ ?) ಮಾತ್ರ ಸಂದೇಹಾಸ್ಪದವಾಗಿದೆ ಭೂತಸಂಖ್ಯೆಗಳ ಉಪಯೋಗದಲ್ಲಿ ಹಿಂದೂ ಜೈನರೆಂಬ ಭೇದವೇನೂ ಇಲ್ಲ ಎಲ್ಲರೂ ಉಪಯೋಗಿಸುವ ಸಂಖ್ಯೆಗಳು ಒಂದೇ ರೀತಿಯಾಗಿರುತ್ತವೆ 'ಗತಿ' ಎಂದರೆ ಚತುರ್ಗತಿ ಎಂದು ಇಟ್ಟುಕೊಳ್ಳುವುದಾದರೆ ಆ ಸಮಾಸಪದಕ್ಕೆ ಸಂಸ್ಕೃತ ಕೋಶಗಳಲ್ಲಿ ಎರಡು ಅರ್ಥಗಳು ಮಾತ್ರ ಕಂಡುಬರುತ್ತವೆ ೧ ಆಮೆ—ಚತುರ್ಗತಿರಸ್ಯ ಕಚ್ಛಪಃ ಕ್ರೋಢಪಾದಶ್ಚತುರ್ಗತಿಃ (ಹೇಮಚಂದ್ರನ ಅಭಿಧಾನ ಚಿಂತಾಮಣಿ—ಶ್ಲೋಕ ೧೩೫೩) ೨ ವಿಷ್ಣು—ಚತುರ್ಣಾಂ ಆಶ್ರಮಾಣಾಂ ವರ್ಣಾನಾಂ ಬ್ರಾಹ್ಮಣಾದೀನಾಂ ಯಥೋಕ್ತಕಾರಿಣಾಂ ಗತಿರಾಶ್ರಯಃ ವಿಷ್ಣುಃ (ಮಹಾಭಾರತ, ಪರ್ವ ೧೩, ಅಧ್ಯಾಯ ೧೪೯, ಶ್ಲೋಕ ೬೫) ಶಬ್ದ ಕಲ್ಪದ್ರುಮ ಎಂಬ ಸಂಸ್ಕೃತ ಕೋಶದಲ್ಲಿ "ಅತ ಏವ ಗತಿಃ" ಎಂಬುದಕ್ಕೆ ೪ ಎಂಬ ಅರ್ಥ ಇಲ್ಲ, ಆ ಅರ್ಥದಲ್ಲಿ ಬಳಸಲು ಸಾಧ್ಯವೂ ಇಲ್ಲ ಇನ್ನು ೩ ಎಂಬುದಕ್ಕಿರುವ ಭೂತ ಸಂಖ್ಯೆಗಳ ಪರ್ಯಾಯದಲ್ಲಿ 'ತ್ರಿಗತ' ಎಂದಿದೆ (ಬೇರೆಯವು ತ್ರಿಜಗತ್, ತ್ರಿಗುಣ, ತ್ರಿಕಾಲ, ತ್ರಿಣೇತ್ರ) ಆದಕಾರಣ ಗತ ೩ 'ಗತ' ಎಂದು ಬರೆಯಬೇಕಾದಲ್ಲಿ ರತ್ನಾಕರನು ಗತಿ ಎಂದು ತಪ್ಪು ಬರೆದಿರಬಹುದು ಅಥವಾ ಸಂಪ್ರತಿಕಾರರು ಹಾಗೆ ಎತ್ತಿಕೊಂಡಿರಲೂಬಹುದು ಅಥವಾ ಆ ಶತಕದ ಪ್ರತಿಗಳನ್ನು ಓದಿದವನು 'ಗತಿ' ಎಂದು ಎತ್ತಿಕೊಂಡಿರಬಹುದು ಹೇಗೂ ಗತ ಅಥವಾ ಗತಿ ಎಂದರೆ ೩ ಎಂದೇ ತೋರುತ್ತದೆ ಆದ್ದರಿಂದ ಆ ಶತಕದ ವರ್ಷ ಮಣಿ . ೯, ಶೈಲ ೭, ಗತಿ (ಗತ) ೩, ಇಂದು ೧ 'ಅಂಕಾನಾಂ

ವಾಮತೋ ಗತಿಃ ಎಂಬ ನಿಯಮದಂತೆ 'ತ್ರಿಲೋಕ ಶತಕ' ದ ಕಾಲ ಶಾ ಶ ೧೩೭೯ ಎಂದರೆ ಕ್ರಿ ಶ ೧೪೫೭ ಎಂದಾಗುತ್ತದೆ (ಭೂತಸಂಖ್ಯೆಗಳಲ್ಲಿ ೩ , ಗತ ಎಂಬ ಆಧಾರಗ್ರಂಥಗಳು—George Buhler's Indian Paleography, German Edition P 80 ಮತ್ತು A. C Burnell's South Indian Paleograhpy P 97 ) ಆದರೆ ಕವಿಯ ಕಾಲ ಶಾ ಶ ೧೪೭೯ ಎಂಬ ದೇವಚಂದ್ರನ ಹೇಳಿಕೆಯ ಗತಿಯೇನು ? ಅದೇ ದೇವಚಂದ್ರನೇ ಕವಿಯು ದ್ವಾದಶಾನುಪ್ರೇಕ್ಷೆಯ ಕರ್ತೃವಾದ ವಿಜಯಣ್ಣನ ಸಮಕಾಲೀನನೆಂದು ಹೇಳುತ್ತಾನೆ ವಿಜಯಣ್ಣನ ಕಾಲ ಕ್ರಿ ಶ ೧೪೫೦ ಎಂದು ನಮಗೆ ನಿಶ್ಚಿತವಾಗಿ ಗೊತ್ತಿದೆ ಕವಿಚರಿತಕಾರರು ರಾಜಾವಳಿಯಲ್ಲಿ ಕೊಟ್ಟಿರುವ ಕಾಲವನ್ನು ಮಾತ್ರ ಸ್ವೀಕರಿಸಿ, ಅದರಲ್ಲಿ ಬರುವ ರತ್ನಾಕರವರ್ಣಿ ಹಾಗೂ ವಿಜಯಣ್ಣನ ಸಮ ಸಾಮಯಿಕತೆಯ ವಿಚಾರವನ್ನು ನಿರಾಕರಿಸಿದ್ದಾರೆ ಇದು ಅಷ್ಟು ಸಮರ್ಪಕವೆಂದು ಹೇಳಲಾಗುವುದಿಲ್ಲ ಕವಿಯ ಕಾಲವನ್ನು ಕೊಡುವಲ್ಲಿ ಶಾ. ಶ ೧೩೭೯ ಎಂಬುದಕ್ಕೆ ಬದಲಾಗಿ ೧೪೭೯ ಎಂದು ದೇವಚಂದ್ರನು ಪ್ರಮಾದವಶದಿಂದ ಹೇಳಿರಬಹುದೆಂದು ತೋರುತ್ತದೆ ಆದರಿಂದ ಕವಿ ಹದಿನೈದನೆಯ ಶತಮಾನದ ಮಧ್ಯದಲ್ಲಿದ್ದವನು , ಆತನು ತ್ರಿಲೋಕಶತಕವನ್ನು ಬರೆದುದು ಕ್ರಿ. ಶ. ೧೪೫೭ ರಲ್ಲಿ [1]

ಕವಿಯ ಹುಟ್ಟಿದೂರಿನ ವಿಚಾರವಾಗಿ ಹೆಚ್ಚು ವಿವಾದಕ್ಕೆ ಆಸ್ಪದವೇನೂ ಕಾಣಬರುತ್ತಿಲ್ಲ. ಮೇಲೆ ಉದ್ಧರಿಸಿರುವ ತ್ರಿಲೋಕಶತಕದ ಪದ್ಯಭಾಗದಲ್ಲಿ ಕವಿಯು ಸ್ಪಷ್ಟವಾಗಿ ತಿಳಿಸಿದ್ದಾನೆ—ತನ್ನೂರು ತೌಳವಾಂಗಣದ ವೇಣುಪುರವೆಂದು ಈ ವೇಣುಪುರವು ಪಶ್ಚಿಮತೀರದಲ್ಲಿರುವ ಮೂಡಬಿದಿರೆ ಎಂದು ವಿದ್ವಾಂಸರ ಅಭಿಪ್ರಾಯ ಇದನ್ನು ಸ್ಥಿರಪಡಿಸುತ್ತಾ ಶ್ರೀಮಾನ್ ಉ ಮಂಗೇಶರಾಯರು ಪ್ರಬುದ್ಧಕರ್ನಾಟಕದ ವಿಕ್ರಮ ಸಂವತ್ಸರದ ಸಂಕ್ರಾಂತಿ ಸಂಚಿಕೆಯಲ್ಲಿ ಈ ರೀತಿ ಬರೆಯುತ್ತಾರೆ—

"ಈ ವೇಣುಪುರವೇ ಮೂಡಬಿದರೆ ಎಂಬುದು ಹೇಗೆ ? ಮೂಡಬಿದರೆಯನ್ನು ಅಲ್ಲಿ ದೊರಕುವ ಶಾಸನಗಳಲ್ಲೆಲ್ಲಾ ವೇಣುಪುರವೆಂದೇ ಕರೆದಿರುತ್ತದೆ. ಮೂಡಬಿದಿರೆಯ 'ಸಾವಿರ ಕಂಬದ ಬಸದಿ,' 'ಹೊಸಬಸದಿ,' 'ತ್ರಿಭುವನ ಚೂಡಾಮಣಿ'—ಎಂದು ಕರೆಯಲ್ಪಡುವ ಬಸದಿಯ ಒಂದು ಶಾಸನದಲ್ಲಿ 'ಶಕನೃಪಕಾಲ' ೧೩೫೧ನೆಯ ಸೌಮ್ಯಸಂವತ್ಸರದ ಮಾಘಶುದ್ಧ ಪಂಚಮಿ ಗುರುವಾರದಲ್ಲಿ ತ್ರಿಭುವನ ಚೂಡಾಮಣಿಯೆಂಬ ಮಹಾಚೈತ್ಯಾಲಯಮಂ ಪ್ರಾರಂಭಿಸಿ ವೇಣುಪುರದ ಎಂಟು ಪ್ರಜೆಸೆಟ್ಟಿಗಾರರು . ದೇವರಾಯ ಮಹಾರಾಯರ ನಿರೂಪದಿಂ ಅಭಿನವ ಚಾರುಕೀರ್ತಿಪಂಡಿತ ದೇವರುಗಳಿಗೆ ನಿರ್ಮಾಣಾರ್ಥವಾಗಿ ಕೋಟೀಶ್ವರದಲ್ಲಿ ಶಾಲಿಕೆ

---

[1] ಈ ವಿಷಯದ ನಿರ್ಧಾರಕ್ಕೆ ಶ್ರೀಮಾನ್ ಗೋವಿಂದಪೈಗಳವರು ನನಗೆ ಬರೆದಿರುವ ಪತ್ರವೇ ಆಧಾರ.

ನಾಡು ಚವುಟರು ಮೊದಲಾದ ಅರಸರು ಬಲ್ಲಾಳರುಗಳ ಸಹಾಯದಿಂ ತ್ರಿಭುವನ ಚೂಡಾಮಣಿ ಎಂಬ ಮಹಾಚೈತ್ಯಾಲಯವಮಂ ಜಗದಾಶ್ಚರ್ಯಮಪ್ಪಂತು ಮಾಡಿಸಿದರ್" ಎಂದೂ,

ಇನ್ನೊಂದು ಶಾಸನದಲ್ಲಿ ". ಆ ಮೂಡಬಿದಿರೆಯ ಹಲರು ತ್ರಿಭುವನ ಚೂಡಾಮಣಿ ಚೈತ್ಯಾಲಯಕ್ಕೆ ಶ್ರೀ ಚಂದ್ರಪ್ರಭತೀರ್ಥೇಶ್ವರರ ಮಹೋದಾರಿತ ದಿವ್ಯ ಮೂರ್ತಿಯಂ . ನಿರ್ಮಾಲಿಸಿದರ್" ಎಂದೂ ಇದೆ. ಮೂಡಬಿದಿರೆ, ವೇಣುಪುರ- ಈ ಎರಡು ಹೆಸರುಗಳು ಸಮಾನವಾಗಿ ಬಳಕೆಯಲ್ಲಿದ್ದವು. ಬೇರೊಂದು ಶಾಸನ ದಲ್ಲಿರುವ

"ಪುರುಹೂತೋರು ಪುರಾಭ ವೇಣುಪುರದೊಳ್ ಭವ್ಯರ್ ಕಲಿಕ್ ಮಾಡಿಸಲ್ ।
ವರಚಂದ್ರಪ್ರಭಗೇಹಮಂ ತ್ರಿಭುವನೀ ಚೂಡಾಮಣೀಖ್ಯಾತಮಂ ।
ಭರದಿಂ ಮಾಡಿಸಿದಂ ತೃತೀಯ ನಿಲಯಕ್ಕಾ ಚೈತ್ಯಗೇಹಾಗ್ರದೊಳ್ ।
ಕರಚೆಲ್ವಾಗಿರೆ ತಾಮ್ರದಿಂ ಪೊದಕೆಯಂ ಶ್ರೀ ಚೈತ್ಯಕೋಷ್ಠಾವಳಿ ॥"

ಎಂಬ ವೃತ್ತದಲ್ಲಿ ಮೂಡಬಿದರೆಯನ್ನು ವೇಣುಪುರವೆಂದೇ ಕರೆದಿರುತ್ತದೆ. ಇದೆಲ್ಲ ಸರಿಯೇ , ಆದರೂ ವೇಣುಪುರವೆಂಬುದು ವೇಣೂರು ಏತಕ್ಕಾಗಬಾರದು? ಎಂಬ ಸಂಶಯವು ಕೆಲವರಿಗೆ ಬರಬಹುದು ಆದರೆ ವೇಣೂರು ಎಂದು ಈಗ ಕರೆಯಲ್ಪಡುವ ಅಜಿಲರ ರಾಜಧಾನಿಯಾದ, ಗೋಮಟೇಶ್ವರನ ಪ್ರತಿಮೆಯೊಂದಿದ್ದು ಪ್ರಸಿದ್ಧವಾಗಿರುವ, ಊರಿನ ಹೆಸರು ನಿಜವಾಗಿ ಏಣೂರು ; ವೇಣೂರು ಅಲ್ಲ. ಇಲ್ಲಿ ಎರಡೂರು, ಮೂರೂರು, ನಾಕೂರು, ಐದೂರು, ಆರೂರು, ಏಳೂರು, ಎಣ್ಮೂರು ಎಂಬ ಗ್ರಾಮಗಳಿವೆ

ಆದ ಪ್ರಯುಕ್ತ ಭರತೇಶ್ವರ ವೈಭವದ ಕರ್ತೃವು ಹೇಳುವ ವೇಣುಪುರವು ಮೂಡಬಿದಿರೆಯೇ ಹೊರತು (ವೇಣೂರು) ಏಣೂರು ಅಲ್ಲ. ಈ ಭಾಗದಲ್ಲಿ ದೇವ ಚಂದ್ರನ ಹೇಳಿಕೆಯನ್ನು ನಂಬಬಹುದು."

ಕವಿಯ ಗ್ರಂಥಗಳ ವಿಷಯವಾಗಿಯೂ ತಕ್ಕಷ್ಟು ವಾದ ವಿವಾದಗಳು ನಡೆದಿವೆ. ಶತಕತ್ರಯಗಳಲ್ಲೊಂದಾದ ರತ್ನಾಕರ ಶತಕವನ್ನು ಬರೆದ ಕವಿಯು ಉಳಿದ ಎರಡು ಶತಕಗಳನ್ನೂ ಭರತೇಶ್ವರ ವೈಭವವನ್ನೂ ಬರೆದ ಕವಿಯಿಂದ ಭಿನ್ನನಾಗಿರಬೇಕೆಂಬುದು ಒಂದು ಮತ ಈ ಮತದ ಮುಖ್ಯ ಪೋಷಕರು ದಿವಂಗತ ಶ್ರೀಮಾನ್ ಆರ್. ನರಸಿಂಹಾ ಚಾರ್ಯರವರು ಅವರ ವಾದಸರಣಿಯಿದು :

1 ಭರತೇಶ ವೈಭವ, ಅಪರಾಜಿತೇಶ್ವರ ಶತಕ, ತ್ರಿಲೋಕ ಶತಕಗಳನ್ನು ಬರೆದ ರತ್ನಾಕರವರ್ಣಿಯು ತನ್ನ ಗ್ರಂಥಗಳಲ್ಲಿ ಅಪರಾಜಿತೇಶ್ವರ, ಮಂದರ ಸ್ವಾಮಿಗಳನ್ನು ಸ್ತುತಿಸಿದ್ದಾನೆ ಅಲ್ಲದೆ ಚಿದಂಬರ ಪುರುಷ, ನಿರಂಜನ ಸಿದ್ಧ ಎಂಬ ವಿಶೇಷಣಗಳನ್ನು ಪ್ರಯೋಗಿಸಿದ್ದಾನೆ. ಇವು ಈ ಮೂರು ಕಾವ್ಯಗಳಲ್ಲಿ ನಿಯತವಾಗಿ ಬರುತ್ತವೆ ಆದರೆ

ಶೃಂಗಾರಕವಿ ಹಂಸರಾಜಕೃತವಾದ ರತ್ನಾಕರಾಧೀಶ್ವರಶತಕದಲ್ಲಿ ಇವುಗಳು ಕಂಡು ಬರುವುದಿಲ್ಲ.

ii ರತ್ನಾಕರವರ್ಣಿಯ ಗುರು ಚಾರುಕೀರ್ತಿ ಹಂಸರಾಜನ ಗುರು ದೇವೇಂದ್ರ ಕೀರ್ತಿ

iii. ದೇವಚಂದ್ರನು ರತ್ನಾಕರವರ್ಣಿಯ ಗುರು ಮಹೇಂದ್ರಕೀರ್ತಿ ಎಂದು ಹೇಳಿರುವನಾದರೂ ಅದು ಅಷ್ಟು ನಂಬಿಕಗರ್ಹವಾದುದಲ್ಲ ದೇವಚಂದ್ರನ ಹೇಳಿಕೆ ಯಂತೆ ಕ್ರಿಸ್ತಶಕ ೧೬೫೩ ರಲ್ಲಿದ್ದ ರತ್ನಾಕರವರ್ಣಿಯೂ, ೧೪೪೪ರಲ್ಲಿದ್ದ ದ್ವಾದಶಾನು ಪ್ರೇಕ್ಷೆಯ ಕರ್ತೃ ವಿಜಯಣ್ಣನೂ ಸಮಕಾಲೀನರು ಇದೂ ಅಲ್ಲದೆ ರತ್ನಾಕರವರ್ಣಿಯೇ ಹೇಳಿರುವ ಮಾತುಗಳನ್ನು ಬಿಟ್ಟು ದೇವಚಂದ್ರನ ಮಾತುಗಳನ್ನು ನಂಬುವುದೇಕೆ? ಒಂದು ಪಕ್ಷ ನಂಬಿದರೂ ಮಹೇಂದ್ರಕೀರ್ತಿ, ದೇವೇಂದ್ರಕೀರ್ತಿ ಎಂಬ ಹೆಸರುಗಳು ಬೇರೆ ಬೇರೆ ವ್ಯಕ್ತಿಗಳನ್ನು ಸೂಚಿಸುತ್ತಿರಬಹುದು ಇದಕ್ಕೆ ಶಾಸನಗಳಲ್ಲಿಯೂ ಗ್ರಂಥ ಗಳಲ್ಲಿಯೂ ಎಷ್ಟೋ ಉದಾಹರಣೆಗಳು ದೊರೆಯುತ್ತವೆ ಅವು ಪರ್ಯಾಯನಾಮಗಳು ಬೇರೆ ಅಲ್ಲ

iv. ರತ್ನಾಕರವರ್ಣಿಗೆ 'ಶೃಂಗಾರಕವಿ ಹಂಸರಾಜ' ಎಂಬ ಬಿರುದು ಇದ್ದು ದಕ್ಕೆ ಯಾವ ಪ್ರಮಾಣವೂ ಇಲ್ಲ ಶೃಂಗಾರಕವಿ ಎಂಬ ಬಿರುದು ಕೆಲವು ಕವಿಗಳಿಗಿದ್ದರೂ ಅದರೊಂದಿಗೆ ಸೇರಿರುವ 'ಹಂಸರಾಜ' ಎಂಬುದಕ್ಕೆ ಅರ್ಥವಿಲ್ಲ ಶಬ್ದಮಣಿದರ್ಪಣದ ೨೪೯ ನೆಯ ಸೂತ್ರದ ಕೆಳಗೆ ಕೇಶಿರಾಜನು ಹಂಸರಾಜನೆಂಬ ಒಬ್ಬ ಕವಿಯನ್ನು ಸ್ಮರಿಸುತ್ತಾನೆ. ಆ ಹಂಸರಾಜನೆಂಬುವನು ಬಹುಶಃ ರತ್ನಾಕರಾಧೀಶ್ವರ ಶತಕದ ಕರ್ತೃವಾಗಿರಬೇಕು.

v ಶತಕತ್ರಯವನ್ನು ಸಂಪಾದಿಸಿರುವ ಶ್ರೀಮಾನ್ ಶಾಂತಿರಾಜಶಾಸ್ತ್ರಿಗಳು ರತ್ನಾಕರಾಧೀಶ್ವರ ಶತಕದ ಅಂತ್ಯದಲ್ಲಿರುವ "ಶ್ರೀಮದ್ದೇವೇಂದ್ರಕೀರ್ತಿ" ಇತ್ಯಾದಿ ಗದ್ಯವನ್ನು ಉಳಿದೆರಡು ಶತಕಗಳ ಕೊನೆಯಲ್ಲಿಯೂ ಸೇರಿಸಿದ್ದಾರೆ ಕವಿಚರಿತೆಕಾರರ ಗಮನಕ್ಕೆ ಬಂದಿರುವ ಯಾವ ಆ ಕೈಬರಹದ ಪ್ರತಿಯಲ್ಲಿಯೂ ಆ ಗದ್ಯಭಾಗವು ಕಂಡುಬರುವುದಿಲ್ಲ

vi. ರತ್ನಾಕರ ತನ್ನ ಗ್ರಂಥಗಳಲ್ಲಿ ಯಾವ ಕವಿಯನ್ನೂ ಹೆಸರಿಸಿಲ್ಲ, ಕವಿ ಹಂಸನು ಅಗ್ಗಳ, ಮಧುರ-ಇತ್ಯಾದಿ ಕವಿಗಳನ್ನು ಹೇಳುತ್ತಾನೆ

ಮೇಲಿನ ಕಾರಣಗಳಿಂದ ರತ್ನಾಕರಾಧೀಶ್ವರ ಶತಕದ ಕರ್ತೃವು ಉಳಿದ ಗ್ರಂಥ ಗಳ ಕರ್ತೃವಿನಿಂದ ಭಿನ್ನನಾದವನು. ಆತನ ಹೆಸರು ಶೃಂಗಾರಕವಿ ಹಂಸರಾಜ

ಈ ವಾದವನ್ನು ಶತಕತ್ರಯದ ಸಂಪಾದಕರಾದ ಶ್ರೀಮಾನ್ ಶಾಂತಿರಾಜ ಶಾಸ್ತ್ರಿ ಗಳೂ, ಭರತೇಶ ವೈಭವದ ಸಂಪಾದಕರಾದ ಶ್ರೀಮಾನ್ ಉಗ್ರಾಣ ಮಂಗೇಶರಾಯರೂ

ಪ್ರತಿಭಟಿಸಿದ್ದಾರೆ ಮೇಲಿನ ಆಕ್ಷೇಪಣೆಗಳೆಲ್ಲಕ್ಕೂ ಸಮರ್ಪಕವಾದ ಉತ್ತರವನ್ನು ಇದುವರೆಗೆ ಇನ್ನೂ ಯಾರೂ ಕೊಟ್ಟಿಲ್ಲ ಆದರೂ ಅವರ ಪ್ರತಿವಾದವನ್ನು ಒಳಗೊಂಡು ಇಷ್ಟು ಹೇಳಬಹುದು

i. ಶೃಂಗಾರ ಕವಿಹಂಸರಾಜನೆಂಬುದು ರತ್ನಾಕರವರ್ಣಿಯ ಒಂದು ಬಿರುದೇ ಹೊರತು ಆ ಹೆಸರಿನ ಬೇರೊಬ್ಬ ಕವಿ ಇದ್ದನೆಂದು ಹೇಳುವುದಕ್ಕಾಗುವುದಿಲ್ಲ , ರಾಜ ಹಂಸ ಅಥವಾ ಹಂಸರಾಜ ಎಂದರೆ ರಾಜಶ್ರೇಷ್ಠನೆಂದು ಅರ್ಥ ಶೃಂಗಾರ ಕವಿರಾಜ ಹಂಸನೆಂದರೆ ಶೃಂಗಾರಕವಿಗಳಲ್ಲಿ ಬಹಳ ಶ್ರೇಷ್ಠನಾದವನು ಎಂದಾಗುತ್ತದೆ. ಭರತೇಶ ವೈಭವವನ್ನು ಓದಿದಲ್ಲಿ ಈ ಕವಿಯು ಈ ಬಿರುದಿಗೆ ಹೇಗೆ ಪಾತ್ರನೆಂಬುದು ಕಂಡು ಬರದೇ ಇರಲಾರದು

ii ಕವಿಯು ಭೈರಸ ಒಡೆಯರ ಆಸ್ಥಾನದಲ್ಲಿ ' ಶೃಂಗಾರಕವಿ ' ಯಾಗಿದ್ದನು, ಎಂದು ದೇವಚಂದ್ರನು ತಿಳಿಸುತ್ತಾನೆ ಅವನ ಹೇಳಿಕೆಯನ್ನು ದಂತಕಥೆ ಎಂದು ಅಲ್ಲ ಗಳೆಯುವುದು ಸರಿಯಲ್ಲ ಕವಿಚರಿತೆಕಾರರು ದೇವಚಂದ್ರನ ಹಲವು ಹೇಳಿಕೆಗಳನ್ನು ಸ್ವೀಕರಿಸಿದ್ದಾರೆ ಇದನ್ನು ಮಾತ್ರ ಏಕೆ ಸ್ವೀಕರಿಸಬಾರದು ? ಕಥೆ ಎಂದಮೇಲೆ ಸತ್ಯದ ಮೇಲೆ ಅಸತ್ಯದ ಬಣ್ಣವನ್ನು ಬಳಿದಿರಬಹುದು , ಆದರೂ ಆ ಕಥೆಯ ಅಂತರಾಳದಲ್ಲಿ ಸತ್ಯವಿರಬಹುದು. ರತ್ನಾಕರನ ಗುರುವಿನ ವಿಚಾರದಲ್ಲಿ ಸುಳ್ಳು ಹೇಳಿ ಅವನು ಸಾಧಿಸ ಬೇಕಾಗಿರುವ ಮಹಾಕಾರ್ಯ ತಾನೇ ಏತರದು ? ಕವಿಯು ಸೂರ್ಯವಂಶದ ರಾಜ ಕುಮಾರನೆಂದು ದೇವಚಂದ್ರನು ಹೇಳಿರುವ ಮಾತು ಸುಳ್ಳೆ ? ಕವಿಯೇ ಭರತೇಶ ವೈಭವದಲ್ಲಿ ತಾನು ಕ್ಷತ್ರಿಯವಂಶಜನೆಂದು ಹೇಳಿಕೊಂಡಿಲ್ಲವೇ ? ಆದ್ದರಿಂದ ಮಹೇಂದ್ರಕೀರ್ತಿಯು ರತ್ನಾಕರವರ್ಣಿಯ ಗುರು ಏಕಾಗಬಾರದು ?

iii ಮಹೇಂದ್ರಕೀರ್ತಿ ದೇವೇಂದ್ರಕೀರ್ತಿಗಳೆಂಬುವರು ಬೇರೆ ಬೇರೆ ಗುರು ಗಳೆಂದು ಸಾಧಿಸಹೊರಡುವುದು ದೇವನೂರೂ ಸುರಪುರವೂ ಬೇರೆ ಬೇರೆ ಎಂದು ಹೊರಡುವ ವಾದದಂತೆ ಆಗುವುದಿಲ್ಲವೇ ? ಅವು ಒಬ್ಬನೇ ಗುರುವಿನ ಪರ್ಯಾಯ ನಾಮಗಳಿರಬಹುದೆಂದು ಊಹಿಸುವುದಕ್ಕೆ ಅವಕಾಶವಿದೆ.

iv. ರತ್ನಾಕರನು ಭರತೇಶವೈಭವದಲ್ಲಿ ತನ್ನ ಗುರು ಚಾರುಕೀರ್ತಿಯೋಗೀಶ್ವರ ನೆಂದು ಹೇಳಿದ್ದಾನೆ ರತ್ನಾಕರಾಧೀಶ್ವರ ಶತಕದಲ್ಲಿ ದೇವೇಂದ್ರಕೀರ್ತಿ ಎಂದು ಹೇಳಿಕೊಂಡಿದ್ದಾನೆ ಒಬ್ಬ ಕವಿಗೆ ಇಬ್ಬರು ಗುರುಗಳಿದ್ದಿರಬಹುದೆ ? ಚಾರುಕೀರ್ತಿ ಎಂಬುದು ಮೂಡಬಿದಿರೆಯ ಪೀಠದ ಹೆಸರು , ದೇವೇಂದ್ರಕೀರ್ತಿ ಎಂಬುದು ಘಟ್ಟದ ಮೇಲಿನ ಹುಂಬಚ್ಚ ಪೀಠದ ಹೆಸರು ರತ್ನಾಕರನು ವೀರಶೈವನಾಗಿ ಪುನಃ ಜೈನ ಮತವನ್ನು ಅಂಗೀಕರಿಸಿದ ಮೇಲೆ ಇವನಿಗೆ ಬೇರೊಬ್ಬ ಗುರು ಸಿಕ್ಕಿರಬಹುದು ಆತನೇ ಮಹೇಂದ್ರಕೀರ್ತಿಯಾಗಿರಬಹುದು ಎರಡನೆಯ ಬಾರಿ ಜೈನಮತವನ್ನು ಸ್ವೀಕರಿಸಿದ ಮೇಲೆ ರತ್ನಾಕರಾಧೀಶ್ವರ ಶತಕವನ್ನು ಬರೆದನೆಂದು ನಾವಿಟ್ಟುಕೊಳ್ಳುವು

ದಾದರೆ ಮಹೇಂದ್ರಕೀರ್ತಿಯನ್ನು ಸ್ಮರಿಸಿರುವುದು ನ್ಯಾಯವಾಗಿಯೇ ತೋರುತ್ತದೆ ಎಂದರೆ ಕವಿಗೆ ಇಬ್ಬರು ಗುರುಗಳಿದ್ದರು ಎಂದು ಹೇಳಿದಂತಾಗುತ್ತದೆ—ವೀರಶೈವ ಮತಕ್ಕೆ ಸೇರುವುದಕ್ಕೆ ಮೊದಲು ಚಾರುಕೀರ್ತಿ, ಎರಡನೆಯ ಬಾರಿ ಜೈನನಾದ ಮೇಲೆ ಮಹೇಂದ್ರಕೀರ್ತಿ ವೀರಶೈವ ಮತಕ್ಕೆ ಸೇರಿದನೆಂಬುದನ್ನು ನಂಬದಿದ್ದರೂ ಇಬ್ಬರು ಗುರುಗಳಿರುವುದು ಅಷ್ಟೇನೂ ಅಸ್ವಾಭಾವಿಕವಾಗಿ ತೋರುವುದಿಲ್ಲ

v. ಶಬ್ದಮಣಿದರ್ಪಣಕಾರನು ಹೇಳುವ ಹಂಸರಾಜನು ಶೃಂಗಾರಕವಿ ಹಂಸರಾಜನಿಂದ ಪ್ರತ್ಯೇಕವಾಗಿರಬೇಕು. ಹಂಸರಾಜ ಕವಿಯು ಬರೆದಿರುವ ಗ್ರಂಥವು ಇನ್ನೂ ಬೆಳಕಿಗೆ ಬರದೆ ಗುಪ್ತಸುಪ್ತಿಯಲ್ಲಿರಬಹುದು ಹೀಗೆ ನಿಶ್ಚಿಂತೆಯಿಂದ ಕಣ್ಮರೆಯಲ್ಲಿ ಕುಳಿತಿರುವ ಗ್ರಂಥವು ಕನ್ನಡದಲ್ಲಿ ಇದೊಂದೇ ಅಲ್ಲ

VI ರತ್ನಾಕರಾಧೀಶ್ವರ ಶತಕದ ಕರ್ತೃವು ರತ್ನಾಕರನೇ ಇರಬೇಕೆಂಬುದಕ್ಕೆ ಆ ಗ್ರಂಥದ ಪ್ರತಿಯೊಂದು ಪದ್ಯದ ಕೊನೆಯಲ್ಲಿಯೂ ಕಂಡುಬರುವ 'ರತ್ನಾಕರಾಧೀಶ್ವರಾ' ಎಂಬ ಅಂಕಿತವು ಪೋಷಕವಾಗಿದೆ

ಕನ್ನಡ ಸಾಹಿತ್ಯವನ್ನು ಓದಿರುವವರಿಗೆ ಈ ಮಾತಿನ ಸತ್ಯದ ನಿದರ್ಶನಕ್ಕೆ ಸಾಕಷ್ಟು ಆಧಾರಗಳು ದೊರೆಯುವುದೇನೂ ಕಷ್ಟವಲ್ಲ

VII. ಮೇಲೆ ಹೇಳಿದ ಎಲ್ಲ ಕಾರಣಗಳಿಗಿಂತಲೂ ಅತ್ಯಂತ ಮುಖ್ಯವಾದ ಕಾರಣ ಗ್ರಂಥದ ಆಂತರಿಕ ಪ್ರಮಾಣ ರತ್ನಾಕರನ ಇತರ ಗ್ರಂಥಗಳಲ್ಲಿ ಕಂಡುಬರುವ ಪದ್ಯಭಾಗಗಳು ರತ್ನಾಕರಶತಕದಲ್ಲಿ ಕಂಡುಬರುತ್ತವೆ (ಭರತೇಶವೈಭವದ ಪೀಠಿಕಾ ಭಾಗದಿಂದ ಎತ್ತಿಕೊಂಡಿದ್ದು )

| ರತ್ನಾಕರಾಧೀಶ್ವರ ಶತಕ | ಭರತೇಶ ವೈಭವ |
|---|---|
| ಸಿಲೆಯೊಳ್ ಸುವರ್ಣ ಮಲರೊಳ್ ಸೌರಭ್ಯಮಾ ಕ್ಷೀರದೊಳ್ ನರುನ್ನೆ ಕಾಷ್ಠದೊಳಗ್ನಿಯಿರ್ಪ ತೆರದಿಂದೀ ಮೈಯೊಳೊಂದಿರ್ಪಪ್ಪು | ಕನಕ ಕಲ್ಲೊಳಗ ಕಾಷ್ಠದೊಳಗ್ನಿ ಪಾಲೊಳಗನುವಿಡಿದಾಜ್ಯವಿಪ್ಪಂತೆ ತನುವಿನೊಳಿಹನಾತ್ಮಂ. |
| ಬೆಸಲಿಂ ಕಂದದ ಬೆಂಕಿಯಿಂ ಸುಡದೆ ನೀರಿಂ ನಾಂದದುಗ್ರಾಸಿ ಭೇದಿಸಲಿಂ ಬಾರದ ಚಿನ್ಮಯಂ ಮರೆದು ತನ್ನೊಳ್ತಾಂ ಪರಧ್ಯಾನದಿಂ ಪಸಿವಿಂದೀ ಬಹುಬಾಧೆಯಿಂ ಚುಚೆಗಳಿಂ ಕೇಡಾಗುವೀ ಮೆಯ್ಗೆ ಸಂದಿಸಿದಂ. | ನೀರಿಂದ ನೆನೆಯ ಕಿಚ್ಚಿಂದ ಬೇಯನು ಖಡ್ಗಧಾರೆಗೆ ಸಂಧಿಸನಾತ ! ನೀರು ಕಿಚ್ಚಾಯುಧ ಉಂಚೆಗಳ ಬಾಧೆ ಶರೀರಕೆ. |

**ರತ್ನಾಕರಾಧೀಶ್ವರ ಶತಕ**

ನಳಿನೀನಾಳಕೆ ಮೂಲದಿಂ ತುದಿವರಂ
ಸಂಪೂರ್ಣದಿಂ ಸ್ವಚ್ಛದಿಂ ಬೆಳಗೆಂತಿ
ರ್ಪುದಾ ತಂತುವಂತೆ ನರರ್ಗಂ ಕೆಂಬ
ಚ್ಚೆಯಿಂ ನೆತ್ತಿ ಮುಟ್ಟಳತೆಂ ತಪ್ಪದೆ
ನಿಮ್ಮೊಂದು ನಿರ್ಮಳ ಬಿಂಬೋಪಮ
ನಾತ್ಮನಿರ್ದಪಂ.

ಕವಿತಾಶಕ್ತಿಯೇ ಕಲ್ಪವಲ್ಲಿ.

**ಭರತೇಶ ವೈಭವ**

ಅಂಬುಜನಾಳಕೆ ಮೊದಲಿಂದ ತುದಿ
ಮುಟ್ಟಿ ತುಂಬಿನೊಳಿರ್ಪ ರೀತಿಯೊಳು ।
ಕೆಂಬಚ್ಚೆಯಿಂದ ಮಸ್ತಕಮುಟ್ಟಿ ಜೀವ
ವ್ಯೆತುಂಬಿಹನು,

ಕವಿತೆಯೆಂಬುದು ಕಲ್ಪತರು

ಮೇಲಿನ ಕಾರಣಗಳು ರತ್ನಾಕರಾಧೀಶ್ವರ ಶತಕವನ್ನು ರಚಿಸಿದವನು ರತ್ನಾಕರನೆ ಆಗಿರಬಹುದೆಂದು ಪುಷ್ಟಿಗೊಳಿಸುತ್ತವೆ

ರತ್ನಾಕರನು ಹಲವು ಕಾಲ ಅತ್ಯಂತ ಸುಖಿಯಾದ ಸಂಸಾರಿಯಾಗಿದ್ದು ಅನಂತರ 'ವರ್ಣಿ' ಅಥವಾ ಬ್ರಹ್ಮಚಾರಿಯಾದನೆಂದು ತೋರುತ್ತದೆ ಭರತೇಶ ವೈಭವವನ್ನು ಬರೆವಾಗಲಂತೂ ಆತನು ಸಂನ್ಯಾಸಿಯಾಗಿದ್ದನೆಂದು ಹೇಳುವುದು ಬಹು ಸಾಹಸದ ಮಾತೆಂದೇ ಹೇಳಬೇಕು

ರತ್ನಾಕರನು ಜೈನಾಗಮಗಳಲ್ಲಿ ಹಲವನ್ನು ಹೃದ್ಗತಮಾಡಿಕೊಂಡಿದ್ದುದಲ್ಲದೆ ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ನಾಟಕ, ಕಾಮಶಾಸ್ತ್ರ ಮೊದಲಾದ ಶಾಸ್ತ್ರ ಮತ್ತು ಸಾಹಿತ್ಯಗಳಲ್ಲಿ ನಿಷ್ಣಾತನಾಗಿದ್ದಿರಬೇಕು ಈತ ಬಹು ಸುಸಂಸ್ಕೃತನಾದ ಕವಿ ದೈವದತ್ತವಾದ ಪ್ರತಿಭೆ, ಧರ್ಮಾನುರಾಗಗಳು ಈತನ ಜೀವನದ ಉಸಿರು

## ಶತಕತ್ರಯಿ

I ಕವಿಗೆ ಜೈನಾಗಮಗಳು ಕರತಲಾಮಲಕವಾಗಿದ್ದವೆನ್ನುವುದಕ್ಕೆ ಆತನ ಶತಕತ್ರಯವೇ ದೊಡ್ಡ ಸಾಕ್ಷಿ. ಇವುಗಳಲ್ಲಿ ಒಂದೊಂದರಲ್ಲಿಯೂ ೧೨೮ ಪದ್ಯಗಳಿವೆ (ತ್ರಿಲೋಕ ಶತಕದಲ್ಲಿ ೧೨೯ ಪದ್ಯಗಳಿದ್ದರೂ ಕಡೆಯ ಪದ್ಯ ಪ್ರಕ್ಷಿಪ್ತವೆಂಬ ಅಭಿಪ್ರಾಯವಿದೆ ) ಇವುಗಳಲ್ಲಿ ಒಂದಾದ ತ್ರಿಲೋಕ ಶತಕವು ಜೈನಮತಾನುಸಾರವಾದ ಲೋಕಸ್ಥಿತಿಯನ್ನು ವರ್ಣಿಸುವುದಾಗಿದೆ. ಇದೊಂದೇ ಕಂದಪದ್ಯರೂಪದಲ್ಲಿರುವುದು , ಉಳಿದುವೆರಡೂ ವೃತ್ತರೂಪದಲ್ಲಿವೆ. ಇವೆರಡರಲ್ಲಿ ಅಪರಾಜಿತೇಶ್ವರ ಶತಕವು ಶೈಲಿಯಲ್ಲಿ ಇನ್ನೂ ಎಳಬು. ವಿಷಯನಿರೂಪಣಾಸರಣಿಯಲ್ಲಿ ಹೆಚ್ಚು ಜಾಣ್ಮೆಯಿಲ್ಲ , ನವೀನತೆಯಿಲ್ಲ ಬರಿಯ ಮಾತುಗಳ ಜೋಡಣೆ ಕಲಿಕೆಯ ಕೈಯೇ ಹೊರತು ನುರಿತ ಕೈಯಲ್ಲ ಹೇಳುವ ನೀತಿ ಕಠಿಣವಾಗಿದೆ, ಅನುಸರಣೆಗೆ ಸ್ವಾನುಭವದ ಕುಲುಮೆಯಲ್ಲಿ ಕಾದು, ಸುಖದುಃಖಗಳ ಸುತ್ತಿಗೆ ಏಟು ತಿಂದು, ಕಠಿಣತೆಯ ಕಾಳಿಕೆಯನ್ನು ಕಳೆದುಕೊಂಡು, ಸಿದ್ಧಿಗಂಡ ಸಾಧಕನ ಮಾತುಗಳಲ್ಲ, ನಾವಿಲ್ಲಿ ಕಾಣುವುದು , ಉಚ್ಚಧ್ಯೇಯವನ್ನು ಸಾಧಿಸಹೊರಡುವ ಮುನ್ನ ನಿಶ್ಚಯಿಸಿಕೊಂಡಿರುವ ನಿಯಮ ಕಾಠಿಣ್ಯತೆಯನ್ನು.

ರತ್ನಾಕರ ಶತಕದಲ್ಲಿಯಾದರೋ ಕವಿಯ ಪರಿಪಾಕಗೊಂಡ ಮನಸ್ಸಿನ ಮಾರ್ಪೊಳಪನ್ನು ನಾವು ಕಾಣಬಹುದು 'ವೈರಾಗ್ಯ ನೀತಿಯಾತ್ಮವಿಚಾರಂ ತಾಂ ಬಗೆದು ನೋಡೆ ರಾಜಿಸುಗುಂ'—ಈ ಕಾವ್ಯದಲ್ಲಿ ವಸ್ತುವೇನೋ ಅಪರಾಜಿತೇಶ್ವರ ಶತಕದ ವಸ್ತುವೇ. ಅಲ್ಲಿ ವಸ್ತು ನಿರೂಪಣೆಯೇ ಮುಖ್ಯವಾದ ಗುರಿಯಾಗಿದ್ದರೆ, ನೀತಿ ನಿರೂಪಣೆಯೇ ಪ್ರಮುಖವಾಗಿದ್ದರೆ, ಇಲ್ಲಿ ಅದನ್ನೇ ಹೇಳಿರುವ ಬಗೆ ಹೊಸದು. ಮಾತುಗಳಲ್ಲಿ ಚಮತ್ಕಾರವಿದೆ ; ಕ್ಷುರಧಾರೆಯಂತೆ ನಿಶಿತವಾಗಿಯೂ ಇದೆ. 'ಶಾಸ್ತ್ರ ಹೇಳುವುದಕ್ಕೆ , ಬದನೆಕಾಯಿ ತಿನ್ನುವುದಕ್ಕೆ' ಎಂಬಂತಿರುವವರನ್ನು ಕುರಿತು ಹೇಳುತ್ತಾನೆ—

ಶಾಸ್ತ್ರಂ ಬಂದೊಡೆ ಶಾಂತಿ ಸೈರಣೆ ನಿಗರ್ವಂ ನೀತಿ ಮೆಲ್ಪಾತು ಮು ।
ಕ್ತಿ ಸ್ತ್ರೀಚಿಂತೆ ನಿಜಾತ್ಮಚಿಂತೆ ನಿಲವೇಳ್ಕುಂತಲ್ಲದಾ ಶಾಸ್ತ್ರದಿಂ ।
ದುಸ್ತ್ರೀಚಿಂತನೆ ದುರ್ಮುಖಂ ಕಲಹಮುದ್ಗರ್ವಂ ಮನಂಗೊಂಡೊಡಾ ।
ಶಾಸ್ತ್ರಂ ಶಸ್ತ್ರಮೆ, ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರಾ ॥

ಕಡೆಯ ಪಾದದಲ್ಲಿ ಕಂಡುಬರುವ ಕಿಡಿಹೊತ್ತನುಡಿಗಳ ಬೆಡಗಿನಲ್ಲಿದೆ ರತ್ನಾಕರನ ಮಾರ್ಮಿಕತೆ.

ಭೋಗ ಬೇಡವೆಂದು ತೆಗಳಿ ಅದನ್ನು ಅತ್ತ ನೂಕುವುದಲ್ಲ ರತ್ನಾಕರನ ಸ್ವಭಾವ. ಪೂರ್ವಪುಣ್ಯವಿಹೀನನಾಗಿ ಅದು ದೊರೆಯದೆಂದು ಬಾಯ್ಬಾಯಿ ಬಿಡುತ್ತಾ ತೊಳಲ್ದಿ ಬಳಲುವವನ್ನು ಕಂಡು ಕರುಣೆಯಿಂದ ಹೇಳುತ್ತಾನೆ—

ಪುಣ್ಯಂಗೈಯದೆ ಪೂರ್ವದೊಳ್ ಬರಿದೆ ತಾನೀಗಳ್ ಮನಂ ನೋಯೆ ಲಾ ।
ವಣ್ಯಕ್ಕಾಭರಣಕ್ಕೆ ಭೋಗಕೆನಿಸುಂ ರಾಗಕ್ಕೆ ಚಾಗಕ್ಕೆ ಕಾ ।
ರುಣ್ಯಕ್ಕಗ್ಗದ ಲಕ್ಷ್ಮಿಯಂ ಬಯಸಿ ಬಾಯಂ ಬಿಟ್ಟು ಕಾಂಕ್ಷಾಮಹಾ ।
ರಣ್ಯಂಬೊಕ್ಕಕಟೇಕೆ ಚಿಂತಿಸುವರೋ ರತ್ನಾಕರಾಧೀಶ್ವರಾ ॥

ಪೂರ್ವಪುಣ್ಯದಿಂದ ಭೋಗ ಬಂದಾಗ ಮಾನವ ಮೈಮರೆಯಬಾರದು ಪೂರ್ವದ ಬುತ್ತಿ ಸವೆಯುದ ಮುನ್ನವೇ ಮುಂದಿನ ಮಾರ್ಗಕ್ಕೆ ಅನುಕೂಲಗಳನ್ನು ಕಲ್ಪಿಸಿ ಕೊಳ್ಳಬೇಕು—

ನರರೊಳ್ ಪುಟ್ಟಿ ನರೇಂದ್ರನಾದ ದಿನದೊಳ್ ಸದ್ಧರ್ಮಮಂ ಸನ್ಮುನೀ ।
ಶ್ವರರಂ ಭವ್ಯರನೊಲ್ದು ಮನ್ನಿಸಿಯಸಾಧರ್ಗಾಶ್ರಿತರ್ಗೀಯುತುಂ ।
ಪರಿವಾರ ಪ್ರಜೆಗಳ್ಗೆ ತಾಯತೆರದಿಂದೋವುತ್ತುಮಿರ್ಪಂ ಧರಾ ।
ವರನಿಂದಾ ಬರ್ದಿಲಕ್ಕೆ ನಾಳಿನವತ್ಯೆ ರತ್ನಾಕರಾಧೀಶ್ವರಾ ॥

ಮದವೆದ್ದ ಮನವನ್ನು ಅಂಕೆಯಲ್ಲಿಡುವುದು ಬಹುಕಷ್ಟ—

ಮದವೆದ್ದಾನೆಗೆ ಕಲ್ಲಪೊಯ್ಯುದಿನಿದೇ ? ಮೊಯ್ತೀಂಟೆಗಂ ಕಜ್ಜಿಗಂ ।
ಬದಿಯಂ ತೋಡುವುದೊಳ್ಳಿತಲ್ತು , ಬಗೆವಂದಾತ್ಮಂಗೆ ನಾರೀರತಂ ।
ಮದವಲ್ತಾದೊಡಮಂತದಂ ಬಿಡಲಶಕ್ಯಂ , ಬಿಟ್ಟೊಡೀ ಯೌವನೋ ।
ನ್ಮದದುದ್ರೇಕವಡಂಗದೇವೆನಕಟಾ ! ರತ್ನಾಕರಾಧೀಶ್ವರಾ !

ರತ್ನಾಕರನ ಧರ್ಮಪ್ರತಿಪಾದನೆಯಲ್ಲಿ, ಆತನ ತತ್ತ್ವ ಜಿಜ್ಞಾಸೆಯಲ್ಲಿ ಒಂದು ಅಲೌಕಿಕವಾದ ಔದಾರ್ಯವಿದೆ. ಬಹುಶಃ ಮತ್ತಾವ ಜೈನ ಕವಿಯಲ್ಲಿಯೂ ಕಾಣಬರದ ಒಂದು ಸ್ವತಂತ್ರ ಮನೋವೃತ್ತಿಯಿದೆ ಮನಗಂಡುದನ್ನು ನಿರ್ದಾಕ್ಷಿಣ್ಯವಾಗಿ ನುಡಿಯಬಲ್ಲ ಕೆಚ್ಚಿದೆ. ‘ತನು, ರೂಪ, ವಿಭವ, ಯೌವನ, ಧನ, ಸೌಭಾಗ್ಯ, ಆಯುರಾದಿಗಳ್ ಮಿಂಚಿನ ಪೊಳಪಿನಂತೆ, ಮುಗಿಲ ನೆಳಲಂತೆ, ಇಂದ್ರ ಧನುಸ್ಸಿನಂತೆ, ಬೊಬ್ಬುಳಿಯುರ್ಬಿನಂತೆ’ ಕ್ಷಣಭಂಗುರವೆಂಬ ಜೈನರ ಕ್ಷಣಿಕವಾದ, ರತ್ನಾಕರನಿಗೆ ಅಷ್ಟು ರುಚಿಸುವುದಿಲ್ಲ. ಕ್ಷಣಿಕವಾದರೂ ಅದು ಭೋಗಕ್ಕೆ ಅಯೋಗ್ಯವಲ್ಲ, ಕ್ಷಣಿಕವೆಂಬುದನ್ನು ಅರಿತು, ಭೋಗವಿಮುಖನಾಗದೆಯೇ ಶಾಶ್ವತ ಸುಖವನ್ನು ಅರಸುತ್ತಾ ಹೋಗಬೇಕೆಂಬುದು ಆತನ ಸಂದೇಶ. ಇದೇ ಭಾವವು ಭರತೇಶ ವೈಭವದಲ್ಲಿ ತಾನೇ ತಾನಾಗಿ ತಾಂಡವವಾಡುತ್ತಿರುವುದರಿಂದ ಅದನ್ನು ಮುಂದೆ ವಿಶದವಾಗಿ ವಿವೇಚಿಸೋಣ. ಈ ದೃಷ್ಟಿನಲ್ಲಿ ಶತಕತ್ರಯವು, ಅದರಲ್ಲಿಯೂ ರತ್ನಾಕರ ಶತಕವು, ಜೈನರಿಗೆ ಮಾತ್ರವಲ್ಲದೆ ಇತರರಿಗೂ ಆದರಣೀಯವಾದುದು. ಕವಿಯ ಆತ್ಮರೋದನವನ್ನು ಹೃದಯಂಗಮವಾಗಿ ಚಿತ್ರಿಸಿರುವ ಆ ಕಾವ್ಯ ಜೈನೇತರರೂ ಬಳಸಿಕೊಂಡು ಭೋಗಿಸಬಹುದಾದ ದೊಡ್ಡ ಆಸ್ತಿ.

# ಕಥಾಸಾರ

## ಕಥಾಸಾರ

ಪುರುಪರಮೇಶ್ವರನಾದ ವೃಷಭನಾಥನ ನೂರ್ವರು ಮಕ್ಕಳಲ್ಲಿ ಹಿರಿಯನೂ ಹದಿನಾರನೆಯ ಮನುವೂ ಪ್ರಥಮ ಚಕ್ರಿಯೂ ಆದ ಭರತ ಮಹಾರಾಜನು ಭರತ ಕ್ಷೇತ್ರಕ್ಕೆ ಸಿಂಗಾರವಾದ ಅಯೋಧ್ಯಾಪುರದಲ್ಲಿ ರಾಜ್ಯಭಾರ ಮಾಡುತ್ತಿದ್ದನು ಉದಯದಲ್ಲಿಯೇ ಎದ್ದು ದೇವತಾರ್ಚನೆಯನ್ನು ನೆರವೇರಿಸಿ, ಒಡ್ಡೋಲಗವನ್ನು ನೆರಹಿ, ಮಧ್ಯಾಹ್ನದವರೆಗೂ ಕವಿಗಾಯಕರ ಗೋಷ್ಠಿಯಲ್ಲಿದ್ದು, ಅನಂತರ ಮುನಿಭುಕ್ತಿ ನಿಯಮವನ್ನು ಪಾಲಿಸಿದ ಮೇಲೆ ತನ್ನ ಸಹಸ್ರಾರು ರಾಣಿಯರೊಂದಿಗೆ ನೃತ್ಯ, ವಾದ್ಯ, ಗೀತ, ನಾಟಕಾದಿ ಸುಖಸಂಕಥಾ ವಿನೋದಗಳಲ್ಲಿ ಕಾಲಕಳೆಯುವುದು ಆತನ ದಿನಚರಿ ಆತನಿಗೆ ಭೂಭಾರವನ್ನು ಹೊತ್ತಿರುವೆನೆಂಬ ಚಿಂತೆಯಿಲ್ಲ, ಆಲಸ್ಯವಿಲ್ಲ ಒಂದರ ಮೇಲೂ ಕಾಮವಿಲ್ಲ ವಿಸ್ತಾರವಾದ ತನ್ನ ರಾಜ್ಯವನ್ನು ಸುಕ್ಷೇಮದಿಂದ ಬಹುಕಾಲ ಆಳುತ್ತಿರಲು, ಒಮ್ಮೆ ಆತನ ಆಯುಧಾಗಾರದಲ್ಲಿ ದಿಗ್ವಿಜಯಸೂಚಕವಾದ ಚಕ್ರರತ್ನ ಉದಿಸಿತು ಮಂತ್ರಿಗಳು ಇದನ್ನು ನಿವೇದಿಸಿ, ಧರೆಯನ್ನು ಸಾಧಿಸಲು ಸಮಯವೆಂದು ಸೂಚಿಸಿದರು ಚಕ್ರಿಯು ತೀರ್ಥಂಕರ ಪೂಜೆಯನ್ನು ನೆರವೇರಿಸಿ ವಿಜಯದಶಮಿಯ ದಿನ ದಿಗ್ವಿಜಯ ಪ್ರಯಾಣವನ್ನು ಬೆಳೆಸಿದನು. ಚಕ್ರರತ್ನವು ದಾರಿ ತೋರುತ್ತಾ ಮುಂದೆ ಸಾಗಲು ಅಮಿತವಾದ ಚತುರಂಗ ಬಲವು ಸಮುದ್ರ ನಿರ್ಘೋಷವನ್ನು ಮೀರಿಸುವ ಗಜಬಜೆಯಿಂದ ಅದನ್ನು ಹಿಂಬಾಲಿಸಿತು ರಾಜನ ಸಹಸ್ರ ಸಹಸ್ರ ಸಂಖ್ಯೆಯ ರಾಣಿಯರು ತಮ್ಮ ಅತ್ತೆಯಾದ ಯಶಸ್ವತೀ ದೇವಿಯಿಂದ ಅನುಜ್ಞೆ ಪಡೆದು ರಾಜನನ್ನು ಹಿಂಬಾಲಿಸಿದರು ಅನುಕೂಲ, ಸಾಗರ, ದಕ್ಷಿಣ ಮೊದಲಾದ ಕೆಳೆಯರೂ ರಾಜನ ವಿನೋದಕ್ಕಾಗಿ ಆತನ ಜೊತೆಯಲ್ಲಿಯೇ ಹೊರಟರು

ಭರತನ ದಿಗ್ವಿಜಯದಲ್ಲಿ ಯುದ್ಧಪ್ರಸಕ್ತಿ ಹ್ರಸ್ವವಾಗಿ ಅನಂಗ ಸಾಮ್ರಾಜ್ಯದ ಸುಖಪರಿಕರಗಳ ಹೃದಯಂಗಮವಾದ ವರ್ಣನೆ ವಿಸ್ತಾರವಾಗಿ ಬಂದಿದೆ ಇಗೋ ಕೇಳ್ಕೆಸರು, ಅಗೋ ನೆತ್ತರ ಕಾಲುವೆ, ಅತ್ತಕಡೆ ಬಡಿದಾಡುವ ಅಟ್ಟೆ, ಇತ್ತಕಡೆ ಕುಣಿದಾಡುವ ರುಂಡ, ಕತ್ತಿಗಳ ಝಣಝಣತ್ಕಾರದ ನಡುವೆ ಗೆದ್ದವರ ಆರ್ಭಟ, ಗಾಯಗೊಂಡವರ ಚೀರಾಟ, ಸಾವವರ ನರಳಾಟ—ಇತ್ಯಾದಿ ಬೀಭತ್ಸಪೂರಿತವಾದ ರಣ ಕೋಲಾಹಲಕ್ಕೆ ಇಲ್ಲಿ ಎಡೆಯಿಲ್ಲ ಕೊನೆಗೆ, ಇದಿರು ಬಿದ್ದು, ಮೈ ತಿಳಿದ ಸೋತೆ ಮನೆ ಹೊಕ್ಕವನನ್ನು ಓಡಿಸುವಾಗ ಸಹ ‘ಗುಲಾಮ’ ಎಂಬುದಕ್ಕಿಂತ ಹೆಚ್ಚು ಕಠಿಣವಾದ ಮಾತು ಕಥಾನಾಯಕನ ಬಾಯಲ್ಲಿ ಬರುವುದಿಲ್ಲ ಒಮ್ಮೆ ಸುರಸುಂದರಿಯರಾದ ತನ್ನ ಹೆಂಡಿರೊಡನೆ ಸರಸ ಸಲ್ಲಾಪ; ಮತ್ತೊಮ್ಮೆ ಮಗನ ಬಾಲಲೀಲೆಗಳನ್ನು ನೋಡುತ್ತಾ, ನಲಿಯುವುದು; ಆಗಾಗ ಮದುವೆ, ಹೆರಿಗೆ, ಜಾತಕರ್ಮ—ಇತ್ಯಾದಿಗಳ ಸಂಭ್ರಮವೇ ಇಲ್ಲಿ ಹೆಚ್ಚು

ಭರತನು ಸಮಸ್ತ ಪರಿವಾರದೊಡನೆ ಪಯಣದ ಮೇಲೆ ಪಯಣವನ್ನು ಬೆಳೆಸಿ ಪೂರ್ವಸಾಗರದ ತಡಿಯಲ್ಲಿ ಬೀಡುಬಿಟ್ಟನು ಆತನು ಮುಟ್ಟಿದುದೆಲ್ಲವೂ ಚಿನ್ನ ಸ್ವಲ್ಪವೂ ರಕ್ತಪಾತವಿಲ್ಲದೆ ಪೂರ್ವಸಾಗರಪರ್ಯಂತ ರಾಜ್ಯವು ಆತನ ಅಧೀನವಾಯಿತು ಬೀಡು ಬಿಟ್ಟೆಡೆ ರಾಜನಿಗೊಂದು ಅರಮನೆ ಸಿದ್ಧವಾಯಿತು ಅದನ್ನು ಪ್ರವೇಶಿಸಿ ದಣಿದ ರಾಣಿಯರನ್ನು ಸಂತೈಸಿ, ಮಗನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆಟವಾಡಿಸುತ್ತಾ, ರಾಣಿಯರಿಗೆ ಸಮುದ್ರದ ಸೊಬಗನ್ನು ಬಗೆಬಗೆಯಾಗಿ ಬಣ್ಣಿಸುತ್ತಾ ಆ ದಿನವನ್ನು ಕಳೆದನು

ಮರುದಿನದಿಂದ ಮೂರು ದಿನಗಳು ಉಪವಾಸ ಬೀಡು ಬಿಟ್ಟೆಡೆಯಲ್ಲೆಲ್ಲಾ ಭರತನು ಈ ವ್ರತವನ್ನು ತಪ್ಪದೆ ಆಚರಿಸುವನು ಈ ಅಂತರದಲ್ಲಿ ಸುತ್ತುಮುತ್ತಿನ ರಾಜರೆಲ್ಲರೂ ಕಪ್ಪಕಾಣಿಕೆಗಳನ್ನು ತಂದಿತ್ತರು ಸಮುದ್ರಮಧ್ಯದ ದ್ವೀಪವಾಸಿಯಾದ ಮಾಗಧನೆಂಬ ವ್ಯಂತರ ರಾಜನೊಬ್ಬನು ಮಾತ್ರ ಬರಲಿಲ್ಲ ಅವನ ಉದ್ಧಟತನವನ್ನು ಕಂಡು ಭರತನಿಗೆ ನಗು 'ಮಾಗಧ ನನಗೊಬ್ಬ ಹಗೆಯೆ ? ಸೂರ್ಯನಿಗೆ ದೊಡ್ಡ ಗೂಗೆಯ ಯೋಚನೆಯೇಕೆ ?' ಎಂದುಕೊಂಡು ತನ್ನ ರಥವೇರಿ ಸಾಗರದ ಮೇಲೆ ನಡೆದ ಆತನ ರಥವೂ ತೇಜಿಗಳೂ ನೆಲದ ಮೇಲೆ ನಡೆಯುವಂತೆ ನೀರಿನ ಮೇಲೂ ನಡೆಯಬಲ್ಲವು ಹನ್ನೆರಡು ಯೋಜನ ದೂರ ಹರಿದು ರಥ ನಿಂತಿತು ರಾಜನು ಅಲ್ಲಿಂದ ಬಿಲ್ಲಿನಲ್ಲಿ ಬಾಣವೊಂದನ್ನು ಅನುಸಂಧಾನ ಮಾಡಿ ಮಾಗಧನ ನಗರಿಯತ್ತ ಪ್ರಯೋಗಿಸಿದನು ಅದು ನೇರವಾಗಿ ಹಾರಿಹೋಗಿ ವ್ಯಂತರನ ಓಲಗಶಾಲೆಯಲ್ಲಿದ್ದ ಕಂಭಕ್ಕೆ ಬರಸಿಡಿಲ ಆರ್ಭಟದಿಂದ ಬಡಿದು ನಟ್ಟುಕೊಂಡಿತು ಅದನ್ನು ಕಂಡು ಹುಲಿಯನ್ನು ಕಂಡ ಹುಲ್ಲೆವಿಂಡಿನಂತೆ ಸಭೆಯೆಲ್ಲವೂ ಚೆಲ್ಲಾಪಿಲ್ಲಿಯಾಯಿತು ಬಲ್ಲಿದನಾದ ಮಾಗಧನು ಮಾತ್ರ ಆ ಬಾಣವನ್ನು ತರಿಸಿ ಆದರ ಹಿಳುಕಿನೋಲೆಯನ್ನು ಕರಣಿಕನ ಕೈಲಿ ಓದಿಸಿದ 'ಶ್ರೀಮನ್ಮಹಾ ಪುರುಜಿನೇಂದ್ರನ ಸುಕುಮಾರನೂ, ಗುರುಹಂಸನಾಥನ ಭಾವಕ್ಕೆ ಸೊಕ್ಕಿದ ಅರಿರಾಯರೆಂಬ ಗಿರಿಗಳಿಗೆ ವಜ್ರದಂಡಪ್ರಾಯನೂ ಆದ ಪ್ರಚಂಡ ಭರತಚಕ್ರೇಶ್ವರನು ನಮ್ಮ ಕಿಂಕರ ಮಾಗಧನಿಗೆ ಕೊಟ್ಟ ನಿರೂಪ—ನಾಳೆ ಬಂದು ನೀನು ನಮ್ಮನ್ನು ಕಾಣತಕ್ಕದ್ದು ಇದು ಪರಮ ಶಾಸನ' ಕೇಳಿ ಮಾಗಧನು ಕಿಡಿಕಿಡಿಯಾದನು, ಔಡುಗಚ್ಚಿ 'ಸುಡು, ಸುಡು ಆ ಓಲೆಯನ್ನು' ಎಂದು ಗಜರಿ ಗರ್ಜಿಸಿ ಧನು, ಅವನ ಕೊಬ್ಬನ್ನು ಇಳಿಸುವೆನೆಂದು ಹುಚ್ಚೆದ್ದು ನುಡಿದನು ಆಗ ಮಂತ್ರಿಗಳು ಸೂನೃತವಚನಗಳಿಂದ ಅವನನ್ನು ಸಂತೈಸಿ 'ಭರತಚಕ್ರೇಶ್ವರ ಸಾಮಾನ್ಯನಲ್ಲ ದೇವರ ದೇವನ ಆತ್ಮಜ, ಅದ್ಭುತ ಸಂಪತ್ತಿಗೆ ಅಧಿಪತಿ, ಕಿಂಚಿತ್ತೂ ಭಯವಿಲ್ಲದ ನಿಶ್ಶಂಕ; ಚರಮಾಂಗ ಆದುದರಿಂದ ಕಾಳಗ ತರವಲ್ಲ ಸಮಾನನೊಡನೆ ಯುದ್ಧಮಾಡುವುದು ಸರಿಯೇ ಹೊರತು ಅಧಿಕನೊಡನೆ ಹೋರಾಡುವುದು ತನ್ನನ್ನು ತಾನೇ ಇರಿದುಕೊಂಡಂತೆ' ಎಂದು ಹೇಳಿದರು ಹಿತವರ ಸೂಕ್ತಿಯಿಂದ ಮಾಗಧನ ನೆತ್ತಿಯ ಪಿತ್ತ ಇಳಿದುಹೋಯಿತು. ಮರುದಿನ ತೆಪ್ಪಗೆ ಕಪ್ಪಕಾಣಿಕೆಗಳೊಡನೆ ಹೋಗಿ, ಓಲಗ

ಸಾಲೆಯಲ್ಲಿ ರೀವಿಯಿಂದ ಕುಳಿತಿದ್ದ ಭರತನಿಗೊಪ್ಪಿಸಿ, ಆತನ ಸಾಮಂತನಾದನು ಅಷ್ಟರಲ್ಲಿಯೇ ಅರಮನೆಯ ದೂತಿಯೊಬ್ಬಳು ಸಂತೋಷದಿಂದ ಏದುತ್ತಾ ಓಡಿಬಂದು, ಕುಸುಮಾಜಿ ಸುಕುಮಾರನನ್ನು ಹೆತ್ತಳೆಂದು ಆತನ ಕಿವಿಯಲ್ಲಿ ಒಸಗೆಯನ್ನು ಬಿತ್ತಿದಳು ಹರ್ಷಚಿತ್ತನಾದ ಚಕ್ರಿ ಒಡ್ಡೋಲಗವನ್ನು ಅಲ್ಲಿಗೇ ಹರಿಸಿ, ಅರಮನೆಗೆ ಹೋಗಿ, ಮಗನ ಜಾತಕರ್ಮಾದಿಗಳನ್ನು ವೈಭವದಿಂದ ನೆರವೇರಿಸಿದನು ಅಲ್ಲಿಯೇ ಆರು ತಿಂಗಳು ಬೀಡು ಬಿಟ್ಟಿದ್ದು ಅನಂತರ ಪರಿವಾರ ಸಮೇತ ದಕ್ಷಿಣ ದಿಕ್ಕಿಗೆ ಪಯಣ ಬೆಳೆಸಿದನು ಪರಿವಾರವೆಲ್ಲಾ ಮದುವೆ ದಿಬ್ಬಣದಂತೆ ಮುಂದಮುಂದವಾಗಿ ಮುಂದು ವರಿದು ದಕ್ಷಿಣ ಸಮುದ್ರದ ದಡವನ್ನು ಸೇರಿತು ಹಿಂದಿನಂತೆಯೇ ದಕ್ಷಿಣ ಸಮುದ್ರದ ವರೆಗೆ ಇರುವ ರಾಜ್ಯವೆಲ್ಲಾ ಭರತನ ವಶವಾದುದಲ್ಲದೆ, ಆ ಸಮುದ್ರಮಧ್ಯ ದಲ್ಲಿದ್ದ ವರತನುವೂ ಮಾಗಧನಂತೆ ಮೊದಲು ಮಲೆತುನಿಂತರೂ ಕಡೆಗೆ ಆತನ ಚಕ್ರವರ್ತಿತ್ವವನ್ನು ಒಪ್ಪಿಕೊಂಡು ಕಪ್ಪಕಾಣಿಕೆಗಳನ್ನರ್ಪಿಸಿದನು ಅನಂತರ ಪಶ್ಚಿಮಕ್ಕೆ ಪ್ರಯಾಣ ಮಾರ್ಗಮಧ್ಯದಲ್ಲಿ ಚಂದ್ರಿಕಾದೇವಿಯೆಂಬ ರಾಣಿ ಪುತ್ರನನ್ನು ಪ್ರಸವಿಸಲು, ಅಲ್ಲಿಯೇ ಆರು ತಿಂಗಳಿದ್ದು ಆಮೇಲೆ ಪ್ರಯಾಣ ಮಾಡಿ ಪಶ್ಚಿಮ ಸಮುದ್ರವನ್ನು ಸೇರಿದನು ಆ ಕಡಲ ಮಧ್ಯದ ನಾಡೊಡೆಯನಾದ ಪ್ರಭಾಸಾಮರ ವ್ಯಂತರನನ್ನು ಗೆದ್ದು ಕಪ್ಪಕಾಣಿಕೆಗಳನ್ನು ಪಡೆದನು ಅಲ್ಲಿ ಐವರು ಕುವರರುದಿಸಿದರು ಯಥಾಪ್ರಕಾರ ಆರು ತಿಂಗಳು ಅಲ್ಲಿ ತಂಗಿದ್ದು ಆ ಮೇಲೆ ಸಿಂಧು ನದಿಯ ದಕ್ಷಿಣ ಕಡೆಯನ್ನು ಹಿಡಿದು ಮ್ಲೇಚ್ಛರಾಜ್ಯಗಳ ಮೇಲೆ ದಂಡೆತ್ತಿ ನಡೆದನು

ದಾರಿಯಲ್ಲಿ ವಿಜಯಾರ್ಧಪರ್ವತವು ದೊಡ್ಡದೊಂದು ಗೋಡೆಯಂತೆ ಅಡ್ಡವಾಗಿ ನಿಂತಿತ್ತು ಅದರ ಮಧ್ಯದಲ್ಲಿ ಒಂದು ವಜ್ರಕವಾಟ ಅದನ್ನು ಒಡೆದರೆ ತಮಿಸ್ರಗುಹೆ ಯೆಂಬ ಒಂದು ಗುಹಾ ಮಾರ್ಗವು ದೊರೆಯುವುದು ಅದರ ಮೂಲಕ ಹಾದು ಅದರ ಉತ್ತರ ದಿಗ್ಭಾಗವನ್ನು ಸೇರಬೇಕು ಆದರೆ ಕವಾಟವನ್ನು ಒಡೆಯುವುದು ಸುಲಭ ವಾದ ಕಾರ್ಯವಲ್ಲ ಅದನ್ನು ಒಡೆದೊಡನೆಯೇ ಹನ್ನೆರಡು ಗಾವುದ ಉದ್ದ ಕಿಚ್ಚು ಉಚ್ಚಳಿಸುವುದು ಅದನ್ನು ನಿವಾರಿಸುವುದಕ್ಕಾಗಿ ಭರತನ ಆಜ್ಞೆಯಿಂದ ದೊಡ್ಡ ಅಗಳೊಂದು ನಿರ್ಮಾಣವಾಯಿತು. ಅದರ ತುಂಬ ನೀರು ತುಂಬಿದ ಮೇಲೆ ರಾಜನು ತನ್ನ ದಂಡರತ್ನದಿಂದ ವಜ್ರಕವಾಟವನ್ನು ಒಡೆದು ಹಾಕಿದನು ಅದರ ಆರ್ಭಟಕ್ಕೆ ವಿಜಯಾರ್ಧಗಿರಿ ನಡುಗಿತು ಅದರ ಮೇಲಿದ್ದ ವ್ಯಂತರಾಮರರೆಲ್ಲಾ ಅಲ್ಲಾಡಿ ಹೋದರು ಆ ಗಿರಿಯ ಒಡೆಯನಾದ ವಿಜಯಾರ್ಧದೇವನು ತನ್ನ ವ್ಯಂತರ ಪರಿವಾರದೊಡನೆ ಭರತನ ಬಳಿಗೆ ಬಂದು, ಕಪ್ಪವಿತ್ತು, ಮನ್ನಣೆಗೊಂಡು ಹೋದನು. ಗುಹೆಯ ಬೆಂಕಿ ಆರಲು ಆರು ತಿಂಗಳು ಬೇಕು ಈ ಅವಕಾಶದಲ್ಲಿ ಮ್ಲೇಚ್ಛರಾಜರ ನ್ನೆಲ್ಲಾ ಗೆಲ್ಲುವಂತೆ ತನ್ನ ಸೇನಾನಿಗಳಾದ ಜಯ, ವಿಜಯಾಂಕರನ್ನು ಅಟ್ಟಿದನು

ವಿಜಯಾರ್ಧಪರ್ವತದ ತಪ್ಪಲಿನಲ್ಲಿ ಗಗನವಲ್ಲಭವೆಂಬ ಒಂದು ಪಟ್ಟಣ. ನಮಿ ಅದರ ರಾಜ. ರಥಚಕ್ರವಾಳಪುರವೆಂಬ ಮತ್ತೊಂದು ಪಟ್ಟಣಕ್ಕೆ ವಿನಮಿ ರಾಜ ಈ

ಸೋದರರು ಭರತನ ಸೋದರಮಾವನ ಮಕ್ಕಳು ಆತನು ವಜ್ರಕವಾಟವನ್ನು ಭೇದಿಸಿದುದನ್ನು ಕೇಳಿ ವಿನಮಿಗೆ ಆನಂದ ಆದರೆ ಹಿರಿಯನಾದ ನಮಿಗೆ ಚಿಂತೆ 'ನಮ್ಮ ಭಾವಾಜಿ ನಿಮಿಷಮಾತ್ರದಲ್ಲಿ ಕವಾಟವನ್ನು ಹೋಳುಮಾಡಿದ, ನಮ್ಮ ಭಾವಾಜಿಗೆ ಸಮನಾರು ?' ಎಂದು ನಲಿದು ನರ್ತಿಸುತ್ತಿರುವ ತಮ್ಮನನ್ನು ಕಂಡು ನಮಿ ಕೋಪದಿಂದ 'ನಿನಗೆ ಮಕ್ಕಳಾಟಿಕೆ ರಾಜಾಂಗದ ದಿಕ್ಕರಿಯದೆ ಭಾವಾಜಿಯ ಪೌರುಷವನ್ನು ಕಂಡು ಬೀಗುತ್ತಿದ್ದಿ ಷಟ್ಖಂಡದೊಡೆಯನಾದ ನಿಮ್ಮ ಭಾವಾಜಿ ರಾಜಸಮೂಹವೆಲ್ಲವೂ ತನ್ನನ್ನು ಓಲೈಸಬೇಕೆನ್ನುತ್ತಾನೆ ಸರಿಸರಿಯಾಗಿ ಕುಳಿತು ಸರಸದಿಂದ ನೀನು ತಾನೆಂದು ನುಡಿಯುವ ಹಕ್ಕು ಹೋಯಿತು ಇನ್ನೇನಿದ್ದರೂ ಕಾಣಿಕೆಯಿತ್ತು ಗೌರವದಿಂದ ಕಂಡು, ಅಯ್ಯಾ ! ಜೀಯಾ ! ಲೇಸು ! ಎಂದು ನುಡಿವ ಸೇವಕರಾಗಬೇಕು' ಎಂದನು ಅಣ್ಣ ನುಡಿವ ಸರಣಿ ತಮ್ಮನಿಗೆ ಸರಿಬೀಳಲಿಲ್ಲ ಮಂತ್ರಿ ಮೃದುನುಡಿಗಳಿಂದ ಹೇಳಿನೋಡಿದರೂ ನಮಿ ದಾರಿಗೆ ಬರಲಿಲ್ಲ ಚಿಕ್ಕಂದಿನಿಂದ ಭರತನಿಗೆ ಅರ್ಪಿಸಬೇಕೆಂದು ಬೆಳಸಿದ್ದ ಸುಭದ್ರೆಯೆಂಬ ತಂಗಿಯನ್ನು ಈಗ ಆತನಿಗೆ ವಿವಾಹ ಮಾಡಿಕೊಡುವುದಕ್ಕೂ ಆತ ಒಪ್ಪಲಿಲ್ಲ ಕೊನೆಗೆ ತಾನು ಹೋಗಿ ಭರತನನ್ನು ಕಂಡು ಕಾಣಿಕೆಯೊಪ್ಪಿಸುವುದಕ್ಕೂ ಸಹ ಅವನು ಒಡಂಬಡಲಿಲ್ಲ ತನ್ನ ಸುದ್ದಿ ಬಂದರೆ ವ್ರತಧಾರಿಯಾಗಿರುವನೆಂದು ತಿಳಿಸುವಂತೆ ಹೇಳಿ, ತಮ್ಮನನ್ನೂ ಮಂತ್ರಿಯನ್ನೂ ಜೊತೆಮಾಡಿ ಕಾಣಿಕೆಯೊಡನೆ ಭರತನ ಬಳಿಗೆ ಕಳುಹಿದನು ವಿನಮಿಯ ಜೊತೆಯಲ್ಲಿಯೇ ನೂರಾರು ಜನ ಖೇಚರ ರಾಜರೂ ಭರತರಾಜನನ್ನು ಕಾಣಲು, ಕಾಣಿಕೆಯೊಪ್ಪಿಸಲು, ವಿಮಾನಗಳಲ್ಲಿ ಹಾರಿ ಬಂದರು ಇವರಲ್ಲಿ ಹಲವರು ಭರತರಾಜನಿಗೊಪ್ಪಿಸಲು ರೂಪವತಿಯರಾದ ಸುತೆಯರನ್ನು ಕರೆತಂದಿದ್ದರು

ವಿನಮಿ ಭರತರಾಜನನ್ನು ಆಸ್ಥಾನ ಮಂಟಪದಲ್ಲಿ ಕಂಡು ಕಾಣ್ಕೆಯಿತ್ತನು ಪರಸ್ಪರ ಕುಶಲಪ್ರಶ್ನೆಗಳಾದುವು ಉಳಿದ ಖೇಚರ ರಾಜರಲ್ಲಿ 'ಪ್ರಮದ ಪುತ್ರಿಯರ'ನ್ನು ತಂದವರನ್ನು ಮೊದಲು ರಾಜನ ಸನ್ನಿಧಿಗೆ ಹೊಗಿಸಿದರು ಅವರಿಗೆ ಕೊಡುವ ಮರ್ಯಾದೆಯೇ ಬೇರೆ ಬಂದೊಡನೆಯೇ ಕೈ ಮುಗಿದರೆ ಸಾಕು ಅವರಿಗಾಗಿ ಪ್ರತ್ಯೇಕವಾದ ಆಸನಗಳು ಸಿದ್ಧವಾಗುತ್ತವೆ ಇಂತಹ ಮುನ್ನೂರು ಜನ ರಾಜರು ಪ್ರತ್ಯೇಕ ಪ್ರತ್ಯೇಕವಾಗಿ ಬಂದು ಮರ್ಯಾದಿತರಾಗಿ ಆಸನಗಳನ್ನಲಂಕರಿಸಿದರು ನೋಡಿದವರು 'ರೂಪುಳ್ಳ ಹೆಣ್ಣ ಹೆತ್ತವರ ಭಾಗ್ಯವೆ !' ಎಂದು ಕರುಬಬೇಕು ಇವರ ಸರದಿಯಾದ ಮೇಲೆ ಉಳಿದ ರಾಜರು ಒಬ್ಬೊಬ್ಬರಾಗಿ ಬಂದು ರಾಜನ ಪಾದದಡಿಯಲ್ಲಿ ತಮ್ಮ ಕಪ್ಪಕಾಣಿಕೆಗಳನ್ನಿರಿಸಿ ಅಡ್ಡಬಿದ್ದು ಎದ್ದು, ನೆಲದ ಮೇಲೆ ಹಾಸಿದ್ದ ಚಕ್ಕಳಗಳ ಮೇಲೆ ಕುಳಿತರು. ಇದೆಲ್ಲವನ್ನೂ ಕುಳಿತು ಕಾಣುತ್ತಿದ್ದ ವಿನಮಿಗೆ ತಾನು ಹೆಣ್ಣಿಲ್ಲದೆ ಬಂದುದಕ್ಕೆ ಮನಸ್ಸಿನಲ್ಲಿಯೇ ಮಿಡುಕಾಗಿರಬೇಕು

ಮರುದಿನ ಮದುವೆ ಭರತರಾಜನು ಮುನ್ನೂರು ಜನ ಖೇಚರಾಂಗನೆಯರನ್ನೂ ಮದುವೆನಿಂದು, ಮುನ್ನೂರು ರೂಪುದಾಳಿ, ಬೇರೆಬೇರೆಯಾಗಿ ಬೆರೆದು, ಒಮ್ಮೆಯೇ

ಅವರೆಲ್ಲರನ್ನೂ ವಿನೋದಗೊಳಿಸಿದನು ಮಾವಂದಿರಿಗೆ ಬೇಕಾದಷ್ಟು ಉಡುಗೊರೆಯಿತ್ತು ಅಲ್ಲಿಯೇ ಕೆಲವುದಿನಗಳಿರುವಂತೆ ಉಪಚಾರ ಹೇಳಿ ಬಿಡಾರಗಳಿಗೆ ಕಳುಹಿಸಿದ ಹೊಸ ಹೆಂಡಿರೊಡಗೂಡಿ ಕೆಲವು ದಿನಗಳು ಕಳೆಯುವಷ್ಟರಲ್ಲಿಯೇ ಸುಗ್ಗಿಯ ಮೇಲೆ ಸುಗ್ಗಿ ಸೇನಾಪತಿಯಾದ ವಿಜಯನು ಪಡುವಣ ಖಂಡವನ್ನೆಲ್ಲಾ ಜಯಿಸಿ 'ಹೆಂಗಳ ಜನಕರ ಹಿಂದಿಟ್ಟುಕೊಂಡು' ಬಂದು ಸಾಷ್ಟಾಂಗವೆರಗಿದ ಆಸ್ಥಾನದಲ್ಲಿದ್ದ ಭರತ ರಾಜನು ಬಂದ ರಾಜರು 'ಕಪ್ಪಕೆ ತಂದಾನೆ ಕುದುರೆಗಳನು ಹಗಲೊಪ್ಪಿಸಿಕೊಂಡನಾ ರಾಯ | ಸುಪ್ಪಾಣಿ ಪೆಂಗಳನೊಂದೆ ಪಸೆಯೊಳಿರುಳೊಪ್ಪದೊಳ್ವೈವಾಹವಾದ || ಈ ಮುನ್ನೂರಿಪ್ಪತ್ತು ಭೂಚರಿಯದೊಡನೆ ಸುಖವಾಗಿರುತ್ತಿರಲು 'ಸುಖದ ಮೇಲುತ್ತಮ ಸುಖವೆ ಬಪ್ಪಂತೆ' ಪೂರ್ವಖಂಡನನ್ನೆಲ್ಲಾ ಜಯಿಸಿದ ಜಯರಾಜನ ಸವಾರಿ ಬಂದಿಳಿಯಿತು 'ನೂತನ ಪ್ರಾಯದ ನಾನೂರು ಪೆಂಗಳು' ಭರತನ ರಾಣಿಯರ ಮಾಲೆಗೆ ಹೊಸದಾಗಿ ಸೇರಿದರು, ಅದರ ಫಲವಾಗಿ ಖೇಚರ ಮಾವಂದಿರಂತೆ ಈ ಭೂಚರ ಮಾವಂದಿರೂ ಉಡುಗೊರೆಯಿಂದ ತಣಿದುಹೋದರು

ಭಾವನನ್ನು ಕಾಣಹೋದ ವಿನಮಿ ಮದುವೆಯ ಜೊಕ್ಕ ಭೋಜನ ಉಣ್ಣುತ್ತಾ ಕೆಲಕಾಲ ಕಳೆದನು ಚಕ್ರವರ್ತಿಯ ಅಪ್ಪಣೆಯಿಲ್ಲದೆ ಹಿಂದಿರುಗುವಂತಿಲ್ಲ ಚಕ್ರವರ್ತಿಗಾದರೋ ಅಪ್ಪಣೆಯೀಯಲು ವ್ಯವಧಾನವಿಲ್ಲ ಹೀಗಾಗಿ ಹಲವು ದಿನ ಕಳೆದು ಹೋದವು ಮದುವೆಯ ದಿಬ್ಬಣವೆಲ್ಲಾ ಮುಗಿದ ಮೇಲೆ ಒಂದು ದಿನ ಒಡ್ಡೋಲಗವನ್ನು ನೆರಹಿದ. ಆ ದಿನ ವಿನಮಿಯನ್ನು ಬೀಳ್ಕೊಡಬೇಕೆಂದು ನಿಶ್ಚಯಿಸಿ, ಹಾಗೆ ಮಾಡುವ ಮುನ್ನ ನಮಿಯು ಬಂದು ತನ್ನನ್ನು ಕಾಣದೆ ಹೋದುದಕ್ಕಾಗಿ ಅವನನ್ನು ಆಕ್ಷೇಪಿಸಿದನು. ಚಕ್ರಿಯ ಸ್ನೇಹಿತರೂ ಅವನ ಉದ್ಧಟತನವನ್ನು ಎತ್ತಿ ಆಡಿದರು ಆಗ ನಮಿಯ ಮಂತ್ರಿಯಾದ ಬುದ್ಧಿಸಾಗರನು ಎದ್ದು ನಿಂತು 'ದೇವರ ಅಪ್ಪಣೆಯಂತೆ ನಡೆದುಕೊಳ್ಳಲು ಸಿದ್ಧರಾಗಿದ್ದೇವೆ ತಾವು ವಿಜಯಾರ್ಧ ಪರ್ವತವನ್ನು ದಾಟಿ ಹೋಗುವ ಹೊತ್ತಿಗೆ ನಮ್ಮ ಅರಸು ತಮ್ಮನ್ನು ಬಂದು ಕಾಣುವಂತೆ ನಾನು ಏರ್ಪಡಿಸುವೆನು' ಎಂದು ಅಭಿವಚನವಿತ್ತನು ವಿನಮಿಯೂ ಇದಕ್ಕೊಪ್ಪಿದನು. ಇಬ್ಬರೂ ಭರತನನ್ನು ಬೀಳ್ಕೊಂಡು ಹಿಂದಿರುಗಿದರು ಹೋಗುತ್ತಾ ದಾರಿಯಲ್ಲಿ 'ಸುಭದ್ರಾದೇವಿಯನ್ನು ಕೊಡದಿದ್ದರಾಗುತ್ತದೆಯೆ ? ಈ ಚಕ್ರಿ ಸುಮ್ಮನೆ ಬಿಟ್ಟಾನೆ ? ಏನಾದರೂ ಮಾಡಿ ನಮಿಯನ್ನು ಒಡಂಬಡಿಸಬೇಕು' ಎಂದು ಪರಸ್ಪರ ಮಾತನಾಡಿಕೊಂಡರು. ಇತ್ತ, ಭರತನು ತನ್ನ ಸ್ನೇಹಿತರು ಅವರನ್ನು ಆಕ್ಷೇಪಿಸಿ ಅಂಜಿಸಿದುದಕ್ಕೆ ಮೆಚ್ಚಿ ಅವರಿಗೆ ಉಚಿತವಾದ ಮನ್ನಣೆಯನ್ನು ಸಲ್ಲಿಸಿದನು

ಇಷ್ಟು ಹೊತ್ತಿಗೆ ತಮಿಸ್ರಗುಹೆಯ ಬೆಂಕಿ ಆರಿತು ಆ ಗುಹೆಯ ಹೊಲಬನ್ನರಿತ, ಕೃತಮಾಲನನ್ನು ಸೇನಾಪತಿಯೊಡನೆ ಕಳುಹಿ ದಾರಿಯನ್ನೆಲ್ಲಾ ಸುಗಮವಾಗಿ ಮಾಡಿಸಿದ್ದಾಯಿತು ಅನಂತರ ಪರಿವಾರ ಸಮೇತನಾಗಿ ಗುಹೆಯನ್ನು ಪ್ರವೇಶಮಾಡಿದನು. ದಟ್ಟವಾದ ಕತ್ತಲೆಗವಿದಿದ್ದ ಆ ಗುಹೆಯಲ್ಲಿ ಕಾಕಿಣಿ ರತ್ನದಿಂದ ಗೋಡೆಯ ಮೇಲೆ

ಗಾವುದಕ್ಕೊಂದು ಸೂರ್ಯಚಂದ್ರರನ್ನು ಬರೆದು, ಅದರ ಬೆಳಗಿನಲ್ಲಿ ಸಲೀಸಾಗಿ ಸೈನ್ಯವೆಲ್ಲಾ ಸಾಗಿತು ಗುಹೆಯ ಮಧ್ಯದಲ್ಲಿ ಸಿಂಧುನದಿ ಇಬ್ಭಾಗವಾಗಿ ಹರಿಯುತ್ತಿತ್ತು. ಒಂದರ ಹೆಸರು ನಿಮಗ್ನ, ಮತ್ತೊಂದು ಉನ್ಮಗ್ನ ನಿಮಗ್ನದಲ್ಲಿ ಬೆಂಡುಬಿಟ್ಟರೂ ಮುಳುಗಿಹೋಗುವುದು ಉನ್ಮಗ್ನದಲ್ಲಿ ಗುಂಡುಬಿದ್ದರೂ ಚೆಂಡಿನಂತೆ ಪುಟ ನೆಗೆಯುವುದು ಸೇನಾನಿ ಅವುಗಳಿಗೆ ಸೇತುವೆಕಟ್ಟಿ ಸುಗಮವಾಗಿ ಮಾಡಿದ್ದನು ಭರತನು ಪರಿವಾರದೊಡನೆ ಅದನ್ನು ಸರಾಗವಾಗಿ ದಾಟಿ ಉತ್ತರದ ಕವಾಟದ ಮೂಲಕ ಗುಹೆಯನ್ನು ದಾಟಿದನು

ಭರತನ ಸೈನ್ಯವು ಬಯಲಿಗೆ ಬರುತ್ತಿದ್ದಂತೆಯೇ ಎಂದೂ ಕಂಡರಿಯದ ಕಷ್ಟವೊಂದು ಪ್ರಾಪ್ತವಾಯಿತು ಚಿಲಾತ ಆವರ್ತರೆಂಬ ಉತ್ತರಖಂಡದ ರಾಜರಿಬ್ಬರು ಭರತನ ಬರವನ್ನು ಕಂಡು ಭಯದಿಂದ ಅವನನ್ನು ನಿಗ್ರಹಿಸುವಂತೆ ತಮ್ಮ ಕುಲದೈವಗಳಾದ ಕಾಲಮುಖ, ಮೇಘಮುಖರನ್ನು ಪ್ರಾರ್ಥಿಸಿದರು ಆ ದೇವತೆಗಳ ಪ್ರಭಾವದಿಂದ ಆಕಾಶವೆಲ್ಲಾ ಆನೆಯ ಹಿಂಡಿನಂತೆ ಮೋಡಗಳಿಂದ ತುಂಬಿ ಹಗಲಿನಲ್ಲೇ ಕಗ್ಗತ್ತಲು ಕವಿಯಿತು ಅಂಬರವೇ ಬಾಯ್ತೆರೆದು ಉಗುಳುತ್ತಿರುವುದೋ ಎನ್ನುವಂತೆ ತೆಂಗಿನ ಮರಗಳ ತೋರ ಧಾರೆಗಟ್ಟಿ ಮಳೆ ಸುರಿಯಿತು ತಗ್ಗುದಿನ್ನೆಗಳೆಲ್ಲಾ ಏಕವಾಗುವಂತೆ ಮಡುಗಟ್ಟಿ ನೀರು ನಿಂತಿತು ಆದರೂ ಮಳೆ ಸುರಿಯುತ್ತಲೇ ಇದೆ ಆಗ ಭರತನು ಛತ್ರರತ್ನವನ್ನು ಅಂಬರಕ್ಕೆ ಹರಹಿಸಿದನು, ನೆಲಕ್ಕೆ ಚರ್ಮರತ್ನವನ್ನು ಹಾಸಿಸಿದನು. ಚಕ್ರರತ್ನ, ಕಾಕಿಣಿರತ್ನಗಳ ಕಾಂತಿಯಿಂದ ಕತ್ತಲನ್ನು ಹೋಗಲಾಡಿಸಿದನು ಮೂವತ್ತಾರು ಗಾವುದ ಅಗಲ ನಲವತ್ತೆಂಟು ಯೋಜನ ಉದ್ದ ವಿಸ್ತಾರವಾದ ಸುರಕ್ಷಿತ ಪ್ರದೇಶದಲ್ಲಿ ಪರಿವಾರವು ಸುಕ್ಷೇಮದಿಂದಿತ್ತು ಹಡಗಿನಲ್ಲಿ ಕುಳಿತು ಸಮುದ್ರವನ್ನು ನೋಡುವ ವ್ಯಾಪಾರಿಯಂತೆ ಭರತರಾಜನು ನಿರ್ಭೀತನಾಗಿ ಈ ಅಕಾಲವರ್ಷವನ್ನು ನೋಡುತ್ತಿದ್ದನು ಆತನ ಮನಸ್ಸಿನಲ್ಲಿ ಇದು ಯಾವುದೋ ದುಷ್ಟದೈವಗಳ ಕೆಟ್ಟಚೇಷ್ಟೆಯಿರಬೇಕೆಂದು ಸಂದೇಹ ಮೂಡಿತು ತಲೆಯೆತ್ತಿ ಮೇಲೆ ನೋಡುತ್ತಾನೆ— ಮೇಘಮುಖ, ಕಾಲಮುಖರು ತಮ್ಮ ಅನುಚರರೊಡನೆ ಸಾಲಾಗಿ ನಿಂತಿದ್ದಾರೆ! ಒಡನೆಯೇ ಸೇನಾನಿಯಾದ ಜಯನಿಗೆ ಅಪ್ಪಣೆಮಾಡಿದನು ಆತನು ವಿಮಾನದಲ್ಲಿ ಆಕಾಶಕ್ಕೆ ನೆಗೆದು ದುಷ್ಟದೈವಗಳನ್ನೆಲ್ಲಾ ಕಾಗೆಗಳನ್ನು ಬಡಿದೋಡಿಸುವಂತೆ ಹೊಡೆದು ಅಟ್ಟಿದನು ಇದನ್ನು ಕಂಡು ಚಿಲಾತ, ಆವರ್ತರು ಓಡಿಹೋಗಿ ಅವಿತುಕೊಳ್ಳಲು ಯತ್ನಿಸಿದರು ಆದರೆ ಜಯರಾಜನ ಬಳಿಯಲ್ಲಿ ಅವರ ಬೇಳೇಕಾಳು ಬೆಂದೀತೇ ? ಅವರಿಬ್ಬರನ್ನೂ ಹೆಡಮುರಿಗೆ ಕಟ್ಟಿ ಹಿಡಿತಂದನು ಅವರ ಸುದ್ದಿಯನ್ನೆಲ್ಲಾ ಕೇಳಿ ಭರತನಿಗೆ ಬಹು ಕೋಪ ಬಂತು ತನ್ನ ಹಡಪಿಗರಿಗೆ ಅವರ ಮುಕುಟವನ್ನು ಎಡಗಾಲಿನಿಂದ ಒದ್ದು' ಕೆಡಹುವಂತೆ ಆಜ್ಞಾಪಿಸಿದನು ಅವರಿಗಾದ ಶಿಕ್ಷೆಯನ್ನು ಕಂಡು ಬೆದರಿ ವ್ಯಂತರರಾಜರೆಲ್ಲರೂ ಬಂದು ಚಕ್ರಿಗೆ ಕಪ್ಪಕಾಣಿಕೆಗಳನ್ನು ಅರ್ಪಿಸಿ ಆತನ ಕೈಂಕರ್ಯವನ್ನು ಸ್ವೀಕರಿಸಿದರು.

ರಾಜನು ಅಲ್ಲಿಯೇ ಕೆಲವುಕಾಲ ತಂಗಿದ್ದು ಮುಂದಕ್ಕೆ ಪ್ರಯಾಣ ಬೆಳೆಸಿದನು ದಾರಿಯಲ್ಲಿ ಸಿಂಧುದೇವಿ ಗಂಗಾದೇವಿಯರು ಸೋದರ ವಾತ್ಸಲ್ಯದಿಂದ ಆತನನ್ನು ಆದರಿಸಿ, ಹರಸಿ ಬೀಳ್ಕೊಟ್ಟರು ಭರತನು ಪೂರ್ವ ಪಶ್ಚಿಮ ಖಂಡಗಳನ್ನು ಜಯಿಸಿ ನಡುವಣ ಖಂಡದ ನಟ್ಟನಡುವೆ ಇದ್ದ ವೃಷಭಾದ್ರಿಗೆ ಬಂದನು ಚಕ್ರವರ್ತಿಗಳಾದವರೆಲ್ಲರೂ ಆ ಪರ್ವತದ ಮೇಲೆ ತಮ್ಮ ಅಂಕಮಾಲೆಯನ್ನು ಬರೆಸಬೇಕು ಹಿಂದಿನ ಚಕ್ರವರ್ತಿಗಳ ಅಂಕಮಾಲೆಯಿಂದ ತುಂಬಿಹೋಗಿದ್ದುದರಿಂದ ಭರತನಿಗೆ ಬರೆಸಲು ಅಲ್ಲಿ ತೆರಪೇ ಇರಲಿಲ್ಲ ಆಗ ಆತನು ದಂಡರತ್ನದಿಂದ ಒಂದು ಶಾಸನವನ್ನು ಅಳಿಸಿ ಕಾಕಿಣೀರತ್ನದಿಂದ ತನ್ನ ಶಾಸನವನ್ನು ಕೆತ್ತಿಸಿದನು ಈ ಮಜಲಿನಲ್ಲಿ ಎರಡು ಸಹಸ್ರ ಮೊಂಡಲಿಕರ ಹೆಣ್ಣುಮಕ್ಕಳನ್ನು ಒಂದೇ ಹಸೆಯಲ್ಲಿ ಮದುವೆಯಾದನು

ಅತ್ತ, ನಮಿಯನ್ನು ಕರೆತರುವೆನೆಂದು ಹೇಳಿ ಹಿಂದಿರುಗಿದ್ದ ವಿನಮಿ ಆತ್ಮೀಯರ ಹಿತವಚನಗಳಿಂದ ಅಣ್ಣನ ಮನಸ್ಸನ್ನು ತಿರುಗಿಸಲು ಪ್ರಯತ್ನಿಸಿದನು ನಮಿ ಅವರ ಒತ್ತಾಯಕ್ಕೆ ಕಟ್ಟುಬಿದ್ದು ತಂಗಿಯಾದ ಸುಭದ್ರೆಯನ್ನು ಭರತನಿಗೆ ಕೊಡಲೊಪ್ಪಿದರೂ, ಅವನಿದ್ದೆಡೆಗೆ ಹೋಗಿ ಹೆಣ್ಣೊಪ್ಪಿಸಿ ಬರಲು ಆ ಕ್ಷತ್ರಿಯವೀರನ ಮನಸ್ಸು ಒಪ್ಪಲಿಲ್ಲ ಹೆಣ್ಣು ಬೇಕಾದವನು ಹೆಣ್ಣಿದ್ದೆಡೆಗೇ ಬರಬೇಕು ಎಂಬ ಮಗನ ವಾದಸರಣಿಯನ್ನು ಕಂಡು, ಯಶೋಭದ್ರಾದೇವಿ ಮಗಳನ್ನು ಕೊಂಡೊಯ್ದು ಭರತನಿಗೆ ವಿವಾಹ ಮಾಡಿ ಕೊಟ್ಟು ಬರದಿದ್ದರೆ ತಾನು ಕೈಲಾಸಗಿರಿಗೆ ಹೋಗಿ ತಪವನ್ನು ಕೈಕೊಳ್ಳುವುದಾಗಿ ಹೆದರಿಸಿ ನೋಡಿದಳು ನಮಿಗೂ ರೇಗಿತು 'ಗೌರವ ತಪ್ಪಿ ಬಾಳುವ ಸಿರಿಗಿಂತ ಜಿನದೀಕ್ಷೆಯೇ ಲೇಸು ನೀವು ಮಗಳನ್ನು ಅಳಿಯನಿಗೆ ಕೊಟ್ಟು ವಿಲಾಸದಿಂದ ಬಾಳಿರಿ. ನಾನು ತಪೋವನಕ್ಕೆ ಹೋಗುತ್ತೇನೆ' ಎಂದು ನೊಂದು ನುಡಿದನು. ಸೇರಿಗೆ ಸವ್ವಾಸೇರಾದ ಮಗನನ್ನು ಕಂಡು ಯಶೋಭದ್ರಾದೇವಿ ಅಳುಕಿದಳು ಚಕ್ರಿ ಕನ್ನೆಯಿದ್ದಲ್ಲಿಗೇ ತನ್ನ ಜನರನ್ನು ಕಳುಹಿ ತಾಳಿಬಂದಿ ಕಟ್ಟಿಸುವಂತೆ ಮಾಡುವೆನೆಂದು ನಂಬುಗೆ ಇತ್ತಳು. ನಮಿಯೂ ತನ್ನ ನಿಶ್ಚಯವನ್ನು ಸ್ವಲ್ಪ ಸಡಿಲಿಸಿ ಹಾಗಾದಲ್ಲಿ ತಂಗಿಯನ್ನು ಕೊಂಡೊಯ್ದು ಲಗ್ನ ಮಾಡಿಕೊಡುವುದಾಗಿ ಒಪ್ಪಿದನು ಯಶೋಭದ್ರೆಯು ಜಾಣೆಯಾದ ಮಧುವಾಣಿಯೆಂಬ ಮೇಳದವಳೊಡನೆ ಹೇಳಿ ಕಳುಹಿ ಚಕ್ರವರ್ತಿಯನ್ನೂ ಈ ತೀರ್ಮಾನಕ್ಕೆ ಒಪ್ಪಿಸಿದಳು ಉಂಗುರುಡಿಗೆ ಶಾಸ್ತ್ರ, ಅನಂತರ ಲಗ್ನ—ಇವು ಸಾಂಗವಾಗಿ ನೆರವೇರಿದುವು ನಮಿಯೇ ಮುಂದೆ ನಿಂತು ವಿಜೃಂಭಣೆಯಿಂದ ಲಗ್ನಕಾರ್ಯಗಳನ್ನು ನೆರವೇರಿಸಿದನು ಇಷ್ಟೇ ಅಲ್ಲ ಹೊನ್ನ ಪುತ್ಥಳಿಯಂತಿರುವ—ಮಿಂಚಿನ ಮರಿಗಳಂತಿರುವ—ತನ್ನ ಐನೂರು ಸುಕುಮಾರಿಯರನ್ನು ಭರತನ ಮಕ್ಕಳಿಗೆ ಲಗ್ನಮಾಡಿಕೊಟ್ಟು ಕೃತಕೃತ್ಯನಾದನು ಭರತನೂ ತನ್ನ ಐನೂರು ಹೆಣ್ಣುಮಕ್ಕಳನ್ನು ನಮಿ-ವಿನಮಿಗಳ ಮಕ್ಕಳಿಗೆ ಕೊಟ್ಟು ಲಗ್ನ ಮಾಡಿದನು ಇಲ್ಲಿಗೆ ಭರತರಾಜನ ಹತ್ತು ಸಹಸ್ರ ವರ್ಷಗಳ ಜೈತ್ರಯಾತ್ರಾ ಪ್ರಕರಣವು ಮುಗಿಯಿತು ಹಲವು ಕಾಲ ಅಲ್ಲಿ ಸುಖವಾಗಿದ್ದು ಅನಂತರ ರಾಜಧಾನಿಯ ಕಡೆ ಹಿಂದಿರುಗಿದನು. ದಾರಿಯಲ್ಲಿದ್ದ ಕೈಲಾಸ

ಗಿರಿಯ ಬಳಿ ಬೀಡುಬಿಡಿಸಿ, ಸತಿ ಪುತ್ರರೊಡನ ಆ ಪರ್ವತವನ್ನೇರಿ ಅಲ್ಲಿದ್ದ ಜಿನನಾಥನನ್ನು ಅನನ್ಯ ಭಕ್ತಿಯಿಂದ ಭಜಿಸಿ ಪೂಜಿಸಿ ಮುಂದೆ ಹೊರಟನು ಮಗನು ಚಕ್ರವರ್ತಿಯಾಗಿ ಹಿಂದಿರುಗುವ ಸುದ್ದಿಯನ್ನು ಕೇಳಿ ಯಶಸ್ವತೀದೇವಿಯು ಮಗನನ್ನು ಕಾಣುವ ತವಕದಿಂದ ವಿಮಾನವೇರಿ ಬಂದು, ಅಸಂಖ್ಯಾತವಾಗಿ ಬೆಳೆದಿದ್ದ ಆತನ ಸಂಸಾರವನ್ನು ಕಂಡು ಹಿರಿಹಿರಿ ಹಿಗ್ಗಿದಳು

ಊರಿಗೆ ಹಿಂದಿರುಗಿ ಬರುತ್ತಿರುವಾಗ ದಾರಿತೋರುತ್ತಾ ಮುಂದೆ ಹೋಗುತ್ತಿದ್ದ ಚಕ್ರ ಪೌದನಪುರದ ಬಳಿ ಇದ್ದಕ್ಕಿದ್ದಂತೆಯೇ ನಿಂತುಹೋಯಿತು ಭರತಾನುಜನಾದ ಬಾಹುಬಲಿ ಆ ಪುರಕ್ಕೆ ಅಧಿಪತಿ ಆತನು ತಮ್ಮಂದಿರೊಡನೆ ಬಂದು ಚಕ್ರವರ್ತಿಗೆ ಆನತನಾದ ಹೊರತು ಚಕ್ರ ಮುಂದಕ್ಕೆ ಉರುಳುವಂತಿಲ್ಲ ಆದುದರಿಂದ ಭರತನು ತಮ್ಮಂದಿರಿಗೆಲ್ಲಾ ಓಲೆಗಳನ್ನಟ್ಟಿದನು. ಅದನ್ನು ಓದಿಕೊಂಡ ತಮ್ಮಂದಿರು 'ತಂದೆ ಕೊಟ್ಟ ಉಂಬಳಿಯೊಳಗಿರುವ ತಾವು ಈತನಿಗೇಕೆ ಆನತರಾಗಿ ಬಾಳಬೇಕೆಂದು ಬಗೆದು ಕೈಲಾಸಗಿರಿಗೆ ಹೋಗಿ ತಂದೆಯ ಬಳಿಯಲ್ಲಿ ದೀಕ್ಷೆತಾಳಿ ತಪೋನಿರತರಾದರು. ಬಾಹುಬಲಿಯೊಬ್ಬನು ಮಾತ್ರ ಅಣ್ಣನ ಮೆಲೆ ಸೆಡೆದು ನಿಂತನು ಆತನನ್ನು ದಾರಿಗೆ ತರಲು ಚಕ್ರಿ ಸಾಮೋಪಾಯಕ್ಕೆ ಕೈ ಹಾಕಿ, ವಚನಚತುರನಾದ ದಕ್ಷಿಣನನ್ನು ಆತ ನಲ್ಲಿಗೆ ಕಳುಹಿದನು ಆತನು ಅಭಿನವಮದನನಾದ ಬಾಹುಬಲಿಯ ಬಳಿ ಸೇರಿ 'ಚಕ್ರವರ್ತಿಯಾದ ಭರತನಿಗೆ ತನ್ನ ತಮ್ಮನನ್ನು ಕಣ್ತುಂಬ ಕಾಣುವ ಆರ್ತಿಯಾಗಿದೆ ಜಗತ್ಪ್ರಸಿದ್ಧರಾದ ನೀವಿಬ್ಬರೂ ಒಂದೆಡೆ ಸೇರಿರುವುದನ್ನು ಕಂಡು ತನ್ನ ಕಣ್ಣ ಹಬ್ಬ ವನ್ನು ನೆರವೇರಿಸಲು ಪಡೆಯೆಲ್ಲವೂ ಉತ್ಸಾಹಪಡುತ್ತಿದೆ ಚಕ್ರವರ್ತಿ ದೂರದಲ್ಲಿಯೂ ಇಲ್ಲ, ನಿನ್ನ ಊರ ಬಾಗಿಲಲ್ಲಿಯೇ ಉತ್ಸುಕನಾಗಿ ನಿಂತಿದ್ದಾನೆ, ಜಗತ್ತನ್ನೇ ಜಯಿಸಿ ಹಿಂದಿರುಗುತ್ತಿರುವ ನಿನ್ನ ಹಿರಿಯಣ್ಣನನ್ನು ಬಂದು ಮರ್ಯಾದೆಯಿಂದ ಕಾಣಬೇಕಾ ದುದು ನಿನ್ನ ಕರ್ತವ್ಯ' ಎಂದು ಸವಿನುಡಿಯಿಂದ ನುಡಿದನು ಆದರೆ ಈ ಬಿಂಕದ ಮಾತುಗಳಿಗೆ ಬಾಹುಬಲಿ ದಕ್ಕುವವನಲ್ಲ ಅವುಗಳಿಗೆ ತಕ್ಕ ಕೊಂಕುನುಡಿಗಳನ್ನು ಹವಣಿಸಿ ಪ್ರತ್ಯುತ್ತರ ಕೊಟ್ಟು ಕಳುಹಿಸಿದ ಅಣ್ಣತಮ್ಮಂದಿರಲ್ಲಿ ಪರಸ್ಪರ ಕಲಹ ಅನಿವಾರ್ಯವಾದಂತೆ ಕಾಣಿಸಿತು ಬಾಹುಬಲಿಯ ಮನಸ್ಸನ್ನು ತಿರುಗಿಸಬೇಕೆಂದು ಭರತನ ಮಂತ್ರಿ ಸಾಮಂತರು ನಡೆಸಿದ ಪ್ರಯತ್ನವೆಲ್ಲವೂ ನಿಷ್ಫಲವಾಯಿತು ಆತನು ಬಲವನ್ನು ಸಜ್ಜುಗೊಳಿಸಲು ನಿರತನಾಗಿದ್ದನು ಕೇಳಿ ಭರತನು ಮನದಲ್ಲಿ ಮಿಡುಕಿ ದನು, ತಮ್ಮನ ಮೇಲೆ ಕೈಮಾಡಬೇಕಲ್ಲಾ ಎಂದು

ಅದೇ ದಿನ ರಾತ್ರಿ ಭರತನು ನಿದ್ರೆಯಿಲ್ಲದೆ ಪರಮಾತ್ಮಯೋಗದಲ್ಲಿ ತತ್ಪರನಾಗಿ ಕುಳಿತಿದ್ದಾನ ಸುತ್ತಲೂ ಪ್ರಕೃತಿ ಪ್ರಶಾಂತವಾಗಿರುವ ಹೊತ್ತು ಪಡೆಯೆಲ್ಲವೂ ನಿದ್ರಿಸುತ್ತಿದೆ ಅವರೊಳಗೆ ಇಬ್ಬರು ಪಡೆವಳರು ಗುಜು ಗುಜು ಮಾತನಾಡುತ್ತಿರುವ ಸದ್ದು ಚಕ್ರಿಯ ಕಿವಿಗೆ ಕೇಳಿಸಿತು ಹಾಗೆಯೇ ಆಲಿಸಿ ಕೇಳಿದನು, ಅವರಾಡುವ ಮಾತನ್ನು : "ಪಡೆಯ ಸಹಾಯದಿಂದ ಚಕ್ರಿಗೆ ಘನತೆಯೇ ಹೊರತು, ಅದಿಲ್ಲದಿದ್ದರೆ

ಇವನೂ ನಮ್ಮಂತೆ ಮನುಷ್ಯ ಮಾತ್ರ" ಎಂದ ಒಬ್ಬ "ಅಷ್ಟಲ್ಲವೆ ಏನು ಹೆನಿಗೂಡಿ ಹಳ್ಳಿ, ನಾರೊಡಗೂಡಿ ಹಗ್ಗ" ಎಂದ ಮತ್ತೊಬ್ಬ ಅವರ ನುಡಿಗೇಳಿ ಚಕ್ರವರ್ತಿಗೆ ತನ್ನ ಪರಾಕ್ರಮವನ್ನು ಸ್ವಲ್ಪ ಪ್ರದರ್ಶಿಸಬೇಕೆಂದು ಮನಸ್ಸಾಯಿತು ಬೆಳಗ್ಗೆ ಓಲಗ ವನ್ನು ನೆರಹಿ, ತನ್ನ ಕಿರುಬೆರಳಿನ ನರಬಿಗಿದು ಡೊಂಕಾಗಿದೆಯೆಂದು ಹುಸಿಯಾಪಟವನ್ನು ಹೂಡಿದ ಮುಖವನ್ನು ಸಪ್ಪಗೆ ಮಾಡಿಕೊಂಡು ನೋವನ್ನು ನಟಿಸಿದ, ಯಂತ್ರತಂತ್ರ ಗಳಾವುವೂ ಸಫಲವಾಗಲಿಲ್ಲ ನೆಟ್ಟಿಗೆಯನ್ನು ತೆಗೆದು ಸರಿಮಾಡಬಹುದೆಂದು ಜಟ್ಟಿ ಗಳು ಪ್ರಯತ್ನಿಸಿದರು ಅವರ ಬಲ ಸಾಲದೆಂದು ಕಂಡುಬಂದಿತು ಬಂಗಾರದ ದೊಡ್ಡ ಸರಪಳಿಯೊಂದನ್ನು ವಿಶ್ವಕರ್ಮನಿಂದ ತಯಾರಿಸಿ ಅದರ ಕೊನೆಯನ್ನು ಕೊಂಕಿದ್ದ ಕಿರುಬೆರಳಿಗೆ ಸಂಧಿಸಿ, ತೇರಿನ ಮಿಳಿಯನ್ನು ಹಿಡಿದುಕೊಳ್ಳುವಂತೆ ಉಳಿದ ಸರಪಳಿಯ ನ್ನೆಲ್ಲಾ ಹಿಡಿದು, ಜಗ್ಗುವಂತೆ ಇಡೀ ಸೈನ್ಯಕ್ಕೇ ಅಪ್ಪಣೆಕೊಟ್ಟ ಗಾವುದ ಗಾವುದ ಅಳತೆಯುದ್ದ ನಿಂತಿದ್ದ ಸೈನ್ಯ ಹಿಡಿದು ಎಳೆದರೂ ಬೆರಳು ಕದಲೊಲ್ಲದು ರಾಜನು ಒಮ್ಮೆ ಬೆರಳನ್ನು ತುಯ್ದುದಕ್ಕೇ ಹಯ ಗಜ ರಥ ಪದಾತಿಗಳೊಡನೆ ಕೂಡಿದ ಸೈನ್ಯ ಹೊಟ್ಟೆಮೇಲಾಗಿ ಕೆಳಗೆ ಬಿದ್ದಿತು ಆಗ ಗೊತ್ತಾಯಿತು ಗೊಣಗಿದವರಿಗೆ, ಭರತನ ಶಕ್ತಿ ಎಷ್ಟೆಂದು, ಬೆಟ್ಟವನ್ನೇ ಆಣೆಕಲ್ಲಾಡಬಲ್ಲ ಆತನ ಶಕ್ತಿಯ ಮುಂದೆ ಹುಲು ಮಾನವರಾದ ತಾವು ಎಷ್ಟೆಂದು ರಾಜನು ಮುಗುಳ್ನಗೆ ನಗುತ್ತಾ ಎಡಗೈಯಿಂದ ಕಿರುಬೆರಳನ್ನೊತ್ತಿಕೊಂಡು 'ಗುರುಹಂಸನಾಥಾಯ ಸ್ವಾಹಾ, ಎಂದ ಬೆರಳು ನೆಟ್ಟಗಾಯ್ತು ಬಿದ್ದ ನೊಂದ ಪಡೆಗೆ ಬಂಗಾರದ ಸರಪಳಿಯನ್ನೆಲ್ಲಾ ಕಡಿಸಿ, ಹಂಚಿ ಕೊಟ್ಟು, ಅದನ್ನು ಆನಂದಗೊಳಿಸಿದ

ಮರುದಿನ ಬಾಹುಬಲಿ ಸರ್ವಸನ್ನಾಹದೊಡನೆ ದಂಡೆತ್ತಿ ಬಂದ ಅದನ್ನು ಕಂಡು ಇತ್ತಂಡದ ಮಂತ್ರಿಮಿತ್ರರೂ ಒಟ್ಟಿಗೆ ಕಲೆತು, ವಜ್ರದೇಹಿಗಳಾದ ಈ ಸೋದರರ ಕಾದಾಟದಿಂದ ಅಕಾಲಪ್ರಳಯವಾಗುವುದೆಂದು ಯೋಚಿಸಿ, ಇಬ್ಬರನ್ನೂ ಜಲಯುದ್ಧ, ದೃಷ್ಟಿಯುದ್ಧ, ಮಲ್ಲಯುದ್ಧಗಳಿಂದ ಗೆಲುವನ್ನು ನಿಶ್ಚಯಿಸುವಂತೆ ಪ್ರಾರ್ಥಿಸಿದರು ಅವರು ಒಪ್ಪಿದರು ದೊರೆಗಳಿಬ್ಬರೇ ಯುದ್ಧ ಮಾಡುವರೆಂದೂ, ಷಡಂಗ ವಾಹಿನಿಗಳು ಕೇವಲ ಪ್ರೇಕ್ಷಕರಾಗಿರಬೇಕೆಂದೂ ಡಂಗುರ ಹೊಯ್ಸಿದರು ಎಲ್ಲರೂ ಅತುಲಭುಜಬಲ ರಾದ ಈ ಅಣ್ಣ ತಮ್ಮಂದಿರ ಕಾಳಗವನ್ನು ಕಾಣುವ ಕುತೂಹಲದಿಂದ ಕಾದುನಿಂತಿರಲು ಭುಜಬಲಿ ಕುಸ್ತಿಯ ಕಣವನ್ನು ಪ್ರವೇಶಿಸಿದನು ಭೋರ್ಗರೆವ ವಾದ್ಯಧ್ವನಿಗಳ ಮಧ್ಯದಲ್ಲಿ ಭರತೇಶನೂ ಕಣವನ್ನು ಪ್ರವೇಶಿಸಿದ ಆದರೆ ಕಾದುವ ಮುನ್ನ ತಮ್ಮನನ್ನು ಕುರಿತು "ಅಣ್ಣಯ್ಯ! ನಾವಿಬ್ಬರೂ ಒಡಹುಟ್ಟಿದವರು, ಜಿನಪುತ್ರರು ಪರಸ್ಪರ ದ್ವೇಷಕ್ಕೆ ಯಾವುದೊಂದು ಕಾರಣವೂ ಕಾಣುತ್ತಿಲ್ಲ ನಾನು ಮಾಡಿದ ಅಂತಹ ಮಹಾಪರಾಧವಾದರೂ ಏನು, ನಿನಗಿಷ್ಟು ಕೋಪ ಉಕ್ಕಿದುದಕ್ಕೆ? ನಾನೇನಾದರೂ ಒಂದು ಹಾಗದ ತೆರಿಗೆ ಬೇಕೆಂದು ನಿನ್ನ ಮನೆಯ ಬಾಗಿಲಿಗೆ ದೂತರನ್ನೇನಾದರೂ ಅಟ್ಟಿದ್ದೆನೆ? ಅವಮಾನಕರವಾದ ಯಾವುದಾದರೂ ಮಾತನ್ನು ನಾನಾಗಲಿ, ನನ್ನ

ಪರಿವಾರದವರಾಗಲಿ ಆಡಿದ್ದೇವೆಯೆ ? ನಾವು ಈಗ ಕೈಕೊಂಡಿರುವ ತುಚ್ಛಕಾರ್ಯ ಜಗತ್ತಿಗೆಲ್ಲಾ ದ್ರೋಹದ ಶಾಸನ ಬರೆದುಕೊಟ್ಟಂತಾಗುತ್ತದೆ. ಹೆದರಿ ನಾನು ಹೀಗೆ ಹೇಳುತ್ತಿರುವೆನೆಂದು ಭಾವಿಸಬೇಡ , ನೀನು ಬಾಹೆಪ್ಪಳಿಸುತ್ತಾ ನಿಂತಿರುವಾಗ ನನ್ನ ಕದನದ ಸವಿಯನ್ನು ನಿನಗೆ ತೋರಿಸುವುದಕ್ಕೂ ನಾನೇನೂ ಹಿಂಜರಿಯುವುದಿಲ್ಲ ಆದರೂ ಹಿರಿಯನಾದ ನಾನು ನಿನಗೆ ಧರ್ಮವನ್ನು ಮೊದಲು ಬೋಧಿಸಿ ನೋಡಬೇಕಾದುದು ನನ್ನ ಕರ್ತವ್ಯ ಹೋಗಲಿ, ಪರಸ್ಪರ ಒಬ್ಬರನ್ನೊಬ್ಬರು ಗೆದ್ದು ಸಾಧಿಸಬೇಕಾಗಿರುವ ಕೀರ್ತಿ ತಾನೇ ಏನು ? ಬದಗರಂತೆ ನಾವು ಹೋರಾಡುವುದಕ್ಕಿಂತ ಅಧಮ ಕಾರ್ಯವಿನ್ನಿಲ್ಲ ಇಗೋ ನಾನು ಸೋತೆನೆಂದು ಒಪ್ಪಿಕೊಳ್ಳುತ್ತೇನೆ ನಿನ್ನದೇ ಗೆಲುವು ನಿನಗೆ ನನ್ನಲ್ಲಿ ಅಣ್ಣನೆಂಬ ಅಕ್ಕರೆಯಿಲ್ಲದಿದ್ದರೂ, ನನಗೆ ತಮ್ಮನೆಂಬ ಅಕ್ಕರ ತುಂಬಿದೆಯಪ್ಪ ನೀನೇ ಚಕ್ರವರ್ತಿತ್ವವನ್ನು ಕೈಕೊಳ್ಳು. ನಿನ್ನ ಭಾಗ್ಯವನ್ನು ನಾನು ಕಣ್ಣುತುಂಬ ನೋಡಿ ಸಂತೋಷಿಸುತ್ತೇನೆ ಎಲ್ಲಿಯಾದರೂ ಒಂದು ಚಿಕ್ಕ ರಾಜ್ಯವನ್ನು ನನಗೆ ಕೊಡು, ನಾನು ಸಂತೋಷದಿಂದ ಅದನ್ನು ಸ್ವೀಕರಿಸಿ ತೃಪ್ತನಾಗುತ್ತೇನೆ "

ಅಣ್ಣನ ವಚನಮಂತ್ರದಿಂದ ಭುಜಬಲಿಯ ಕೋಪದ ವಿಷ ಇಳಿದುಹೋಯಿತು , ಗಂಡಗರ್ವವೆಲ್ಲಾ ಸೋರಿಹೋಯಿತು ನಾಚಿಕೆಯಿಂದ ಅಣ್ಣನ ಮುಖವನ್ನು ಕೂಡ ನೋಡಲಾರದೆ ತಲೆತಗ್ಗಿಸಿದನು ಅಣ್ಣನೊಡನೆ ಸ್ಪರ್ಧಿಸಿದ ಪಾಪಕ್ಕೆ ಜಿನದೀಕ್ಷೆಯೇ ತಕ್ಕ ಮದ್ದೆಂದು ನಿಶ್ಚಯಿಸಿ, ಅಣ್ಣನ ಪಾದಕ್ಕೆ ನಮಸ್ಕರಿಸಿ, ನೇರವಾಗಿ ತಂದೆಯಾದ ಜಿನನ ಬಳಿಗೆ ನಡೆದು, ದೀಕ್ಷೆಗೊಂಡು ತಪಸ್ಸಿನಲ್ಲಿ ನಿಂತನು ಆಗ ಚಕ್ರ ಮುಂದುರುಳಿತು ಭರತನು ಅಯೋಧ್ಯಾನಗರಿಯನ್ನು ಪ್ರವೇಶಿಸಿ ವೈಭವದಿಂದ ಚಕ್ರವರ್ತಿಪಟ್ಟವನ್ನು ವಹಿಸಿದನು ಬಾಹುಬಲಿಗೆ ಘೋರವಾದ ತಪಸ್ಸಿನಿಂದಲೂ ಆತ್ಮಜ್ಞಾನವುಂಟಾಗದುದನ್ನು ಕಂಡು, ಭರತನು ತಂದೆಯಾದ ವೃಷಭಜಿನನಿಂದ ಅದರ ಕಾರಣವರಿತು, ತಕ್ಕ ನಿಷ್ಕೃತಿಯಿಂದ ಆತನ ಮನಃಕಷಾಯವನ್ನು ತೊಲಗಿಸಿ, ಆತ್ಮಶುದ್ಧಿಯನ್ನು ದೊರಕಿಸಿ ಕೊಟ್ಟನು

ಅನಂತರ ಭರತ ಚಕ್ರವರ್ತಿ ಅಖಂಡ ಭೂಮಂಡಲಕ್ಕೆ ಚಕ್ರವರ್ತಿಯಾಗಿ ಅನಂತ ಸುಖಭೋಗಗಳನ್ನು ಅನುಭವಿಸುತ್ತಾ ಹಲವುಕಾಲವನ್ನು ಕಳೆದ ಮೇಲೆ, ಆತನ ತಾಯಿಯಾದ ಯಶಸ್ವತೀದೇವಿ ಗುರುಗಳಿಂದ ದೀಕ್ಷೆಯನ್ನು ಪಡೆದು ಕಂತಿಯಾಗುತ್ತಾಳೆ ಇಲ್ಲಿಂದ ಮುಂದ ಭರತನ ಮನಸ್ಸೂ ಆಮುಷ್ಮಿಕದ ಕಡೆ ಹೆಚ್ಚಾಗಿ ಬಾಗುತ್ತದೆ ರಜತಾದ್ರಿಯಲ್ಲಿ ನಿರ್ಮಿಸಿದ್ದ ಜಿನನಿವಾಸದ ಮುಖವಸ್ತ್ರವನ್ನು ಬಹಳ ವಿಜೃಂಭಣೆಯಿಂದ ಅನಾವರಣಗೊಳಿಸಿ, ಮಹೋತ್ಸವವನ್ನು ನೆರವೇರಿಸುತ್ತಾನೆ ಭರತನ ಮಕ್ಕಳಲ್ಲಿ ನೂರ್ವರು ವಿದ್ಯಾಗೋಷ್ಠಿಯಲ್ಲಿರುವಾಗ ಹಸ್ತಿನಪುರಪತಿಯಾದ ಮೇಘೇಶ್ವರನು ದೀಕ್ಷೆ ಪಡೆದನೆಂಬ ಸುದ್ದಿಯನ್ನು ಕೇಳಿ ವಿರಾಗಹೊಂದಿ ಜಿನದೀಕ್ಷೆ ವಹಿಸಿ ಸಂನ್ಯಾಸಿಗಳಾಗುತ್ತಾರೆ ಇದನ್ನು ಕೇಳಿ ವ್ಯಥಿತಾಂತಃಕರಣನಾದ ಭರತ ಚಕ್ರವರ್ತಿ ಸಮವಸರಣದಲ್ಲಿದ್ದ ಅವರ ಬಳಿಗೆ ಹೋಗಿ ತೀರ್ಥೇಶಪೂಜೆಯನ್ನು ನೆರವೇರಿ

ಸುತ್ತಾನ ಮರುದಿನವೇ ತಂದೆಯಾದ ಪ್ರಥಮ ತೀರ್ಥಂಕರನು ಮುಕ್ತನಾಗುತ್ತಾನೆ. ಆತನ ಮೋಕ್ಷ ಕಲ್ಯಾಣವನ್ನು ನೆರವೇರಿಸಿ ಹಿಂದಿರುಗಿದ ಭರತೇಶ್ವರನು ಒಮ್ಮೆ ಕನ್ನಡಿಯಲ್ಲಿ ತನಗೆ ನರೆಗೂದಲು ಬಂದಿರುವುದನ್ನು ಕಂಡು, ವೈರಾಗ್ಯಪರನಾಗಿ, ಮಗನಾದ ಅರ್ಕಕೀರ್ತಿಗೆ ಪಟ್ಟಗಟ್ಟಿ, ಸ್ವಮಹತ್ವದಿಂದ ತೈಜಸ ಕಾರ್ಮಣ ತನುಗಳನ್ನು ಸುಟ್ಟು ಕೈವಲ್ಯಪದವಿಯನ್ನು ಪಡೆಯುತ್ತಾನೆ ಇದನ್ನು ಕೇಳಿ ಅರ್ಕಕೀರ್ತಿಯೂ ಆತನ ತಮ್ಮಂದಿರೂ ದೀಕ್ಷೆಯನ್ನು ವಹಿಸಿ ಕ್ರಮವಾಗಿ ಮುಕ್ತಿಗೆ ಸಲ್ಲುತ್ತಾರೆ



# ಕಥೆಯ ಮೂಲ ಮತ್ತು ಬೆಳವಣಿಗೆ

ಭರತೇಶನ ಕಥೆ ಬಹಳ ಹಳೆಯದು ಆತನು ತ್ರಿಷಷ್ಟಿಶಲಾಕಾಪುರುಷರಲ್ಲಿ ಒಬ್ಬನು, ಪ್ರಥಮ ಚಕ್ರಿ, ಆದಿತೀರ್ಥಂಕರ ವೃಷಭನಾಥನ ಹಿರಿಯ ಮಗ, ಚರಮಾಂಗ ಆದುದರಿಂದ ಆದಿತೀರ್ಥಂಕರನ ಜೀವನಚರಿತ್ರೆಯ ಜೊತೆಯಲ್ಲಿ ಈತನ ವೃತ್ತಾಂತಕ್ಕೂ ಸ್ಥಾನವಿದೆ ಕಾವ್ಯದ ಬಹು ಭಾಗವನ್ನು ಮುಮುಕ್ಷುವಾದ ಜಿನದೇವನಿಗೆ ಮೀಸಲಾಗಿರಿಸುವುದು ಸ್ವಾಭಾವಿಕ ಆತನ ಜೀವನದ ಅಂಗವಾಗಿ ಚಕ್ರವರ್ತಿಯ ಚರಿತ್ರೆ ಬರುತ್ತದೆ, ಅಷ್ಟೆ ಹೀಗಿರುವುದರಿಂದ ಭರತೇಶನ ಕಥೆಗೆ ಮೂಲವನ್ನು ಹುಡುಕುವಾಗ ಆದಿಜಿನನ ಕಥಾಮೂಲವನ್ನೇ ಬೆದಕಬೇಕು ಜಿನರ ಜೀವನ ಚರಿತ್ರೆಗಳಿಗೆ ಜೈನರ ಧರ್ಮಸಾಹಿತ್ಯವೇ ಮೂಲವಾದ್ದರಿಂದ ಅವುಗಳ ವ್ಯವಸ್ಥೆಯನ್ನು ಕುರಿತು ಎರಡು ಮಾತುಗಳನ್ನು ಹೇಳುವುದು ಅವಶ್ಯವೆಂದು ತೋರುತ್ತದೆ

ಉತ್ತರ ದೇಶದಲ್ಲಿ ಕ್ಷಾಮ ಬಂದು ಚಂದ್ರಗುಪ್ತ ಭದ್ರಬಾಹುಗಳು ತಮ್ಮ ಅನುಯಾಯಿಗಳೊಡನೆ ದಕ್ಷಿಣಕ್ಕೆ ಹೊರಟುಬಂದಮೇಲೆ, ಮೂಲಸ್ಥಾನದಲ್ಲಿದ್ದ ಜೈನರಿಗೂ ವಲಸೆ ಬಂದ ಜೈನರಿಗೂ ತಮ್ಮ ಆಚರಣೆಗಳಲ್ಲಿ, ಸಂಪ್ರದಾಯಗಳಲ್ಲಿ ಕೆಲವು ವ್ಯತ್ಯಾಸಗಳು ತಲೆದೋರಿ, ಹಲವು ದಿನಗಳ ಆಚರಣೆಯಿಂದ ಅವುಗಳು ಅನುಲ್ಲಂಘನೀಯವಾದ ನಿಯಮಗಳಾದವು ಇಬ್ಬರ ದೃಷ್ಟಿಯಲ್ಲಿಯೂ ತಾವು ಸರಿ, ಉಳಿದವರು ತಪ್ಪು ಎಂಬ ನಂಬಿಕೆ ಬೇರೂರಿ, ಬೆಳೆದು, ಇಬ್ಬಣ ಅನಿವಾರ್ಯವಾಯಿತು ಈ ಇಬ್ಬಣದಲ್ಲಿ ಒಂದು ದಿಗಂಬರ, ಮತ್ತೊಂದು ಶ್ವೇತಾಂಬರ ತಮ್ಮ ಗ್ರಂಥಗಳ ವಿಚಾರದಲ್ಲಿ ಕೂಡ ಇಬ್ಬರಲ್ಲಿಯೂ ಸ್ವಲ್ಪಮಟ್ಟಿಗೆ ಮತಭೇದವಿದೆ ಜೈನರಲ್ಲಿ ಅತ್ಯಂತ ಪುರಾತನ ಧರ್ಮಗ್ರಂಥಗಳಾದ ಪೂರ್ವಗಳನ್ನೂ ಅಂಗಗಳನ್ನೂ ಒಳಗೊಂಡ ತಮ್ಮ ಧರ್ಮಸಾಹಿತ್ಯ ನಾಮಾವಶೇಷವಾಗಿ ಹೋಗಿದೆಯೆಂದು ದಿಗಂಬರರ ನಂಬಿಕೆ ಆದ್ದ ರಿಂದ ಅವರು ಶ್ವೇತಾಂಬರರ ತತ್ತ್ವಗ್ರಂಥಗಳನ್ನು ಪ್ರಮಾಣವೆಂದು ಸ್ವೀಕರಿಸುವುದಿಲ್ಲ ಆದರೆ ಶ್ವೇತಾಂಬರರ ಮತದಂತೆ ಜೈನರ ಧರ್ಮಸಾಹಿತ್ಯಕ್ಕೆ ಮೂಲ ಅಂಗಗಳು ಇವು ಗಳಲ್ಲಿ ಪೂರ್ವಗಳೂ ಸೇರಿವೆ ಹನ್ನೆರಡು ಅಂಗಗಳಾಗಿ ಇವುಗಳು ಕ್ರಿ ಶ ಆಆಳ ರಲ್ಲಿ ಗ್ರಂಥರೂಪವನ್ನು ತಾಳಿದವು ಅದಕ್ಕ ಮೊದಲು ಬ್ರಾಹ್ಮಣರ ವೇದಗಳಂತೆ ಜೈನರ ಅಂಗಗಳೂ ಬಾಯಿಂದ ಬಾಯಿಗೆ ಹರಿದು ಬರುತ್ತಿದ್ದುವು ಕಾಲಕ್ರಮೇಣ ಈ ವಿಪುಲ ಸಾಹಿತ್ಯ ಬಾಯಿಯಲ್ಲಿ ನಿಲ್ಲದೆ ಖಿಲವಾಗಿ ಹೋಗಬಹುದೆಂಬ ಹೆದರಿಕೆಯಿಂದ ಕ್ರಿ ಶ ಆಆಳ ರಲ್ಲಿ ವಲ್ಲಭಿಯಲ್ಲಿ ಜೈನರ ಸಭೆ ನಡೆದು, ದೇವರ್ಧಿಯೆಂಬ ಜಿನಮುನಿಯ ಅಧ್ಯಕ್ಷತೆಯಲ್ಲಿ ಅಂಗಗಳು ನಿರ್ದಿಷ್ಟರೂಪವನ್ನು ತಾಳಿದುವು

ಮೇಲಿನ ಅಲ್ಲ ಅಹುದುಗಳ ವಾದ ನಮಗೆ ಅನಾವಶ್ಯಕ ಅವು ಪ್ರಮಾಣ ವಿರಲಿ, ಬಿಡಲಿ, ಹನ್ನೆರಡು ಅಂಗಗಳು ಜೈನರ ಧರ್ಮ ಸಾಹಿತ್ಯದಲ್ಲಿ ಪ್ರಾಚೀನವಾದ

ವೆಂಬುದಂತು ನಿರ್ವಿವಾದ. ಇವುಗಳಲ್ಲಿ ಹನ್ನೆರಡನೆಯದಾದ ದಿಟ್ಠಿವಾಯಾಂಗದಲ್ಲಿ ಜಿನನ ಜೀವನಚರಿತ್ರೆ ಬೀಜರೂಪವಾಗಿ ಸಿಕ್ಕುತ್ತದೆ ಆ ಅಂಗದ ಒಂದು ಭಾಗವಾದ ಭದ್ರಬಾಹುವಿನ ಕಲ್ಪಸೂತ್ರದಲ್ಲಿ ಪ್ರಥಮ ತೀರ್ಥಂಕರನನ್ನು ಕುರಿತು ಇಷ್ಟುಮಾತ್ರ ತಿಳಿದುಬರುತ್ತದೆ [1]

ಕೋಸಲೀಯನಾದ ಋಷಭ, ಸರ್ವಾರ್ಥಸಿದ್ಧಿಯೆಂಬ ವಿಮಾನದಲ್ಲಿ ಮೂವತ್ತು ಸಹಸ್ರ ಸಾಗರೋಪಮಕಾಲ ಸುಖವಾಗಿದ್ದು ಅನಂತರ ಅಲ್ಲಿಂದ ಇಳಿದು ಜಂಬೂದ್ವೀಪ ದಲ್ಲಿದ್ದ ನಾಭಿರಾಜನ ಹೆಂಡತಿ ಮರುದೇವಿಯ ಗರ್ಭವನ್ನು ಅರ್ಧರಾತ್ರಿಯಲ್ಲಿ ಅಣು ರೂಪದಿಂದ ಪ್ರವೇಶಿಸಿದನು ಆಗ ಮರುದೇವಿ ವೃಷಭವೊಂದು ತನ್ನ ಗರ್ಭವನ್ನು ಪ್ರವೇಶಿಸಿದಂತೆ ಕನಸು ಕಂಡು ಎಚ್ಚೆತ್ತುಮೇಲೆ ಗಂಡನಿಗೆ ಅದನ್ನು ತಿಳಿಸಿದಳು ಅದರ ಅರ್ಥ ಯಾರಿಗೂ ಹೊಳೆಯಲಿಲ್ಲ ನಾಭಿಯೊಬ್ಬನಿಗೆ ಮಾತ್ರ ಗೊತ್ತು ಚೈತ್ರ ಬಹುಳ ಅಷ್ಟಮಿ ಉತ್ತರಾಷಾಢಾ ನಕ್ಷತ್ರದಲ್ಲಿ ಮರುದೇವಿ ಪ್ರಸವ ವೇದನೆಯನ್ನು ಸ್ವಲ್ಪವೂ ಅನುಭವಿಸದೆ ಪುತ್ರನನ್ನು ಹೆರುತ್ತಾಳೆ ರಾಜನು ಕೇವಲ ಸಂತೋಷದಿಂದ ಉತ್ಸವವನ್ನು ನೆರವೇರಿಸುತ್ತಾನೆ ಕಶ್ಯಪ ಗೋತ್ರಕ್ಕೆ ಸೇರಿದ ಈ ಋಷಭನಿಗೆ ಪ್ರಥಮ ರಾಜ, ಪ್ರಥಮ ಋಷಿ, ಪ್ರಥಮ ಜಿನ, ಪ್ರಥಮ ತೀರ್ಥಂಕರ ಎಂಬ ಪರ್ಯಾಯ ನಾಮಗಳಾಗುತ್ತವೆ ಆತನು ಬುದ್ಧಿಮಾನ್, ಸುಂದರ, ಸಂಯಮಿ, ಅದೃಷ್ಟವಾನ್, ನಯವಿದ. ಇಪ್ಪತ್ತು ದಿವ್ಯಸಹಸ್ರವರ್ಷಗಳು ರಾಜಕುಮಾರನಾಗಿದ್ದ ೬೦೩೦೦ ದಿವ್ಯಸಹಸ್ರವರ್ಷಗಳು ರಾಜನಾಗಿದ್ದ ಜನರ ಉಪಯೋಗಕ್ಕಾಗಿ ಬರೆಹ, ಗಣಿತ ಶಾಸ್ತ್ರ ಮೊದಲುಗೊಂಡು ಶಕುನ ಶಾಸ್ತ್ರದವರೆಗೆ ಎಪ್ಪತ್ತೆರಡು ಶಾಸ್ತ್ರಗಳನ್ನೂ, ಸ್ತ್ರೀಯರಿಗೆ ಅಗತ್ಯವಾದ ಸಂಗೀತಾದಿ ಅರವತ್ತುನಾಲ್ಕು ಕಲೆಗಳನ್ನೂ, ನೂರು ವಿದ್ಯೆ ಗಳನ್ನೂ, ಮೂರು ಉದ್ಯೋಗಗಳನ್ನೂ ಜನರಿಗೆ ಕಲಿಸಿಕೊಟ್ಟ ಈತನಿಗೆ ನೂರ್ವರು ಮಕ್ಕಳಾದರು ಒಬ್ಬೊಬ್ಬನಿಗೆ ಒಂದೊಂದು ರಾಜ್ಯವನ್ನು ಕೊಟ್ಟು ಪಟ್ಟಗಟ್ಟಿದ ಆಗ ಲೋಕಾಂತಿಕದೇವನು ಪದ್ಧತಿಯಂತೆ ವೃಷಭನ ಬಳಿಗೆ ಬಂದು ಆತನನ್ನು ಹೊಗಳಿ ಎಚ್ಚರಿಸಿದ ಜಿನನ ಜ್ಞಾನದೃಷ್ಟಿಗೆ ಎಲ್ಲವೂ ಗೋಚರಿಸಿತು ತನ್ನ ಐಶ್ವರ್ಯವನ್ನು ತ್ಯಾಗ ಮಾಡಿ ಚೈತ್ರ ಬಹುಳ ಅಷ್ಟಮಿ ಮಧ್ಯಾಹ್ನ ಸುದರ್ಶನವೆಂಬ ತನ್ನ ಪಲ್ಲಕ್ಕಿ ಯಲ್ಲಿ ಕುಳಿತು, ದೇವ ದಾನವ ಮಾನವರು ತನ್ನನ್ನು ಹಿಂಬಾಲಿಸಿ ಬರುತ್ತಿರಲು ವಿನೀತಾಪುರದಿಂದ ಹೊರಟು, ಸಿದ್ಧಾರ್ಥವನಕ್ಕೆ ಹೋಗಿ ಅಲ್ಲಿದ್ದ ಅಶೋಕ ವೃಕ್ಷದ ಬಳಿಯಲ್ಲಿ ಮೂರು ದಿನ ನಿರ್ಜಲ ಉಪವಾಸವ್ರತವನ್ನು ನಡೆಸಿದ ಅನಂತರ ದಿವ್ಯ ವಸ್ತ್ರಗಳನ್ನು ಧರಿಸಿ, ನಾಲ್ಕು ಸಹಸ್ರ ಕ್ಷತ್ರಿಯ ರಾಜರೊಡನೆ ತನ್ನ ಕೂದಲನ್ನು ಕಿತ್ತು ಹಾಕಿ, ಗೃಹತ್ಯಾಗಮಾಡಿ ಸಂನ್ಯಾಸಿಯಾದನು. ಒಂದು ಸಹಸ್ರವರ್ಷಗಳು ದೇಹದ ಕಡೆ ಗಮನಕೊಡದೆಯೂ ಮತ್ತೊಂದು ಸಹಸ್ರವರ್ಷ ಧ್ಯಾನಾಸಕ್ತನಾಗಿಯೂ ಇದ್ದು,

[1] Jacobi ಭದ್ರಬಾಹುವಿನ ಕಲ್ಪಸೂತ್ರದಲ್ಲಿ ಕಂಡುಬರುವ ಭಾಷಾಂತರದ ಸಾರ.

ಫಾಲ್ಗುಣ ಬಹುಳ ಏಕಾದಶಿ ಪ್ರಾತಃಕಾಲ ಪುರಿಮತಾಳವೆಂಬ ಪುರದ ಹೊರಗೆ ಇದ್ದ ನ್ಯಗ್ರೋಧ ವೃಕ್ಷದ ಕೆಳಗೆ ಮೂರುವರೆ ದಿನಗಳು ನಿರ್ಜಲೋಪವಾಸವನ್ನು ಆಚರಿಸಿ, ಗಾಢವಾದ ಧ್ಯಾನಾಸಕ್ತನಾಗಿದ್ದು ಕೇವಲ ಜ್ಞಾನವನ್ನು ಪಡೆದನು ಹುಟ್ಟಿದಂದಿನಿಂದ ಆತನ ಒಟ್ಟು ಜೀವಾವಧಿ ಎಂಭತ್ತು ಸಹಸ್ರದ ನಾನೂರು ವರ್ಷಗಳು ಆತನು ತನ್ನ ಕರ್ಮಚತುಷ್ಟಯ ಸಮೇದ ಮೇಲೆ ಇನ್ನು ಎಂಟುವರೆ ತಿಂಗಳಿಗೆ ಸುಷಮ ದುಷಮ ಕಾಲ ಮುಗಿಯಲಿರುವಾಗ ಮಾಘ ಬಹುಳ ತ್ರಯೋದಶಿಯ ಅಭಿಜಿನ್ಮುಹೂರ್ತ ದಲ್ಲಿ ನಾಲ್ಕುವರೆ ದಿನಗಳು ನಿರ್ಜಲೋಪವಾಸ ಮಾಡಿ ದೇಹವನ್ನು ತ್ಯಜಿಸಿದನು ಆತನಿಗೆ ಕೇವಲ ಜ್ಞಾನೋತ್ಪತ್ತಿಯಾದ ಮೇಲೆ ಅನೇಕ ಸಹಸ್ರ ಶ್ರಮಣ, ಶ್ರಮಣಿ ಯರೂ, ಲೌಕಿಕ ಶ್ರಾವಕ ಶ್ರಾವಕಿಯರೂ ಇದ್ದರು.

ಮೇಲಿನ ಮೂಲ ರೇಖೆಗಳಿಗೆ ಈಚಿನವರು ಬೇಕಾದಷ್ಟು ಬಣ್ಣ ತುಂಬಿ ಚಿತ್ರಿಸಿದ್ದಾರೆ ತೀರ್ಥಂಕರನ ಪೂರ್ವಭವಗಳ ಕಥೆಯನ್ನು ಸೃಷ್ಟಿಸಿ ಅದಕ್ಕೆ ಸೇರಿಸಿ ದ್ದಾರೆ ಜೊತೆಗೆ ಆತನ ಮಗನಾದ ಪ್ರಥಮಚಕ್ರಿ ಭರತನ ಕಥೆಯನ್ನೂ ಕಟ್ಟಿ ಅದರೊಡನೆ ಇಟ್ಟಿದ್ದಾರೆ

ಅಂಗಗಳಲ್ಲಿ ಜನ್ಮಾಂತರಕ್ಕೆ ಸಂಬಂಧಿಸಿದ ಕಥೆಗಳು ಬೇಕಾದಷ್ಟು ಇವೆಯಾದರೂ ತೀರ್ಥಂಕರನ ಪೂರ್ವಭವದ ವಿಚಾರವಾಗಿ ಏನೂ ಹೇಳುವುದಿಲ್ಲ ವೃಷಭನ ಪೂರ್ವ ಭವದ ವಿಚಾರವಾಗಿ ಮೊಟ್ಟಮೊದಲು ನಮಗೆ ದೊರೆಯುವುದು ಭದ್ರಬಾಹುವಿನ ಆವಶ್ಯಕಸೂತ್ರದಲ್ಲಿ ಕ್ರಿ ಶ ೫೦೮ ರಲ್ಲಿದ್ದ ಹರಿಭದ್ರ ತನ್ನ ಆವಶ್ಯಕ ನಿರ್ಯುಕ್ತಿಯ ಮೇಲಿನ ವ್ಯಾಖ್ಯಾನದಲ್ಲಿ ಪೂರ್ವಭವಗಳ ಕಥೆಯನ್ನು ಸ್ವಲ್ಪ ವಿವರಿಸಿದ್ದಾನೆ

ದಿಗಂಬರರು ತಮ್ಮ ಧರ್ಮಗ್ರಂಥಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸು ತ್ತಾರೆ —

೧ ಪ್ರಥಮಾನುಯೋಗ—ತೀರ್ಥಂಕರರು ಮತ್ತು ಇತರ ಮಹನೀಯರ ಚರಿತ್ರೆ

೨ ಕರಣಾನುಯೋಗ—ಜಗತ್ತಿನ ಕ್ಷೇತ್ರಪರಿಮಾಣದ ವರ್ಣನೆ

೩ ಚರಣಾನುಯೋಗ—ಜೈನಮುನಿಗಳೂ ಲೌಕಿಕರೂ ಅನುಸರಿಸಬೇಕಾದ ಆಚರಣೆಗಳು

೪ ದ್ರವ್ಯಾನುಯೋಗ—ವೇದಾಂತ, ತತ್ವಾರ್ಥಸಂಗ್ರಹ

ಇವುಗಳಲ್ಲಿ ಮೊದಲನೆಯದಾದ ಪ್ರಥಮಾನುಯೋಗವೆಂಬುದು ತೀರ್ಥಂಕರರು ಮತ್ತು ಇತರ ಮಹನೀಯರ ಚರಿತ್ರೆಯನ್ನು ಒಳಗೊಂಡ ಕಥಾ ಸಾಹಿತ್ಯ. ಈ ವಿಭಾಗಕ್ಕೆ ಸೇರಿದ ಗ್ರಂಥಸಮುದಾಯದಲ್ಲಿ ಎಲ್ಲ ದೃಷ್ಟಿಯಿಂದಲೂ ಅಗ್ರಸ್ಥಾನಾರ್ಹವಾದುದು ಜಿನಸೇನಮುನಿಯ ಮಹಾಪುರಾಣ ಇದರಲ್ಲಿ ಆದಿಜಿನ ಮತ್ತು ಭರತನ ಚರಿತ್ರೆ ವಿಸ್ತಾರವಾಗಿ ಬಂದಿದೆ ಕ್ರಿ.ಶ. ೭೮೩ ಈತನ ಕಾಲ ಮಹಾಪುರಾಣಗಳನ್ನು ಬರೆ ದವರಲ್ಲಿ ಈತನೇ ಮೊಟ್ಟಮೊದಲನೆಯವನು. ದಿಗಂಬರ ಸಂಘಕ್ಕೆ ಸೇರಿದ

ಶಿಲಾಚಾರ್ಯನೂ ಈತನಿಂದ ಈಚೆಯವನೇ. ಆದ್ದರಿಂದ ಜೈನರ ಪುರಾಣಸಾಹಿತ್ಯಕ್ಕೆ ಈತನೇ ವಿಧಾತ, ಪ್ರೇರಕ ಶಕ್ತಿ. ಈಚೆಗೆ ಬಂದವರು ಕಥೆಯ ವಿಸ್ತರಣದಲ್ಲಿ ಅಲ್ಪ ಸ್ವಲ್ಪ ಮಾರ್ಪಾಟುಗಳನ್ನು ಮಾಡಿಕೊಂಡಿರಬಹುದಾದರೂ ಕಥಾವಸ್ತು ಒಂದೇ. ಆದಿ ಜಿನನ ಭವಾವಳಿಯಾಗಲಿ, ಆತನ ಜೀವನದ ವಿಸ್ತೃತ ಚರಿತ್ರೆಯಾಗಲಿ ಇಲ್ಲಿ ನಮಗೆ ಅಪ್ರಕೃತ. ಆದ್ದರಿಂದ ಬಹು ಸ್ಥೂಲವಾಗಿ ಆತನ ಕಥೆಯನ್ನು ಪರಿಚಯ ಮಾಡಿಕೊಂಡರೆ ಸಾಕು.[೨]

ಅತಿಬಲನೆಂಬ ಖಗೇಂದ್ರ ಅಲಕಾಪಟ್ಟಣದ ಅರಸು. ಮನೋಹರಾ ಎಂಬ ಸುದತಿ ಇವನ ಮನೋಹರೆ. ಇವರ ವಂಶವಲ್ಲರಿಯ ದಾಂಗುಡಿ ಮಹಾಬಲ. ಈತನು ಪ್ರಬುದ್ಧನಾಗಿ ಸ್ವಯಂಬುದ್ಧನೆಂಬ ಮಂತ್ರಿಯ ಆದೇಶದಂತೆ ಧರ್ಮದಿಂದ ರಾಜ್ಯವಾಳಿ ಜೈನಧರ್ಮ ಪ್ರವರ್ತಕನಾಗಿದ್ದ. ಒಮ್ಮೆ ಸ್ವಯಂಬುದ್ಧ ಜಿನ ಪೂಜೆಗಾಗಿ ಮೇರು ಪರ್ವತಕ್ಕೆ ಹೋದಾಗ ಅಲ್ಲಿ ಚಾರಣರ ದರ್ಶನವಾಯಿತು. ಅಂದಿನಿಂದ ಹತ್ತನೆಯ ಜನ್ಮದಲ್ಲಿ ತನ್ನ ರಾಜನು ತೀರ್ಥಂಕರನಾಗುವನೆಂದು ಅವರಿಂದ ತಿಳಿದುಕೊಂಡ. ಇದನ್ನರಿತ ಮಹಾಬಲನು ರಾಜ್ಯವನ್ನು ತನ್ನ ಮಗ ಅತಿಬಲನಿಗೆ ವಹಿಸಿ, ಸಿದ್ಧಕುಲಕ್ಕೆ ಹೋಗಿ ಸಿದ್ಧರನ್ನು ಪೂಜಿಸಿ, ಆರಾಧನಾ ನಾವೆಯನ್ನೇರಿ ಸಂಸಾರ ಸಾಗರವನು ದಾಟಿ, ಶ್ರೀ ಪ್ರಭ ವಿಮಾನಲ್ಲಿ ಲಲಿತಾಂಗನೆಂಬ ದೇವರಾಗಿ ಹುಟ್ಟಿದ. ಪುಣ್ಯದರಾಶಿ ಕರಗುನವರೆಗೆ ದೇವ ವಿಮಾನದ ಸುಖಗಳನ್ನು ಅನುಭವಿಸಿ, ಅನಂತರ ವಜ್ರಜಂಘನೆಂಬ ದೊರೆಯಾಗಿ ಹುಟ್ಟಿದ. ಆತನ ಮಡದಿಯಾಗಿದ್ದ ಸ್ವಯಂಪ್ರಭೆಯೂ ಸ್ವರ್ಗಚ್ಯುತಳಾಗಿ ಶ್ರೀಮತಿಯೆಂಬ ಹೆಸರಿನಿಂದ ರಾಜಕುಮಾರಿಯಾಗಿ ಹುಟ್ಟಿದಳು. ಇಬ್ಬರ ಆತ್ಮಗಳೂ ಊರ್ಧ್ವಗಮನದಲ್ಲಿರುವುದರಿಂದ ಮಾನವರಾಗಿ ಹುಟ್ಟಿದಂದೂ ಅವರಿಗೆ ಜನ್ಮಾಂತರಗಳ ಜ್ಞಾನವುಂಟು. ಆದುದರಿಂದ ಇಬ್ಬರೂ ಪರಸ್ಪರರನ್ನರಸಿ ವಿವಾಹವಾಗಿ ಹಿಂದಿನ ಪ್ರೇಮ ಪ್ರವಾಹವನ್ನು ಮುಂದುವರಿಸುವರು. ಹಲವು ಕಾಲ ಭೂಲೋಕದಲ್ಲಿಯೇ ಸ್ವರ್ಗ ಸುಖವನ್ನನುಭವಿಸಿ ಚಾರಣರಿಂದ ಜಿನದೀಕ್ಷೆ ವಹಿಸಿ ಅದರ ಫಲದಿಂದ ಈಶಾನಕಲ್ಪದಲ್ಲಿ ಶ್ರೀಧರ ಶ್ರೀಮತಿಯರೆಂಬ ದಂಪತಿಗಳಾದರು. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ತಾನೆ? ಶ್ರೀಧರ ಸಕಲ ಸುಖಗಳನ್ನೂ ಸಾಕಷ್ಟು ಅನುಭವಿಸಿ ಸುವಿಧಿಯೆಂಬ ಹೆಸರಿನಿಂದ ಪುನಃ ಭೂಚರನಾಗಿ ಹುಟ್ಟಿದ. ಪ್ರಾಣಾಂತ್ಯದಲ್ಲಿ ಜಿನದೀಕ್ಷೆ ವಹಿಸಿ, ಮುಡುಪಿದನಂತರ ಅಚ್ಯುತೇಂದ್ರನಾಗಿ ಹುಟ್ಟಿದ. ಅದು ಕಳೆದ ಮೇಲೆ ವಜ್ರನಾಭಿಯೆಂಬ ರಾಜಕುಮಾರನಾಗಿ ಹುಟ್ಟಿದರೂ ಬೇಗನೆ ಎಚ್ಚತ್ತು ಮಗನಿಗೆ ರಾಜ್ಯ ಕೊಟ್ಟು ವಿರಾಗದಿಂದ ತಪಸ್ಸು ಮಾಡಿ ದೇಹವನ್ನು ತವಿಸಿದುದರ ಫಲವಾಗಿ ಅಹಮಿಂದ್ರ ಪದವಿಯನ್ನು ಪಡೆದ. ಮುಂದಿನ ಜನ್ಮವೇ ಕಡೆಯ ಜನ್ಮ. ನಾಭಿ ಮರುದೇವಿಯರ ಮಗನಾಗಿ, ವೃಷಭನಾಥನೆಂಬ ಹೆಸರಿನಿಂದ ಜನಿಸಿದ. ಗರ್ಭಪ್ರವೇಶ

[೨] ಈ ಕಥೆಯಲ್ಲಿಯೂ ದಿಗಂಬರ-ಶ್ವೇತಾಂಬರರಿಗೆ ಸ್ವಲ್ಪಮಟ್ಟಿಗೆ ವ್ಯತ್ಯಾಸವಿದೆ.

ಮಾಡುವಂದು ಮರುದೇವಿಗೆ ಷೋಡಶ ಸ್ವಪ್ನಗಳಾದುವು ಹ್ರೀ, ಶ್ರೀ, ಕೀರ್ತಿದೇವತೆಯರು ಆಕೆಯ ಗರ್ಭವನ್ನು ಶೋಧಿಸಿದರು , ಅನಂತರ ಗರ್ಭಧಾರಣೆಯಾಯಿತು ಆದರೂ ಗರ್ಭವಿಕಾರಗಳೊಂದೂ ಇಲ್ಲ ಚೈತ್ರ ಕೃಷ್ಣ ನವಮಿ ಸೂರ್ಯೋದಯ ಕಾಲ ಬ್ರಹ್ಮಯೋಗದಲ್ಲಿ, ಪೂರ್ವದಿಕ್ಕು ಸೂರ್ಯನನ್ನು ಪ್ರಸವಿಸುವಂತೆ ಮರುದೇವಿ ಪ್ರಭಾವಯುತನಾದ ಮಗನನ್ನು ಹೆತ್ತಳು ನಾಭಿಯೆಂಬ ಉದಯಪರ್ವತದಲ್ಲಿ ಜಿನಬಿಂಬಾರ್ಕ ಉದಯಿಸಿದ ಒಡನೆಯೇ ತಮೋನಾಶವಾಯಿತು, ತ್ರಿಬೋಧ ಕಿರಣೋದಯದಿಂದ , ದೇವಸ್ತ್ರೀರೂಪದ ಕಮಲಗಳರಳಿದುವು , ಆನಂದ ಬಾಷ್ಪದ ಮಕರಂದ ಸುರಿದು ಹರಿಯಿತು , ಜಿನಾಭಿಧಾನದ ತ್ರಿಭುವನ ದೀಪ ತೊಳಗಿ ಬೆಳಗಿತು , ಷಡೃತುಗಳ ಪುಷ್ಪಗಳೂ ಅರಳಿದುವು , ನೀರು ತಿಳಿಯಿತು , ಸೂರ್ಯಕಿರಣ ತಂಪಾಯಿತು

ಜಿನೋದಯವಾದೊಡನೆಯೆ ಇಂದ್ರನ ಆಸನ ಕಂಪಿಸಿತು ಆದರ ಅರ್ಥವನ್ನರಿತ ಇಂದ್ರನು ಮೇಲಕ್ಕೆದ್ದು ಕಂಪನವಾದ ದಿಕ್ಕಿನಲ್ಲಿ ಏಳು ಹೆಜ್ಜೆ ಹೋಗಿ ನಮಸ್ಕರಿಸಿದನು ಜಿನಕುಮಾರನ ಜನ್ಮಾಭಿಷವಣಕ್ಕಾಗಿ ಒಡನೆಯೇ ಪ್ರಸ್ಥಾನ ಭೇರಿಯನ್ನು ಹೊಡಸಿದನು ಶಚೀದೇವಿಯು ಜಿನಬಾಲನನ್ನು ತಂದು ಇಂದ್ರನ ಕೈಗೆ ಕೊಟ್ಟಳು, ಪ್ರಾಚೀದಿಗಂಗನೆ ಬಾಲಸೂರ್ಯನನ್ನು ಪೂರ್ವಗಿರಿಗೆ ಕೊಡುವಂತೆ ಇಂದ್ರನು ಆತನನ್ನು ಐರಾವತದ ಮೇಲೇರಿಸಿಕೊಂಡು ಮೇರು ಪರ್ವತದ ಉತ್ತರದಲ್ಲಿದ್ದ ಮಹಾ ಶಿಲೆಯನ್ನು ಸೇರಿದನು ಅಲ್ಲಿ ಮಗುವನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಈಶಾನೇಂದ್ರ ಸೌಧರ್ಮೇಂದ್ರರು ಶಾತಕುಂಭದಲ್ಲಿ ತುಂಬಿಕೊಟ್ಟ ಕ್ಷೀರದಿಂದ ನೀರೆರೆದ ಮೇಲೆ ಪರಿಮಳೋದಕದಿಂದ ನೀರೆರೆದು ಮರಳಿ ತಾಯ ಮಡಲಿನಲ್ಲಿ ಕೂಸನ್ನಿಟ್ಟು ಪೂಜಿಸಿದರು ಜಾತಕರ್ಮಾದಿಗಳು ವೈಭವದಿಂದ ನೆರವೇರಿದುವು ವೃಷಭನೆಂಬ ನಾಮಕರಣವಾಯಿತು ಮಗುವು ಬಾಲಲೀಲೆಗಳ ಬೆಳದಿಂಗಳನ್ನು ಚೆಲ್ಲುತ್ತಾ ವೃದ್ಧಿಯಾಯಿತು ಮಾತು ಕಲಿಯಿತು , ಅಂಬೆಗಾಲಿಟ್ಟು ಬಾಲ್ಯವನ್ನು ಕಳೆಯಿತು ಕೌಮಾರದಲ್ಲಿಯೇ ಸಕಲ ಶಾಸ್ತ್ರಗಳನ್ನೂ ಸ್ವಾಧೀನ ಮಾಡಿಕೊಂಡು ಯೌವನದ ಹೊಸ್ತಿಲಿನವರೆಗೆ ಬಂದುದಾಯಿತು

ಪ್ರಾಪ್ತವಯಸ್ಕನಾದ ಮಗನಿಗೆ ಮದುವೆ ಮಾಡಬೇಕೆಂಬ ಯೋಚನೆ ನಾಭಿರಾಜನಿಗೆ ಕಾಂಚನವಲ್ಲೀ ಸದೃಶರಾದ ಯಶಸ್ವತೀ ಸುನಂದೆಯರೆಂಬ ಸುಕುಮಾರಿಯರು ಈ ವೃಷಭರೂಪೀ ಕಲ್ಪವೃಕ್ಷವನ್ನು ಆಶ್ರಯಿಸಿದರು ತಾರುಣ್ಯದ ಬಿಸಿಯಲ್ಲಿ ಕಾಣದಂತೆಯೇ ಬಹುಕಾಲ ಕರಗಿಹೋಯಿತು ಯಶಸ್ವತೀದೇವಿ ಗರ್ಭವತಿಯಾಗಿ ಕೃತಕೃತ್ಯಳಾದೆನೆಂದುಕೊಂಡಳು ಅವಳ ಅಪ್ರಾಕೃತವಾದ ಬಯಕೆಗಳು ಅಚ್ಚರಿಯನ್ನು ಹುಟ್ಟಿಸುವಂತಿದ್ದುವು ಗರ್ಭವತಿಯಾದ ಆಕೆ ವಿಜಯಾರ್ಧಪರ್ವತ, ಹಿಮಪರ್ವತಗಳ ಶೃಂಗಗಳಲ್ಲಿ, ಲೀಲಾಗೃಹೋಪವನದ ಕೃತಕ ಪರ್ವತಗಳಲ್ಲಿ ಸಂಚರಿಸುವಂತೆ ಸಂಚರಿಸುವಳು ಮಲಯ ಪರ್ವತದ ಚಂದನ ವೃಕ್ಷ ಪಂಕ್ತಿಗಳೇ ಆಕೆಯ ವಿಲಾಸ ಮಂದಿರದ ಲತಾಗೃಹ ನಾಲಗೆಯ ಚಪಲ ಷಟ್ಖಂಡ ವೃತ್ತಿಕಾಸೇವನೆ ಸಮರಾ

ಟೋಪ ಯೋದ್ಧರ ಪಟುತರ ಕತೆಗಳು ಆಕೆಯ ಕುತೂಹಲವನ್ನು ಕೆರಳಿಸುವುವು ಮಣಿಖಚಿತ ಕನ್ನಡಿ ಆಕೆಗೆ ಬೇಡ, ಮುಖ ನೋಡಿಕೊಳ್ಳಲು , ಸಾಣೆ ಹಿಡಿದ ಕತ್ತಿ ಬೇಕು ವೀಣಾಗಾನ ರುಚಿಸದು, ಚಾಪಠಂಕಾರಕ್ಕೆ ಕಿವಿ ಅರಳುವುದು ನವಮಾಸ ತುಂಬುವವರೆಗೆ ಈ ಬಯಕೆಗಳನ್ನು ಹೀರಿ ಬೆಳೆದಿದ್ದ ಆಕೆಯ ಗರ್ಭದಲ್ಲಿ ಉದಯವಾದ ಫಲ ಹೇಗಿರಬೇಕು ? ಆ ಮಗು ಭಾವೀ ಭಾರತದ ಸಕಲರನ್ನೂ ಭರಿಸತಕ್ಕವನೆಂಬ ಭರತನೆಂಬ ಅನ್ವರ್ಥನಾಮವನ್ನು ಹೊಂದಿ ಬಂಧುಗಳ ಕರಕಮಲದಲ್ಲಿ ವಿಹರಿಸುವ ಬಾಲಹಂಸನಾಗಿ ಬೆಳೆದನು ತಾಯಿಯ ಬಯಕೆಗೆ ತಕ್ಕ ಮಗನ ಬಾಲಲೀಲೆಗಳು ಮದ್ದಾನೆಯನ್ನು ಹತ್ತಿ, ತರ್ಜನೀ ಬೆರಳನ್ನೇ ಅಂಕುಶ ಮಾಡಿಕೊಂಡು ಅದನ್ನು ನಡಸುತ್ತಾ ಪ್ರಮದವನಕ್ಕೆ ಹೋಗಿ ಆಳವಾದ ನೀರಿನಲ್ಲಿ ಅದನ್ನು ಮುಳುಗಿಸುವುದೇ ಅವನ ಹುಡುಗಾಟ ಸುವರ್ಣಕ್ಕೆ ಸುಗಂದ ಬಂದಂತೆ ಈ ಮಹನೀಯನಿಗೆ ತಾರುಣ್ಯ ಪ್ರಾಪ್ತವಾಯ್ತು ಇಷ್ಟರಲ್ಲಿ ಭರತನಿಗೆ ತೊಂಬತ್ತೊಂಬತ್ತು ತಮ್ಮಂದಿರೂ ಒಬ್ಬ ತಂಗಿಯೂ ಹುಟ್ಟಿದರು ಸುನಂದೆಯ ಹೊಟ್ಟೆಯಲ್ಲಿಯೂ ಬಾಹುಬಲನೆಂಬ ಸುಕುಮಾರನೂ ಸುಂದರಿಯೆಂಬ ಮಗಳೂ ಹುಟ್ಟಿದರು ಮಕ್ಕಳೆಲ್ಲರೂ ವನದ್ವಿಪ ಗಳಂತೆ ಬೆಳೆದು ಸಕಲ ವಿದ್ಯಾಪಾರಂಗತರಾದರು ಈ ಮಕ್ಕಳು, ಈ ಹೆಂಡಿರು, ಈ ರಾಜ್ಯವೈಭವ ಇವುಗಳಲ್ಲಿ ಬಹುಕಾಲ ಕಳೆದುಹೋಯಿತು

ಇಷ್ಟಾಗುವುದರೊಳಗೆ ಪರಿಷ್ಕ್ರಮಣ ಕಲ್ಯಾಣದ ಕಾಲ ಸಮಾಪಿಸಿತೆಂದು ಎಚ್ಚರಿಸುವುದಕ್ಕಾಗಿ ಇಂದ್ರನು ನೀಲಾಂಜನೆಯೆಂಬ ದೇವನರ್ತಕಿಯ ಗಾನ ನೃತ್ಯಗಳಿಗೆ ಏರ್ಪಾಟು ಮಾಡಿದ, ವೃಷಭನ ಒಡ್ಡೋಲಗದಲ್ಲಿ ಗಂಧರ್ವ ಗಾನದ ಸೋನೆ ಸುರಿಯುತ್ತಿರಲು ಸುರಸುಂದರಿ ನೀಲಾಂಜನೆ 'ಕರ್ಜಿನ ಬಿಲ್ಲಂ ಮುಸೆದ ಮದನನಲರ್ಗಣೆ ಬರ್ಮುಕಿತ್ತೆನಿಸುತ್ತೆ' ಸಭಾಂತರಾಳವನ್ನು ಹೊಕ್ಕಳು ಜವನಿಕೆಯ ಮರೆಯಲ್ಲಿ ಮಡುಗಟ್ಟಿ ನಿಂತ ಕಲಾರಸವು, ಜವನಿಕೆ ಓಸರಿಸಿದೊಡನೆಯೇ ತಾನೇ ತಾನಾಗಿ ಹರಿಯಿತು ನೋಟಕರ ಚಿತ್ತವೆಲ್ಲ ಸೂರೆಹೋಯಿತು ಕುಣಿಕುಣಿಯುತ್ತಿದ್ದಂತೆಯೇ ನೀಲಾಂಜನೆಯ ಆಯುಸ್ಸು ತುಂಬಿ ಬಂದಿತು ಇನ್ನೇನು ಕರಗಿಹೋಗುವಳೆಂದಿರುವಾಗ, ಇಂದ್ರನು ರಸಾಭಾಸದ ಹೆದರಿಕೆಯಿಂದ ಅವಳಿಗೆ ಸರ್ವವಿಧದಲ್ಲಿಯೂ ಸಮಾನವಾದ ಆಕೃತಿಯನ್ನು ಎವೆಯಿಕ್ಕುವುದರೊಳಗಾಗಿ ನಿರ್ಮಿಸಿ ಅವಳ ಸ್ಥಾನದಲ್ಲಿ ನಿಲ್ಲಿಸಿದ ಪ್ರೇಕ್ಷಕರೊಬ್ಬರಿಗೂ ನರ್ತಕಿ ಬಯಲಾಗಿ ಮಾಯಾಕೃತಿ ಬಂದುದು ಗೊತ್ತಾಗಲಿಲ್ಲ, ಆದರೆ ವೃಷಭನ ಕಣ್ಣಿಗೆ ಅಗೋಚರವಾಗುವುದು ಸಾಧ್ಯವೆ ? ಆತನಿಗೆ ಗೊತ್ತಾಯಿತು ಒಡನೆಯೆ ದೇಹಾನಿತ್ಯತೆಯ ಭಾವನೆಯ ಮೇಲೆ ವೈರಾಗ್ಯ ಸಸಿಯಂಕುರಿಸಿ ನಿಮಿಷ ಮಾತ್ರದಲ್ಲಿ ಮಹೋನ್ನತ ವೃಕ್ಷವಾಯಿತು "ತನು ರೂಪ ವಿಭವ ಯೌವನ ಧನ ಸೌಭಾಗ್ಯಾಯುಷ್ಯಾದಿಗಳು ಇಂದ್ರನ ಬಿಲ್ಲಿನಂತೆ, ಮುಗಿಲ ನೆರಳಿನಂತೆ, ಬೊಬ್ಬುಳಿಕ್ಕೆ ಯೊಬ್ಬಿನಂತೆ" ಅಸ್ಥಿರವೆಂದು ಒಡನೆಯೇ ರಾಜ್ಯವನ್ನು ಭರತನಿಗೆ ವಹಿಸಿ ಬಾಹುಬಲಿ ಯನ್ನು ಯುವರಾಜ ಪಟ್ಟದಲ್ಲಿ ನಿಲ್ಲಿಸಿ ಜಿನದೀಕ್ಷಾ ವಿಧಿಯೊಡನೆ ರಜತಾಚಲಕ್ಕೆ

ಹೋಗಿ ತಪ್ರೋನಿಷ್ಠನಾದನು ಭರತರಾಜನು ಅಯೋಧ್ಯೆಯಲ್ಲಿಯೂ, ಬಾಹುಬಲಿ ಪೌದನಪುರದಲ್ಲಿಯೂ ನೆಲಸಿದರು ವೃಷಭದೇವನು ಉತ್ತರೋತ್ತರ ಕರ್ಮವೆಲ್ಲವನ್ನೂ ಸವೆಸಿ ಜೀವನ್ಮುಕ್ತನಾದನು, ಜಿನನಾದನು

ಜನ್ಮಾಂತರಗಳನ್ನು ನಂಬುವ ಜೈನರಿಗೆ ತಮ್ಮ ಮಹಾಪುರುಷರ ಜೀವನವು ಉನ್ನತೋನ್ನತಿಯನ್ನೈದುತ್ತ ಹೋದ ಬಗೆಯನ್ನು ವಿವರವಾಗಿ ವರ್ಣಿಸಿ ತೋರಿಸುವುದು ಅಗತ್ಯವೆಂದು ತೋರಿತು ಉತ್ತಮ ಕರ್ಮದಿಂದ ಉನ್ನತಿ, ನೀಚ ಕರ್ಮದಿಂದ ಅಧಃಪತನ ಅನಿವಾರ್ಯವೆಂದು ಕರ್ಮದ ಶಕ್ತಿಯನ್ನು ಜನದ ಮನಸ್ಸಿನಲ್ಲಿ ನಟ್ಟು ಅವರನ್ನು ಸನ್ಮಾರ್ಗಕ್ಕ ತರುವ ಕಾರ್ಯವೂ ಇದರಿಂದ ಸಾಧಿತವಾದಂತಾಗುತ್ತದೆ ಹೀಗಾಗಿ ತೀರ್ಥಂಕರರ ಭವಾವಳಿಗಳನ್ನು ಬೇಕಾದಷ್ಟು ಹುಲುಸಾಗಿ ಬೆಳೆಸಿದ್ದಾರೆ, ತಮ್ಮ ಮಹಾಪುರಾಣಗಳಲ್ಲಿ ಆದರೆ ಪ್ರಥಮ ತೀರ್ಥಂಕರನ ಜೀವನ ಚರಿತ್ರೆಯನ್ನು ದೀರ್ಘವಾಗಿ ಬರೆದು ಉಳಿದ ತೀರ್ಥಂಕರರ ಜೀವನ ಚರಿತ್ರೆಯಲ್ಲಿ ಹ್ರಸ್ವಾದೇಶವನ್ನು ತರುತ್ತಾರೆ ಆತನ ಜೀವನ ಚರಿತ್ರೆಯಂತೆಯೇ ಉಳಿದವರ ಚರಿತ್ರೆಯೂ ಇರುವುದು, ಹೀಗೆ ಮಾಡುವುದರ ಕಾರಣವೆಂದು ತೋರುತ್ತದೆ ಹೀಗೆಯೇ ಎಲ್ಲಾ ಮಹಾಪುರಾಣಗಳಲ್ಲಿಯೂ ಪ್ರಥಮ ಚಕ್ರಿಯ ಜೀವನವನ್ನು ವಿಸ್ತಾರವಾಗಿಯೂ, ಉಳಿದ ಚಕ್ರಿಗಳ ಜೀವನವನ್ನು ಮೊಟಕಾಗಿಯೂ ವರ್ಣಿಸುವುದು ವಾಡಿಕೆ ಈತನ ಜೀವನ ಉಳಿದವರ ಜೀವನಕ್ಕೆ ಮಾದರಿಯಾಗಿರುತ್ತದೆ ಪ್ರಥಮ ತೀರ್ಥಂಕರನ ಭವಾವಳಿಯನ್ನು ಹೇಳುವಂದು ಅದಕ್ಕೆ ಅಂಗವಾಗಿ ಭರತನ ಭವಾವಳಿಯೂ ಬರುತ್ತವೆ ಈತನ ಜೀವನ ವಲ್ಲಿ ಹಲವು ಜನ್ಮಗಳಿಂದ ಆ ಮಹೋನ್ನತ ತರುವನ್ನು ಆಶ್ರಯಿಸಿಕೊಂಡೇ ಇರುತ್ತದೆ ನಾರಿನಿಂದ ಹೂವು ಸ್ವರ್ಗಕ್ಕೇರುವಂತೆ ಆತನ ಆತ್ಮೋದ್ಧಾರದೊಡನೆ ಈತನ ಆತ್ಮವೂ ಉನ್ನತೋನ್ನತಿಯನ್ನೈದುತ್ತ ಹೋದಂತೆ ಕಂಡುಬರುತ್ತದೆ

ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತಿ ವಿಷಯದಲ್ಲಿ ಪ್ರಭಾವತಿಯೆಂಬ ಪಟ್ಟಣ ಅತಿಗೃದ್ಧನೆಂಬ ಜಿಪುಣಾಗ್ರೇಸರ ಚಕ್ರವರ್ತಿ ಆದರ ದೊರೆ ಆತನು ಬಹು ದ್ರವ್ಯವನ್ನು ಗಳಿಸಿ ಅದನ್ನು ತನ್ನ ರಾಜಧಾನಿಯ ಸಮೀಪದ ಬೆಟ್ಟದ ದರಿಯಲ್ಲಿ ಭೂಸ್ಥಾಪನೆ ಮಾಡಿ ಬಹು ವಿಷಯಾಸಕ್ತನಾಗಿದ್ದುದರಿಂದ ಸತ್ತ ಮೇಲೆ ನಾರಕಿಯಾಗಿ ಹುಟ್ಟಿದನು ಎಪ್ಪತ್ತು ಸಾಗರೋಪಮಕಾಲ ಈ ಜನ್ಮದಲ್ಲಿ ಅತಿ ಕಷ್ಟಗಳನ್ನನುಭವಿಸಿದ ಮೇಲೆ ತಾನು ಧನವನ್ನು ಭೂಸ್ಥಾಪನೆ ಮಾಡಿದ್ದ ಬೆಟ್ಟದ ಬಳಿಯಲ್ಲಿ ಹೆಬ್ಬುಲಿಯೊಂದರ ಹೊಟ್ಟೆಯಲ್ಲಿ ಹುಟ್ಟಿ ನಿಕ್ಷೇಪ ರಕ್ಷಣೆಯಲ್ಲಿ ತತ್ಪರನಾಗಿದ್ದನು ಹೀಗಿರಲು ಆಗ ಪ್ರಭಾವತಿಯ ಅರಸನಾಗಿದ್ದ ಪ್ರೀತಿವರ್ಧನನು ಜೈತ್ರಯಾತ್ರೆಯಿಂದ ಶತ್ರುಗಳನ್ನು ನಿರ್ಮೂಲಮಾಡಿ ಹಿಂತಿರುಗಿ ಬರುತ್ತಾ ಈ ಬೆಟ್ಟದ ತಪ್ಪಲಿಗೆ ಬಂದನು ಅಲ್ಲಿ ಇದ್ದಕ್ಕಿದ್ದಂತೆಯೇ ಕಲವು ಶುಭಶಕುನಗಳಾದುವು ರಾಜನು ಸಂತೋಷಚಿತ್ತನಾಗಿ ಪಿಹಿತಾಸ್ರವರೆಂಬ ಮಾಸೋಪವಾಸಿಗಳಿಗೆ ಷಡ್ರಸೋಪೇತವಾದ ಆಹಾರಸನ್ನಿತ್ತನು

ಇದರಿಂದ ದೇವತೆಗಳು ಸುಪ್ರೀತರಾಗಿ ಹೂಮಳೆಗರೆದರು , ದೇವದುಂದುಭಿ ಮೊಳಗಿತು ಇದನ್ನು ಕಂಡ ಹುಲಿಗ ಪೂರ್ವಜನ್ಮಸ್ಮರಣೆಯಾಯಿತು ಕೃತಕಾರ‍್ಯ ಪಶ್ಚಾತ್ತಾಪದಿಂದ ಅದು ನಿರಶನವ್ರತವನ್ನು ಕೈಗೊಂಡಿತು ಅವಧಿಜ್ಞಾನದಿಂದ ಇದನ್ನರಿತ ಪಿಹಿತಾಸ್ರವರು ಪ್ರೀತಿವರ್ಧನನಿಗೆ ಅದರ ಕಥೆಯನ್ನಲ್ಲಾ ಅರುಹಿ, ಭೂಗತವಾಗಿದ್ದ ಧನವನ್ನು ಹೊರಕ್ಕೆ ತೆಗೆಸಿ ಅಲ್ಲಿಯೇ ಸಮೀಪದಲ್ಲಿ ವಸುವಾಸರವನ್ನು ನಡಸಿದರು ಅದರಲ್ಲೆ ನೆಟ್ಟ ಮನದಿಂದ ಮುಡುಪಿದ ಹುಲಿ ಈಶಾನಕಲ್ಪದ ದಿನಕರಪ್ರಭ ವಿಮಾನದಲ್ಲಿ ದಿವಾಕರಪ್ರಭನೆಂಬ ದೇವನಾಗಿ ಹುಟ್ಟಿತು ಆಗ ಆದಿನಾಥನು ಅದೇ ವಿಮಾನದಲ್ಲಿ ಲಲಿತಾಂಗದೇವನಾಗಿದ್ದನು ದಿವಾಕರಪ್ರಭನು ಆತನ ಪರಿವಾರಕ್ಕೆ ಸೇರಿದವನಾದನು ಆತನನ್ನು ಸೇವಿಸಿದುದರ ಫಲವಾಗಿ ಆತನು ವಜ್ರಜಂಘಚರನಾದಂದು ತಾನೂ ಆತನ ಬಳಿಯಲ್ಲೇ ಜನ್ಮತಾಳಿ ಆತನ ಮಂತ್ರಿಯಾದ ಅನಂತರ ಅಧೋಗ್ರೈವೇಯಕ ವಿಮಾನದಲ್ಲಿ ಅಹಮಿಂದ್ರನಾಗಿದ್ದು ವೃಷಭನಾಥನು ವಜ್ರನಾಭಿಚರನಾದಂದು ಆತನ ತಮ್ಮಂದಿರಲ್ಲಿ ಒಬ್ಬನಾದ ಸುಬಾಹುವಾಗಿ ಜನಿಸಿದ ಅಣ್ಣನ ಸುಖಜೀವನಕ್ಕೆ ಸಾಧಕನಾಗಿರುತ್ತಾ ಜನ್ಮಸಾಫಲ್ಯತೆಯನ್ನು ಪಡೆದು, ಆತನೊಡನೆಯೇ ದೀಕ್ಷೆವಹಿಸಿ, ಏಕಾಗ್ರಚಿತ್ತದಿಂದ ಜಿನನನ್ನು ಸ್ಮರಿಸುತ್ತಾ ದೇಹವನ್ನು ತ್ಯಜಿಸಿ, ಸರ್ವಾರ್ಥಸಿದ್ಧಿ ಕಲ್ಪದಲ್ಲಿ ಅಹಮಿಂದ್ರನಾಗಿ ಜನಿಸಿದ ಅಲ್ಲಿ ಮೂವತ್ತಮೂರು ಸಾಗರೋಪಮಕಾಲ ಸುಖವಾಗಿದ್ದು ಆತನಿಗಿಂತಲೂ ಮೊದಲೇ ಅಲ್ಲಿಂದ ಭೂಮಿಗೆ ಬಂದಿದ್ದ ವೃಷಭನಾಥನ ಮಗನಾಗಿ, ಭರತನೆಂಬ ಹೆಸರಿನಿಂದ ಹುಟ್ಟಿದನು ಅದೇ ಕಲ್ಪದಲ್ಲಿಯೇ ಅಹಮಿಂದ್ರನಾಗಿದ್ದ ಮಹಾಬಾಹುಚರನು ಭರತೇಶ್ವರನ ತಮ್ಮನಾದ ಬಾಹುಬಲಿಯಾಗಿ ಹುಟ್ಟಿದನು

ಜಿನಸೇನನು ಭರತೇಶನ ಚರಿತ್ರೆಯನ್ನು ವಿಸ್ತಾರವಾಗಿಯೇ ಪ್ರತಿಪಾದಿಸಿದ್ದಾನ ವೃಷಭನಾಥನು ತನ್ನ ರಾಜ್ಯಾಡಳಿತದ ಅನಂತರ ತನ್ನ ಸೂರ್ವರು ಮಕ್ಕಳಿಗೆ ರಾಜ್ಯವನ್ನು ಹಂಚಿಕೊಡುತ್ತಾನೆ ಹಿರಿಯನಾದ ಭರತೇಶ್ವರನು ಅಯೋಧ್ಯೆಯಲ್ಲೂ, ಎರಡನೆಯವನಾದ ಬಾಹುಬಲಿಯು ಪೌದನಪುರದಲ್ಲಿಯೂ ರಾಜ್ಯವಾಳುತ್ತಿರುತ್ತಾರ ಭರತನು ಚಕ್ರವರ್ತಿ ಪದವಿಯ ಸೌಖ್ಯಗಳನ್ನಲ್ಲಾ ಅನುಭವಿಸುತ್ತಿದ್ದು ಪ್ರಥಮ ಚಕ್ರಿಯೆಂಬ ತನ್ನ ಹೆಸರು ಸಾರ್ಥಕವಾಗುವಂತೆ ಜಗತ್ತನ್ನೆಲ್ಲಾ ಜಯಿಸಿ, ತಮ್ಮಂದಿರು ಮಾತ್ರ ಪ್ರತಿಭಟಿಸಲು ಅವರನ್ನು ಉಪಾಯದಿಂದ ಗೆದ್ದು, ರಾಜ್ಯವಾಳುತ್ತಾ, ತಂದೆಯ ಮೋಕ್ಷ ಕಲ್ಯಾಣಾನಂತರ ಕನ್ನಡಿಯಲ್ಲಿ ಪ್ರತಿಬಿಂಬಿಸಿದ ತನ್ನ ನೆರೆಗೂದಲನ್ನು ಕಂಡು ವೈರಾಗ್ಯದಿಂದ ತಪಸ್ಸಿಗೆ ಹೊರಟುಹೋಗುತ್ತಾನೆ

ಕವಿ ಭರತನ ದಿಗ್ವಿಜಯ ಪ್ರಕರಣವನ್ನು ಬಹು ವಿಸ್ತಾರವಾಗಿ ಪ್ರತಿಪಾದಿಸಿರುವನಾದರೂ ಆತನ ಭೋಗಜೀವನದ ಕಡೆ ಹೆಚ್ಚು ಗಮನ ಕೊಟ್ಟಿಲ್ಲ ಚಕ್ರವರ್ತಿಯಾಗುವುದಕ್ಕೆ ಮೊದಲಾಗಲೀ ಚಕ್ರವರ್ತಿಯಾದ ಮೇಲಾಗಲಿ ಆತನು ತನ್ನ ನಿತ್ಯಜೀವನದಲ್ಲಿ ಅನುಭವಿಸುವ ಸುಖಗಳನ್ನು, ಭೋಗವಿಲಾಸಗಳನ್ನು ಅಷ್ಟಾಗಿ ವರ್ಣಿಸಿಲ್ಲ.

ಜೈನಪುರಾಣ ಕರ್ತೃವಾದ ಆತನಿಗೆ ಇದರ ಔಚಿತ್ಯ ಆವಶ್ಯಕತೆಗಳು ಹೆಚ್ಚಾಗಿ ಕಾಣಬರಲಿಲ್ಲವೆಂದು ತೋರುತ್ತದೆ ಅದ್ಭುತ ಕವಿಯಾದ ಆತನಿಗೆ ಇದು ಅಂತಹ ಆವಶ್ಯಕವಾದ ಕಾರ್ಯವೇನೂ ಆಗಿರಲಿಲ್ಲ, ತನ್ನ ಕಾವ್ಯವಾಹಿನಿಯ ಹಲವೆಡೆಗಳಲ್ಲಿ ಶೃಂಗಾರರಸದ ಮಡುಗಳನ್ನೇ ಸೃಷ್ಟಿಸಿದ್ದಾನೆ ಭರತನ ಜೀವನದಲ್ಲಿಯೂ ಅಲ್ಲಲ್ಲಿ ಶೃಂಗಾರರಸದ ಸುಂದರ ಚಿತ್ರಗಳನ್ನು ಸೂಚಿಸಿದ್ದಾನೆ ರಸಿಕನಾದ ಭರತ ಚಕ್ರವರ್ತಿ ದಿಗ್ವಿಜಯ ಪ್ರಯಾಣ ಕಾಲದಲ್ಲಿ ದಾರಿಯಲ್ಲಿ ಅನೇಕ ಸುಂದರಿಯರಾದ ಪ್ರಾಕೃತ ಕನ್ಯೆಯರನ್ನು ಕುತೂಹಲದಿಂದ ನೋಡಿದನಂತೆ ಅನೇಕ ಸಾಮಂತರಾಜರು ಕಪ್ಪ ಕಾಣಿಕೆಗಳ ಜೊತೆಗೆ ಕನ್ಯಾರತ್ನಗಳನ್ನು ಸಮರ್ಪಿಸುತ್ತಾರೆ ಅಂಗ ವಂಗ ಕಳಿಂಗಾದಿ ರಾಜ್ಯಗಳನ್ನು ಗೆಲ್ಲುತ್ತಾ ಭರತನು ಕರ್ಣಾಟಕಕ್ಕೂ ಬರುತ್ತಾನೆ ಅವರನ್ನು ಕುರಿತು ಕನ್ನಡಿಗನಾದ ಕವಿ (ಜಿನಸೇನ ನೃಪತುಂಗನ ಗುರು) ಕರ್ಣಾಟಕರನ್ನು ಕುರಿತು ಹೆಮ್ಮೆಯಿಂದ

ಕರ್ಣಾಟಕಾನ್ ಸ್ಫುಟಾಟೋಪ ವಿಕಟೋದ್ಭಟ ವೇಷಕಾನ್
ಹರಿದ್ರಾಂಜನ ತಾಂಬೂಲಪ್ರಿಯಾನ್ ಪ್ರಾಯೋ ಯಶೋಧನಾನ್

ಎಂದು ಕರ್ಣಾಟಕರಿಗೊಂದು ಕಿರುಗಾಣಿಕೆಯನ್ನು ಸಲ್ಲಿಸಿದ್ದಾನ ಭರತನಿಗೆ ಅರ್ಪಿತ ರಾದ ಸ್ತ್ರೀಯರ ಸೌಂದರ್ಯ ವಿಲಾಸಗಳನ್ನು ಸ್ವಲ್ಪ ಮಟ್ಟಿಗೆ ಸೂಚಿಸಿದ್ದಾನೆ ಆದರೂ ಜಿನಸೇನನ ಹೆಗ್ಗುರಿ

ತ ಏವ ಕವಯೋ ಲೋಕೇ ತ ಏವ ಚ ವಿಚಕ್ಷಣಃ |
ಯೇಷಾಂ ಧರ್ಮಕಥಾಂಗತ್ವಂ ಭಾರತೀ ಪ್ರತಿಪದ್ಯತೇ ||
ಧರ್ಮಾನುಬಂಧಿನೀ ಯಾ ಸ್ಯಾತ್ ಕವಿತಾ ಸೈವ ಶಸ್ಯತೇ |
ಶೇಷಾಪಾಪಾಸ್ರವಾ ಯೈವ ಸುಪ್ರಯುಕ್ತಾಪಿ ಜಾಯತೇ ||

ಎಂಬ ಆತನ ನುಡಿಯಂತೆ ಧರ್ಮಬೋಧನೆಯೇ ಹೊರತು ಬರಿಯ ಜನಮನೋ ರಂಜನೆಯಲ್ಲ ಆತನ ದೃಷ್ಟಿಯಲ್ಲಿ ತ್ಯಾಗಶೀಲನಾದ ಬಾಹುಬಲಿಗಿರುವಷ್ಟು ಪೂಜ್ಯತೆ ಭರತನಿಗಿಲ್ಲ ಕೇವಲಿಯಾದ ಬಾಹುಬಲಿ ತೀರ್ಥಂಕರನ ಜೀವಿತ ಕಾಲದಲ್ಲಿಯೇ ಮುಕ್ತನಾದನು ಆತನ ಉಚ್ಚವಾದ ಭವ್ಯ ವ್ಯಕ್ತಿತ್ವದ ಮುಂದೆ ಭರತನ ವ್ಯಕ್ತಿತ್ವ ಅಷ್ಟು ಕಳೆ ಕಟ್ಟುವಂತಿಲ್ಲ

ಸುಮಾರು ಕ್ರಿ ಶ ೫೫೦ ರಲ್ಲಿ ಇದ್ದವನೆಂದು ಊಹಿಸಲ್ಪಟ್ಟಿರುವ ಕವಿ ಪರಮೇಷ್ಠಿಯ ಗ್ರಂಥದ ಆಧಾರದ ಮೇಲೆ ಜಿನಸೇನಾಚಾರ್ಯನು ತನ್ನ ಮಹಾ ಪುರಾಣವನ್ನು ರಚಿಸಿರುವನೆಂದು ಕನ್ನಡ 'ತ್ರಿಷಷ್ಟಿ ಶಲಾಕಾ ಪುರುಷ ಚರಿತೆ' ಯ ಕರ್ತೃವಾದ ಚಾವುಂಡರಾಯನ ಹೇಳಿಕೆ ಜಿನಸೇನನು ತನ್ನ ಗ್ರಂಥಾರಂಭದಲ್ಲಿ ಆತನನ್ನು ಸ್ಮರಿಸುತ್ತಾ

ಸ ಪೂಜ್ಯಃ ಕವಿಭಿರ್ಲೋಕೇ ಕವೀನಾಂ ಪರಮೇಶ್ವರಃ ।
ವಾಗರ್ಥ ಸಂಗ್ರಹಂ ಕೃತ್ಸ್ನಂ ಪುರಾಣಂ ಯಃ ಸಮಗ್ರಹೀತ್ ॥

ಎಂದು ತಾನು ಆತನಿಗೆ ಋಣಿಯೆಂಬುದನ್ನು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ ಜಿನಸೇನನು ಬರೆದು ಬಿಟ್ಟ ಮಹಾಪುರಾಣದ ಉಳಿದ ಭಾಗವನ್ನು ಪೂರ್ಣಗೊಳಿಸಿದ ಗುಣಭದ್ರಕವಿ ಗ್ರಂಥಾರಂಭದಲ್ಲಿ "ಕವಿ ಪರಮೇಶ್ವರ ನಿಗದಿತ ಗದ್ಯಕಥಾಮಾತೃಕಂ ಪುರೋಶ್ಚರಿತಂ" ಎಂದು ಹೇಳಿ, ಕವಿ ಪರಮೇಷ್ಠಿ ತನ್ನ ಕಾವ್ಯವನ್ನು ಗದ್ಯದಲ್ಲಿ ಬರೆದಿದ್ದನೆಂದು ಸೂಚಿಸುತ್ತಾನೆ ಆದಿಪಂಪ, ಚಾವುಂಡರಾಯ, ನೇಮಿಚಂದ್ರ, ಪಾರ್ಶ್ವಪಂಡಿತ, ನಯಸೇನ, ಗುಣವರ್ಮ ಮೊದಲಾದ ಕವಿಗಳೆಲ್ಲರೂ ಈತನನ್ನು ಮುಕ್ತಕಂಠರಾಗಿ ಹೊಗಳಿರುವರಾದರೂ ಇದುವರೆವಿಗೆ ಈತನ ಗ್ರಂಥವಾವುದೂ ಉಪ ಲಬ್ಧವಾಗಿಲ್ಲ ದೊರೆತಿರುವ ಪುರಾಣಗಳಲ್ಲಿ ಜಿನಸೇನಾಚಾರ್ಯನದೇ ಅತ್ಯಂತ ಪುರಾತನ ವಾದುದು ಅಲ್ಲದೆ ಇದರ ಬೃಹತ್ತಿಗೆ ತಕ್ಕ ಮಹತ್ತೂ ಇದರಲ್ಲಿದೆ ಆದುದರಿಂದ ಈತ ನಿಂದ ಮುಂದೆ ಬಂದ ಜೈನಕವಿಗಳೆಲ್ಲರೂ ಸಾಮಾನ್ಯವಾಗಿ ಈತನನ್ನ ಅನುಸರಿಸಿದರು

ಜಿನಸೇನಾಚಾರ್ಯನ ಅನಂತರ ಹಲವರು ಪುರಾಣ ಕರ್ತೃಗಳು ಆಗಿಹೋಗಿ ದ್ದಾರೆ ಅವರಲ್ಲಿ ಮುಖ್ಯರಾದ ಕೆಲವರ ಹೆಸರನ್ನು ಇಲ್ಲಿ ಸ್ಮರಿಸಬಹುದೆಂದು ತೋರುತ್ತದೆ

1. ಶೀಲಾಚಾರ್ಯ ಈತನ ಕಾಲ ಸುಮಾರು ೮೬೮ ಗ್ರಂಥದ ಹೆಸರು 'ಚೌಪನ್ನ ಮಹಾಪುರಿಸ ಚರಿಯ', ಪ್ರಾಕೃತದಲ್ಲಿದೆ, ಈತನು ಶ್ವೇತಾಂಬರ ಪಂಗಡಕ್ಕೆ ಸೇರಿದವನು ಕಥೆಯ ಸ್ಥೂಲರೇಖೆಗಳು ಜಿನಸೇನಾಚಾರ್ಯನವೇ ಆದರೂ ವಿವರಣೆಗಳಲ್ಲಿ ಬೇಕಾದಷ್ಟು ಬದಲಾವಣೆಗಳು ಕಂಡುಬರುತ್ತವೆ ಶ್ವೇತಾಂಬರ ಸಂಘದ ಮಹಾ ಪುರಾಣಗಳಲ್ಲಿ ಇದೇ ಮೊದಲನೆಯದು

2 ಅಮರಸೂರಿ—ಈತನ ಗ್ರಂಥಕ್ಕೂ 'ಮಹಾಪುರಿಸ ಚರಿಯ' ವೆಂಬ ಹೆಸರು. ಇದೂ ಪ್ರಾಕೃತದಲ್ಲಿಯೇ ಇದೆ ಬೃಹಟ್ಟಿಪ್ಪಣಿಕದ ಆಧಾರದ ಮೇಲೆ ಬರೆದುದು

3. ಮೇರುತುಂಗನ 'ಮಹಾಪುರಾಣ' ಇದು ಸಂಸ್ಕೃತದಲ್ಲಿದೆ

4 ಪುಷ್ಪದಂತನ 'ಮಹಾಪುರಾಣ'. ಇದು ಪ್ರಾಕೃತದಲ್ಲಿದೆ ರಾಷ್ಟ್ರಕೂಟ ಮಂತ್ರಿ ಭರತನ ಆಶ್ರಯದಲ್ಲಿದ್ದ ಲೋಕಕಲ್ಯಾಣಕ್ಕಾಗಿ ಮಹಾಪುರಾಣವನ್ನು ಬರೆಯತೊಡಗಿ ೯೫೯ ರಲ್ಲಿ ಆದಿಪುರಾಣವನ್ನು ರಚಿಸಿದ ಅಲ್ಲಿಗೇ ಗ್ರಂಥವನ್ನು ನಿಲ್ಲಿಸಿರಲು ಒಂದು ದಿನ ಸರಸ್ವತಿ ಕನಸಿನಲ್ಲಿ ಕಾಣಿಸಿಕೊಂಡು, ಗ್ರಂಥವನ್ನು ಮುಂದು ವರಿಸುವಂತೆ ಅಪ್ಪಣೆ ಮಾಡಿದಳಂತೆ ಅದರಂತೆ ಮುಂದುವರಿಸಿ ೯೬೫ ರಲ್ಲಿ ಗ್ರಂಥವನ್ನು ಪೂರೈಸಿದ ಮುಗಿದ ಗ್ರಂಥವನ್ನು ನೋಡಿಕೊಂಡಾಗ ಬಹು ತೃಪ್ತಿಕರವಾಗಿರುವಂತೆ

ಕಾಣಿಸಿತೇನೋ ! ಭಾರತ ಮುಗಿದ ಮೇಲೆ ವ್ಯಾಸಮಹರ್ಷಿ "ಯದಿಹಾಸ್ತಿ ತದನ್ಯತ್ರ, ಯನ್ನೇಹಾಸ್ತಿ ನ ತತ್ ಕ್ವಚಿತ್" ಎಂದು ಹೇಳಿಕೊಂಡಂತೆ ಇವನೂ

ಅತ್ರ ಪ್ರಾಕೃತಲಕ್ಷಣಾನಿ ಸಕಲಾ ನೀತಿಸ್ಥಿತಿಶ್ಛಂದಸಾ |
ಮರ್ಥಾಲಂಕೃತಯೋ ರಸಾಶ್ಚ ವಿವಿಧಾಸ್ತತ್ವಾರ್ಥ ನಿರ್ಣೀತಯಃ |
ಕಿಂಚಾನ್ಯದ್ಯದಿಹಾಸ್ತಿ ಜೈನಚರಿತೇ ನಾನ್ಯತ್ರ ತದ್ವಿದ್ಯತೇ |
ದ್ವಾವೇತೌ ಭರತೇಶ ಪುಷ್ಪದಶನೌ ಸಿದ್ಧಂ ಯಯೋರೀದೃಶವ್ ||

ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನ ಕವಿಯು ಮಹಾಪುರಾಣವಲ್ಲದೆ 'ನಾಯ ಕುಮಾರ ಚರಿ ಉ' 'ಜಸಹರ ಚರಿಉ' ಎಂಬ ಎರಡು ಪ್ರಾಕೃತಗ್ರಂಥಗಳನ್ನು ಬರೆದಿದ್ದಾನೆ

5 ಹೇಮಚಂದ್ರ—'ಶ್ವೇತಾಂಬರ ಪಂಗಡಕ್ಕೆ ಸೇರಿದವನು, ತ್ರಿಷಷ್ಟಿಶಲಾಕಾ ಪುರುಷಚರಿತೆ' ಈತನ ಗ್ರಂಥ ಇತರ ಮಹಾಪುರಾಣಗಳಂತೆ ಇದಾದರೂ ಮಹಾ ಬೃಹದ್ಗ್ರಂಥ ಮೂವತ್ತುನಾಲ್ಕು ಸಾವಿರ ಶ್ಲೋಕಗಳನ್ನೊಳಗೊಂಡ ಹತ್ತುಪರ್ವ ಗಳಿವೆ ಶೀಲಾಚಾರ್ಯನ 'ಚೌಪನ್ನ ಮಹಾಪುರಿಸ ಚರಿಯ' ವನ್ನು ಅನುಸರಿಸಿ ಹೇಮಚಂದ್ರನು ತನ್ನ ಗ್ರಂಥವನ್ನು ರಚಿಸಿರುವನಾದರೂ ಆತನಿಗೇನೂ ಹೆಚ್ಚು ಋಣಿ ಯಾಗಿಲ್ಲ 'ತ್ರಿಷಷ್ಟಿ ಶಲಾಕಾ ಪುರುಷ ಚರಿತೆ'ಯು ಉತ್ತಮವಾದ ಅಲಂಕಾರಗಳಿಂದ ತುಂಬಿ ಕಾವ್ಯಮಯವಾಗಿದೆ , ಅರ್ಥಗರ್ಭಿತವಾಗಿದೆ , ಮನೋಜ್ಞವಾಗಿದೆ ಹೇಮ ಚಂದ್ರನು ಬಹು ದೊಡ್ಡ ಕವಿ "ಕಲಿಕಾಲ ಸರ್ವಜ್ಞ" ನೆಂಬ ತನ್ನ ಬಿರುದು ಸಾರ್ಥಕ ವಾಗುವಂತೆ ವ್ಯಾಕರಣ, ಶಬ್ದಕೋಶ, ಛಂದಶ್ಶಾಸ್ತ್ರ, ಯೋಗಶಾಸ್ತ್ರ ಇತ್ಯಾದಿ ಹಲವು ಶಾಸ್ತ್ರಗ್ರಂಥಗಳ, ಸಾಹಿತ್ಯ ಗ್ರಂಥಗಳ ಕರ್ತೃ ಈತ ಕಥೆಯ ವಿಸ್ತರತೆ ವಿವರಣೆಗಳಲ್ಲಿ ಈತನು ಜಿನಸೇನನಿಂದ ಸ್ವಲ್ಪಮಟ್ಟಿಗೆ ಭಿನ್ನನಾಗಿದ್ದರೂ ಕಥೆಯ ಮೂಲ ರೇಖೆಗಳು ಜಿನಸೇನನವೇ

'ಮಹಾಪುರಾಣ'ವೆಂಬುದು ಜೈನಮತದ ಒಂದು ಪಾರಿಭಾಷಿಕ ಶಬ್ದ ಇದಕ್ಕೆ ಅರ್ಥ ಪುರಾತನ ಜೈನ ಮಹನೀಯರ ವಿಸ್ತಾರ ಚರಿತ್ರೆ ಎಂದು ಜೈನಪುರಾಣ ಗಳಲ್ಲಿ ಮಹಾಪುರುಷನೊಬ್ಬನ ಜೀವನಚರಿತ್ರೆಯನ್ನು ಪ್ರತಿಪಾದಿಸಿರುತ್ತದೆ ಮಹಾ ಪುರಾಣವಾದರೋ ಅರವತ್ತು ಮೂವರು ಪುರಾತನ ಚರಿತ್ರೆಗಳನ್ನು ವಿವರಿಸುತ್ತದೆ ಜಿನಸೇನಾಚಾರ್ಯನು ಮಹಾಪುರಾಣವೆಂಬ ಪದವನ್ನು ತ್ರಿಷಷ್ಟಿಲಕ್ಷಣವೆಂಬ ಪದಕ್ಕೆ ಸಮಾನವಾದುದಾಗಿ ಬಳಸಿದ್ದಾನೆ ಇದನ್ನೇ ಹೇಮಚಂದ್ರನು 'ತ್ರಿಷಷ್ಟಿ ಶಲಾಕಾ ಪುರುಷ ಚರಿತೆ' ಎಂದು ಕರೆದಿದ್ದಾನೆ ಪುಷ್ಪದಂತ 'ತ್ರಿಸಟ್ಠಿ ಮಹಾಪುರಿಸ ಗುಣಾ ಲಂಕಾರ' (ಎಂದರೆ ಅರವತ್ತು ಮೂವರು ಮಹಾಪುರುಷರ ಗುಣಗಳ ಗೌರವ) ಎಂಬ ಮಾತನ್ನೂ ಮಹಾಪುರಾಣವೆಂಬ ಮಾತನ್ನೂ ಸಮಾನಾರ್ಥದಲ್ಲಿ ಬಳಸಿದ್ದಾನೆ

ಹಿಂದೂ ಸಾಹಿತ್ಯದಲ್ಲಿ ಪುರಾಣವೆಂಬ ಮಾತಿಗೆ ಈ ಸೂತ್ರವಿದೆ

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣವಮ್ ॥

ಈ ಸೂತ್ರದಿಂದ ಬಹಳ ಭಿನ್ನವಾಗಿಲ್ಲ ಜೈನಪುರಾಣಗಳಾದರೂ ಜಿನಸೇನನು ಮಹಾಪುರಾಣವನ್ನು ಬರೆಯುತ್ತಾ

ತೀರ್ಥೇಶಾಮಪಿ ಚಕ್ರೇಶಾಂ ಹಲಿನಾಮರ್ಧಚಕ್ರಿಣಾಮ್ ।
ತ್ರಿಷಷ್ಟಿ ಲಕ್ಷಣಂ ವಕ್ಷ್ಯೇ ಪುರಾಣಂ ತದ್ವಿಷಾಮಪಿ ॥
ಪುರಾತನಂ ಪುರಾಣಂ ಸ್ಯಾತ್ ತನ್ಮಹನ್ಮಹದಾಶ್ರಯಾತ್ ।
ಮಹದ್ಭಿರುಪದಿಷ್ಟತ್ವಾನ್ಮಹಾ ಶ್ರೇಯೋನುಶಾಸನಾತ್ ॥
ಕವಿಂ ಪುರಾಣಮಾಶ್ರಿತ್ಯ ಪ್ರಸ್ರುತತ್ವಾತ್ಪುರಾಣತಾ ।
ಮಹತ್ವಂ ಸ್ವಮಹಿಮ್ನೈವ ತಸ್ಯೇತ್ಯನ್ಯೈರ್ನಿರುಚ್ಯತೇ
ಮಹಾಪುರುಷ ಸಂಬಂಧಿ ಮಹಾಭ್ಯುದಯ ಶಾಸನವಮ್ ।
ಮಹಾಪುರುಷ ಮಾಮ್ನಾತಮತ ಏತನ್ಮಹರ್ಷಿಭಿಃ ॥

ನಾನು ಅರವತ್ತುಮೂವರು ಪುರಾತನರ ಚರಿತ್ರೆಯನ್ನು ಹೇಳುತ್ತೇನೆ ಗ್ರಂಥಕ್ಕೆ ಪುರಾಣವೆಂದು ಹೆಸರು ಏಕೆಂದರೆ—ಇದು ಪುರಾತನರ ಚರಿತ್ರೆ ಇದನ್ನು ಮಹಾ ಪುರಾಣವೆಂದು ಕರೆಯುವುದು ಇದು ಮಹನೀಯರ ಚರಿತ್ರೆ ಅಥವಾ ಮಹರ್ಷಿಗಳು ಹೇಳಿರುವುದು ಅಥವಾ ಮಹಾ—ನಿರ್ವಾಣವನ್ನು ಬೋಧಿಸಿರುವುದರಿಂದ ಇತಿಹಾಸ ಒಬ್ಬರ ಕಥೆ , ಮಹಾಪುರಾಣ ಅರವತ್ತು ಮೂವರ ಕಥೆ

ಹಿಂದುಗಳಿಗೆ ರಾಮಾಯಣ ಮಹಾಭಾರತಗಳು ಹೇಗೋ ಜೈನರಿಗೆ ಮಹಾ ಪುರಾಣಗಳು ಹಾಗೆ ಆದರೆ ಮಹಾಭಾರತ ರಾಮಾಯಣಗಳಲ್ಲಿ ಕಂಡುಬರುವ ಐಕ್ಯ ಇಲ್ಲಿ ಕಂಡುಬರುವುದಿಲ್ಲವಾದುದರಿಂದ ಇದನ್ನು 'ಎಪಿಕ್' ಎಂಬ ಅರ್ಥದಲ್ಲಿ ಕರೆಯಲಾಗುವುದಿಲ್ಲ

ಅರವತ್ತು ಮೂವರು ಪುರಾತನರ ಕಥೆಗಳನ್ನೊಳಗೊಂಡ ಮಹಾಪುರಾಣಗಳಲ್ಲದೆ ಆದಿಜಿನನ ಕಥೆಯನ್ನು ಮಾತ್ರವೇ ಒಳಗೊಂಡ ಅನೇಕ ಗ್ರಂಥಗಳು ಸಂಸ್ಕೃತದಲ್ಲೂ ಕನ್ನಡ ಮೊದಲಾದ ಪ್ರಾಂತಭಾಷೆಗಳಲ್ಲೂ ಹುಟ್ಟಿಕೊಂಡಿವೆ ಇವುಗಳಲ್ಲಿ ಅರ್ಹದ್ದಾಸ ಕೃತ "ಪುರುದೇವ ಚಂಪೂ" ಎಂಬ ಸಂಸ್ಕೃತ ಗ್ರಂಥವು ಬಹು ಪ್ರೌಢವಾದುದು ಅರ್ಹದ್ದಾಸನು ಸಂಸ್ಕೃತ ಸಾಹಿತ್ಯವು ಶಬ್ದಾಡಂಬರದ ಕೀಳುಮಟ್ಟಕ್ಕಿಳಿದ ಕಾಲದವನು ಆದ್ದರಿಂದ ಶಬ್ದಾಲಂಕಾರಗಳ ಉರುಬು ಹೆಚ್ಚು ಚರ್ವಿತ ಚರ್ವಣ ವಾದ ವಿಷಯ ; ಪಾಂಡಿತ್ಯದ ಕತ್ತರಿಯಲ್ಲಿ ಸಿಕ್ಕಿ ತತ್ತರಿಸುತ್ತದೆ, ಪ್ರತಿಭೆ ಇದಲ್ಲದೆ ಕ್ರಿ.ಶ ೧೪೫೦ರಲ್ಲಿದ್ದ ಶುಭಶೀಲಗಣಿಯೆಂಬ ಸಂಸ್ಕೃತ ಕವಿ "ಭರತಾದಿ ಕಥಾ" ಎಂಬ ಗ್ರಂಥವನ್ನು ಬರೆದಿರುವಂತೆ ತಿಳಿದುಬರುತ್ತದೆ ಇದರಲ್ಲಿ ಬಹುಶಃ ಭರತನ ಕಥೆಯನ್ನು ವಿಸ್ತಾರವಾಗಿ ಪ್ರತಿಪಾದಿಸಿರಬಹುದೋ ಏನೋ ಹಾಗಿದ್ದಲ್ಲಿ ಭರತನ ಕಥೆಯನ್ನು ಪ್ರಧಾನವಾಗಿ ತೆಗೆದುಕೊಂಡು ಮೊದಲು ಬರೆದ ಕೀರ್ತಿ ಈತನಿಗೆ ಸಲ್ಲಬೇಕಾಗುವುದು.

ಆದಿಜಿನನ ಕಥೆಯನ್ನು ಒಳಗೊಂಡ ಶ್ರೀ ಪುರಾಣವೆಂಬ ಗ್ರಂಥವೊಂದು ತಮಿಳಿನಲ್ಲಿರುವಂತೆ ತಿಳಿದುಬರುತ್ತದೆ

ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಮಹಾಪುರಾಣದ ಪ್ರವೇಶವಾಗಿಲ್ಲವಾದರೂ ಹಲವು ತೀರ್ಥಂಕರರ ಮತ್ತು ಇತರ ಮಹಪೆಸ್ರೀಯರ ಜೀವನ ಚರಿತ್ರೆಗಳು ಹುಲುಸಾಗಿಯೇ ಬೆಳೆದುಕೊಂಡಿವೆಯೆಂದು ಹೇಳಬಹುದು ಇವುಗಳಲ್ಲಿ ಆದಿಕವಿ ಪಂಪನ 'ಆದಿಪುರಾಣ'ವು ಅಗ್ರಪೂಜಾರ್ಹವಾದುದು ಆದರೆ ಕವಿ ಇಲ್ಲಿ ಬಹುಮಟ್ಟಿಗೆ ಸಂಗ್ರಹಕಾರನಾಗಿಬಿಟ್ಟಿದ್ದಾನೆ ಜಿನಸೇನ ಕವಿಯ ಆದಿಪುರಾಣವನ್ನು ಹಿತಮಿತವಾಗಿ ಸಂಗ್ರಹಿಸಿದ್ದಾನೆ ಪುರಾಣಗ್ರಂಥವಾದುದರಿಂದ ಬದಲಾವಣೆಗಳಿಗೆ ಕೈಹಾಕಲು ಹಿಂಜರಿದಿರುವಂತೆ ತೋರುತ್ತದೆ ಪ್ರತಿಪಾದನಾ ರೀತಿ ಸುಂದರವಾಗಿದ್ದರೂ ಅನೇಕ ವೇಳೆ ಜಿನಸೇನ ಕವಿಯ ಭಾಗಗಳನ್ನು, ಮಾತುಗಳನ್ನು ಹಾಗೆಯೇ ಅನಾಮತ್ತಾಗಿ ಕನ್ನಡಕ್ಕೆ ಭಾಷಾಂತರಿಸುತ್ತಾನೆ

ಈತನ ತರುವಾಯ ಇದೇ ವಿಷಯವನ್ನು ಕುರಿತು ಬರೆದವನೆಂದರೆ ಚಾವುಂಡರಾಯ ಈತನ ವೈಶಿಷ್ಟ್ಯವೆಂದರೆ ಕಾವ್ಯವನ್ನು ಗದ್ಯದಲ್ಲಿ ಬರೆದಿರುವುದು ಪುರಾತನರ ಗದ್ಯಕಾವ್ಯಗಳಲ್ಲಿ ಇದಕ್ಕೊಂದು ಹಿರಿಯಸ್ಥಾನವಿದೆ ಈತನೂ ಜಿನಸೇನನ ಆದಿಪುರಾಣವನ್ನು ಸಂಗ್ರಹಿಸಿದ್ದಾನೆ ಆದರೆ ಪಂಪನ ಜಾಣ್ಮೆ ಈತನಲ್ಲಿಲ್ಲ ಧರ್ಮದ ಕಡೆ ಬಾಗಿರುವ ಈತನ ದೃಷ್ಟಿಯಲ್ಲಿ ಭರತನ ಅರವತ್ತು ಸಹಸ್ರ ವರ್ಷಗಳ ದಿಗ್ವಿಜಯಕ್ಕೆ ಎರಡು ಪುಟಗಳು ಸಾಕು, ಸಮವಸರಣಮಂಟಪದ ವರ್ಣನೆಗೆ ಮಾತ್ರ ಎಂಟು ಪುಟಗಳು ಬೇಕು, ಕಾವ್ಯಮಯವಾಗಿ ಅತ್ಯಂತ ನಾಟಕೀಯವಾಗಿರುವ ಭರತ-ಬಾಹುಬಲಿಗಳ ಪ್ರಕರಣವನ್ನು ಪ್ರತಿಪಾದಿಸಲು ಒಂದು ಪುಟವನ್ನು ಕೂಡ ವೆಚ್ಚಮಾಡಲಾರ

'ಆದಿ ತೀರ್ಥಂಕರನ ಭವಾವಳಿ' ಎಂಬ ಅನಿರ್ದಿಷ್ಟ ಕರ್ತೃಕವಾದ ಕೈಬರೆಹದ ಪ್ರತಿಯೊಂದು ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಡಿ ಎಲ್ ನರಸಿಂಹಾಚಾರ್, ಎಂ ಎ ಇವರ ಬಳಿ ಇದೆ ಇದು ಪಂಪ ಮಹಾಕವಿಯ 'ಆದಿ ಪುರಾಣ' ಗ್ರಂಥದ ಗದ್ಯಾನುವಾದವಷ್ಟೆ ಅದರ ಶೈಲಿಯಿಂದ ಅಷ್ಟೇನೂ ಪ್ರಾಚೀನಗ್ರಂಥವಿರಲಾರದೆಂದು ಊಹಿಸಬಹುದು. ಇತ್ತೀಚೆಗೆ ಹಾಸನದ ಕಡೆಯ ಬೊಮ್ಮಣ್ಣಕವಿಯೆಂಬುವರೊಬ್ಬರು ಆದಿ ಪುರಾಣದ ಕಥೆಯನ್ನು ಯಕ್ಷಗಾನರೂಪದಲ್ಲಿ ಬರೆದಿದ್ದಾರೆ

ಇದನ್ನೆಲ್ಲ ನೋಡಿದರೆ ಆದಿಜಿನನ ಮತ್ತು ಭರತನ ಕಥೆ ಎಷ್ಟು ಜನಾದರಣೀಯವಾಗಿದ್ದಿತೆಂಬುದು ಕಂಡುಬರಲಾರದೆ ಇರದು ಜನರಿಗೆ ಅಷ್ಟು ಅಭಿರುಚಿಯಿದ್ದುದನ್ನು ಕಂಡೇ ರತ್ನಾಕರ ಕವಿಯು ಹತ್ತು ಸಹಸ್ರ ಪದ್ಯಗಳ ತನ್ನ ಬೃಹದ್ಗ್ರಂಥವನ್ನು ಸಾಂಗತ್ಯದಲ್ಲಿ ಬರೆಯಲು ಧೈರ್ಯಮಾಡಿರಬೇಕು

ಜೈನರ ಮೇಲಿನ ಕಾವ್ಯಗಳಲ್ಲಿ ಕಂಡುಬರುವ ಆದಿ ತೀರ್ಥಂಕರ ವೃಷಭನಾಥನ ಜೀವನ ಚರಿತ್ರೆಗೂ ಸಂಸ್ಕೃತ ಭಾಗವತದ ಪಂಚಮಸ್ಕಂಧದ ದ್ವಿತೀಯಾಧ್ಯಾಯದಲ್ಲಿ

ಕಂಡುಬರುವ ಋಷಭದೇವನ ಕಥೆಗೂ ಏನಾದರೂ ಸ್ವಲ್ಪ ಸಂಬಂಧವಿರಬಹುದೆ? ಆದಿ ತೀರ್ಥಂಕರ ವೃಷಭನಾಥನು ನಾಭಿ-ಮರುದೇವಿಯರ ಮಗನಾದರೆ ಭಾಗವತದ ಋಷಭನು ನಾಭಿ-ಮೇರುದೇವಿಯರ ಮಗ ಇಬ್ಬರಿಗೂ ಅನೇಕ ಮಂದಿ ಮಕ್ಕಳಾಗುತ್ತಾರೆ ಇಬ್ಬರ ಹಿರಿಯ ಮಗನೂ ಭರತ ಇಬ್ಬರೂ ಸ್ವಯಂ ಜ್ಞಾನಿಗಳಾಗಿ ಹಿರಿಯ ಮಗನಿಗೆ ಪಟ್ಟಕಟ್ಟಿ ದಿಗಂಬರರಾಗಿ ದೇಶಸಂಚಾರ ಮಾಡುತ್ತಾ ಚಿರಕಾಲ ತಪಸ್ಸಿನಿಂದ ಮುಕ್ತಿ ಮಾರ್ಗವನ್ನು ಸಾಧಿಸುತ್ತಾರೆ ವೃಷಭನ ಮತಕ್ಕೆ ಪಾಷಂಡಿಯೊಬ್ಬನು ಪ್ರತಿದ್ವಂದ್ವಿಯಾಗಿ ಹುಟ್ಟಿಕೊಂಡಂತೆ ಋಷಭನ ಮತಕ್ಕೂ ಅರ್ಹನೆಂಬ ದಕ್ಷಿಣ ಕರ್ಣಾಟಕದ ರಾಜನೊಬ್ಬನು ಪ್ರತಿಕಕ್ಷಿಯಾಗಿ ನಿಂತು ಪಾಷಂಡಮತವನ್ನು ಹರಡುತ್ತಾನೆ ಎರಡು ಕಡೆಯೂ ಭರತನ ಪಾತ್ರವು ಆದರ್ಶನೀಯವಾದುದು ಭಾಗವತದ ಪ್ರಕಾರ ಭರತನು ಹತ್ತು ಸಹಸ್ರ ವರ್ಷಗಳ ಕಾಲ ರಾಜ್ಯವಾಳಿ ಅನಂತರ ಪಿತೃದತ್ತ ರಾಜ್ಯವನ್ನು ಮಕ್ಕಳಿಗೆ ಹಂಚಿಕೊಟ್ಟು ವೈರಾಗ್ಯಶೀಲನಾಗಿ ತಪಸ್ಸು ಮಾಡುತ್ತಿರುತ್ತಾನ ಹೀಗಿರುವಾಗ ಒಮ್ಮೆ ಈತನ ಆಶ್ರಮದ ಪಕ್ಕದಲ್ಲಿ ಸಿಂಹದ ಗರ್ಜನೆಯಿಂದ ಹಳ್ಳವನ್ನು ದಾಟಿದ ಗಬ್ಬದ ಜಿಂಕೆಯೊಂದು ನೀರಿನೊಳಕ್ಕೆ ಮರಿಯನ್ನು ಪ್ರಸವಿಸುತ್ತದೆ ಹಾರಿದ ಜಿಂಕೆ ದರಿಕಂದರದಲ್ಲಿ ಬಿದ್ದು ಸತ್ತುಹೋಗುತ್ತದೆ ನೀರಿನಲ್ಲಿ ತೇಲುತ್ತ ಹೋಗುತ್ತಿದ್ದ ಹರಿಣ ಶಿಶುವನ್ನು ಕಂಡು ಭರತನು ಕರುಣೆಯಿಂದ ಅದನ್ನೆತ್ತಿ ಸಾಕಲು ಆರಂಭಿಸುತ್ತಾನ ಅನಂತರ ಭರತನ ಅನುಷ್ಠಾನಾದಿಗಳು ಹ್ರಸ್ವವಾಗುತ್ತಾ ಬರುತ್ತವೆ "ಸಾಧವ. ಉಪಶಮಶೀಲಾ॰ ಕೃಪಣ ಸುಹೃದಃ ಏವಂ ವಿಧಾರ್ಥಂ ಸ್ವಾರ್ಥಾನಪಿ ಗುರುತರಾಂ ಉಪೇಕ್ಷಂತೇ" ಹೀಗೆ ನಿಶ್ಚಯಿಸಿದ ಭರತನಿಗೆ ಸ್ನಾನ, ಧ್ಯಾನ, ಜಪ ತಪಗಳೆಲ್ಲವೂ ಜಿಂಕೆಯಾಗಿ ಹೋಗುತ್ತದೆ ಕೊನೆಗೆ ಮರಣ ಕಾಲದಲ್ಲಿ ಜಿಂಕೆಯ ವಿಷಯವನ್ನೇ ಚಿಂತಿಸುತ್ತಾ, ಕಣ್ಣೀರಿಡುತ್ತಿರುವ ಅದನ್ನೇ ನೋಡುತ್ತಾ ಸತ್ತು, ಮರುಜನ್ಮದಲ್ಲಿ ಜಿಂಕೆಯಾಗಿ ಜನ್ಮಿಸುತ್ತಾನೆ ಆದರೆ ಪೂರ್ವಜನ್ಮದ ತಪಃಪ್ರಭಾವದಿಂದ ಜನ್ಮಾಂತರ ಜ್ಞಾನವನ್ನು ಪಡೆದು ಪಶ್ಚಾತ್ತಾಪಯುಕ್ತನಾಗಿ "ಅಹೋ ಕಷ್ಟಂ ಭ್ರಷ್ಟೋಽಹಂ" ಎಂದುಕೊಂಡು ಪೂರ್ವಜನ್ಮದ ತನ್ನ ಕ್ಷೇತ್ರಕ್ಕೆ ಹೋಗಿ ಆತ್ಮಸಹಚರನಾಗಿದ್ದು ದೇಹಾನಂತರ ಬ್ರಾಹ್ಮಣನೊಬ್ಬನ ಹೊಟ್ಟೆಯಲ್ಲಿ ಬ್ರಾಹ್ಮಣ ಬ್ರುವನಾಗಿ ಹುಟ್ಟುತ್ತಾನೆ ಇದು ಅವನ ಜಡಭರತ(?) ಜಗತ್ತಿಗೆ ಉನ್ಮತ್ತನಾದ ಜಡರಾಂಧಬಧಿರನಾಗಿ ಕಾಣಿಸಿಕೊಳ್ಳುತ್ತಾ ಇರಲು ಅವನ ಸೋದರರು ಅವನನ್ನು ಒಂದು ದ್ವಿಪಾದಪಶುವೆಂದು ಭಾವಿಸಿ ಕಡೆಯ ಗೂಟಕ್ಕೆ ಕಟ್ಟಿಹಾಕುತ್ತಾರೆ ಈ ಜಡಭರತ ಒಳಗೆ ಬ್ರಹ್ಮಾನಂದವನ್ನು ಅನುಭವಿಸುತ್ತಿದ್ದರೂ ತೋರಿಕೆಗೆ ಎಕರನಾಗಿ ಹೊಲ ಕಾಯುತ್ತಾ ಇರುತ್ತಾನ ಹೀಗಿರಲು ಒಂದು ದಿನ ಇವನಿದ್ದ ಮಾರ್ಗವಾಗಿ ಹೋಗುತ್ತಿದ್ದ ವೃಷಲಪತಿ ಎಂಬ ಕಳ್ಳರ ಯಜಮಾನ ಪುತ್ರಕಾಮನಾಗಿ ಕಾಳಿಕಾದೇವಿಗೆ ನರಬಲಿಯನ್ನು ಕೊಡಲು ಮೃಗವನ್ನು ಹುಡುಕುತ್ತಾ ಕೈಗೆ ಸಿಕ್ಕಿದ ಈ ಶಂಭಣ್ಣನನ್ನು ಎಳೆದೊಯ್ದು ಕಾಳಿಯ [illegible] ಆದರೆ ಕೊಲ್ಲಲು ಕತ್ತಿಯನ್ನು ಮೇಲಕ್ಕೆತ್ತಿದಾಗ ಕಾಳಿಯ

ದೇಹಾದ್ಯಂತವೂ ಪಂಚಾಗ್ನಿಯ ಮಧ್ಯದಲ್ಲಿ ತಪ್ತಗೊಂಡಂತಾಯಿತು, ಈ ಬ್ರಹ್ಮ ಭೂತನಾದ ಬ್ರಾಹ್ಮಣ ಕುಮಾರನ ಮಹಾತ್ಮೆಯಿಂದ ಆಗ ಚಂಡಿ ಭೀತಳಾಗಿ ಎದ್ದುಬಂದು ಕೊಲೆಪಾತಕರ ತಲೆಗಳನ್ನು ಕಿತ್ತು ರಕ್ತಪಾನ ಮಾಡಿ, ರುಂಡಗಳನ್ನು ಚೆಂಡಾಡಿದಳು ದೇಹಾತ್ಮಭಾವಾತೀತನಾದ ಭರತ ಕೂದಲು ಕೊಂಕದೆ, ಚಲ ವಿಚಲಿತನಾಗದೆ ಹಿಂದಿರುಗಿ ಬಂದು ಹೊಲದಲ್ಲಿ ಕುಳಿತನು

ಹೀಗಿರಲು ಒಂದು ದಿನ ಸವ್ವೀರಪತಿ ರಹೋಗಣನು ಕಪಿಲಾಶ್ರಮಕ್ಕೆ ಹೋಗುತ್ತಾ ದಾರಿಯಲ್ಲಿ ಒಬ್ಬ ಬೋವಿಯು ಸಾಲದಾಗಿರಲು ಒಬ್ಬನನ್ನು ಹುಡುಕಿ ತರುವಂತೆ ಚರರನ್ನಟ್ಟಿದನು ದೈವವಶಾತ್ ತೋರಿಕೆಯ ಈ ಮಂಕಣ್ಣ ಅವರ ಕೈಗೆ ಸಿಕ್ಕಿಬಿದ್ದ ಅವನ ಹೆಗಲ ಮೇಲೆ ಪಲ್ಲಕ್ಕಿಯ ಭಾರ ಏರಿ ಕುಳಿತಿತು ಅದರ ಕಡೆ ಲಕ್ಷ್ಯವಿಲ್ಲದೆ ಮುಂದುವರಿಯುತ್ತಿದ್ದ ಜಡಭರತನ ಅಜಾಗರೂಕತೆಯಿಂದ ಪಲ್ಲಕ್ಕಿಯು ಜೋಲಿ ಹೊಡೆಯುತ್ತಾ ಇರಲು, ತನುಸಾವ್ಯತನಾದ ರಾಜ ಕುಪಿತನಾಗಿ ನಿಷ್ಠುರವಾಕ್ಯಗಳ ನ್ನಾಡುತ್ತಾನೆ ಪುನಃ ಪುನಃ ಆತನ ತರ್ಜನೆ ಗರ್ಜನೆಗಳಿಗೆ ಒಳಗಾದ ಜಡಭರತ ಬಾಯ್ಬಿಟ್ಟು ಸೂಕ್ತಿಮುಕ್ತಾಫಲಗಳಿಂದ ಅವನ ಅಹಂಕಾರತಮಸ್ಸನ್ನಿಳಿಸಿ ಕಣ್ಣು ತೆರೆಯುವಂತೆ ಮಾಡುತ್ತಾನೆ ಜ್ಞಾನಸಂಪಾದನೆಗೆಂದು ಹೋಗುತ್ತಿದ್ದ ರಾಜ ತನ್ನ ಉದ್ದಿಷ್ಟ ಕಾರ್ಯವು ದಾರಿಯಲ್ಲೇ ಸಫಲವಾಗಲು ಭರತನಿಂದಲೇ ಉಪದೇಶ ಪಡೆಯುತ್ತಾನೆ

ಮೇಲಿನ ಕಥೆಯಲ್ಲಿ ಕಂಡು ಬರುವ ಭರತನ ಎರಡು ಜನ್ಮಗಳ ಅನುಕ್ರಮ ವಾದ ಭೋಗ ಯೋಗಗಳ ಕಥೆಯನ್ನು ತೆಗೆದುಕೊಂಡು ಭರತನ ಕಥೆಯನ್ನು ಜೈನಪುರಾಣಕರ್ತರು ಸೃಷ್ಟಿಸಿಕೊಂಡಿರಬಹುದೆ ? ಸಾಹಿತ್ಯಚರಿತ್ರೆಯ ದೃಷ್ಟಿಯಿಂದ ಮೇಲೆಯೇ ತೋರಿಸಿರುವಂತೆ ಜೈನ ಪುರಾಣಗಳು ಬಹು ಪುರಾತನವಾದವುಗಳು. ಭಾಗವತವು ಈಚಿನ ಗ್ರಂಥ ಆದರೆ ಭಾಗವತ ಕಥೆಗಳು ಇತರ ಪುರಾತನ ಪುರಾಣ ಗಳಲ್ಲಿ ಕಂಡುಬರಬಹುದೋ ಏನೋ ? ಅಲ್ಲದೆ ಜನರಲ್ಲಿ ಜನಜನಿತವಾಗಿ ಹರಡಿದ್ದ ಜನಪದ ಸಾಹಿತ್ಯವು ಎರಡಕ್ಕೂ ಮೂಲವಸ್ತುವಾಗಿರಬಹುದೋ ಏನೋ ? ಈ ವಿಷಯದಲ್ಲಿ "ಇದಮಿತ್ಥಂ" ಎಂದು ನಿರ್ಧರವಾಗಿ ಹೇಳುವುದು ನನಗೆ ಬಹು ಸಾಹಸದ ಮಾತಾಗಿ ಕಾಣುತ್ತದೆ

ರತ್ನಾಕರವರ್ಣಿಯ ಒಂದು ಹಿರಿಮೆ ಅಥವಾ ವೈಶಿಷ್ಟ್ಯ ಭರತನನ್ನೇ ಕಥಾ ನಾಯಕನನ್ನಾಗಿ ಮಾಡಿಕೊಂಡು ವಿಸ್ತಾರವಾಗಿ ಪ್ರತಿಪಾದಿಸಿರುವುದು ಆದಿ ಕವಿ ಪಂಪ ತನ್ನ ಆದಿ ಪುರಾಣದ ದಿಗ್ವಿಜಯ ಪ್ರಕರಣದಲ್ಲಿ ಭರತ—ಬಾಹುಬಲಿಗಳ ಆಖ್ಯಾನವನ್ನು ಸುಂದರವಾಗಿ ಚಿತ್ರಿಸಿದ್ದನು. ಅದನ್ನು ವಿಸ್ತರಿಸಿ ಭರತನಲ್ಲಿ ಕಥಾ ನಾಯಕನ ಉದಾತ್ತತೆಯನ್ನು ಅಳವಡಿಸಿ, ಆರೋಪಿಸಿ ಪ್ರತಿಪಾದಿಸಿದ್ದಾನೆ, ನಮ್ಮ ಕವಿ

# ಕಥಾವಸ್ತುವಿನಲ್ಲಿ ಕವಿಯು ಮಾಡಿಕೊಂಡಿರುವ ಮಾರ್ಪಾಟುಗಳು

ಈಗ ಉಪಲಬ್ಧವಿರುವ ಜೈನ ಮಹಾಪುರಾಣಗಳಲ್ಲಿ ಜಿನಸೇನನ ಮಹಾಪುರಾಣವೇ ಅತ್ಯಂತ ಪ್ರಾಚೀನವಾದುದು ಅದರಲ್ಲಿ ಭರತನನ್ನು ಕುರಿತ ಕಥೆಯ ಮೂಲ ರೇಖೆಗಳು ಇಷ್ಟು ಮಾತ್ರ—

ಆದಿತೀರ್ಥಂಕರ ವೃಷಭನಾಥನು ನೀಲಾಂಜನೆಯ ನೃತ್ಯದಿಂದ ನಿರ್ವೇಗಗೊಂಡು ತನ್ನ ಮಕ್ಕಳಿಗೆ ರಾಜ್ಯವನ್ನು ಹಂಚಿಕೊಟ್ಟು ತಾನು ತಪಸ್ಸಾಧನೆಯಿಂದ ಮುಮುಕ್ಷುವಾಗಿರುತ್ತಾನೆ ಆತನ ಹಿರಿಯ ಮಗನಾದ ಭರತನು ಅಯೋಧ್ಯೆಯಲ್ಲಿಯೂ ಕಿರಿಯ ಹೆಂಡತಿಯ ಮಗನಾದ ಬಾಹುಬಲಿ ಪೌದನಪುರದಲ್ಲಿಯೂ ರಾಜ್ಯವಾಳುತ್ತಿರುತ್ತಾರೆ. ಕೆಲವು ಕಾಲಾನಂತರ ಭರತನ ಆಯುಧಾಗಾರದಲ್ಲಿ ಚಕ್ರರತ್ನವೊಂದು ಉದಯಿಸುತ್ತದೆ ಚಕ್ರವರ್ತಿ ಸೂಚಕವಾದ ಅದನ್ನು ಮುಂದಿಟ್ಟುಕೊಂಡು, ಆತನು ಜಗತ್ತನ್ನೆಲ್ಲಾ ಜಯಿಸಿ 'ಪ್ರಥಮ ಚಕ್ರಿ' ಯಾಗುತ್ತಾನೆ ಅಪ್ರತಿಹತವಾದ ಆತನ ಶೌರ್ಯಕ್ಕೆ ಮಾರ್ಮಲೆತ ಇದಿರಾಳುಗಳೆ ಇಲ್ಲ ಇನ್ನೇನು, ಊರನ್ನು ಪ್ರವೇಶಿಸಿದೊಡನೆಯೇ ಚಕ್ರವರ್ತಿಪಟ್ಟವನ್ನು ವಹಿಸಬೇಕು, ಅಷ್ಟರಲ್ಲಿ ಮುಂದೋಡುತ್ತಿದ್ದ ಚಕ್ರ ಹಟಾತ್ತಾಗಿ ನಿಂತು ಹೋಗುತ್ತದೆ, ಬಾಹುಬಲಿ ಪ್ರತಿಭಟಿಸಿ ನಿಂತು ನುಂಗಲಾರದ ತುತ್ತಾಗುತ್ತಾನೆ ಈ ಚರಮಾಂಗರಿಬ್ಬರ ಘೋರಸಂಗ್ರಾಮದಿಂದ ಅಕಾಲಪ್ರಳಯವಾಗುವುದನ್ನು ತಪ್ಪಿಸುವುದಕ್ಕಾಗಿ ದೇವತೆಗಳು ನಡುವೆ ಪ್ರವೇಶಿಸಿ ಅವರನ್ನು ಬಾಹುಯುದ್ಧ, ಜಲಯುದ್ಧ, ದೃಷ್ಟಿಯುದ್ಧಗಳಲ್ಲಿ ನಿಯೋಗಿಸುತ್ತಾರೆ ಇಟ್ಟ ಸ್ಪರ್ಧೆಗಳಲ್ಲೆಲ್ಲಾ ಸೋತು ಅಪಮಾನಿತನಾದ ಭರತನು ಅವಿವೇಕದಿಂದ ಅಧರ್ಮಕ್ಕೆ ಕೈಹಾಕುತ್ತಾನೆ— ನಿರಾಯುಧನಾದ ಬಾಹುಬಲಿಯ ಮೇಲೆ ಚಕ್ರರತ್ನವನ್ನು ಪ್ರಯೋಗಿಸುತ್ತಾನೆ ಕೋಪದಿಂದ ದುರ್ಗತಿಗಿಳಿದ ಅಣ್ಣನನ್ನು ಕಂಡು ಬಾಹುಬಲಿ ನಿರ್ವೇಗಗೊಳ್ಳುತ್ತಾನೆ, ಸನ್ಯಸನ ಸ್ವೀಕಾರದಿಂದ ಮೋಕ್ಷಮಾರ್ಗಾವಲಂಬಿಯಾಗುತ್ತಾನೆ ಭರತನು ನಿಷ್ಕಂಟಕವಾದ ರಾಜ್ಯವನ್ನು ಹಲವು ಕಾಲ ಸುಖವಾಗಿ ಆಳುತ್ತಿದ್ದು, ಒಮ್ಮೆ ಕನ್ನಡಿಯಲ್ಲಿ ಪ್ರತಿಬಿಂಬಿಸಿದ ನರೆಗೂದಲನ್ನು ಕಂಡು, ವೈರಾಗ್ಯಗೊಂಡು, ತಪಸ್ಸಿನಿಂದ ಮೋಕ್ಷಮಾರ್ಗ ಹಿಡಿಯುತ್ತಾನೆ.

ಈ ಕಥೆಯ ಮೂಲರೇಖೆಗಳನ್ನು ರತ್ನಾಕರನು ಬಳಸಿಕೊಂಡಿರುವನಾದರೂ ಅವುಗಳಲ್ಲಿ ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ ಅವುಗಳಿಗೆ ತನ್ನದೇ ಆದ ಬಣ್ಣಗಳನ್ನು ತುಂಬಿ ರಂಗುರಂಗಾಗಿ ಚಿತ್ರಿಸಿದ್ದಾನೆ. ಜಿನಸೇನನೇ ಆದಿಯಾಗಿ ಎಲ್ಲ ಮಹಾಪುರಾಣ ಕರ್ತೃಗಳೂ ಭರತನ ಕಥೆಯನ್ನು ಆದಿಜಿನನ ಕಥೆಗೆ ಅಂಗವಾಗಿ [illegible]ಡಿ. ಭರತನ ಕಥೆಯನ್ನೇ ಪ್ರತ್ಯೇಕವಾಗಿ ತೆಗೆದುಕೊಂಡು ಪ್ರತಿಪಾದಿಸುವ

ಗೋಜಿಗೆ ಪೂರ್ವದ ಮತ್ತಾವ ಕವಿಯೂ (ಶುಭಶೀಲಗಣಿಯ 'ಭರತಾದಿಕಥಾ' ?) ಕೈ ಹಾಕಿರಲಿಲ್ಲ ಆ ಕೀರ್ತಿ ರತ್ನಾಕರನಿಗೆ ಸೇರಿದುದು ,

ಕವಿಯು ಮೂಲದಿಂದ ಮಾಡಿಕೊಂಡಿರುವ ಬದಲಾವಣೆಗಳು ಮುಖ್ಯವಾಗಿ ಎರಡು ತೆರನಾದವು—ಗ್ರಂಥದಲ್ಲಿ ಇದ್ದ ಭಾಗಗಳ ವಿವರಣೆಗಳಲ್ಲಿಯೇ ಮಾಡಿಕೊಂಡಿರುವ ಬದಲಾವಣೆಗಳು , ಹೊಸದಾಗಿ ಸೃಷ್ಟಿಸಿ ಗ್ರಂಥಕ್ಕೆ ಸೇರಿಸಿರುವ ಭಾಗಗಳು ಮೊದಲಜಾತಿಗೆ ಸೇರಿದ ಬದಲಾವಣೆಗಳು ಮುಖ್ಯವಾಗಿ ಕಥಾನಾಯಕನ ಹಿರಿಮೆಯನ್ನು ಹೆಚ್ಚುಗೊಳಿಸಲು ಉಪಯುಕ್ತವಾಗಿವೆ ಗ್ರಂಥವಿಭಾಗದಲ್ಲಿಯೇ ಕವಿ ತನ್ನ ಕಥಾನಾಯಕನಿಗೆ ಹಿರಿದೊಂದು ಸ್ಥಾನವನ್ನು ಗಳಿಸಿಕೊಡಲು ಹೊರಟಿರುವಂತೆ ತೋರುತ್ತದೆ ಜೈನ ಕವಿಗಳು ಸಾಮಾನ್ಯವಾಗಿ ತೀರ್ಥಂಕರರ ಜೀವನ ಚರಿತ್ರೆಯನ್ನು 'ಗರ್ಭಾವತರಣ' ಇತ್ಯಾದಿ ಪಂಚಕಲ್ಯಾಣಗಳಾಗಿ ವಿಭಾಗಿಸಿಕೊಂಡು ಬರೆವ ಪದ್ಧತಿ ಭರತನು ಜಿನನಲ್ಲ , ಸಂಪ್ರದಾಯದ ಪಂಚಕಲ್ಯಾಣಗಳನ್ನು ಇಲ್ಲಿ ತರುವಂತಿಲ್ಲ ಆದರೇನು ? ಭರತನು ಸಿದ್ಧ ಜೀವಿ , ಮೋಕ್ಷವನ್ನು ಸೂರೆಗೊಂಡವನು , ಪಂಚಕಲ್ಯಾಣಗಳಿಗೆ ಅರ್ಹ ಆದ್ದರಿಂದ ತನ್ನ ಕಥಾನಾಯಕನಿಗೇ ಪ್ರತ್ಯೇಕವಾದ ಪಂಚಕಲ್ಯಾಣಗಳನ್ನು ಸಾಧಿಸಿಕೊಡಹೊರಟಿರುವಂತೆ ಕಾಣುತ್ತದೆ, ನಮ್ಮ ಕವಿ ಇದಕ್ಕಾಗಿ ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಅರ್ಕಕೀರ್ತಿವಿಜಯ, ಮೋಕ್ಷವಿಜಯ—ಎಂಬ ಐದು ವಿಜಯಗಳಲ್ಲಿ ಭರತನ ಕಥೆಯನ್ನು ಬೆಳೆಸಿದ್ದಾನೆ

'ಭೋಗವಿಜಯ'ವು ಭರತಚಕ್ರೇಶ್ವರನ ಭೋಗಸಾಮ್ರಾಜ್ಯದ ವಿಸ್ತೃತ ವ್ಯವಹರಣೆಯನ್ನು ದಿಗ್ದರ್ಶನ ಮಾಡಿಸುವ ಭಾಗ ಜಿನ ಜೀವನದ 'ಗರ್ಭಾವತರಣ' ನಿರೂಪಣೆಯಲ್ಲಿ ಆತನ ಜನ್ಮಾಂತರಗಳ ಸುಖಭೋಗಗಳನ್ನು ಪ್ರತಿಪಾದಿಸಿರುತ್ತಾರೆ, ಅವುಗಳ ಕ್ಷಣಭಂಗುರತೆಯನ್ನು ಎತ್ತಿ ತೋರುವುದಕ್ಕಾಗಿ ಈ ಸುಖ ಭೋಗವಿಜಯದಲ್ಲಿ ಭರತನಿಗೆ ಸ್ವಾಧೀನವಾಗಿದೆ ವ್ಯತ್ಯಾಸವಿಷ್ಟೆ—ತೀರ್ಥಂಕರ ಭೋಗಿಸುವುದು ಸ್ವರ್ಗದಲ್ಲಿ, ಭರತ ಭೋಗಿಸುವುದು ಭೂಲೋಕದಲ್ಲಿ ಸುಖಗಳಲ್ಲಿ ಹೆಚ್ಚು ವ್ಯತ್ಯಾಸವೇನೂ ಇಲ್ಲ ಭೂಲೋಕದ ಸೌಖ್ಯ ಸ್ವರ್ಗಸುಖದ ನೆತ್ತಿಯಮೇಲೆ ಮೆಟ್ಟಿದಂತಿದೆ ಭರತನ ಜನನ, ಕೌಮಾರ, ಬಾಲ್ಯಗಳ ವಿಚಾರದಲ್ಲಿ ಪೂರ್ವಗ್ರಂಥಗಳು ಸಾಕಷ್ಟು ವಿವೇಚಿಸಿರುವುದರಿಂದ ಅವುಗಳನ್ನು ಪುನಃ ವಿವರಿಸುವ ಅಗತ್ಯ ಕವಿಗೆ ಕಂಡುಬರಲಿಲ್ಲ ಇದನ್ನು ಖಚಿತವಾಗಿ ತಿಳಿಸುವ ತಾಳ್ಮೆಯೂ ಇಲ್ಲ ನೇರವಾಗಿ ಭರತನ ಭೋಗ ಸಾಮ್ರಾಜ್ಯಕ್ಕೇ ಧುಮ್ಮಿಕ್ಕುತ್ತಾನೆ

ಎರಡನೆಯದಾದ 'ದಿಗ್ವಿಜಯಪರ್ವ'ವು ಮುನಿಮಾರ್ಗೋಕ್ತವಾದುದು , ಕವಿಯ ಸ್ವಂತಕಲ್ಪನೆಯಲ್ಲ ಅಲ್ಲಲ್ಲಿ ಕೆಲವು ಚಿಕ್ಕ ಪುಟ್ಟ ಮಾರ್ಪಾಟುಗಳನ್ನು ಮಾತ್ರ ಮಾಡಿಕೊಂಡಿದ್ದಾನೆ ನಮ್ಮ ಕವಿ ಪುರಾಣೋಕ್ತನಾದ ಭರತ ತನ್ನ ಭುಜದಂಡ ಪ್ರಹಾರಗಳಿಂದ ಶೌರ್ಯಮದಗ್ರಹಗ್ರಸ್ತರಾದ ಹಲವು ರಾಜರ ನೆತ್ತಿಗೆ ಏರಿರುವ ಪಿತ್ತವನ್ನು ಇಳಿಸುತ್ತಾನೆ , ಅವರನ್ನು ಸದೆದು ಅವರ ಐಶ್ವರ್ಯವನ್ನು

ಸೂರೆಗೊಂಡು, ಕಾಲ್ಗೆರಗಿಸಿಕೊಳ್ಳುತ್ತಾನೆ "ಅಂಬರದಿಂದುಳ್ಕುವ ಉಳ್ಕುವಂ ಪೋಲ್ದ" ಶರಗಳಿಂದ ಪೊಡಿಸಿಯನ್ನು ನಡುಗಿಸಿ ತನ್ನ ಪರಾಕ್ರಮವನ್ನು ಮೆರೆಯುತ್ತಾನೆ ಆತನು ವಜ್ರಕಾಂಡವೆಂಬ ತನ್ನ ವಿಜಯ ಕಾರ್ಮುಕಕ್ಕೆ 'ಸುರಕರಿ ಕರಾನುಕಾರಿಯಪ್ಪ ನಿಜಭುಜದಂಡಮಂ ನೀಡಿಲ್ಲದೇರಿಸಿ, ನೀವಿ, ಜೇವೊಡೆದಾಗ

ಲವಣಾಂಭೋರಾಶಿ ತೂಳ್ದುಚ್ಚಳಿಸಲೊಡರಿಸಿತ್ತೀ ಧರಾಭಾಗಮಂ ಪ ।
ತ್ತುವಿಡಲ್ ಭೂಭೃತ್ಕುಳಂಗಳ್ ಬಗೆದವು ಜಳಧಿ ದ್ವೀಪ ಮಧ್ಯಸ್ಥ ನಾನಾ ।
ದಿವಿಜಾವಾಸಂಗಳಭ್ರಕ್ಕೊಗೆದುವು ಭರದೊಳ್ ಕೂಡೆ ದಿಕ್ಪಾಲಲೀಲಾ ।
ಭವನಂಗಳ್ ಬಿರ್ದುವಿಂತಾಯ್ತಖಿಳ ಮಹಿತಳಕ್ಷೋಭಮಾ ಚಕ್ರಿಯಿಂದಂ ॥

ಹೀಗೆ ಮಹೀತಳವನ್ನೆಲ್ಲಾ ಕ್ಷೋಭೆಗೊಳಿಸುತ್ತಾ, ರಾಜರುಗಳನ್ನೆಲ್ಲಾ ಬಾಯ್ಕೇಳಿಸುತ್ತಾ, ಆಸಮುದ್ರಾಂತವಾದ ಭೂಮಂಡಲವನ್ನು ಗೆದ್ದು ತನ್ನ ರಾಜಧಾನಿಗೆ ಹಿಂದಿರುಗುತ್ತಾನೆ ಅದುವರೆಗೆ ಮಾರ್ಗಸೂಚಕನಾಗಿದ್ದ ಚಕ್ರ ಮುಂದೆ ಹೋಗದೆ ನಿಂತುದನ್ನು ಕಂಡು ಚಕ್ರಿಯ ಅನುಯಾಯಿಗಳು

ಆವಂಗೆ ಕಾಲಚಕ್ರಮ
ನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ ಶೌ ॥
ರ್ಯಾವಿರ್ಭೂತ ದವಾನಳ
ನಾವನ ಚತುರಂಗಬಲಮುನಿಂ ಸುಟ್ಟಪುದೋ ॥

ಎಂದು ಉತ್ಸಾಹಿತರಾಗಿ ಮಸೆಗುತ್ತಾರೆ ಭರತನ ಕೋಪವೂ ಉಕ್ಕಿತು, ತನಗೂ ಶತ್ರುಗಳಿರುವರೆಂಬ ಚಕ್ರದ ಮೂದಲಿಕೆಯನ್ನು ಕಂಡು 'ವೀರರಸೋದಾರ ಗಂಭೀರ ವಚನ ರಚನೆಗಳಿಂದ' ಅಂತಕನ ಮುಖದಲ್ಲಿ ಎಡೆಯನ್ನು ಬಯಸುವ ಮೂಢನಾರಿರಬಹುದೆಂದು ವಿಚಾರಿಸಿದ ತನ್ನ ತಮ್ಮಂದಿರೇ ತನ್ನ ವೈರಿಗಳು, ಅದರಲ್ಲಿಯೂ ಬಾಹುಬಲಿ ಮುಂದಾಳು—ಎಂಬ ಪುರೋಹಿತ ವಚನದಿಂದ ಕಿಡಿಗೊಂಡ ಭರತನ ಕಣ್ಣ ಕೆಂಪು ದಿಕ್ಕುಗಳಿಗೆಲ್ಲಾ ಕೆಂಪೆರಚಿತಂತೆ! ಮನದಲ್ಲಿ ಬೆಳೆದ ಮುನಿಸು ದಿಗ್ವನಿತೆಯರಿಗೆ ರಕ್ತಬಲಿಯನ್ನು ಚೆಲ್ಲುವಂತೆ ಕಾಣಿಸಿಕೊಂಡಿತಂತೆ! ಅವಡುಗಚ್ಚಿ ಬದ್ಧ ಭ್ರುಕುಟಿತನಾಗಿ 'ಅಕಾಲ ಯಮರಾಜ ಲೀಲೆಯಂ ಕೈಕೊಂಡು' ತನ್ನ ಪಾದಕ್ಕೆರಗಿ ಸುಖವನ್ನನುಭವಿಸುವಂತಿದ್ದರೆ ಅನುಭವಿಸಲಿ, ಇಲ್ಲದಿದ್ದರೆ ಪುರುಪರಮೇಶ್ವರನ ಪಾದಕ್ಕೆರಗಿ ತಪವನ್ನನುಭವಿಸಬೇಕಾದೀತು ಎಂಬ ಶಾಸನವನ್ನು ಹೊತ್ತ ದೂತರನ್ನು ಸಹೋದರರ ಬಳಿಗೆ ಕಳುಹಿಸಿದ "ಈ ಶಾಸನಮಂ ನೆತ್ತಿಯೊಳಾಂತು ಬನ್ನಿಂ, ಎರಗಿಂ ಚಕ್ರೇಶ ಪಾದಾಬ್ಜದೊಳ್" ಎಂಬ ದೂತರ ಧೂರ್ತನುಡಿಗಳಿಂದ ಮನನೊಂದ ತಮ್ಮಂದಿರೆಲ್ಲರೂ ಸಮವಸರಣಮಂಟಪಕ್ಕೆ ಹೋಗಿ ದೀಕ್ಷಾವಿಧಿಯಿಂದ ಧನ್ಯರಾದರು. ಬಾಹುಬಲಿಯೊಬ್ಬನು ಮಾತ್ರ ಕ್ಷಾತ್ರಧರ್ಮವನ್ನು ಕೈಕೊಂಡು ಇದಿರು ನಿಂತ ಭರತನ ದಿಗ್ವಿಜಯಪ್ರಪಂಚದಲ್ಲಿ ಖಾಡಾಖಾಡಿ ಯುದ್ಧ ನಡೆಯುವ ಸನ್ನಿವೇಶ

ಸಂಪ್ರಾಪ್ತವಾಯಿತು ಆದರೆ ಮಂತ್ರಿಗಳ ಚಾತುರ್ಯದಿಂದ ಇದು ನಿವಾರಿತವಾಗಿ ಧರ್ಮಯುದ್ಧ ನಡೆಯಿತು ಬಾಹುಬಲಿ ಭರತನಿಗಿಂತಲೂ ಎಷ್ಟೋ ಪಟ್ಟು ಹೆಚ್ಚು ಸತ್ವಶಾಲಿ, ಭರತನು ಸೋತುಹೋಗುತ್ತಾನೆ ಬಾಹುಬಲಿಯ ಸತ್ವಪ್ರಭೆಯಲ್ಲಿ ಈತನು ತೇಜೋಹೀನನಾಗಿ ಹೋಗುತ್ತಾನೆ ಇಷ್ಟೆ ಅಲ್ಲ, ಅಧರ್ಮಕ್ಕೂ ಕ್ಯೆಯಿಕ್ಕಿ ವಿಫಲ ನಾಗಿ, ಸಿಗ್ಗಿನಿಂದ ತಲೆ ತಗ್ಗಿಸಿಕೊಳ್ಳುತ್ತಾನೆ ತನ್ನ ಉದ್ಧಟತನ ಮುಂಗೋಪ ಗಳಿಂದ ಪ್ರೇಕ್ಷಕರ ಸಹಾನುಭೂತಿಯನ್ನು ಕಳೆದುಕೊಳ್ಳುತ್ತಾನೆ

ಆದರೆ, ರತ್ನಾಕರನ ಕೈಯಲ್ಲಿ ಭರತನ ಪಾತ್ರ ಮುಗಿಲನ್ನು ಮುಟ್ಟಿದೆ ಲೌಕಿಕ ದಲ್ಲಿ ಅಂಕುರಿಸಿದ ಆ ಪಾತ್ರ ಅಲೌಕಿಕತೆಯಲ್ಲಿ ಅರಳಿದೆ ತ್ರಿಷಷ್ಟಿಶಲಾಕಾಪುರುಷರಲ್ಲಿ ಒರ್ವನಾಗಿ ಚರಮತನುವಾಗಿರುವ ತನ್ನ ನಾಯಕ ಉದ್ಧತನಂತೆ ವರ್ತಿಸುವುದು ನಮ್ಮ ಕವಿಗೆ ಸರಿಹೋಗಲಿಲ್ಲ ಭರತನ ಬಾಯಲ್ಲಿ ಭೂಮಿತೂಕದ ಮಾತುಗಳನ್ನಿಟ್ಟು ಆತನನ್ನು ಮಹಾನುಭಾವನನ್ನಾಗಿ ಮಾಡಿದ್ದಾನ ಭರತನು ಸಾಮೋಪಾಯದಿಂದ ತಮ್ಮಂದಿರನ್ನು ದಾರಿಗೆ ತರಲು ಪ್ರಯತ್ನಿಸುತ್ತಾನೆ ಆದರೆ ತಮ್ಮಂದಿರೇ ಔದ್ಧತ್ಯವನ್ನು ಕೈಕೊಂಡು 'ತಂದೆ ಕೊಟ್ಟ ಉಂಬಳಿಯೊಳಗಿರುವ ತಾವು ಇವನಿಗೇಕೆ ಅನತರಾಗಿ ಬಾಳಬೇಕು ?' ಎಂಬ ಈರ್ಷೆಯನ್ನು ಕೈಕೊಂಡು ತಪೋನಿರತರಾಗುತ್ತಾರೆ ಇದನ್ನು ಕೇಳಿ ಅತ್ಯಂತ ವ್ಯಥಿತಾಂತಃಕರಣನಾದ ಭರತಚಕ್ರಿಯು ಉಳಿದೊಬ್ಬ ಬಾಹುಬಲಿ ಯನ್ನು ಒಲಿಸಲೆಂದು ವಚನಚತುರನಾದ ದಕ್ಷಿಣನನ್ನು ಆತನ ಬಳಿಗೆ ಕಳಿಸುತ್ತಾನೆ ಭರತನ ಸ್ನೇಹಿತನಾದ ಆತನ ಮಾತುಗಳಾದರೊ, ಬಹು ಸ್ನಿಗ್ಧ ಸ್ನೇಹಪೂರ್ಣವಾದವು "ಚಕ್ರವರ್ತಿಯಾದ ಭರತನಿಗೆ ತನ್ನ ತಮ್ಮನನ್ನು ಕಣ್ತುಂಬ ನೋಡುವ ಅರ್ತಿ ಯಾಗಿದೆ ಚರಮ ತನುಗಳಾದ ನೀವಿರ್ವರು ಒಂದೆಡೆ ಸೇರಿದುದನ್ನು ಕಾಣಲು ಪಡೆಯೆಲ್ಲವೂ ಉತ್ಸಾಹಪಡುತ್ತಿದೆ ನಿನ್ನ ಬಾಗಿಲ ಬಳಿಯೇ ನಿಂತಿರುವ ಚಕ್ರಿಯ ಬಳಿಗೆ ಬಾ' ಎಂದು ಆತ ಕರೆಯುತ್ತಾನೆ ಆದರೆ ಕಲಿಯುಗದ ಮದನನಾದ ಬಾಹುಬಲಿ ಕಕ್ಕಸ ಕದನಕ್ಕೇ ಕೈಯಿಕ್ಕುತ್ತಾನೆ ತಾಯಿಯ ಹಿತವಚನಗಳಿಗೆ ಕಿವುಡಾಗುತ್ತಾನ, ಹಿತವರ ನುಡಿಗಳನ್ನು ಹುಂಕಾರದಿಂದ ಪರಿಹರಿಸುತ್ತಾನೆ ನಲ್ಮೆಯ ಹೆಂಡಿರ ಸೂನೃತ ವಚನಗಳಿಂದ ಕೆಂಗೆಂಡವಾಗಿ ಅವರನ್ನು ಚಾವಟಿಯಿಂದ ಹೊಡೆಯು ತ್ತಾನೆ, ನಿಷ್ಕರುಣಿಯಾಗಿ, ಆತನ ಖಂಡತುಂಡಾದ ಮಾತುಗಳನ್ನು ಕೇಳಿ ಭರತನು ಮಿಡುಕುತ್ತಾನೆ ಆತನೇನೂ ಶಕ್ತಿಹೀನನಲ್ಲ ಆತನ ಅಲೌಕಿಕ ಪರಾಕ್ರಮಕ್ಕೆ ಪಡೆಯಲ್ಲವನ್ನೂ ಕಿರುಬೆರಳಿನಲ್ಲಿ ತೂಗಾಡಿಸಿದುದೇ ಸಾಕ್ಷಿ ಆದರೂ ತನ್ನ ತೋಳ್ತೀಟೆ ಯನ್ನು ತೀರಿಸಿಕೊಳ್ಳುವುದು ತಮ್ಮನ ಮೇಲಲ್ಲ ಯುದ್ಧ ಅನಿವಾರ್ಯವಾಗಿ ತೋರಿದಾಗಲೂ ಚಕ್ರಿ ಸಾಮೋಪಾಯಕ್ಕೆ ಶರಣು ಹೋಗುತ್ತಾನೆ—ತನ್ನ ನುಡಿ ಜಾಣ್ಮೆಯಿಂದ ತಮ್ಮನನ್ನು ಹಾದಿಗೆ ತರುತ್ತಾನ ಯುದ್ಧವನ್ನು ನಿವಾರಿಸುತ್ತಾನ ತನ್ನ ಉದ್ಧಟತನಕ್ಕಾಗಿ ಬಾಹುಬಲಿ ನಾಚಿ ಅಣ್ಣನಲ್ಲಿ ದಯಾಭಿಕ್ಷೆಯನ್ನು ಬೇಡುತ್ತಾನೆ, ತಪವನ್ನು ಕೈಕೊಳ್ಳುತ್ತಾನೆ. ಇದನ್ನು ಕಂಡು ಅಣ್ಣನಿಗೆ ಅಪಾರ ಸಂಕಟವಾಗುತ್ತದೆ.

ತನ್ನಂತೆಯೇ ಸಂಕಟಪಡುತ್ತಿರುವ ಬಾಹುಬಲಿಯ ತಾಯಿಯನ್ನೂ ಸಮಾಧಾನಗೊಳಿಸಿ ಸೈ ಎನ್ನಿಸಿಕೊಳ್ಳುತ್ತಾನೆ ಬಾಹುಬಲಿಗೆ ಘೋರತಪಸ್ಸಿನಿಂದಲೂ ದಿವ್ಯಜ್ಞಾನದರ್ಶನವಾಗದಿರುವುದನ್ನು ಕಂಡು ಮರುಗಿ ದಿವ್ಯಜ್ಞಾನೋಪದೇಶದಿಂದ ಆತನಿಗೆ ಆತ್ಮಶುದ್ಧಿಯನ್ನು ದೊರಕಿಸಿಕೊಡುತ್ತಾನೆ

ಮೇಲಿನ ಸಂದರ್ಭವಿವರಣೆಯಲ್ಲಿ ರತ್ನಾಕರ ಕವಿಯು ಶ್ವೇತಾಂಬರ ಪಂಥಕ್ಕೆ ಸೇರಿದ ಹೇಮಚಂದ್ರನನ್ನು ಸ್ವಲ್ಪಮಟ್ಟಿಗೆ ಅನುಸರಿಸುತ್ತಿದ್ದಂತೆ ಕಂಡುಬರುತ್ತದೆ ಆತನ 'ತ್ರಿಷಷ್ಟಿ ಶಲಾಕಾಪುರುಷ ಚರಿತ್ರ' ದಲ್ಲಿ ಬರುವ ಭರತನ ಪಾತ್ರ ಪ್ರಥಮಾನುಯೋಗದ ಭರತನ ಪಾತ್ರದಿಂದ ಸ್ವಲ್ಪಮಟ್ಟಿಗೆ ಭಿನ್ನವಾಗಿದೆ ತಾನು ಅಟ್ಟಿದ ಓಲೆಗೆ ಬಾಹುಬಲಿ ಕೋಪಗೊಂಡುದನ್ನು ಕೇಳಿ ಭರತನು ಸಂತೋಷದಿಂದ ಆತನ ಧೈರ್ಯಶೌರ್ಯಾದಿಗಳನ್ನು ಪ್ರಶಂಸಿಸುತ್ತಾನೆ ಮಂತ್ರಿಗಳ ಪ್ರೇರಣೆ ಪ್ರೋತ್ಸಾಹಗಳಿಲ್ಲದಿದ್ದರೆ ಆತನು ಆ ವಿಷಯವನ್ನು ಅಲ್ಲಿಗೆ ನಿಲ್ಲಿಸಿ ತಮ್ಮನ ಮೇಲಿನ ತನ್ನ ಅಪಾರ ಪ್ರೇಮವನ್ನು ಮೆರೆಯುತ್ತಿದ್ದನೇನೊ ! ಬಾಹುಬಲಿ ಕಾಲ್ಕೆದರಿ ಯುದ್ಧಕ್ಕೆ ನಿಂತುದನ್ನು ಕಂಡು ಯುದ್ಧವನ್ನು ನಿವಾರಿಸುವುದಕ್ಕಾಗಿ ಗಗನಚರರು ಪಂಚಾಯಿತಿ ನಡೆಸುತ್ತಾರೆ ಭರತನಲ್ಲಿ ಅವರಿಗೆ ಅಪಾರ ನಂಬಿಕೆ ಆತನನ್ನೇ ಮೊದಲು ಬೇಡಿಕೊಳ್ಳುತ್ತಾರೆ ಆತನು ಬಹು ಅನುನಯವಾಗಿ ಉತ್ತರ ಹೇಳುತ್ತಾನೆ —' ನನಗೆ ತಮ್ಮನ ಮೇಲೆ ದ್ವೇಷವಿಲ್ಲ ಚಕ್ರ ಪುರಪ್ರವೇಶ ಮಾಡಲೊಲ್ಲದು ತಮ್ಮ ಮನೆಗೆ ವಿಧೇಯನಾಗದಿದ್ದರೆ ಅಷ್ಟೇ ಹೋಯಿತು ನಮ್ಮೂರಿಗೆ ಒಮ್ಮೆ ಬರಲಿ ಚಕ್ರ ಒಳಕ್ಕೆ ಬಂದಮೇಲೆ ಅವನ ರಾಜ್ಯಕ್ಕೆ ಮತ್ತಷ್ಟು ನನ್ನ ರಾಜ್ಯವನ್ನು ಸೇರಿಸಿ ಕೊಡುತ್ತೇನೆ ' ಇದಕ್ಕೆ ಬಾಹುಬಲಿ ಕೊಡುವ ಉತ್ತರ ಬಿರುಸಾಗಿದೆ—' ಅಣ್ಣ ಯುದ್ಧಕ್ಕೆ ಬಂದರೆ ನಾನೇನು ಹಣ್ಣು ತಿನ್ನುತ್ತಾ ಕೂತಿರುವುದಿಲ್ಲ ನಾನಾಗಿ ಕಾಲ್ಗೆದರಿ ಯುದ್ಧಕ್ಕೇನೂ ಹೋಗುವುದಿಲ್ಲ. ಕಡೆಗೆ ದೇವತೆಗಳ ನಿಶ್ಚಯದಂತೆ ದೃಷ್ಟಿ ಜಲ ಬಾಹು ಯುದ್ಧಗಳು (ಹೇಮಚಂದ್ರನು ಇನ್ನೂ ಹಲವು ವಿಧದ ಯುದ್ಧಗಳನ್ನು ಅಣ್ಣತಮ್ಮಂದಿರಲ್ಲಿ ತಂದು ಒಡ್ಡಿದ್ದಾನೆ) ನಡೆದು ಭರತನ ಚಕ್ರಪ್ರಯೋಗ, ಬಾಹುಬಲಿಯ ವಿರಾಗಗಳಲ್ಲಿ ಕೊನೆಯಾಗುತ್ತವೆ ಹೀಗೆ ಹೇಮಚಂದ್ರನ ಅಭಿಮಾನ ಬಾಹುಬಲಿಗಿಂತಲೂ ಭರತನ ಮೇಲೆ ಅಧಿಕವಾಗಿರುವಂತೆ ತೋರಿಬರುತ್ತದೆ

---

1 ಶ್ವೇತಾಂಬರ ಪಂಥದವರು ಈ ಸಹೋದರ ಯುದ್ಧವನ್ನು ಸಂಪ್ರದಾಯವಾಗಿ ಹೇಳುವರಾದರೂ, ಅಷ್ಟಾಗಿ ಮೆಚ್ಚುವುದಿಲ್ಲವೆಂದು ತೋರುತ್ತದೆ "ಅಭಿಧಾನರಾಜೇಂದ್ರ"ದಲ್ಲಿ ಭರತನ ದಿಗ್ವಿಜಯ, ಆತನಿಗೆ ಬೇರೆ ಬೇರೆ ರತ್ನಗಳು ವಶವಾದುದು—ಇದನ್ನೆಲ್ಲಾ ವಿಸ್ತಾರವಾಗಿ ವರ್ಣಿಸಿದ್ದರೂ, ಭರತ ಬಾಹುಬಲಿಗಳ ದ್ವಂದ್ವಯುದ್ಧಪ್ರಸಕ್ತಿ ಎಂದಿಲ್ಲ ಭಾಷ್ಯಕಾರನು ಮಾತ್ರ "ಅತ್ರ ಚ ಬಾಹುಬಲ್ಯಾದಿ ನವನವತಿ ಭ್ರಾತೃರಾಜ್ಯನಾಮುಪ್ಮಸಾತ್ ಕರಣಪೂರ್ವಕಂ ಚಕ್ರರತ್ನಸ್ಯಾಯುಧಶಾಲಾಯಾಂ ಪ್ರವೇಶನಮನ್ಯತ್ರ ಪ್ರಸಿದ್ಧಮಪಿ ಸೂತ್ರಕಾರೇಣ ನೋಕ್ತಮಿತಿ ನೋಚ್ಯತೇ ಇತಿ।

ರತ್ನಾಕರಕವಿಗೆ ಭರತನ ಯುದ್ಧಪ್ರಸಕ್ತಿಯೇ ಅಸಹ್ಯಕರವೆಂದು ತೋರಿತು 'ಅಹಿಂಸಾ ಪರಮೋ ಧರ್ಮಃ' ಎಂದು ಘೋಷಿಸುವ ಜಿನಮತದ ತ್ರಿಷಷ್ಟಿಶಲಾಕಾ ಪುರುಷರಲ್ಲಿ ಒರ್ವನಾದ ಭರತನು ಹಿಂಸೆಗೆ ಕೈನೀಡಿ ಒರಟುತನದಿಂದ ವ್ಯವಹರಿಸುವುದು ಆತನಿಗೆ ಸರಿದೋರಲಿಲ್ಲ ಆದುದರಿಂದ ಯುದ್ಧವನ್ನು ನಿವಾರಿಸಿಯೇ ಬಿಟ್ಟಿದ್ದಾನೆ ಹೀಗೆ ಮಾಡಿದುದುದಕ್ಕೆ ಆತನೇ ಕೊಡುವ ಕಾರಣಗಳನ್ನು ನೋಡಿ—

ಜಲದೃಷ್ಟಿ ಮುಷ್ಟಿ ಯುದ್ಧದಿ ಚಕ್ರಿ ತಮ್ಮಗೆ |
ಗೆಲದೋರಿ ನುಡಿದರಂತದನು !
ಕೆಲರು ಕಾದಿಯೆ ಗೆಲ್ದನೆಂಬರು, ಚಕ್ರಿಯ |
ಗೆಲ ಸಮರ್ಥನೆ ಪುಷ್ಪಬಾಣ ? |

ಅಭಿನವ ಮದನನಾದ ಬಾಹುಬಲಿ ತನ್ನ ಮೋಹಶಕ್ತಿಯಿಂದ ಜಗತ್ತನ್ನೇ ಗೆಲ್ಲಬಹುದು. ಆದರೆ ಚಕ್ರಿ ಮೋಹದ ಸಂಕಲಿಗೆ ಸಿಕ್ಕುವವನಲ್ಲ 'ಹಗಲಂತೆ ಬೆಳದಿಂಗಳಿಹುದೆನೆ ಸೂರ್ಯ ರ | ಶ್ಮಿಗಳ ನೂಂಕುವ ಶಕ್ತಿಯುಂಟೆ ?' ಭರತನು ತಮ್ಮನ ಮೇಲೆ ಚಕ್ರವನ್ನು ಪ್ರಯೋಗಿಸಿದನೆಂಬ ಮಾತಾದರೂ ಕೇವಲ ಪಾಪಿಗಳ ಕೀಳ್ನುಡಿ 'ರಣಭಂಗವಾಗಬಾರದು ತಮ್ಮಗೆಂದು ಸ | ದ್ಗುಣ ವಚನದಿ ಜಯಿಸಿದನು || ಕ್ಷಣದಿ ಮುಕ್ತಿಯ ಕೊಂಬ ಮೃದುಹೃದಯಗೆ ಕ್ರೂರ ಗುಣವುಂಟೆ ? ' ಇನ್ನು ಭರತನು ಪ್ರಯೋಗಿಸಿದ ಚಕ್ರ ಬಾಹುಬಲಿಗೆ ಬಲವಂದು ಆತನ ಆಜ್ಞಾನುಸಾರಿಯಾಗಿ ವರ್ತಿಸಿ ತೆಂಬ ಮಾತೂ ಸುಳ್ಳಿನ ಕಂತೆ ಭರತ ಚಕ್ರಿ, ಬಾಹುಬಲಿ ಅರ್ಧಚಕ್ರಿ ಅರ್ಧಚಕ್ರಿ ಚಕ್ರಿಯಮೇಲೆ ಚಕ್ರವನ್ನು ಪ್ರಯೋಗಿಸಿದರೆ ಅದು ಪ್ರಯೋಗಿಸಿದವನನ್ನೇ ಸಂಹಾರ ಮಾಡುತ್ತದೆ, ಚಕ್ರಿ ಪ್ರಯೋಗಿಸಿದರೆ ಇದಿರಾಳಿಯನ್ನು ನಿಮಿಷಾರ್ಧದಲ್ಲಿ ಸಂಹರಿಸು ತ್ತದೆ. ಮತ್ತೊಬ್ಬರ ಮಾತೇಕೆ ? ಬಾಹುಬಲಿಯೇ ಹೇಳುವುದನ್ನು ಕೇಳಿ 'ದೇವರು ಕ್ಷಮಿಸುವುದೆನ್ನದು ತಪ್ಪೆಂದು | ಭಾವಶುದ್ಧದೊಳು ಕೈ ಮುಗಿದಾಗ' ' ದೂಷಣವನು ತೊಡಗಿದೆ ನಾನು, ದೇವರು | ಭೂಷಣಗೈದಿರಿ ನನ್ನ || ದೋಷವೆನ್ನನೆ ಫುದಿದಲೆವುದು '

ಹೀಗೆ ಸಂಪ್ರದಾಯಬದ್ಧವಾದ ಪುರಾಣಕಥೆಯಲ್ಲಿ ತನಗೆ ಸೂಕ್ತದೋರಿದಂತೆ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾದರೆ ಕವಿಯ ಆತ್ಮಪ್ರತ್ಯಯ ಅಪಾರವಾದು ದಾಗಿರಬೇಕು ತನ್ನ ದರ್ಶನದಲ್ಲಿ ತನಗೆ ನಿಸ್ಸ್ಪೃಷ್ಟವಾದ ನಂಬಿಕೆ ಇದ್ದಿರಬೇಕು ನಿಜವಾಗಿ ರತ್ನಾಕರ 'ಎಂಟಿರ್ದೆ' ಯವನು ಪಂಪನಂತಹ—ಭಾರತವನ್ನು ಬೇಕಾದಂತೆ ಬದಲಾಯಿಸಿ ನಿರಂಕುಶಮತಿಯನ್ನು ಮೆರೆದ—ಮಹಾಕವಿ ಕೂಡ ಜೈನಪುರಾಣಕ್ಕೆ ಕೈಹಾಕಿದಾಗ ಬರಿಯ ಸಂಗ್ರಹಕಾರನಾಗಿದ್ದಾನೆ, ಅನೇಕ ವೇಳೆ ಭಾಷಾಂತರಕಾರ ನಾಗಿ ಹೋಗಿದ್ದಾನೆ ಆದರ ರತ್ನಾಕರ ಧೈರ್ಯದಿಂದ ತನಗೆ ತೋರಿದ ಬದಲಾವಣೆ ಗಳನ್ನು ಮಾಡಿಯೇ ತೀರಿದ ಬಹುಶಃ ಇದರ ಫಲವಾಗಿ ಏಳುನೂರು ಶ್ರಾವಕರಲ್ಲಿ ಭಿಕ್ಷ್ಮ ತಪ್ಪಿ ಹೋಗಿರಬಹುದು, ವಿಜಯಣ್ಣನ ದ್ವಾದಶಾನುಪ್ರೇಕ್ಷೆಗೆ ದೊರೆತ ಪುರಸ್ಕಾರ

ಬರತೇಶವೈಭವಕ್ಕೆ ದಕ್ಕದೆಹೋಗಿರಬಹುದು ಆದರೇನು ? ಆ ತ್ಯಾಗವೇ ಇಂದು ಕವಿಯ ಮಹೋನ್ನತಿಗೆ ಮಾರ್ಗ ಮಾಡಿಕೊಟ್ಟಿದೆ

ಮೂರನೆಯ ಕಲ್ಯಾಣವೆಂದು ಕವಿಯು ಬಹುಶಃ ಭಾವಿಸಿರುವುದು 'ಯೋಗ ವಿಜಯ' ದಿಗ್ವಿಜಯವಾದ ಮೇಲೆ ಭರತನು ಜೈನ ಶಾಸ್ತ್ರಗಳ ಅಭ್ಯಾಸದಿಂದ ತನ್ನ ಆತ್ಮೋನ್ನತಿಯನ್ನು ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ ಕ್ಲಿಷ್ಟವೂ ಕಷ್ಟಸಾಧ್ಯವೂ ಆದ ಈ ಭಾಗವನ್ನು ಸುಲಿದ ಬಾಳೆಯ ಹಣ್ಣಿನಂತೆ ಮಾಡಿಟ್ಟಿರುವ ರತ್ನಾಕರನ ಕೈವಾಡವು ಇಲ್ಲಿ ಸ್ಫುಟವಾಗಿ ಕಂಡುಬರುತ್ತದೆ

ನಾಲ್ಕನಯದು 'ಅರ್ಕಕೀರ್ತಿ ವಿಜಯ' ಪಂಚಕಲ್ಯಾಣಗಳನ್ನು ಬರೆಯ ಬೇಕೆಂಬ ಉದ್ದೇಶವೊಂದನ್ನು ಬಿಟ್ಟರೆ ಇದನ್ನು ಭರತೇಶ ವೈಭವದಲ್ಲಿ ಸೇರಿಸಿದುದರ ಔಚಿತ್ಯಕ್ಕೆ ಸ್ವಲ್ಪವೂ ಎಡೆಯಿಲ್ಲವೆಂದು ತೋರುತ್ತದೆ ಆದಿಜಿನನ ಜೀವನ ಚರಿತ್ರೆಯಲ್ಲಿ ಭರತನ ಕಥೆಯನ್ನು ಅಂಗವಾಗಿ ತಂದಂತೆ ಭರತೇಶನ ಜೀವನ ಚರಿತ್ರೆಯಲ್ಲಿ ಅರ್ಕಕೀರ್ತಿಯ ಕಥೆಯನ್ನು ಕವಿ ತಂದಿರುವನೋ ಏನೋ ! ಜಿನಸೇನನ ಆದಿಪುರಾಣದಲ್ಲಿ ಅರ್ಕಕೀರ್ತಿಯ ಕಥೆ ಬಂದಿದೆಯಾದರೂ ಅಲ್ಲಿ ಅದಕ್ಕೆ ಅಷ್ಟು ಪ್ರಾಮುಖ್ಯತೆಯಿಲ್ಲ ರತ್ನಾಕರನು ಈ ಭಾಗಕ್ಕೆ ಕೊಟ್ಟಿರುವ ಪ್ರಾಮುಖ್ಯತೆ ಅನುಚಿತವೆಂದು ಹೇಳಬಹುದು ಅರ್ಕಕೀರ್ತಿಯ ಮದುವೆ, ಸುಖಭೋಗಗಳು, ರಸಿಕತೆ, ಯುದ್ಧ—ಇತ್ಯಾದಿ ಇತ್ಯಾದಿ ಹಲವು ವಿಷಯಗಳು ಇದರಲ್ಲಿ ಸೇರಿಕೊಂಡಿವೆ

ಕಡೆಯ ಭಾಗ ಮೋಕ್ಷವಿಜಯ ಮುಕುರದಲ್ಲಿ ಪಲಿತವನ್ನು ಕಂಡ[1] ಭರತ ಚಕ್ರೇಶ್ವರನು ತನ್ನ ಮಕ್ಕಳು ದೀಕ್ಷೆ ವಹಿಸಿದುದನ್ನು ಕೇಳಿ ವೈರಾಗ್ಯಪರನಾಗುತ್ತಾನ ತಂದೆಯಿಂದ ದೀಕ್ಷೆಪಡೆದು ಮೋಕ್ಷವನ್ನು ಪಡೆಯುತ್ತಾನೆ

---

1 ಶ್ವೇತಾಂಬರ ಗ್ರಂಥಗಳಲ್ಲಿ ಈ ಭಾಗವು ಸ್ವಲ್ಪಮಟ್ಟಿಗೆ ಭಿನ್ನವಾಗಿದೆ 'ಅಭಿಧಾನ ರಾಜೇಂದ್ರ'ದಲ್ಲಿ 'ಭರಹ (ಭರತ)' ಎಂಬ ಶಿರೋನಾಮೆಯ ಕೆಳಗೆ ಭರತನ ವೈರಾಗ್ಯಕ್ಕೆ ಕಾರಣವನ್ನು ಹೀಗೆ ಕೊಟ್ಟಿದೆ —

'ಸರ್ವಾಲಂಕಾರಭೂಷಿತಃ ಸ ಭರತಚಕ್ರವರ್ತೀ ಆದರ್ಶಭವನೇ ಗತಃ । ತತ್ರ ಸ್ವದೇಹಂ ಪ್ರೇಕ್ಷಮಾಣಸ್ಯ ಅಂಗುಲೀಯಕಂ ಪತಿತಂ, ತಚ್ಚ ಕೇನ ನಜ್ಞಾತಂ, ಆದರ್ಶಭಿತ್ತೌ ಸ್ವದೇಹಂ ಪಶ್ಯತಾ ತೇನ ಪತಿತ ಮುದ್ರಿಕಾ ಸ್ವಕರಾಂಗುಲಿಃ ಅಶೋಭಮಾನಾ ದೃಷ್ಟಾ । ತತೋ ದ್ವಿತೀಯಾಂಗುಲೀ ತೋಽಪಿ ಮುದ್ರಿಕಾ ಅಪನೀತಾ , ಸಾಪ್ಯಶೋಭ । ಮಾನಾ ದೃಷ್ಟಾ । ತತಃ ಕ್ರಮಾತ್ ಸರ್ವಾಭರಣಾನಿ ಉತ್ತಾರಿತಾನಿ ತದಾ ಸ್ವಶರೀರಮತೀವಾ ಶೋಭಮಾನಂ ನಿರೀಕ್ಷ್ಯ ಸಂವೇಗಮಾಪನ್ನಶ್ಚಕ್ರೀ ಏವಂ ಚಿಂತಿತಂ ಪ್ರವೃತ್ತಃ—ಅಹೋ ಆಗಂತುಕ ದ್ರವ್ಯೈರೇವೇದಂ ಶರೀರಂ ಶೋಭತೇ, ನಸ್ವಭಾವ ಸುಂದರಂ । ಅಪಿ ಚ ಏತತ್ಪರೀರ ಸಂಗೇನ ಸುಂದರಮಪಿ ವಸ್ತು ವಿನಶ್ಯತಿ' ಇತ್ಯಾದಿ ಆಗ ಆತನಿಗೆ ಕೇವಲ ಜ್ಞಾನಬೋಧೆಯಾಗುತ್ತದೆ.

# ರತ್ನಾಕರನ ಶೃಂಗಾರ ಚಿತ್ರಗಳು

ಇನ್ನು ಕವಿಯ ಸ್ವಂತಸೃಷ್ಟಿಯ ಕಡೆ ಸ್ವಲ್ಪ ನೋಡೋಣ ಮಹಾಪುರಾಣ ಕರ್ತೃಗಳಾಗಲಿ ಅವರನ್ನು ಅನುಸರಿಸಿ ಕಾವ್ಯವನ್ನು ಕಟ್ಟಿರುವ ಇತರ ಕವಿಗಳಾಗಲಿ ಭರತಚಕ್ರಿಯ ಗೃಹಜೀವನವನ್ನು ಚಿತ್ರಿಸಲು ಪ್ರಯತ್ನಪಟ್ಟಿಲ್ಲ ಚಕ್ರವರ್ತಿಯಾಗುವ ವರೆಗೆ ಆತನ ಜೀವನವು ಹೇಗೆ ರಸಮಯವಾಗಿತ್ತೆಂಬುದನ್ನು ಹೇಳಿಲ್ಲ ಇತರರು ಹೇಳದೆ ಬಿಟ್ಟ ಈ ಭಾಗವನ್ನು ತೆಗೆದುಕೊಂಡು ರತ್ನಾಕರನು ರಸಮಯವಾದ ಕಾವ್ಯ ವನ್ನು ಸೃಷ್ಟಿಸಿದ್ದಾನೆ

ಕವಿ 'ಶೃಂಗಾರಕವಿಹಂಸರಾಜ' ಆತನ ಕಥಾನಾಯಕ 'ಗಣನೆಯಿಲ್ಲದ ಸುಖದೊಳೋಲಾಡಿ' ದವನು. ಆದುದರಿಂದ ರತ್ನಾಕರನ ಸೃಷ್ಟಿಶಕ್ತಿಯೆಲ್ಲವೂ ಭರತನ ಶೃಂಗಾರ ಜೀವನವನ್ನು ಸೃಷ್ಟಿಸುವುದರಲ್ಲಿ ಕೇಂದ್ರೀಕೃತವಾಗಿದೆ. ಆತನ 'ಭೋಗಸಂಧಿ' ಒಂದು ಶೃಂಗಾರರಸದ ಸಾಗರ. ಅತನ ಒಂದೊಂದು ಚಿತ್ರವೂ ಒಂದೊಂದು ಸರಸಸಲ್ಲಾಪದ ಕಲ್ಲೋಲಮಾಲೆ ಇದರ ಮೇಲೆ ತೇಲಿ ಹೋಗುತ್ತಿರುವ ಓದುಗರ ಲಾವಣ್ಯರಸಾನುಭೂತಿಯ ಚರಮಸೀಮೆಯನ್ನು ಸಂದರ್ಶಿಸಿ ಧನ್ಯರಾಗುತ್ತಾರೆ ಅಲ್ಲಿ ನಿಂತು ಭರತನ ಶೃಂಗಾರಜೀವನದ ಹರಹನ್ನೂ ಆತನ ಅನುಭವದ ಆಳವನ್ನೂ ನೆನೆದು ಹರ್ಷಪುಳಕಿತರಾಗುತ್ತಾರೆ

ಭರತನ ಸಂಸಾರ ಬಹು ದೊಡ್ಡದು, ತೊಂಬತ್ತಾರು ಸಹಸ್ರ ಹೆಂಡಿರು ಈ ರಾಣಿಯರ ಮಾಲೆಯಲ್ಲಿ ಮಧ್ಯದ ಮುತ್ತು ಕುಸುಮಾಜಿ ತನ್ನ ರೂಪದಿಂದ, ಕಲೆಯಿಂದ, ಜಾಣ್ಮೆಯಿಂದ, ಸೌಜನ್ಯದಿಂದ ಅತನ ಮನಸ್ಸಿನಲ್ಲಿ ಏಕಚ್ಛತ್ರಾಧಿಪತ್ಯ ವನ್ನು ಸ್ಥಾಪಿಸಿಕೊಂಡಿದ್ದಾಳೆ ಒಮ್ಮೆ ಆ ಕಲಾಸುಂದರಿ ತನ್ನ ಇನಿಯನ ಮೇಲೆ ಒಂದು ಕಾವ್ಯವನ್ನು ಕಟ್ಟಿದಳು ಭರತನ ಅಂತಃಪುರದ ಒಡ್ಡೋಲಗದಲ್ಲಿ ಇದರ ದಿಗ್ದರ್ಶನವಾಗಬೇಕು ತಾನು ಕಟ್ಟಿದ ಕಾವ್ಯವನ್ನು ತಾನೇ ಓದಲು ಕುಸುಮಾಜಿಗೆ ನಾಚಿಕೆ ಸುಮನಾಜಿ ಅಮರಾಜಿಯರೆಂಬ ರಾಣಿಯರಿಬ್ಬರು ತಮ್ಮ ಕೋಕಿಲಕಂಠ ದಿಂದ ಅದನ್ನು ಹಾಡಿದರು ಗಾನಸುಧೆಯನ್ನು ಸವಿದು ಮತ್ತನಾದ ಚಕ್ರಿ ಅವರನ್ನು ಬಲ್ಲಂತೆ ಬಹುಮಾನಿಸಬೇಕೆಂದು ಬಗೆದ ಬಹುಮಾನವೇನೆಂಬುದನ್ನು ಬಲ್ಲ ಆ ಜಾಣೆಯರು ಅಲ್ಪ ಸ್ವಲ್ಪಕ್ಕೆ ಆತನ ಬುಟ್ಟಿಗೆ ಬೀಳುವಂತಿಲ್ಲ ಆದರೆ ಭರತನೇನು ಸಾಮಾನ್ಯನೆ? ರಸಿಕಾಗ್ರೇಸರ ಚಕ್ರವರ್ತಿ, ಕಾವ್ಯವನ್ನು ಬರೆದ ಕುಸುಮಾಜಿಯನ್ನು ಗೇಲಿ ಮಾಡುವವನಂತೆ ನಟಿಸುತ್ತಾ, ಒಂದು ಗುಟ್ಟನ್ನು ಕಿವಿಯಲ್ಲಿ ಹೇಳುವೆನೆಂದು ಅವರಿಬ್ಬರನ್ನೂ ತನ್ನ ಬಳಿಗೆ ಕರೆದ ಇಬ್ಬರೂ ಬಂದು ಎರಡು ಪಾರ್ಶ್ವಗಳಲ್ಲಿ ನಿಂತುಕೊಂಡರು ಇಬ್ಬರನ್ನೂ ಒಮ್ಮೆಯೇ ಅಪ್ಪಿಕೊಂಡು ಆಲಂಗಿಸಿದ ಒಳಗೆ ಸಂತೋಷದ ಬುಗ್ಗೆ ಚಿಮ್ಮಿ ಹರಿಯುತ್ತಿದ್ದರೂ ಸ್ತ್ರೀಭಾವದ ಬಿಂಕವನ್ನು ಬೀರುತ್ತಿರುವ

ಅವರನ್ನು ಕಂಡು ರಮಣೀ ರಮ್ಯೋದ್ಯಾನವೆಲ್ಲವೂ ಕಿಲಿ ಕಿಲಿ ನಗುವಿನ ಹೊನಲಿ ಯನ್ನು ಕರೆಯಿತು ಲಜ್ಜಾಶೀಲೆಯಾದ ಕುಸುಮಾಜಿ ಅದುವರೆಗೆ ಕಂಭದ ಮರೆಯಲ್ಲಿ ಅವಿತು ಕುಳಿತಿದ್ದವಳು ಮೆಲ್ಲನೆ ಕಾಣಿಸಿಕೊಂಡು 'ನಾನು ಕೋಣೆಯಲ್ಲಿ ಆಡಿಕೊಂಡ ಮಾತನ್ನು ಬಯಲಿಗೆಳೆದು ಹಗರಣ ಮಾಡಿದವರಿಗೆ ಹೀಗೇ ಆಗಬೇಕು' ಎಂದು ಹಾಸ್ಯ ಮಾಡಿದಳು ತನ್ನ ಕಾವ್ಯಕ್ಕೆ ದೊರೆತ ಪುರಸ್ಕಾರವನ್ನು ಕಂಡು ಅವಳ ಹರ್ಷ ಮುಗಿಲನ್ನು ಮುಟ್ಟಿದೆ ಅವಳ ಉತ್ಸಾಹವೇ ಉತ್ಸಾಹ ಮುಖಕ್ಕೆ ಬಟ್ಟೆ ಮುಚ್ಚಿ ಕೊಂಡು ನಗುತ್ತಾಳೆ, ಕಂಭದ ಮರೆಗೆ ಅವಿತುಕೊಳ್ಳುತ್ತಾಳೆ, ಹಾಗೆಯೇ ಕಾಣಿಸಿ ಕೊಳ್ಳುತ್ತಾಳೆ ಇವಳ ಹೊಯ್ಯಾಳಿತನವನ್ನು ಕಂಡು ಬಹುಮಾನಿತರಿಬ್ಬರೂ ತಮ್ಮ ಬಿಂಕಕ್ಕೆ ತಕ್ಕ ಕೊಂಕುಮಾತಿನಲ್ಲಿ 'ನೋಡೆ ತಂಗಿ ನಿನ್ನನ್ನು ಸ್ತುತಿ ಮಾಡಿದುದಕ್ಕೆ ನಮಗೆ ತಕ್ಕ ಶಾಸ್ತಿಯಾಯಿತು' ಎಂದರು ಕುಸುಮಾಜಿಯ ಜೀವವೂ ಅದೇ ಬಹುಮಾನವನ್ನೇ, ಅಥವಾ ಅದಕ್ಕೂ ಮಿಗಿಲಾದ ಬಹುಮಾನವನ್ನು ಬೇಡುತ್ತಿದೆ 'ಅಯ್ಯೋ ನಾನಾಪ ಗುಣಸಂಪನ್ನೆ, ನೀವೇಕೆ ನನ್ನನ್ನು ಸ್ತುತಿಸಬೇಕು!' ಎಂದು ಕಪಟಕೋಪವನ್ನು ನಟಿಸಿದಳು ರಾಜನಿಗೆ ಆ ಮಾತುಗಳ ಹಿಂದಿರುವ ಕಾತರತೆ ಅರ್ಥವಾಯಿತು ಅವನಿಗೂ ಒಂದು ದಿನ ಆ ಜಾಣೆಯೊಡನೆ ಸುಖಸಂಕಥಾವಿನೋದ ದಲ್ಲಿ ಕಾಲವನ್ನು ಕಳೆಯಬೇಕೆಂದೆನಿಸಿತು ತಾನೇ ಅದನ್ನು ಹೇಳಿದರೆ ಇತರ ರಾಣಿಯರಿಗೆ ಅಸೂಯೆ ಹುಟ್ಟಬಹುದು ತನ್ನ ಪಂಡಿತೆಯ ನೆರವನ್ನು ಪಡೆದು ಆ ದಿನ ಅವಳ ಮನೆಗೆ ಊಟಕ್ಕೆ ಬರುವೆನೆಂದು ಹೇಳುತ್ತಾನೆ ಸಂತೃಪ್ತಿಗೊಂಡ ಕುಸುಮಾಜಿ ಸಕಲ ಸಂಭಾರಗಳನ್ನು ಸಿದ್ಧಗೊಳಿಸುವುದಕ್ಕಾಗಿ ಅಣ್ಣನಿಂದ ಅಪ್ಪಣೆ ಪಡೆದು ಹೊರಟು ಹೋಗುತ್ತಾಳೆ ಉಳಿದ ರಮಣಿಯರನ್ನು ಬೀಳ್ಕೊಟ್ಟು ಭರತನು ಅರಮನೆಗೆ ಹಿಂದಿರುಗುತ್ತಾನೆ

* * * * *

ಸ್ವಲ್ಪ ಹೊತ್ತಿನ ಮೇಲೆ ಕುಸುಮಾಜಿಯ ತಂಗಿ ಮಕರಂದಾಜಿ ರಾಜನನ್ನು ಭೋಜನಕ್ಕೆ ಆಹ್ವಾನಿಸಲು ಬರುತ್ತಾಳೆ ಹೊಂದಟ್ಟೆಯಲ್ಲಿ ಇಟ್ಟುಕೊಂಡು ಬಂದಿದ್ದ ಮಲಯಜ ವೀಟಿಕಾಕ್ಷತೆಯನ್ನು ತೂಗುಮಂಚದಮೇಲೆ ಮಂಡಿಸಿರುವ ಮಹಾರಾಜನ ಮುಂದಿಟ್ಟು 'ಅನುಕೂಲವಾದುದಾರೋಗಣೆಗಿನ್ನೆಮ್ಮ ಮನೆಗೇಳು ಭಾವಾಜಿ' ಎಂದು ಕರೆದಳು. ಮಕರಂದಾಜಿ ಇನ್ನೇನು ವರ್ಷ ಆರುತಿಂಗಳೆಂಬ ಹೊತ್ತಿಗೆ ಪ್ರಾಯದ ಹೊಸ್ತಿಲನ್ನು ಮೆಟ್ಟತಕ್ಕ ಸುಂದರಳಾದ ಹುಡುಗಿ ರಸಜೀವಿಯಾದ ಭರತನಿಗೆ ಅವಳೊಡನೆ ಸ್ವಲ್ಪ ಸರಸವಾಡಬೇಕೆಂಬ ಚಪಲ. 'ಎಮ್ಮ' ಮನೆಗೆ ಎಂದು ಹೇಳಿದು ದನ್ನೆ ನೆಪಮಾಡಿಕೊಂಡು "ಇಂದಾನು ನಿನ್ನ ಮನೆಗೆ ಬಹುದುಚಿತವೆ? ಒಂದರೆ ವರುಷದ ಮೇಲೆ ಬಂದು ನೀನೆನ್ನ ಕರೆದರಾನು ಬಹೆನು" ಎಂದು ಸ್ವಲ್ಪ ಹಾಸ್ಯ ಮಾಡಿದ ಷಟ್ಖಂಡದ ಚಕ್ರವರ್ತಿಯೆಂಬ ಗೌರವದಿಂದ ಅವಳು ಅದಕ್ಕೆ ತಕ್ಕ ಪ್ರತ್ಯುತ್ತರ ಕೊಡದೆ

'ಅಕ್ಕಾಜಿಯರಮನೆಗೇಳೆಂದೆ' ಎಂದು ಮಾತ್ರ ಉತ್ತರ ಹೇಳಿದಳು ಅವಳು ಅತ್ಯಂತ ಚದುರೆಯೆಂಬುದು ರಾಜನಿಗೆ ಗೊತ್ತು ಆದ್ದರಿಂದ ಅಷ್ಟಕ್ಕೆ ಬಿಡದೆ ಸ್ವಲ್ಪ ಕೆಣಕಿ ಕೆರಳಿಸಿದ 'ರಕ್ಕುಕಾತಿಯೆ ನಿನ್ನ ಮನೆಗೆಂದೆಯ್ಯೆಸೆ, ನಿನ್ನಕ್ಕನ ಹೆಸರ ಹೇಳಿದೆಯ?' ಇಷ್ಟು ಸಾಕು ಮಕರಂದಾಜಿಯನ್ನು ಮಾತಿನ ಯುದ್ಧಕ್ಕೆ ಎಬ್ಬಿಸಲು ಮಕರಂದಾಜಿ—

"ಅಕ್ಕನ ಹೆಸರ ಹೇಳುವರಾಕೆ ಪಡೆದರೆ। ಮಕ್ಕಳು ಪೇಳ್ವವು ಮುಂದೆ।
ದಿಕ್ಕಿನೊಳಗೇನು ಸಂಬಂಧ ಸಾಕೀಳು। ಸಿಕ್ಕಿನ ಮಾತನಾಡದಿರು॥"

ಭರತ—

"ಸಾಕೇಳು ಸಲಹೇಳು ನೀನೆಂದು ತಾನೆನ್ನ। ನಾಕರುಷಣ ಮಾಡುತಹಳೆ।
ಈಕೆ ತಾನೇನು ಕಾತರೆಯೊ!

ಮಕರಂದಾಜಿ—

"ಕಾತರ ಗೀತರವನ್ನು ನೀವು ನಿಮ್ಮಂಬು। ಜಾತಾಕ್ಷಿಯರು ಬಲ್ಲಿರೈಸೆ।
ಆ ತಳ್ಳಿಬಳ್ಳಿಯ ನಾವೇನ ಬಲ್ಲೆವು। ಮಾತು ಸಾಕಿನ್ನೇಳು ಭಾವ॥"

ರಾಜನು ತನ್ನ ದಪ್ತರವನ್ನು ಕೊಡವಿ ಕಟ್ಟಿಡಬ(ಕಾ)ದುದೇ! ಎದ್ದು ಅವಳನ್ನು ಹಿಂಬಾಲಿಸುವನು ಅರಸಿಯ ಮನೆಯನ್ನು ಪ್ರವೇಶಿಸುತ್ತಲೇ 'ಅಮೃತವಾಚಾಂಕ' ನೆಂಬ ಗಿಳಿ ಅವನಿಗೆ ಸುಖಾಗಮನವನ್ನು ಬಯಸಿತು

"ಕ್ಷೇಮವೇ ಭಾವಾಜಿ ಮತ್ತು ನಿಮಗೆ ಪರಿ। ಣಾಮವೆ ಹೇಳು ಭಾವಾಜಿ।
ಈ ಮನೆಯತ್ತಲೇಕಡಿಗಡಿಗೈತರೆ?
ಧರೆಯನಾಳಿದನೆಂಬ ಗರ್ವವೊ ನಮ್ಮಕ್ಕ। ನರಮನೆಗಡಿಗಡಿಗೇಕ।
ಬರಲೊಲ್ಲೆ ಬಂದಿನ್ನು ಪೋಪೆಯ ನಿನ್ನಕಾ। ಲ್ಗುರುಲ ನಿಕ್ಕುವೆ ।
ಸುಳಿಗುರುಳೆಂಬುರುಲುಂಟು ನಮ್ಮಕ್ಕನ। ನಳಿತೋಳ ಪಾಶಗಳುಂಟು
ಹೊಳೆದಿನ್ನು ಹೋಹ ಭಾವನ ಕಾಣ್ಬೆ .
ಸೊಂಕಿ ನಮ್ಮಕ್ಕ ನೊತ್ತಿನೊಳಿದ್ದರಿರು ಮಾರಿ। ಭೋಂಕನೆ ಪೋಪೆನೆಂಬಾಗ।
ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬೆಳ್ಳಿ। ಸಂಕಲೆಗಳನಿಕ್ಕಿಸುವೆನು॥"

ಅಮೃತವಾಚಾಂಕನ ಅಮೃತವಾಣಿಗೆ ಶಿಕ್ಷಾಗುರು ಮಕರಂದಾಜಿ ಆಕಗ ರಾಜನಿಂದ ತಕ್ಕ ಸನ್ಮಾನ ದೊರೆಯಿತು ಆತನು ಅವಳನ್ನು ಬಿಗಿಯಪ್ಪಿ ಮುತ್ತಿಕ್ಕುವನು ಮಾತಿಗೆ ಮಾತನ್ನು ಪೋಣಿಸುವ ವೈಯಾರಿ ಮಕರಂದೆ ಅದರಿಂದ ಕೋಪಿಸಿದವಳಂತೆ ನಟಿಸಿ ತನ್ನ ಭಾವೀಪತಿಯಾದ ಭರತನೊಡನೆ ಬೇಕಾದಷ್ಟು ಮಾತಿನ ಮಲ್ಲಗಾಳಗವನ್ನು ನಡೆಸಿ ಆತನನ್ನು ಮೆಚ್ಚಿಸುವಳು ಈ ಭಾಗವು ಅತ್ಯಂತ ಸರಸವಾದುದು ಸರಸ ಸಂಧಿಯೆಂದು ಈ ಭಾಗಕ್ಕಿಟ್ಟಿರುವ ಹೆಸರು ಸಾರ್ಥಕವಾಗಿದೆ

* * * * *

ರಾಜನು ಕುಸುಮಾಜಿಗೆ ಸನ್ಮಾನಮಾಡುವುದೂ ಅತ್ಯಂತ ಸುಂದರವಾದ ಶೃಂಗಾರಮಯ ಚಿತ್ರ ಗಂಡಹೆಂಡಿರಿಬ್ಬರೇ ಇರುವಾಗ ತನ್ನ ಹೆಂಡತಿಯನ್ನು ಎಷ್ಟು ವಿಧವಾಗಿ ಕರೆದರೂ ತೃಪ್ತಿಯಿಲ್ಲ ಕುಸುಮಾಜಿಯೆಂಬ ಹೆಸರೇ ಮುದ್ದಾದುದು ಮುದ್ದಾದ ಹೆಸರನ್ನು ಮತ್ತಷ್ಟು ಮುದ್ದಾಗಿ ಮಾಡಿ ಅವಳ ಮನೆಯ ಅಚ್ಚುಕಟ್ಟನ್ನೆಲ್ಲಾ ಮೆಚ್ಚುವ ಸೋಗಿನಿಂದ ಅವಳನ್ನು ಹೆಸರಿಸುತ್ತಾನೆ

"ಸಾರಣೆ ಚನ್ನಾಯ್ತು ಕುಸುಮೆ, ಕುಂಕುಮದೊಂದು |
ಕಾರಣೆ ಚೆನ್ನಾಯ್ತು ಕುಸುಮಿ |
ತೋರಣ ಚೆನ್ನಾಯ್ತು ಕುಸುಮು

'ಚೆಳಯಗೊಟ್ಟುದು ಲೇಸು ಕುಸುಮಾಜಿ ಹೊಸರಂಗು |
ವಲಿಲೇಸು ಕುಸುಮಾಂಗಿ ನಿನ್ನ |
ನಿಳಯದ ಸಿಂಗಾರ ಸೊಗಸಾಯ್ತು ಕುಸುಮಕೋ | ಮಲೆ

ಹೀಗೆ ಕುಸುಮು, ಕುಸುಮಿ, ಕುಸುಮಾಜಿ, ಕುಸುಮೆ, ಕುಸುಮಾಂಗಿ, ಕುಸುಮಾಲೀ, ಕುಸುಮಿತೆ, ಕುಸುಮಿನಿ—ಎಂದು ಅವಳ ಹಿಂದೆ ಹಿಂದೆಯೇ ಓಡಾಡುತ್ತಿರುವನೂ ಎನ್ನಿಸುವುದು ತೊಂಬತ್ತಾರು ಸಹಸ್ರ ಹೆಂಡಿರೊಡನಾಡಿ ನುರಿತ ಭರತನಿಗೆ ಅವರನ್ನು ವಶಪಡಿಸಿಕೊಳ್ಳುವ ಜಾಣ್ಮೆ ಕರತಲಾಮಲಕವಾಗಿದೆ ಕುಸುಮಾಜಿಯ ತೌರುಮನೆಯವರನ್ನೆಲ್ಲಾ ಹೆಸರಿಸಿ ಹೊಗಳುತ್ತಾ ಆಕೆಯನ್ನು ಸಂತೋಷಗೊಳಿಸುವನು—ಅಹಹ ! ಈ ಝಾಲರಿ ಬಟ್ಟೆ ಎಷ್ಟು ಸೊಗಸಾಗಿದೆ ? ಎಲ್ಲಿಂದ ಬಂತು ಇದು ? ನಾಮಾಜಿಯವರು ಕಳುಹಿದರೋ ? ಓಹೋ ! ಈ ಮುತ್ತಿನ ಲಂಬಣ ಏನು ಸೊಬಗನ್ನು ಬೀರುತ್ತಿದೆ ! ಬಹುಶಃ ನಮ್ಮ ಅತ್ತೆಯವರು ಕಳುಹಿಸಿರಬೇಕು, ಇತ್ಯಾದಿ ಇತ್ಯಾದಿ 'ದೊಡ್ಡ ಜಾಣೆ' ಯಾದ ಕುಸುಮಾಜಿ ಈ ಮಾತುಗಳಿಂದ ' ಜಿಡ್ಡುಬ್ಬಿ ಮಂಡೆಗೇರುವಳಲ್ಲ ' 'ಮನೆಯ ಶೃಂಗಾರ ಹಾಗಿರಲಿ, ತಾವು ನನ್ನ ಮನೆಗೆ ಬಂದಿರುವುದೇ ದೊಡ್ಡ ಶೃಂಗಾರ. ಮೊದಲು ಊಟಕ್ಕೇಳೋಣವಾಗಲಿ ' ಎಂದು ಹೇಳಿ ಆತನನ್ನು ಕೈಹಿಡಿದು ಭೋಜನಗೃಹಕ್ಕೆ ಕರೆದೊಯ್ದಳು ಅಲ್ಲಿ ತಾನೇ ತನ್ನ ಕೆಯ್ಯುಟ್ಟೆ ತನ್ನ ಅಣ್ಣನಿಗೆ ಊಟಮಾಡಿಸಿದಳು. ಊಟಮಾಡಿಸುವ ಮುನ್ನ ಮನೆಯ ಬಾಗಿಲುಗಳನ್ನೆಲ್ಲಾ ಭದ್ರಪಡಿಸಿ, ತನ್ನ ಅರಮನೆಯ ಒಳಗುಟ್ಟು—ಓಪರಾಡಿಕೊಳ್ಳುವ ಮಾತು—ಹೊರ ಸೋರದಂತೆ ಶಕ್ಯ ವ್ಯವಸ್ಥೆ ಮಾಡುತ್ತಾಳೆ ಆ ತಂಗಿ ಅವಳ ಶಿಷ್ಯನಾದ ಅಮೃತವಾಚಾಂಕ— ಇವರಿರುವಲ್ಲಿ ಇದು ಅನಿವಾರ್ಯವೆಂದು ತೋರಿತು, ಆಕೆಗೆ. ಹಿಂದೊಮ್ಮೆ ತವೆ ತಾನು ಹೇಳಿಕೊಂಡ ' ರಾಜ ಲಾವಣ್ಯ ' ಕಾವ್ಯವು ಬಯಲಿಗೆ ಬಿದ್ದು ರಾಣೀವಾಸದಲ್ಲೆಲ್ಲಾ ಜನಜನಿತವಾದುದು ಅಮೃತವಾಚಾಂಕನಿಂದಲೇ. ಆದಕ್ಕೇ ಅಷ್ಟು ಎಚ್ಚರಿಕೆ.

ಊಟಮಾಡಿಸುವಂದು ಮೈ ಛಳಿಬಿಟ್ಟು ರಾಜನೊಡನೆ ಸರಸವಿನೋದಗಳನ್ನಾಡುತ್ತಾ ಆತನನ್ನು ಸ್ವರ್ಗಸದೃಶವಾದ ಷಡ್ರಸೋಪೇತ ಮೃಷ್ಟಾನ್ನದಿಂದ ತಣಿಸುವಳು ಅವಳ ಆದರೋಪಚಾರಗಳಿಂದ, ಆಹಾರವಸ್ತುಗಳ ವೈವಿಧ್ಯದಿಂದ, ಅವುಗಳ ರುಚಿಕಟ್ಟಿಂದ ರಾಜನು ಪರಮಸಂತುಷ್ಟನಾದನು ನಂತರ ಕುಸುಮಾಜಿ ಆತನ ಕೈತೊಳೆದು ಮೇಲಕ್ಕೆಬ್ಬಿಸಿ, ಹೂವಿನುಪ್ಪರಿಗೆಗೆ ಕೈಹಿಡಿದು ಕರೆದುಕೊಂಡು ಹೋದಳು. ಉಪ್ಪರಿಗೆಯಲ್ಲಿ ಒಂದು ಗೂಢಗೃಹ ಶೃಂಗಾರರಸ ಮಡುಗಟ್ಟಿ ನಿಂತಿರುವಂತೆ ಶೋಭಿಸುತ್ತಿರುವ ಆ ಗೃಹದಲ್ಲಿ ಒಂದು ಶಕುನಿಮಂಚ ರಾಜನು ಕೃತಕೃತ್ಯನಾದವನಂತೆ ಹಾಯಾಗಿ ಅದರ ಮೇಲೆ ಮಲಗಿದನು ರಾಜನಿಗೆ ವೀಳೆಯವಿತ್ತು, ಪನ್ನೀರನ್ನು ಚುಮುಕಿಸಿ ಕಣ್ಣುಗಳಿಗೆ ಕರ್ಪೂರವನ್ನು ಹಚ್ಚಿ, ಮೈಗೆ ಸುಗಂಧವನ್ನು ಲೇಪಿಸಿ, ಗಾಳಿಹಾಕಿ, ಪಾದವನ್ನು ಒತ್ತುತ್ತಾ ಕುಳಿತಳು ಕುಸುಮಾಜಿ ಆದರೆ ರಾಜನ ಆಗ್ರಹದಮೇಲೆ ಊಟಮಾಡಿಕೊಂಡು ಬರಲು ಹೋದಳು ಗಂಡನು ಊಟಮಾಡಿದ ತಟ್ಟೆಯಲ್ಲೇ ಕುಳಿತು ಬೇಗ ಬೇಗ ಊಟದ ಶಾಸ್ತ್ರವನ್ನು ಪೂರೈಸಿದಳು ಅಲಂಕಾರ ಗೃಹಕ್ಕೆ ಹೋಗಿ, ಕನ್ನಡಿಯ ಮುಂದೆ ನಿಂತು, ಕುಟಿಲ ಕುಂತಲಗಳನ್ನು ಬಾಚಿ ಬಾಚಿ ಹೆರಳು ಹಾಕಿಕೊಂಡಳು ತಿಲಕವನ್ನು ತಿದ್ದಿಕೊಂಡಳು. ತನ್ನ ರೂಪಕ್ಕೆ ತಾನೇ ಮನಸೋತು ನಕ್ಕಳು ಆಭರಣಾದಿಗಳನ್ನೆಲ್ಲಾ ಸರಿಮಾಡಿಕೊಂಡಳು ಕಸ್ತೂರಿ ಪುನುಗು ಜವಾಜಿಗಳನ್ನು ಲೇಪಿಸಿಕೊಂಡಳು ಎಡಗೈಲಿ ಸಜ್ಜುಗೊಳಿಸಿದ ವೀಳೆಯವನ್ನು ಹಿಡಿದು ಗಂಡನೆಡೆಗೆ ಹೊರಟಳು ಮನದನ್ನನ ನಿದ್ರಾಭಂಗವಾಗಬಾರದೆಂದು ಆಭರಣಗಳ ಉಲುಹನ್ನು ಮಾಣಿಸುವಂತೆ ಮೆಲ್ಲಗೆ ನಡೆತಂದು ಬಾಗಿಲ ಮರೆಯಲ್ಲಿ ನಿಂತಳು ರಾಜನು ಇವಳನ್ನು ಕಂಡು "ಪ್ರಚಂಡೆ ! ಬಾ" ಎಂದು ಕರೆದನಂತೆ ! ಕುಸುಮಾಜಿ ಕೆಂಡವನ್ನುಗುಳುತ್ತಿರುವ ಕೆಂಪಿನ ತುಟಿಗಳಿಂದ ನಸುನಗುವನ್ನು ಇಂಡೆಯಾಡುತ್ತಾ ಒಳಗೆ ಬಂದಳು, ವಲ್ಲಭನಿಗೆ ಬಾಯ್ಮುಕ್ಕುಳಿಸಲು ಪನ್ನೀರನ್ನು ಕೊಟ್ಟು, ಕೂರುಗುರಿನಿಂದ ಸೀಳಿದ ವೀಳೆಯವನ್ನು ಮಡಿಸಿ ಬಾಯಿಗಿಟ್ಟಳು ರಸಿಕನಾದ ಭರತನಿಗೆ ಅವಳೊಡನೆ ಒಂದೆರಡು 'ಜೂಟನ ನುಡಿಯ'ನ್ನಾಡಬೇಕೆನ್ನಿಸಿತು ಮುಸುಕಿಕ್ಕಿ ಮಲಗಿ

"ಕುಸುಮಿ ತಾನೇಕೆ ಬಂದಳು" ಎಂದು ಪ್ರಶ್ನಿಸಿದ

"ಏಕೆ ಬಂದಳೊ ! ದೇವರೇ ಬಲ್ಲರು ಅವಳಿಚ್ಛೆಯೇನೆಂದು"

"ಅವಳ ಮುಖನೋಡಿದರೆ, ಏನೋ ನಮ್ಮೊಡನೆ ಜಗಳಕ್ಕೆ ಬಂದಿರುವಂತೆ ಕಾಣುತ್ತದೆಯಲ್ಲ !"

"ಜಗಳಕ್ಕಲ್ಲವಂತೆ, ಏನೋ ಗೂಢಾರ್ಥವಿದೆಯಂತೆ ಅಳ್ದನ ಕೂಡೆ ಆಲೋಚಿಸಲು ಬಂದಿದ್ದಾಳಂತೆ"

"ಗೂಢಾರ್ಥವೇನಂತೆ ?"

"ಅದನ್ನು ಮೂಢರಿಗಾದರೆ ಬಾಯ್ಬಿಟ್ಟು ಹೇಳಬೇಕು ಪ್ರೌಢರಾದವರಿಗೆ ಬಂದೊಡನೆಯೇ ಅರಿವಾಗುತ್ತದೆ "

ರಾಜನ ಪುಂಗಿ ಬಂದಾಯಿತು ಮಾತನಾಡಲು ಮಾರ್ಗವಿಲ್ಲದೆ ಸುಪ್ರೀತನಾಗಿ ಅವಳನ್ನು ಪಾದದಿಂದ ಅಪ್ಪಿಕೊಂಡ ಕುಸುಮಾಜಿ ಮೌನಚಾದ ಮತ್ತೊಂದು ಹೂಬಾಣವನ್ನು ಪ್ರಯೋಗಿಸಿದಳು—"ಅದುದೊಡೆಯ ! ಮೆಚ್ಚಿ ಕಾಲೊಳೊದೆದನೆಂಬ ಗಾವೆ ಇಂದೆನಗೆ "

ರಾಜನು ನಗುತ್ತಾ ಮೇಲಕ್ಕೆದ್ದು ಆ ಮೋಹನಾಂಗಿಯನ್ನು ಬರಸೆಳೆದು ಬಿಗಿಯಪ್ಪಿದ

ಸರಸವಿನೋದಗಳಿಂದಲೂ ಭೋಗಭಾಗ್ಯಗಳಿಂದಲೂ ತಣಿದಮೇಲೆ ಕುಸುಮಾಜಿ ತನ್ನ ಗಾನಸುಧೆಯಿಂದ ರಾಜನನ್ನು ತಣಿಸುವಳು ಅದನ್ನು ಕೇಳಿದಷ್ಟೂ ಕೇಳ ಬೇಕೆಂಬಾಸೆ ರಾಜನಿಗೆ ಅವನ್ನು ಹೊಗಳಿದಷ್ಟೂ ರಾಗರಸಕ್ಕೆ ಕಳೆಯೇರುತ್ತದೆ ರಾಗರಸ ಕಳೆಯೇರಿದಷ್ಟೂ ರಾಜನ ಉತ್ಸಾಹ ಹೆಚ್ಚುತ್ತಿದೆ ಒಡನೆಯೇ ಅವಳನ್ನು ತಬ್ಬಿಕೊಂಡು ತನ್ನ ಮನಸ್ಸನ್ನು ತೃಪ್ತಿಪಡಿಸಬೇಕೆಂಬಾಸೆ ಮೆಲ್ಲನೆ ವೀಣೆಯನ್ನು ಸ್ವಲ್ಪ ಸರಿಸುವನು ಆದರೂ ಗಾನರಸಕ್ಕೆ ಮನಸೋತು 'ಇರಲಿ ಹಾಡು' ಎಂಬ ಭಾವದಿಂದ ಹಿಂದಕ್ಕೆ ಸರಿಯುವನು ನಡುನಡುವೆ ಒಮ್ಮೊಮ್ಮೆ 'ಮಡದಿ ಹಾಡುವ ದೊಂದು ಗಮಕಕೆ ಗಾನದ ! ಕಡುಸವಿಗೆಡೆಯೊಳು ಹಿಗ್ಗಿ || ಎಡದ ತೋಳಿಂದ ಕೊರಳನಪ್ಪಿ ಚೆಂದುಟಿ | ವಿಡಿದು ಚುಂಬಿಸಿ ನಕ್ಕುಬಿಡುವಾ ||

* * * * *

ಕುಸುಮಾಜಿ ಸಾಹಿತ್ಯ ಸಂಗೀತಗಳ ಸರಸ್ವತಿ ಅವಳ ಕಲೆ ಅವಳಿಗೆ ದೊರಕಿಸಿ ಕೊಟ್ಟ ಬಹುಮಾನವನ್ನು ಕಂಡು ಹಲವು ರಾಣಿಯರ ಬಾಯಲ್ಲಿ ನೀರು ಸುರಿಯಿತು ಅವರಲ್ಲಿ ಕೆಲವರು ನಟನವಿದ್ಯಾವಿಶಾರದರು ತಮ್ಮ ನಟನವಿದ್ಯೆಯಿಂದ ರಾಜನನ್ನು ಮೆಚ್ಚಿಸಬೇಕೆಂದು ನಿಶ್ಚಯಿಸಿ ಕುಸುಮಾಜಿಯ ಸಹಾಯದಿಂದ ರಾಜನನ್ನು ಅದಕ್ಕ ಒಪ್ಪಿಸಿದರು ಆದಿನ ರಾತ್ರಿ ನಾಟಕ ನಯನ ಮನೋಹರವಾದ ಅವರ ನಾಟಕಶಾಲೆ ಯನ್ನು ಅಂತಿಂತೆಂದು ವರ್ಣಿಸುವುದಕ್ಕೆ ಆಗುವುದಿಲ್ಲ ರತ್ನಗಳ ಪ್ರಭೆಯಿಂದ ಹಗಲೂ ರಾತ್ರಿಯೂ ತಂಪಿನ ಬಿಸಿಲು ತುಂಬಿಕೊಂಡಿರುವುದು ಚಂದ್ರಲೋಕವನ್ನೇ ತಂದು ಬಿತ್ತಿರುವರೆಂಬ ಭ್ರಾಂತಿಯನ್ನು ಹುಟ್ಟಿಸುವಂತೆ ಎಲ್ಲೆಲ್ಲಿಯೂ ಚಕಚಕಿಸುತ್ತಿರುವ ರತ್ನಗನ್ನಡಿಗಳು, ಪುಷ್ಪಾಸ್ತ್ರನೇ ಪ್ರತ್ಯಕ್ಷನಾಗಿ ನಾಟಕವಾಡುವಂತೆ ಕಾಣುವ ಪುಷ್ಪೋಪಹಾರಗಳು, ಶ್ರೀಗಂಧ, ಕುಂಕುಮಕೇಸರಿ, ಪುನುಗು, ಜವ್ವಾಜಿಗಳ ಕಂಪು ತುಂಬಿಕೊಂಡು ನಾಟಕಶಾಲೆಯೆಲ್ಲವೂ ದೊಡ್ಡದೊಂದು ಹೊನ್ನ ಕರಡಿಗೆಯಂತೆ ಭಾಸವಾಗುವುದು, ಮಿಸುನಿಗಂಭಗಳಲ್ಲಿ ಖಚಿತವಾಗಿರುವ ಮಣಿಪ್ರತಿಮೆಗಳು, ಗೋಡೆಗಳಮೇಲೆ ಮೋಹನರಸವನ್ನು ಚೆಲ್ಲಿದಂತೆ ಕಾಣುತ್ತಿರುವ ಪೆಣ್ಗಂಡುಗಳ

ರೂಪುಗಳು, ಇವುಗಳ ಮಧ್ಯೆ ಪ್ರಕಾಶಿಸುತ್ತಿರುವ ಆದಿಜಿನನ ಭವ್ಯಚಿತ್ರ—ಇಂತಹ ಮನೋಜ್ಞವಾದ ನಾಟಕ ಶಾಲೆಯಲ್ಲಿ ರಾಜನು ಓಲಗಗೊಟ್ಟನು. ರಾಜಕುಮಾರರು, ಮಂತ್ರಿಗಳು, ಕುಟಿಲ ಶರ ದಕ್ಷಿಣಾದಿ ರಾಜಪರಿವಾರದವರು ರಾಜನ ಹಿಂದೆ ಸಾಲಾಗಿ ಕುಳಿತರು

ನಾಟಕ ಆರಂಭವಾಯ್ತು, ತಾಳ, ಮದ್ದಳೆ, ಮುಖವೀಣೆ, ವೇಣು, ವೀಣಾದಿ ವಾದ್ಯಧ್ವನಿಗಳೊಡನೆ ಸುಸ್ವರವಾದ ಸಂಗೀತ ಬೆರೆತು ಚಂದ್ರಿಕೆಗೆ ಸವಿಬಂದಂತಾಯ್ತು ಮೊದಲು ನೇತ್ರಮೋಹಿನಿ, ಚಿತ್ತಮೋಹಿನಿಯರೆಂಬ ನಟಿಯರು ತಮ್ಮ ನಾಟ್ಯದಿಂದ ಸಭೆಯನ್ನು ದಂಗುಬಡಿಸಿದರು ಈ ಮೋಹಿನಿಯರ ನೃತ್ಯದಿಂದ ನೇತ್ರ ಮನಗಳು ಮೋಹಗೊಳ್ಳುವುದಿರಲಿ, "ನೋಟದೊಳಗೆ ಕೊಂದರೊಮ್ಮೆ ನೋಟಕರನು | ನಾಟಿಸಿ ನಸುನಗೆಯಿಂದ | ಲೂಟಿಮಾಡಿದರು, ಮೈಯೊಲೆದಾಟದಿಂದೆದೆ | ಗೋಟೆಯ ಕೊಂಡರೇನೆಂಬೆ ||" ಸಂತುಷ್ಟನಾದ ರಾಜನು ಮೇಳದವರಿಗೆ ಹೊರುವಷ್ಟು ಮನ್ನಣೆ ಗಳನ್ನು ತರಿಸಿಕೊಟ್ಟ ಆದರೆ ಅವರಿಗೆ ಬೇಕಿದ್ದುದು ಅದಲ್ಲ ರಾಜನ ಅಂಗಸಂಗ ಆದರೆ ತಾವೆಲ್ಲಿ, ರಾಜನೆಲ್ಲಿ ? " ಧರೆಯ ಮೇಲಣ ಹುಲ್ಲೆ ಚಂದ್ರಮಂಡಲದೊಳ | ರ್ದೆರಳೆಯ ಕಾಮಿಸಿದಂತೆ" ಆಗಿತ್ತು, ಅವರ ಸ್ಥಿತಿ ಅವರ ಕಾತರತೆಯನ್ನರಿತ ರಾಜ ಉಪಾಯದಿಂದ ಅವರನ್ನು ತೃಪ್ತಿಪಡಿಸಿದ

* * * * *

ನೇತ್ರಮೋಹಿನಿ ಚಿತ್ತಮೋಹಿನಿಯರ ನೃತ್ಯ ಬರಿಯ ಪೀಠಿಕೆ ಅವರ ನೃತ್ಯವಾದ ಮೇಲೆ ರಾಣಿಯರು ಹದಿನಾರುಮಂದಿ ಸ್ವತಃ ನಾಟಕರಂಗವನ್ನು ಪ್ರವೇಶಿಸಿ ನಾಟ್ಯ ವಾಡುವರು ಅನುಪಮವಾದ ಅವರ ನಾಟ್ಯವಿದ್ಯಾಕೌಶಲ್ಯದಿಂದ ಸಭಿಕರು ಚಿತ್ರ ಪ್ರತಿಮೆಗಳಾದರು ಅವರ ಹಾವ ಭಾವ ವಿಲಾಸ ವಿಭ್ರಮಗಳಿಂದ ಕಲಾ ಪರಿಣತ ನಾದ ರಾಜನು ಕೂಡ ಮಾರುಹೋದನು ಅವರ 'ದಿಕ್ಕನ್ನಿಕಾ', 'ಜಲಕನ್ನಿಕಾ' ನಾಟ್ಯಗ ಳಿಂದಲೂ, ಸಂಗೀತದ ತಾನ ವೈಖರಿಗಳಿಂದಲೂ ರಾಜನು ತಣಿದುಹೋದನು ಸಭೆ ಯೆಲ್ಲವೂ ಮುಕ್ತಕಂಠವಾಗಿ ಹೊಗಳಿತು ರಾಜನು ನಟವರ್ಗಕ್ಕೆಲ್ಲಾ ಮನ್ನಣೆಯಿತ್ತು, ಸಭೆಯನ್ನು ಉಚಿತ ಸತ್ಕಾರಗಳೊಡನೆ ಸಮಾಪ್ತಿಗೊಳಿಸಿದನು ಅಷ್ಟು ಹೊತ್ತಿಗೆ ರಾತ್ರಿ ಹನ್ನೆರಡು ಘಳಿಗೆಯಾದುದನ್ನು ಅರಮನೆಯ ಜಯಘಂಟೆ ಸೂಚಿಸಿತು. ಜನರೆಲ್ಲರೂ ತೂರಿಹೋಗಿ ರಾಜನೊಬ್ಬನು ಮಾತ್ರ ಉಳಿದುದನ್ನು ಕಂಡು ರಾಣಿಯರು ತೆರೆಮರೆಯಿಂದ ಈಚೆಗೆ ಬಂದರು. ಅವರನ್ನು ತಕ್ಕಂತೆ ಸತ್ಕರಿಸಿ, ಪಾತ್ರಕಾಂತೆಯ ರೆಲ್ಲಾ ಒಟ್ಟಾಗಿ ತನ್ನ ಬಳಿಗೆ ಬರುವಂತೆ ಕರೆದ ಅವರೆಲ್ಲರೂ ಆನಂದದಿಂದ ತಮ್ಮ ಮನದನ್ನನ ಸುತ್ತಲೂ ನೆರೆದರು ಪ್ರಸನ್ನಚಿತ್ತನಾದ ಭರತಚಕ್ರಿ ಬೇಕಾದ ವರವನ್ನು ಬೇಡುವಂತೆ ಅವರನ್ನು ಪ್ರೋತ್ಸಾಹಿಸಿದ ಅವರಿಗೇನು ಬೇಕು ? ರಾಜನೊಡನೆ ನಲಿಯುವ ಸುಖದ ಮುಂದೆ ಮತ್ತಾವ ಸ್ವರ್ಗಸುಖ ಸಮನಾಗಬಲ್ಲದು ? ಆದರೂ ಸ್ತ್ರೀ ಸ್ವಭಾವಕ್ಕನುಸಾರವಾಗಿ "ಇವಳನ್ನು ಕೇಳು, ಅವಳನ್ನು ಕೇಳು" ಎಂದು

ಹೊಯ್ಮಾಲೆತನದಿಂದ ಗುಜುಗುಟ್ಟಿದರು  ತಮ್ಮ ಗುಂಪಿನಲ್ಲಿ ಪದ್ಮಿನಿ ರೂಪಾಣಿಯರಿಲ್ಲದಿರುವುದನ್ನು ಕಂಡು ಅವರೆಲ್ಲಿ ಹೋದರೆಂದು ಅತ್ತಿತ್ತ ನೋಡಿದರು ದೂರದ ಕಂಭದ ಮರೆಯಲ್ಲಿ ಅವರಿಬ್ಬರೂ ನಿಂತಿದ್ದರು ಮುನಿಸು ಮುಖದಮೇಲೆ ಎದ್ದು ಕಾಣುತ್ತಿತ್ತು ಏಕೆ ? ಅವರು ನರ್ತನಮಾಡುವಾಗ ರಾಜ ಒಮ್ಮೊಮ್ಮೆ ವೀಳೆಯದ ನೆಪದಿಂದ ಹೆಮ್ಮಕ್ಕಳ ಕಡೆಗೂ, ಒಮ್ಮೊಮ್ಮೆ ಮಂತ್ರಿಯ ಕಡೆಗೂ ನೋಡುತ್ತಿದ್ದನಂತೆ ರಾಜ ಇದನ್ನರಿಯ , ಅವರನ್ನು ಕರೆತರುವಂತೆ ಸೇವಕಿಯರನ್ನು ಅಟ್ಟಿದ

"ನಮ್ಮ ನರ್ತನ ರಾಜರಿಗೆ ನಯನಮನೋಹರವಾಗಲಿಲ್ಲ ಹೆಡ್ಡ ಹೆಂಗಸರ ನೃತ್ಯವೇನೆಂದು ಮಂತ್ರಿಯ ಗಡ್ಡವನ್ನೇ ನೋಡುತ್ತಿದ್ದ ಈಗ ಬಣ್ಣದ ಮಾತುಗಳಾಡಿದರೆ ನಮಗೆ ಬಂದ ಭಾಗ್ಯವೇನು ? ಇಷ್ಟಕ್ಕೂ ಊಳಿಗದ ಹೆಂಗಸರಾದ ನಿಮ್ಮ ಮುಂದೆ ನಮ್ಮ ಗೋಳು ಹೇಳಿಕೊಂಡ ಏನು ಸುಖ ? ನಾವು ಬರುವುದಿಲ್ಲ ಹೋಗಿ ''
ಅವರ ಸಿಡುಕಿನ ಮಾತು ರಾಜನ ಕಿವಿಗೆ ಬಿತ್ತು

" ರೂಪಾಣಿ ಬಾರೆ ! ಪದ್ಮಿನಿ ಬಾರೆ ! ನಿಮ್ಮ ಮನಸ್ಸಿನ ನೋವು ಏನಿದ್ದರೂ ಹೋಗಲಾಡಿಸುತ್ತೇನೆ  ಬನ್ನಿ ಇಲ್ಲಿ"

"ದೇವರು ನಮ್ಮನ್ನು ಕರೆಯಬೇಕಾದುದಿಲ್ಲ ಕಣ್ಣಿಚ್ಚೆಯಾದರೆ ಮನಕಿಚ್ಚೆಯಾಯಿತು ಕಣ್ಣಿಗೇ ಇಚ್ಛೆಯಾಗಲೊಲ್ಲದ ನಮ್ಮನ್ನು ಕೇವಲ ಬಣ್ಣಗಾರಿಕೆಗಾಗಿ ಏಕೆ ಕರೆಯುವುದು ?" ರಾಜನು ತಾನು ತಪ್ಪಿತಸ್ಥನಲ್ಲವೆಂದೂ ನಿಸ್ಪೃಹನೆಂದೂ ಬೇಕಾದಷ್ಟು ಅಂಗಲಾಚಿದ ಏನೂ ಪ್ರಯೋಜನವಾಗಲಿಲ್ಲ "ಚಂದನವತಿ ಹೋಗು, ಮಂಗಲವತಿ ಹೋಗು, ನೊಂದ ಪೆಂಗಳ ಕರೆತನ್ನಿ" ಎಂದು ರಾಣಿಯರ ಮಧ್ಯಸ್ಥಿಕೆ ಮಾಡಿ ನೋಡಿದ· ಸುತ್ರಾಣಿ, ಪುಷ್ಪಾಣಿ, ಕಟ್ಟಾಣಿ—ಇತ್ಯಾದಿ ಎಲ್ಲ ರಾಣಿಯರು ಹೋಗಿ, ಚತುರೋಪಾಯಗಳನ್ನು ವೆಚ್ಚಮಾಡಿ ನೋಡಿದರು ರೂಪಾಣಿಯೇನೋ ಹಾದಿಗೆ ಬಂದಳು  ಪದ್ಮಿನಿ ಮಾತ್ರ ಸ್ವಲ್ಪವೂ ಸಗ್ಗಲಿಲ್ಲ ರಾಜನ ಪರವಾಗಿ ನಿಂತು ಬಿರುನುಡಿಗಳನ್ನಾಡುತ್ತಿರುವ ರಾಣಿಯರನ್ನು ಕಂಡು ಕೇವಲ ಕಸಿವಿಸಿಯಿಂದ—'ಅರಸನು ಉದಾಸೀನನಾದರೂ ಒತ್ತಿನ ತರುಣಿಯರು ನನ್ನವರು ಎಂದು ನಂಬಿದ್ದೆ  ಅಕ್ಕಂದಿರು ಚನ್ನಾಗಿ ಮಾಡಿದಿರಿ '

ಕಡಲನೊತ್ತದೆ ಕಡಲುದುಕವ ತುಂಬುವ । ಕೊಡನನೊತ್ತುವಂತೆ ನೀವು ।
ಕಡುದೊಡ್ಡ ನೃಪನನೊತ್ತದೆ ನನ್ನನ್ನೊತ್ತುವ | ಬೆಡಗು ಲೇಸೆಂದಳಾ ಜಾಣೆ ||

ರಾಣಿಯರು ನಾಚಿ ತಲೆ ಬಗ್ಗಿಸಿರಬೇಕು ! ಭರತಚಕ್ರಿಗೂ ಗೊತ್ತಾಯಿತು—ಅವಳಿಗೆ ಪ್ರಣಯ ಕಲಹವನ್ನು ಇನ್ನಷ್ಟು ಮುಂದುವರಿಸುವ ಆಸೆ ಇದೆಯೆಂದು ಎದ್ದು ಅವಳ ಬಳಿಗೆ ಹೋಗಿ ಇದಿರು ಮೋಡಿ ಹಾಕಿ ನಿಂತ.

"ಎಲೆಗೆ ಪದ್ಮಿನಿ ! ನಿಮ್ಮಿಬ್ಬರಲ್ಲಿ ಒಬ್ಬಳು ಒಳಗಾದಮೇಲೆ ನೀನಿನ್ನು ಛಲ ಮಾಡಿ ಏನು ಪ್ರಯೋಜನ ? ಬೇಡ ಕಾಣೆ. ನಿನ್ನ ಪಂಥ ನನ್ನ ಬಳಿ ಸಾಗುವುದಿಲ್ಲ."

"ಅಳ್ಳೆದೆಯ ರೂಪಾಣಿ ಲಜ್ಜೆಯಿಲ್ಲದೆ ನಿನಗೆರಗಿದರೆ, ಭಾಪು ! ಈ ಪದ್ಮಿನಿ ಡಿಳ್ಳು ಹೋಗುವವಳಲ್ಲ ಕಟ್ಟಿದ ಕಾಸಿ ಇನ್ನೂ ಬಿಚ್ಚಿಲ್ಲ. ರಾಣಿವಾಸ ಸಾಕ್ಷಿಯಾಗಿ ನೋಡುತ್ತಿರಲಿ ನೀನೂ ನೋಡುತ್ತಿರು"

"ನಿನಗೆ ಅಷ್ಟೊಂದು ಮನೋಧೈರ್ಯವಿದೆಯೆ ?"

"ಓಹೋ !"

"ಹಾಗಾದರೆ ಮುಖಕೊಟ್ಟು ಮಾತನಾಡು ಭ್ರಷ್ಟರಂತೆ ಅಡ್ಡಮೋರೆ ಇಟ್ಟುಕೊಂಡು ಏಕೆ ಮಾತನಾಡುತ್ತಿ ?"

"ಮುಖ ನೋಡಿದರೆ ತಾನೆ ಏನು ಮಹಾ !"—ಮುಖವೆತ್ತಿ ರಾಜನ ಕಡೆ ಒಮ್ಮೆ ನೋಡಿದಳು ಕೋಪ ಮಾಯವಾಯ್ತು ನಸುನಗೆ ಮೊಳೆಯಿತು ತಲೆ ಬಾಗಿದಳು

"ಅಲ್ಲಿಂದಲೇ ವಂದಿಸಿದರೆ ಆಗದು ಬಂದು ಕಾಲಿಗೆ ಅಡ್ಡಬೀಳಬೇಕು"

"ಈಗ ಬಂದು ಈಗ ನಮಸ್ಕಾರ ಮಾಡಿದವರಾರು ?"— ತಲೆಯೆತ್ತಿ ನೋಡಿದಳು ರಾಜನ ಕಡೆ ಪುನಃ ಕೋಪ ಪಲಾಯನವಾಯ್ತು, ಹಸನು ಹುಟ್ಟಿಕೊಂಡಿತು

"ನಿನ್ನ ಪಂಥ ಇನ್ನೂ ಇದೆಯೆ ಪದ್ಮಿನಿ ?"

ಪದ್ಮಿನಿ ದಿಕ್ಕುತೋಚದವಳಾಗಿ ತಲೆಯೆತ್ತಿ ಗಟ್ಟಿಯಾಗಿ ನಗುತ್ತಾ—

"ನೀನೊಬ್ಬ ಮಾಯಗಾರ ಮುಖ ನೋಡಿದೊಡನೆ ನಗೆ ಉಕ್ಕುತ್ತದೆ"

ಪದ್ಮಿನಿ ಇನ್ನೂ ದೂರವಾಗಿಯೇ ನಿಂತಿದ್ದಳು "ನಿಂದೆಯಾದರೆ ಪದ್ಮಿ ನನ್ನಾಣೆ" ಎಂದ ರಾಜ ಪದ್ಮಿ ಹತ್ತು ಹೆಜ್ಜೆ ಮುಂದಕ್ಕೆ ನಡೆದು—

"ಜಾಣಿಂದ ಜಯಿಸಲಾರದೆ ಆಣೆಯಿಡುತ್ತಾರೆ" ಎಂದಳು ಆದರೂ ಭರತನ ಬುಟ್ಟಿಯಲ್ಲಿ ಬಿದ್ದು ಹೋಗುತ್ತಾಳೆ ಇತರ ರಾಣಿಯರ ಬಲವಂತಕ್ಕೆಂಬಂತೆ ಬಂದು ರಾಜನ ಪಾದಗಳನ್ನು ಮುಟ್ಟಿ ನಮಸ್ಕರಿಸುತ್ತಾಳೆ. ಇನ್ನು ರಾಜನ ಸರದಿ ಆತನು ಮುಸುಕಿಟ್ಟು ಮೌನವಾಗಿ ಕುಳಿತ ರಾಣಿಯರೆಲ್ಲರೂ ಆತನ ಸುತ್ತಲೂ ನೆರೆದು ಹಲವು ವಿಧದಿಂದ ರಮಿಸುವರು ಸ್ವತಃ ಪದ್ಮಿನಿಯೇ ಆತನನ್ನು ವಿಧವಿಧವಾಗಿ ಆದರೋಪಚಾರಗಳಿಂದ ಸತ್ಕರಿಸುವಳು ಕಷ್ಟಕ್ಕೆ ತಕ್ಕ ಫಲ ರಾಜನು ಸುಪ್ರಸನ್ನನಾಗಿ ಹಲವು ರೂಪಗಳನ್ನು ತಾಳಿ ಎಲ್ಲ ರಾಣಿಯರೊಡನೆಯೂ ಪ್ರತ್ಯೇಕ ಪ್ರತ್ಯೇಕವಾಗಿ ವಿಹರಿಸಿ ಆನಂದಗೊಳಿಸುತ್ತಾನೆ

* * * * *

ಇಂತಹ ನಿರ್ದುಷ್ಟವೂ ಸುಪುಷ್ಟವೂ ಆದ ಶೃಂಗಾರ ಚಿತ್ರಗಳು ಕನ್ನಡ ಕಾವ್ಯ ಪ್ರಪಂಚದಲ್ಲಿ ಹೇಳಿಕೊಳ್ಳುವಷ್ಟು ಹೆಚ್ಚಾಗಿ ಇಲ್ಲ. ರತ್ನಾಕರನ ಕಲಾಭವನದಲ್ಲಿ ಇವುಗಳು ತಂಡತಂಡವಾಗಿ ಕಂಡುಬರುತ್ತವೆ ಬೇಲೂರಿನ ದೇವಾಲಯದಂತೆ ಕಲಾಮಯವಾಗಿರುವ ಈ ಶಬ್ದಚಿತ್ರಗಳನ್ನು—ಮಾತಿನ ಪ್ರತಿಮೆಗಳನ್ನು—ಪದರ ಪದರವಾಗಿ ಬಿಡಿಸಿ ನೋಡುವ ತಾಳ್ಮೆ ಬೇಕು, ನೋಡಿ ಆನಂದಿಸುವ ಹೃದಯ ಬೇಕು.

# ಕವಿ ಕಾವ್ಯ ದೃಷ್ಟಿ

'ಗಣನೆಯಿಲ್ಲದ ಸುಖಸೊಳ್ಳೋಲಾಡಿ'ದವನು ಕಥಾನಾಯಕ, ಎಂಬುದನ್ನಿಟ್ಟು ಕೊಂಡು ಕವಿಯು ಭೋಗವರ್ಣನೆಯನ್ನು ಬೇಕಾದಷ್ಟು ಮಾಡಿದ್ದಾನೆ ಈ ವರ್ಣನೆಯ ಬೆಳವಣಿಗೆಗೆ ಬೇಕಾದ ಬಿತ್ತು ಆದಿಪುರಾಣದಲ್ಲಿದೆ ಭರತನಿಗೆ ತೊಂಬತ್ತಾರು ಸಹಸ್ರ ಹೆಂಡಿರಿದ್ದರೆಂಬ ವಿಚಾರ ಅಲ್ಲಿಯೇ ಬಂದಿದೆ, ಹೆಸರುಗಳನ್ನು ಹೇಳಿಲ್ಲ ಜಲಕೇಳಿ ಕೌಮುದೀವಿಹಾರಗಳೂ ಅಲ್ಲಿವೆ ಆ ಸುಖಭೋಗಗಳ ವರ್ಣನೆಯನ್ನು ನಮ್ಮ ಕವಿ ಹೆಚ್ಚು ವಿಸ್ತಾರವಾಗಿ, ರಸವತ್ತಾಗಿ, ಪ್ರತಿಭಾಯುತವಾಗಿ ಪ್ರತಿಪಾದಿಸಿದ್ದಾನೆ ಮೂಲಕವಿಯಂತೆ ರತ್ನಾಕರನಾದರೂ ಧಾರ್ಮಿಕದೃಷ್ಟಿಯಿಂದಲೇ ಪ್ರಚೋದಿತನಾದವನು, ಈತನ ಆಶಯವೂ ಧರ್ಮತತ್ವದ ಬೋಧನೆಯೇ, ಧರ್ಮದ ಆವರಣಕ್ಕೆ ಭರತಚಕ್ರವರ್ತಿಯನ್ನು ಆಧಾರಭೂತವಾಗಿ ಮಾಡಿಕೊಂಡು ತತ್ವಬೋಧನೆಯನ್ನು ಕಾವ್ಯರೂಪದಲ್ಲಿ ಮಾಡಿದ್ದಾನೆ ಆದ್ದರಿಂದ ನಾವು ಭರತೇಶವೈಭವವನ್ನು ಓದುವಾಗ, ಅದನ್ನು ಕುರಿತು ಚರ್ಚಿಸುವಾಗ ಈ ಧರ್ಮ ದೃಷ್ಟಿಯು ನಮ್ಮ ದೃಕ್ಪಥದಿಂದ ದೂರವಾಗದಂತೆ ನೋಡಿಕೊಳ್ಳಬೇಕಾದುದು ಅತ್ಯಾವಶ್ಯಕ ಕವಿಯು 'ಕೀರ್ತಿಯ ಬಯಸಿ' ಕಾವ್ಯವನ್ನು ಉಸಿರಿದವನಲ್ಲ, 'ಧ್ಯಾನಕೆ ಬೇಸರಾದಾಗ ನನ್ನಾತ್ಮ ಲೀಲಾನುವೃದ್ಧಿಗೆ ಪೇಳ್ದೆನ್ನೈಸೆ' ಎಂದು ತನ್ನ ಕೃತಿನಿರ್ಮಾಣಕ್ಕೆ ಕಾರಣವನ್ನು ಹೇಳಿಕೊಂಡಿದ್ದಾನೆ ತನ್ನ ಕಾವ್ಯವನ್ನು ಎಲ್ಲರೂ ಓದಬೇಕೆಂಬ ಆಗ್ರಹವು ಸಹ ಕವಿಗಿಲ್ಲ 'ಬೇಕಾದರಾಲಿಸುವುದು, ಬೇಡವಾಗೆ ಪರಾಕುಮಾಡುವುದೆನಗಲ್ಲಿ | ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿರಾಕಾಂಕ್ಷಿ' ಎಂದು ಘಂಟಾಘೋಷವಾಗಿ ಹೇಳಿಬಿಟ್ಟಿದ್ದಾನೆ ಭರತನ ಆತ್ಮವು ಹೇಗೆ ವೃದ್ಧಿಹೊಂದಿ ವಿಕಸಿತವಾಯಿತೆಂಬುದನ್ನು ಹೇಳುವಾಗ ಅದು ತನ್ನ ಆತ್ಮದಲ್ಲಿಯೂ ತಕ್ಕಮಟ್ಟಿಗೆ ಪ್ರತಿಬಿಂಬವಾದರೆ ಸಾಕು' ಎಂಬುದು ಕವಿಯ ಹೆಬ್ಬಯಕೆ

ಭರತನು ಧರ್ಮವೀರ ಅವನಲ್ಲಿ ಕವಿಗೆ ತುಂಬಾ ಭಕ್ತಿಯಿದೆ, ಗೌರವವಿದೆ. ಆತನು ಜೈನರಿಗೆಲ್ಲಾ ಆದರ್ಶಪ್ರಾಯನೆಂದು ಆತನ ಭಾವನೆ. ತನ್ನ ಮತಾನುಯಾಯಿಗಳೆಲ್ಲರೂ ಹಾಗೆಯೇ ಭಾವಿಸಬೇಕೆಂದು ಆತನ ಆಶಯ ಅದಕ್ಕಾಗಿಯೇ ಭರತನ ಚರಿತ್ರೆಯನ್ನು ಜೈನಪುರಾಣವನ್ನನುಸರಿಸಿ ಬರೆದಿದ್ದಾನೆ 'ಶೃಂಗಾರಕ್ಕಾಗಿ ಕಷ್ಟರ ಕಥೆಗೇಳ್ದು ಜನಂಗಳು' ಕೆಟ್ಟುಹೋಗುತ್ತಾರೆ. ಹಾಗಾಗದಿರುವುದಕ್ಕಾಗಿ 'ಅಂಗಸುಖಿಯು ಮೋಕ್ಷಸುಖಿಯ ಕಾವ್ಯವನಿಷ್ಟು ಶೃಂಗಾರ ಕಟ್ಟಿ' ಹೇಳುತ್ತಿದ್ದಾನೆ

ಧುರುಳಕ ಪಾದರಿಯರ | ನೀಚಸತಿಯರ ವಿರಚಿಸಿತಿಲ್ಲ ಸಿಂಗರಕೆ |
ಭರತಚಕ್ರಿಯ ಪೇಳ್ದೆನವರ ಪೆಂಡಿರ ಪೇಳ್ದೆ | ಸ್ಮರಿಸಿದರೆಲ್ಲರ್ಗೆ ಪುಣ್ಯ ||

ಶುಷ್ಕ ವೇದಾಂತವು ಫಲಕಾರಿಯಾಗದೆಂದು ಬಗೆದು ಇಹಲೋಕದ ಭೋಗೋಪಭೋಗಗಳ [illegible] ತನ್ನ ಆಧ್ಯಾತ್ಮಿಕ ಕಟ್ಟಡವನ್ನು ಭವ್ಯವಾಗಿ ನಿರ್ಮಿಸಿ

ದ್ದಾನೆ ಕಾವ್ಯಧರ್ಮ ಧರ್ಮಗಳನ್ನು ಸಮನ್ವಯಗೊಳಿಸಿದ್ದಾನೆ ತನ್ನ ಸೃಷ್ಟಿಯಿಂದ ಹೊರಚಿಮ್ಮಿರುವುದು ಉದಾತ್ತ ವ್ಯಕ್ತಿಯ ಸತ್ತ್ವೋದ್ರೇಕದಿಂದ ಕೂಡಿದ ಸುಂದರವಾದ ಶೃಂಗಾರರಸ ಶೃಂಗಾರಪೂರಿತವಾದ ಸನ್ನಿವೇಶಗಳಿಂದ ಕಾವ್ಯವು ರಸಮಯವಾಗಿದ್ದರೂ ಔಚಿತ್ಯವನ್ನು ಮೀರಿದುದಲ್ಲ ತಾನೇನೂ ಸಂಪ್ರದಾಯಕ್ಕೆ ಬಲಿಬಿದ್ದು ಸೂಳೆಗೇರಿಯ ವರ್ಣನೆ ಇತ್ಯಾದಿ ಲಘುಶೃಂಗಾರಕ್ಕೆ ಕೈಹಾಕಿಲ್ಲ ಇದರಿಂದ 'ಪ್ರೋಕರು ನಾಲ್ಕೆಂಟುಮಂದಿ ಚಿತ್ತದೊಳತಿ ವ್ಯಾಕುಲಬಟ್ಟ'ರೂ ಪಡಲಿ "ಅಳಿದೊಡಂ ಉಳಿದೊಡಂ ಬಟ್ಟೆದೋರಿಪ ರಸಭರಿತಂ ಚರಿತಮ್ಮೆಸೆ"—ಎನ್ನುವಂತಿರಬೇಕು ತನ್ನ ಕಾವ್ಯರತ್ನ

ಕವಿಯ ಮತದಲ್ಲಿ ವೈರಾಗ್ಯವೆಂದು ಹಂಬಲಿಸಿ ಇಹಸೌಖ್ಯವನ್ನು ತ್ಯಜಿಸುವುದು ಮೂಢತನ, ಹೇಡಿತನ 'ಈಸಬೇಕು, ಇದ್ದು ಜೈಸಬೇಕು' ಅಮೂಲ್ಯವಾಗಿ ದೊರೆತುದನ್ನು ಅನುಭವಿಸಬೇಕು ಅನುಭವಿಸುವಾಗ ಉದಾತ್ತದೃಷ್ಟಿ ಕಣ್ಮರೆಯಾಗಬಾರದು ಲೌಕಿಕ ಸುಖವನ್ನು ಸಂಪೂರ್ಣವಾಗಿ ತ್ಯಾಗಮಾಡುವುದು ಅನುಚಿತ, ಅನಾವಶ್ಯಕ ಇದನ್ನು ಅನುಭವಿಸದಿದ್ದರೆ ಮನಸ್ಸು ಅವುಗಳ ಪ್ರಲೋಭನೆಗೆ ಒಳಗಾಗಬಹುದು ಜಗತ್ತಿನ ನಶ್ವರತೆಯನ್ನು ಅನುಭವದಿಂದ ಸಿದ್ಧಾಂತಗೊಳಿಸುವುದು ಹೆಚ್ಚು ಸ್ವಾಭಾವಿಕವಾದುದೇ ಹೊರತು, ಬರಿಯ ಜ್ಞಾನದಿಂದ ವೈರಾಗ್ಯವನ್ನು ಗಳಿಸಹೊರಡುವುದು ಶುದ್ಧ ಕೃತಕ 'ಜ್ಞಾನವಿಡಿದ ಭೋಗಿ ಯೋಗಿ' ಇಹದ ಅಧ್ರುವವೂ ಅಪ್ರಯೋಜಕವಲ್ಲ, ಮಿತಿಯಾದ ಈ ಸುಖವನ್ನು ಗಳಿಸಬೇಕು ಜೀವನಕ್ಕೆ ಭೋಗ ಯೋಗಗಳೆರಡೂ ಆವಶ್ಯಕ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಮೋಕ್ಷವೇ ನಮ್ಮ ಹೆಗ್ಗುರಿಯಾದರೂ ಉಳಿದ ಮೂರೂ ಅದಕ್ಕೆ ಪರಿಪೋಷಕಗಳಾಗಿ ಬೇಕೇ ಬೇಕು ಆ ಮೂರೂ ಭೋಗಭಾಗ್ಯಗಳೇ ಯೋಗವಿಲ್ಲದ ಭೋಗವೂ, ಭೋಗವಿಲ್ಲದ ಯೋಗವೂ ಅಪ್ರಯೋಜಕ ಇವುಗಳ ಪರಸ್ಪರ ಸಾಮರಸ್ಯವೇ ಹೆಚ್ಚು ಆಕರ್ಷಕವೂ, ರಮಣೀಯವೂ ಆದ ಪ್ರಯೋಜನವನ್ನು ಕೊಡತಕ್ಕುದು—ಇದೇ ರತ್ನಾಕರನ ತತ್ತ್ವನಿರೂಪಣೆ ಭೋಗಮೂಲವಾದ ಶೃಂಗಾರವನ್ನೂ ಯೋಗಮೂಲವಾದ ತ್ಯಾಗವನ್ನೂ ಪರಸ್ಪರ ವಿರುದ್ಧವಾಗದಂತೆ ಪ್ರದರ್ಶಿಸುವುದೇ ರತ್ನಾಕರನ ಉದ್ದೇಶ ಭೋಗವು ಯೋಗಕ್ಕೆ ವಿರುದ್ಧವೆಂದು ಜನರು ತಿಳಿದುಕೊಂಡಿರಬಹುದು ಆದರೆ, ರತ್ನಾಕರನ ದೃಷ್ಟಿಯಲ್ಲಿ ಭೋಗವು ಯೋಗದ ಮೊದಲ ಮೆಟ್ಟಲು ಭೋಗದ ಅರಿವಿಲ್ಲದೆ ಯೋಗಕ್ಕೆ ಕೈಯಿಕ್ಕಿದರೆ 'ಅರಿಯದ ಬ್ರಾಹ್ಮಣ ಯಜ್ಞಮಾಡಿ ಗಡ್ಡ ಸುಟ್ಟುಕೊಂಡಂತಾಗುತ್ತದೆ' ಅಂತಹವನ ಮನಸ್ಸಿನಲ್ಲಿ ಭೋಗದ ಬಯಕೆ ಸಾಯದೆ, ಸಮಯಬಂದಾಗ ಕಟ್ಟುಹರಿದ ಪಂಜಾಗುತ್ತದೆ ಭೋಗದ ಅಲ್ಪತೆ ಅನುಭವವೇದ್ಯವಾದರೆ ಮಾತ್ರ ಯೋಗಭ್ರಷ್ಟನಾಗುವ ಭಯವಿರುವುದಿಲ್ಲ ಒಟ್ಟಿನಲ್ಲಿ ರತ್ನಾಕರನ ಸಿದ್ಧಾಂತ—ಭೋಗದಲ್ಲಿ ಬೇರನ್ನು ಬಿಟ್ಟು, ಮೇಲಕ್ಕೆ ಚಿಮ್ಮಿ, ಯೋಗದಲ್ಲಿ ಹೂವಾಗುವ ಬೆಳವಣಿಗೆಯೇ ಅತ್ಯಂತ ಯೋಗ್ಯವಾದುದು, ಶ್ರೇಷ್ಠವಾದುದು

ರತ್ನಾಕರನು ತನ್ನ ಮನಸ್ಸಿನಲ್ಲಿ ಉಂಟಾದ ಒಂದು ಸಿದ್ಧಾಂತವನ್ನು ಪ್ರತಿಪಾದಿಸುವುದಕ್ಕಾಗಿ ಅನುಸರಿಸಿರುವ ಮಾರ್ಗವಾವುದು ? ಇಹಲೋಕದ ಭೋಗಾನುಭವದಿಂದ ಆತನು ಕಾವ್ಯವನ್ನು ಆರಂಭಿಸುತ್ತಾನೆ ಇಹಲೋಕ ಭೋಗಗಳಿಗೆ ಪ್ರಥಮ ಸೋಪಾನ ಐಶ್ವರ್ಯ ಆಗರ್ಭ ಶ್ರೀಮಂತನಾದ ಭರತನಿಗೆ ಅದು ಬೇಕಾದಷ್ಟಿದೆ ಷಟ್ಖಂಡಗಳ ಭಂಡಾರಕ್ಕೂ ಆತನು ಒಡೆಯ ನವನಿಧಿಗಳೂ ನವರತ್ನಗಳೂ ಆತನ ಹಸ್ತಗತವಾಗಿವೆ ಇನ್ನು ಎರಡನೆಯ ಭೋಗಸಾಧನ ಕಾಮಿನಿ. ಅದಕ್ಕೇನೂ ಕೊರತೆಯಿಲ್ಲ ತೊಂಭತ್ತಾರುಸಾವಿರ ಜನ ಮಾನಿನೀಮಣಿಯರಿದ್ದಾರೆ. ಆತನು ಬಯಸಿದುದೆಲ್ಲವೂ ಹಸ್ತಗತವಾಗಿವೆ ಆತನ ಇಂದ್ರಿಯಗಳು ಕುಡಿಕುಡಿದು ತುಂಬಿ ತೇಗುವಷ್ಟು ಪರಿಕರಗಳು ಸದಾ ಸಿದ್ಧವಾಗಿವೆ ಇವುಗಳೂ ನಿರ್ದುಷ್ಟವಾದ, ಧರ್ಮಬದ್ಧವಾದ ಪರಿಕರಗಳು ಮನುಷ್ಯನು ಅರ್ಥ, ಕಾಮಗಳ ಪ್ರಲೋಭನದಿಂದ ಮತ್ತೊಬ್ಬನ ವಸ್ತುವನ್ನು ಅನುಭವಿಸಯತ್ನಿಸುವುದು ನ್ಯಾಯವಲ್ಲ ಅದು ಅಧರ್ಮ ಹಾಗೆ ಮಾಡಿದಲ್ಲಿ, ಸಮಾಜದಲ್ಲಿ ಕ್ರಾಂತಿ ವಿಪ್ಲವಗಳುಂಟಾಗುತ್ತವೆ ಇದನ್ನು ನಿವಾರಿಸುವ, ನಿವಾರಿಸಬಲ್ಲ ಮಹಾಶಕ್ತಿ ಧರ್ಮಬಲವೊಂದೇ ಆದಕ್ಕಾಗಿ ಕವಿ ಧರ್ಮಕ್ಕೆ ಪ್ರಥಮಸ್ಥಾನವನ್ನು ಕೊಟ್ಟಿದ್ದಾನೆ ಅರ್ಥ, ಕಾಮಗಳು ಭರತಸಾಮ್ರಾಟನ ಅಡಿಯಾಳುಗಳಾಗಿದ್ದರೂ ಜೀವದಯೆಯ ಮಹಾಧರ್ಮವನ್ನೂ ಪಂಚಾಣುವ್ರತಗಳನ್ನೂ[1] ನಡೆಸುತ್ತಿರುವ ಕಥಾನಾಯಕನು ಲೋಕದ ಕೋಲಾಹಲಕ್ಕೆ ಒಳಗಾಗಿಲ್ಲ ಆತನ ಜೀವನದ ವಾತಾವರಣದಲ್ಲಿ ಧರ್ಮಕ್ಕೆ ಬೇಕಾದಷ್ಟು ಅವಕಾಶವಿದೆ ಕವಿಯು ಆ ಅವಕಾಶಗಳ ಸದುಪಯೋಗದಿಂದ ಭರತನಿಗೆ ಹಿಂಸಾಕರವಲ್ಲದ ಸಕಲ ಸುಖಗಳನ್ನೂ ಒದಗಿಸಿಕೊಟ್ಟಿದ್ದಾನೆ ಜೈನಧರ್ಮಾನುಸಾರವಾಗಿ ರಾಜನು ಅನುಭವಿಸಬಹುದಾದ ಇಪ್ಪತ್ತು ಬಗೆಯ ಸೌಖ್ಯಗಳೂ[2] ಭರತನಿಗೆ ಕರಗತವಾಗಿವೆ

ರತ್ನಾಕರನಿಗೆ ಭರತೇಶನಲ್ಲಿ ಗೌರವವಿರುವುದು ಆತನು 'ರಾಜರ್ಷಿ' ಎಂಬ ಭಾವನೆಯಿಂದ. ತನ್ನ ಸಮಕಾಲೀನರಾದ ಹಲವು ರಾಜರ ಜೀವನವು ತನಗೆ ಸರಿಬೀಳದೆ ಆದರ್ಶರಾಜನೊಬ್ಬನ ಜೀವನಚರಿತವನ್ನು ಜನರ ಕಣ್ಣೆದುರಿಗೆ ಕಟ್ಟಬೇಕೆಂಬ ಉದ್ದೇಶದಿಂದ ಭರತನ ಪಾತ್ರಪ್ರತಿಪಾದನೆಗೆ ಕೈಹಾಕಿರಬಹುದೋ ಏನೋ ! ರತ್ನಾಕರನ ಅಭಿಪ್ರಾಯದಲ್ಲಿ ರಾಜನೆಂದರೆ ಹೀಗಿರಬೇಕು—

---

[1] ಅಹಿಂಸೆ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ, ಸತ್ಯ

[2] ಗೃಹೋಪಭೋಗ, ಸ್ನಾನೋಪಭೋಗ, ಪಾದುಕೋಪಭೋಗ, ತಾಂಬೂಲೋಪಭೋಗ, ವಿಲೇಪನೋಪಭೋಗ, ವಸ್ತ್ರೋಪಭೋಗ, ಮಾಲ್ಯೋಪಭೋಗ, ಭೂಷೋಪಭೋಗ, ಆಸನೋಪಭೋಗ, ಚಾಮರೋಪಭೋಗ, ಆಸ್ಥಾನೋಪಭೋಗ, ಪುತ್ರೋಪಭೋಗ, ಅಶ್ವೋಪಭೋಗ, ಪಾನೀಯೋಪಭೋಗ, ಪಾದಭಂಗೋಪಭೋಗ, ಯಾನೋಪಭೋಗ, ಛತ್ರೋಪಭೋಗ, ಶಯ್ಯೋಪಭೋಗ, ಧೂಪೋಪಭೋಗ, ಯೋಷಿದುಪಭೋಗ ಈ ಇಪ್ಪತ್ತು ಜೈನಪ್ರ[illegible]ವಾದ ರಾಜೋಪಭೋಗಗಳು

ರಾಜಶ್ರೀಯೊಳನೇಕ ಕಾಮಿನಿಯರುಂಟಾಳಾಪ ನೃತ್ಯಂಗಳುಂ |
ಟಾ ಜಿಹ್ವಾರುಚಿಯುಂಟು ಕಾಮಿಸಿದುವೆಲ್ಲಾವುಂಟು ಉಂಟಾದೊಡಂ |
ರಾಜೀವಂ ಕೆಸರಲ್ಲಿಯಲ್ಲದವೊಲಿದ್ದೂರ್ಧ್ವಕ್ಕೆ ಕಣ್ಣಿಟ್ಟೊಡಾ |
ರಾಜಂ ರಾಜನೆ ತಾನೆ ರಾಜಋಷಿಯೈ ರತ್ನಾಕರಾಧೀಶ್ವರಾ ||

[ರತ್ನಾಕರಾಧೀಶ್ವರ ಶತಕ]

ಇಂತಹ ಆದರ್ಶರಾಜನ ಜೀವನವನ್ನು ಭರತೇಶನ ಜೀವನದಲ್ಲಿ ಮೈದೂಡಿಸಲು ಹೊರಟಿದ್ದಾನೆ, ಕೃತಕೃತ್ಯನಾಗಿದ್ದಾನೆ, ಕವಿ

ಶೃಂಗಾರವೂ, ವೈರಾಗ್ಯವೂ ಎಣ್ಣೆ ಸೀಗೆಕಾಯಿಗಳಂತೆ ಒಂದಿದ್ದೆಡೆ ಮತ್ತೊಂದಕ್ಕೆ ಪ್ರವೇಶವಿಲ್ಲ ಈ ರಾತ್ರಿ ಹಗಲುಗಳೆರಡನ್ನೂ ಕಟ್ಟಿ ಒಂದೆಡೆ ಇಟ್ಟಿರುವ ಕೀರ್ತಿ ರತ್ನಾಕರನದು ಭರತನು ಶೃಂಗಾರದ ಸರಸ್ಸಿನಲ್ಲಿಯೇ ತೇಲಾಡುತ್ತಿರುವ ಕಮಲ ಶೃಂಗಾರ ಭೋಗ ಪರಿಕರಗಳು ಸುತ್ತುಮುತ್ತಲೂ ಕೋಟೆ ಕಟ್ಟಿಕೊಂಡಿವೆ ಭರತನೂ ಅವುಗಳ ಸ್ವರ್ಣಶೃಂಖಲೆಯಲ್ಲಿ ಬದ್ಧನಾಗಿರುವನೇನೋ ಎಂಬಂತೆ ಕಾಣಿಸಿಕೊಳ್ಳುತ್ತಾನೆ ಆದರೆ ಯಾವ ನಿಮಿಷದಲ್ಲಿಯೋ ಶೃಂಖಲಾತೀತನಾಗಿ, ಯೋಗಪರವಶನಾಗಿ ಬ್ರಹ್ಮಾನಂದದಲ್ಲಿ ತಲ್ಲೀನನಾಗುತ್ತಾನೆ ಜಗತ್ತಿನ ತೋರಿಕೆಯ ಆಟದಲ್ಲಿ ಚಾಚೂ ತಪ್ಪುತ್ತಿಲ್ಲವಾದರೂ ಇದು ನಶ್ವರವೆಂಬ ಭಾವನೆ ಸದಾ ಸ್ಮರಣೆಯಲ್ಲಿರುತ್ತದೆ ಈ ನಿಮಿಷದಲ್ಲಿ ಮಡದಿಯೊಡನೆ ಸುಖಭೋಜನಮಾಡಿ ವೀಳೆಯವನ್ನು ಸವಿಯುತ್ತಾ, ಸಂಗೀತವನ್ನು ಕೇಳುತ್ತಾ, ಭೋಗದಲ್ಲಿ ತಲ್ಲೀನನಾಗಿರುವಂತೆ ತೋರಿದರೆ ಮರುನಿಮಿಷದಲ್ಲಿ ಕಣ್ಮುಚ್ಚಿ ಚಿನ್ಮಯರೂಪವನ್ನು ಒಳಗಣ್ಣಿನಿಂದ ಕಾಣುತ್ತಾ ಯೋಗಿಯಾಗಿರುತ್ತಾನೆ ಇವನ ಆಳವನ್ನು ಅರಿಯುವುದೇ ಯಾರಿಗೂ ಅಸಾಧ್ಯ ಶ್ರೀಕೃಷ್ಣನಂತೆ ಭರತನೂ ಪದ್ಮಪತ್ರಮಿವಾಂಭಸ ಓದುವವರಿಗೆ ಶೃಂಗಾರಪೂರಿತವಾಗಿದ್ದರೂ ಕವಿಯ ದೃಷ್ಟಿಯಿಂದ ಇಲ್ಲಿ ಹೆಚ್ಚು ಶೃಂಗಾರವಿಲ್ಲ ಕವಿ ಹೇಳುವಂತೆ ಭರತ 'ಉಂಡುಪವಾಸಿ, ಬಳಸಿ ಬ್ರಹ್ಮಚಾರಿ, ಭೂಮಂಡಲವಿದ್ದು ನಿಸ್ಸೀಮ'

ಸಂಸಾರವಂದಿಗನಾದವನು ಯಾವ ಯಾವ ಸೌಖ್ಯಗಳನ್ನು ಅನುಭವಿಸಬಹುದೋ ಆ ಸೌಖ್ಯಗಳಾವುದರಿಂದಲೂ ಭರತನು ವಂಚಿತನಾಗಿಲ್ಲ ಶ್ರೀಮಂತನಾದ ಸಂಸಾರಸುಖಿ ಆತ ಹಲವು ಜನರಿಂದ ಪರಿವೃತನಾದ ಸಂಸಾರಿಯ ಜೀವನವು ಹೀಗೆ ಸುಖಮಯವಾಗಬೇಕಾದರೆ ಆತನನ್ನು ಅವಲಂಬಿಸಿರುವವರು ಚಂದ್ರನನ್ನು ಸುತ್ತುವರಿದ ನಕ್ಷತ್ರಗಳಂತಿರಬೇಕು ಪರಸ್ಪರ ದ್ವೇಷಾಸೂಯೆಗಳಿಂದ ದೂರವಾಗಿರುವುದಷ್ಟೇ ಅಲ್ಲ, ತಮ್ಮ ವ್ಯಕ್ತಿತ್ವವನ್ನೇ ಬದಿಗೊತ್ತಿ ಒಡೆಯನ ಸೇವೆಯಲ್ಲಿ ತಮ್ಮ ಜನ್ಮಸಾರ್ಥಕತೆಯನ್ನು, ಜನ್ಮಸಾಫಲ್ಯವನ್ನು ಕಂಡುಕೊಳ್ಳುವಂತಿರಬೇಕು ಭರತನ ಹಲವು ಹೆಂಡಿರು, ಭಾವಮೈದುನರು, ಅತ್ತೆಮಾವಂದಿರು—ಇತ್ಯಾದಿ ಗಣನಾತೀತರಾದ ಬಂಧುಬಾಂಧವರು ಭರತನ ಸೌಖ್ಯವನ್ನು ಹೆಚ್ಚಿಸಲು ಸಹಾಯಕರಾಗಿದ್ದಾರೆ, ಎಲ್ಲರೂ ಹೊಂದಿಕೊಂಡು ಹೋಗುತ್ತಾರೆ ಕವಿಯ ಕೌಶಲ್ಯ ಭರತನಿಗೆ ಸುಖಸಂಪತ್ತುಗಳ ಭಂಡಾರವನ್ನು ದೊರಕಿಸಿಕೊಟ್ಟಿದೆ.

# ಭರತನ ಸಂಸಾರಚಿತ್ರ

ಕವಿ ತನ್ನ ಸುತ್ತುಮುತ್ತಿನ ಜನಜೀವನದಿಂದಲೂ, ತನ್ನ ಸ್ವಂತ ಅನುಭವ ದಿಂದಲೂ ಸಂಸಾರಸೌಖ್ಯದ ಸಾರವೇನೆಂಬುದನ್ನು ಅರಿತುಕೊಂಡಿದ್ದಾನ ಮನುಷ್ಯ ಕೃತವಾದುದು ಯಾವಾಗಲೂ ಅಸಂಪೂರ್ಣ , ಅರಕೆಯೇ ಮಾನವತೆಯ ಹಿರಿಯ ಕುರುಹು ಇಂತಹ ಅಸಂಪೂರ್ಣವಾದ ಕುಂದುಕೊರತೆಗಳಿಂದ ಕೂಡಿದ—ಸಂಸಾರ ಚಿತ್ರದಲ್ಲಿ ಈ ಕೊರತೆ ಕುಂದುಗಳ ಅಂಕುಡೊಂಕುಗಳನ್ನು, ಯಾಚಿ ಕೋಚಿಗಳನ್ನು ಕೆತ್ತಿ ನೇರಮಾಡಿ ನಯಗೊಳಿಸಿದ ಸುಂದರವಾದ ಸಂಸಾರಚಿತ್ರವನ್ನು ಕವಿಯು ಭರತ ನಲ್ಲಿ ಆರೋಪಿಸಿ, ನಮ್ಮ ಕಣ್ಣೆದುರು ಕುಣಿಸುತ್ತಾನೆ ಕವಿಯ ಅನುಭವದ ಪರಿಪೂರ್ಣೀ ಕರಣವೇ ಒಂದು ಆದರ್ಶಸತ್ಯವನ್ನು ಸೃಷ್ಟಿಸಿಕೊಳ್ಳುವಂತೆ ಮಾಡಿ, ಭರತನ ಸಂಸಾರ ಚಿತ್ರವನ್ನು ಸೃಷ್ಟಿಸಿವೆ ಅವನು ರಾಜನಾಗಿ ನಡೆಯುತ್ತಿದ್ದುದೇ ಒಂದು ರೀತಿ, ಮನೆಯ ಜನಗಳೊಡನೆ ಕಲೆತು ನಡೆಯುತ್ತಿದ್ದುದೇ ಬೇರೊಂದು ರೀತಿ ಸಂಸಾರದ ನಡವಳಿಕೆ ಗಳಲ್ಲಿ ಭರತನು ಸಾಮಾನ್ಯ ಜನರಂತೆ ಹೇಗೆ ನಡೆದುಕೊಳ್ಳುತ್ತಿದ್ದನೆಂಬುದು ನಮಗೆ ಕಂಡುಬರುತ್ತದೆ ಈ ಭಾಗದಲ್ಲಿ ರತ್ನಾಕರನ ಕವಿತೆ ಕಾಲದೇಶಗಳ ಎಲ್ಲೆಯನ್ನು ದಾಟಿ ಎಲ್ಲ ಜನರ ಬದುಕು ಸೌಖ್ಯಗಳಿಗೆ ಅನ್ವಯಿಸಿಕೊಳ್ಳಲು ಯೋಗ್ಯವಾದುದಾಗಿ, ಕವಿಗೆ ಮಹತ್ತನ್ನು ಕೊಟ್ಟಿದೆ

ಒಬ್ಬ ಸಂಸಾರಿಯ ಸ್ಥಾನವೇನು ? ಮನುಷ್ಯನ ಜೀವನಕ್ಕೆ ನಿಕಟಸಂಬಂಧವುಳ್ಳ ಜನಸಂಖ್ಯೆ ಬಹು ಅಲ್ಪ ಈ ಪರಿಮಿತಿಯುಳ್ಳ ಜನಸಮುದಾಯವೇ ಸಂಸಾರ ಒಬ್ಬನೇ ಮನೆಗೆ ಯಜಮಾನನಾಗಿ, ತಮ್ಮನಿಗೆ ಅಣ್ಣನಾಗಿ, ಮಗನಿಗೆ ತಂದೆಯಾಗಿ, ಹೆಂಡತಿಗೆ ಗಂಡನಾಗಿ, ಸೇವಕನಿಗೆ ಯಜಮಾನನಾಗಿ—ಹೀಗೆಯೇ ಅನೇಕ ಸಂಬಂಧ ವಿಶೇಷಗಳಿಗೆ ಕೇಂದ್ರಸ್ವರೂಪನಾಗಿ ಇರುವುದು ಸಂಸಾರಿಯ ಸ್ವರೂಪ ಈ ಸಂಬಂಧ ವಿಶೇಷವು ಸ್ವಲ್ಪ ಹೆಚ್ಚುಕಡಮೆ ಪ್ರಪಂಚದ ಪ್ರತಿ ಸಂಸಾರಿಗೂ ಉಂಟು ಸಂಸಾರದ ಯಜಮಾನನೆಂದರೆ ತುರಾಯಿಯೊಳಗಣ ಹೂವಿನಂತೆ ಉಳಿದ ಹೂಗಳೊಡನೆ ಸಾಮರಸ್ಯವಿಲ್ಲದಿದ್ದರೆ ತುರಾಯಿ ಸುಂದರವಾಗಲಾರದು ಭರತನಿಗೆ ತನ್ನ ಸಂಬಂಧದ ಆವರಣದಲ್ಲಿ ಸಂಪೂರ್ಣ ಸಾಮರಸ್ಯವಿದ್ದಿತೆಂದೂ ಅದರ ಆದರ್ಶಸೌಖ್ಯವನ್ನು ಆತನು ಮನಸಾರ ಸವಿಯುತ್ತಿದ್ದನೆಂದೂ ಕಾವ್ಯದಿಂದ ನಮಗೆ ಕಾಣಬರುತ್ತದೆ ಬಾಹುಬಲಿಯು ಇದಿರು ಬಿದ್ದಾಗ ಭರತನ ಸೌಖ್ಯವೂ ಕದಡಿಹೋಗುವಂಥ ಒಂದು ಸನ್ನಿವೇಶ ಒದಗು ತ್ತದೆ ಆದರೆ ಸ್ವಲ್ಪದರಲ್ಲೇ ಅದು ನಿವಾರಣೆಯಾಗುತ್ತದೆ. ಕವಿ ಸಾರುತ್ತಿರುವುದು ಮನಸ್ಸಿಗೆ ಶಾಂತಿಯಿರಬೇಕೆಂದು—'ಶಾಂತಮು ಲೇಕ ಸೌಖ್ಯಮು ಲೇದು.

ಸಂಸಾರಿಯಾದ ಭರತ ಒಂದು ಸಂಗಮಸ್ಥಾನವಿದ್ದ ಹಾಗೆ ಅನೇಕ ಆಹ್ಲಾದದ ತೊರೆಗಳು ಬಂದು ಇಲ್ಲಿ ಸೇರುತ್ತವೆ ಇವುಗಳಲ್ಲಿ ಅತ್ಯಂತ ಮುಖ್ಯವಾದುದು ದಾಂಪತ್ಯ

ಜೀವನದ ಹಿರಿತೊರೆ ಯಾವ ದೃಷ್ಟಿಯಿಂದ ಇಬ್ಬರಿಗೂ ಪರಮಸುಖವುಂಟಾಗುವುದೋ ಅದನ್ನು ಸತಿಪತಿಗಳಿಬ್ಬರೂ ಪರಸ್ಪರ ಒದಗಿಸಬೇಕು ಭರತನ ದಾಂಪತ್ಯಜೀವನದಲ್ಲಿ ಇದು ಯಥೇಚ್ಛವಾಗಿದೆ ನ್ಯಾಯವಾಗಿ ನೋಡಿದರೆ ಈತನಿಗಿರುವ ಸಮಸ್ಯೆಗಳು ಪ್ರಪಂಚದಲ್ಲಿ ಇನ್ನಾರಿಗೂ ಇರುವುದಿಲ್ಲ ಸಾಮಾನ್ಯವಾಗಿ ಒಬ್ಬ ಗೃಹಸ್ಥನಿಗೆ ಒಬ್ಬ ಹೆಂಡತಿಯಿರುತ್ತಾಳೆ ಇಬ್ಬರಿದ್ದರೆ ಆಗಲೆ 'ಕಬ್ಬಕ್ಕಿ ಕಾಟ' ಬಹು ಕಾಂತೆಯರಿದ್ದರಂತೂ ಸವತಿಮಾತ್ಸರ್ಯದ ದಳ್ಳುರಿ ಅನಿವಾರ್ಯವಾಗಿಬಿಡುತ್ತದೆ ಗಂಡನಾದವನು ಎಲ್ಲ ಹೆಂಡಿರನ್ನೂ ಸಮಾನತೆಯಿಂದ ನೋಡಬೇಕು, ಬಹು ದಾಕ್ಷಿಣ್ಯಪರವಾಗಿರಬೇಕು, ಯಾವ ನಿಮಿಷಕ್ಕೆ ಎಲ್ಲಿ ಯಾರ ಮನಸ್ಸು ನೊಂದೀತೋ ಎಂದು ಮೈಯೆಲ್ಲಾ ಕಣ್ಣಾಗಿ ವರ್ತಿಸಬೇಕು ಇಂತಹುದರಲ್ಲಿ ಭರತನಿಗೆ ತೊಂಭತ್ತಾರು ಸಹಸ್ರ ಹೆಂಡಿರು ಆದರೂ ಭರತನು ಬಹು ಸಾಮರ್ಥ್ಯದಿಂದ ಸಂಸಾರವನ್ನು ನಿರ್ವಹಿಸುತ್ತಾನೆ. ವ್ಯಕ್ತಿಗತವಾದ ರಾಗದ್ವೇಷಗಳಿಂದ ಪರಸ್ಪರ ಸವತಿಮತ್ಸರ ಹುಟ್ಟಲು ಭರತನ ಸಂಸಾರದಲ್ಲಿ ಸಾಧ್ಯವಿಲ್ಲ ಅವನ ಹೆಂಡಿರು ಸವತಿಯರಲ್ಲ, ಅಕ್ಕತಂಗಿಯರು ಅಷ್ಟು ಅಕ್ಕರೆ ಒಬ್ಬರಿಗೊಬ್ಬರಿಗೆ ಭರತನು ಹಲವು ಹೆಂಡಿರನ್ನು ಏಕಕಾಲದಲ್ಲಿ ಸಂತೋಷಗೊಳಿಸಿ 'ತವರೂರ ಮರೆಯಿಸಿ, ನಿದ್ರೆಯ ತೊರೆಯಿಸಿ, ಸವಿಗಳನರಿಯಿಸಿ , ದಿವರಾತ್ರಿಯೆನ್ನದೆ ಸುಖದೊಳೋಲಾಡಿಸಿ' ಬಿಡತಕ್ಕ ಪ್ರಭಾವವುಳ್ಳವನು

ಭರತನ ರಾಣಿಯರು ಅವನಿಗೆ ತಕ್ಕವರು ಇಲ್ಲದಿದ್ದರೆ ಎತ್ತು ಎರೆ, ಕೋಣ ಕೆರೆಯಾಗಿ ಸಂಸಾರದ ರಥ ಒಗ್ಗಾಲಿಗೆ ಬಿದ್ದುಹೋಗುತ್ತಿತ್ತು ಭರತನು ಪುರುಷ ರತ್ನನಾದರೆ, ಅವರ ಸ್ತ್ರೀಯರು 'ಸುರುಚಿರ ರತ್ನ'ಗಳು 'ಪತಿಲೇಸು' ಎಂದು ಹೇಳುವುದಾದರೆ ಸತಿಯರು 'ಲೇಸು ಲೇಸು' 'ಸೂಜಿಯ ಬಳಿಯ ನೂಲಂತೆ' ಪತಿಮಾರ್ಗವನ್ನು ಎಡೆಬಿಡದೆ ಅನುಸರಿಸುತ್ತಿರುವ ಭರತನ ರಾಣಿಯರು ಅವನ ಜೀವನವನ್ನು ಸುಖಮಯವಾಗಿ ಮಾಡಿದ್ದಾರೆ ಅವರ ಹೆಸರುಗಳೇ ಸಾಕು, ಬಹು ಮುದ್ದಿನ ಹೆಸರುಗಳು—ಕನ್ನಾಜಿ, ಕಮಲಾಜಿ, ವಿಮಲಾಜಿ, ಸುಮನಾಜಿ, ಹೊನ್ನಾಜಿ, ಮಧುರಾಜಿ, ರತ್ನಾಜಿ, ಚಿನ್ನಾಜಿ, ಚೆನ್ನಾಜಿ, ಕಾಂತಾಜಿ, ಮುಕುರಾಜಿ, ಕುಸುಮಾಜಿ, ಕುಸುಮಗಂಧಾಜಿ, ವಸಂತಾಜಿ, ಮಧುಮಾಧವಾಜಿ, ಅಂತರಂಗಾಜಿ, ಸುಖಾಜಿ, ಶಾಂತಾಜಿ, ಭೃಂಗಲೋಚನೆ, ನೀಲಲೋಚನೆ, ಕುರಂಗಲೋಚನೆ, ಪುಷ್ಪಮಾಲೆ, ಶೃಂಗಾರವತಿ, ಗುಣವತಿ, ಚಂದ್ರಮತಿ, ಸಾರಂಗಲೋಚನೆ, ವೀಣಾದೇವಿ, ವಿದ್ಯಾದೇವಿ, ಸುರದೇವಿ, ವಾಣೀದೇವಿ, ಶ್ರೀದೇವಿ, ಬಾಣಾದೇವಿ, ಭದ್ರಾದೇವಿ, ಕಲ್ಯಾಣಿದೇವಿ, ಅಂಜನಾದೇವಿ, ಕುಂಕುಮದೇವಿ, ಮಲ್ಲಿಕಾದೇವಿ, ಸುದೇವಿ, ಉತ್ಸಾಹದೇವಿ, ಚಿತ್ರವತಿ, ಚಿತ್ರಲೇಖೆ, ಪದ್ಮಾವತಿ, ನೇತ್ರಾವತಿ, ಚಂದ್ರಲೇಖೆ, ಮಿತ್ರಾವತಿ, ಪದ್ಮಲತೆ, ಲಲಿತಾಂಗಿ, ವಿಚಿತ್ರಾಂಗಿ, ಕನಕಲತೆ, ಕುಂದಲತೆ, ಕನಕಮಾಲೆ ಜಿನಮತಿ, ಸಿದ್ಧಮತಿ, ರತ್ನಮಾಲೆ, ಮಣಿಮಾಲೆ, ಕಾಂತಿಮಾಲೆ ಇತ್ಯಾದಿ ಇತ್ಯಾದಿ— ಭರತನು ಬಹುಶಃ ಇವರ ಹೆಸುರುಗಳನ್ನೆಲ್ಲಾ ಅಮರಕೋಶವನ್ನು ಗಟ್ಟಿಮಾಡುವಂತೆ

ಗಟ್ಟಿಮಾಡಿದ್ದನೋ ಏನೋ! (ಹೆಣ್ಣು ಮಕ್ಕಳಿಗೆ ಹೆಸರಿಡಲು ಹುಡುಕಾಡುವವರು ಭರತೇಶವೈಭವವನ್ನು ಒಮ್ಮೆ ಓದಬಹುದು) ಎಲ್ಲರೂ ಪರಸ್ಪರ ಮೈತ್ರಿಯಿಂದ ಇರುತ್ತಾ ತಮ್ಮ ಮನದನ್ನನ ಮನಸ್ಸು ಎಲ್ಲಿ ನೊಂದೀತೋ ಎಂದು ಬಹು ಜಾಗರೂಕತೆ ಯಿಂದ ವರ್ತಿಸುತ್ತಾರೆ-

" ಎರಡು ಕರಿಯ ತಲೆಗಳು ಸೇರಿದರೆ ಸಂಸಾರ ಪ್ರಳಯ " ಎಂದು ಹೇಳುತ್ತಾರೆ ಆದರೆ ಭರತನ ರಾಣಿಯರು ಪರಸ್ಪರ ಹೊಂದಿಕೊಂಡುಹೋಗುವ ಸುಂದರ ಚಿತ್ರದ ಕಡೆ ಸ್ವಲ್ಪ ನೋಡೋಣ—ಭರತರಾಜನು ಚಂದ್ರಗತಿ ಆದಿತ್ಯಗತಿಗಳೆಂಬ ಯೋಗೀಶ್ವರರ ಚರಿಗೆಯನ್ನು ತೀರಿಸಿ, ಕಾಲಾತೀತವಾಗಿದ್ದುದರಿಂದ ತನ್ನ ಮೋಹದ ಮಡದಿಯರನ್ನೂ ತನ್ನ ಜೊತೆಯಲ್ಲಿಯೇ ಊಟಕ್ಕೆ ಕುಳಿತುಕೊಳ್ಳುವಂತೆ ಬಲವಂತಪಡಿಸುತ್ತಾನ ಹಿಗ್ಗಿ, ಕೊಸರಿ ಅವರು ಒಪ್ಪಿಕೊಂಡರು ಆದರೂ ರಾಜನು ಊಟಕ್ಕೆ ಕುಳಿತಮೇಲೆ ಆತನ ತಳಿಗೆಯಿಂದ ಒಂದು ತುತ್ತನ್ನು ತೆಗೆದುಕೊಂಡು ಎಲ್ಲರಿಗೂ ಪ್ರಸಾದವಾಗಿ ಹಂಚಿದ ಮೇಲೆಯೇ ಅವರು ತುತ್ತೆತ್ತುವುದು ಬಡಿಸುವ ರಾಣಿಯರಿಗೆ ಇತರ ರಾಣಿಯರನ್ನು ಕಂಡು ' ಇವಳು ಗಂಡನ ಪಂತಿಯೊಳು ಕುಳಿತುಂಬುವ। ಳಿವಳಿಗಾನಿಕ್ಕುವಳೆಂಬ ॥ ಸವತಿಮತ್ಸರವಿಲ್ಲ ತಾವೆಂದರವರೆಂಬ ಸುವಿನಯ ಮಿಗೆ ಬಡಿಸಿದರು', 'ಎಡೆಮಾಡ ಲನುವಾಗಿ ಸುಳಿದಾಡುತಿರ್ದರರ್ತಿಯೊಳು ". ಊಟ ಮಾಡುತ್ತಿದ್ದವರಾದರೂ ,ಗರ್ವ ದಿಂದ ಬೀಗಿದರೆ ? "ಇಲ್ಲ ಇಲ್ಲ ಕೈತೊಳೆದುದೇ ತಡ, " ಕುಳ್ಳಿರಿರಕ್ಕ ನೀವೆಲ್ಲ ಬಳಲ್ದಿ ರೆಂದೊಳ್ನಿತ ನುಡಿದ ಭಾವನಯರು। ಎಲ್ಲರಿಗುಣಬಡಿಸಿದರವರವರಂದ। ದಲ್ಲಿಯ ಸವಿದರನ್ನವರು "

ಒಂದು ದಿನ ರಾಜನು ತನ್ನ ಉಪ್ಪರಿಗೆಯ ಮೇಲ ರಾಣಿವಾಸದ ಓಲಗ ಗೊಟ್ಟನು. ರಾಣಿಯರೆಲ್ಲರೂ ಕೈಗಾಣಿಕೆಗಳೊಡನೆ ಆತನನ್ನು ಕಾಣಲು ಬರುತ್ತಿದ್ದಾರೆ ಆಗ ಅವರು ಪರಸ್ಪರ ಮಾಡುತ್ತಿರುವ ಸರಸವಿನೋದಗಳು ಮನೋಜ್ಞವಾಗಿವೆ ಬಾಲೆಯೊಬ್ಬಳು ಎಲ್ಲರಿಗೂ ಮುಂದೆ ಹೋಗುತ್ತಿದ್ದಾಳೆ ಅವಳನ್ನು ಕಂಡು ಪ್ರೌಢ ನಿತಂಬಿನಿಯೊಬ್ಬಳು ' ಓಡು ಓಡು ! ನಿನ್ನರಸ ದೊಡ್ಡಮೆಚ್ಚುಕೊಡಲು ನಿನಗಾಗಿ ಕಾದಿದ್ದಾನೆ ! ಪಾಪ ! ಎಷ್ಟುದಿನದಿಂದ ಪತಿಯನ್ನು ಕಾಣಳೊ !' ಎಂದು ಅಣಕವಾಡಿದಳು. ಆಗ ಆ ಮುಗ್ಧೆಯು ' ಅವ್ವ ! ನೀವೇನನಾಡಿರಿ ಚಕ್ರವರ್ತಿಯ ಹುವ್ವಲಾಲೆಯನಾಡಿಸುವರು ? ' ಎಂದು ಪ್ರತಿಹಾಸ್ಯಮಾಡುತ್ತಾಳೆ ಮುಂದೆ ಹೋದರೆ ಹಾಸ್ಯಮಾಡುವರೆಂದು ಹಿಂದೆ ಬೀಳುವುದಕ್ಕುಂಟೆ ? ಹಿಂದೆ ಬರುತ್ತಿರುವ ಅವಳನ್ನು ಕುರಿತು " ಬರಲಾರಳವಳಿಗೆ ಕೈಗೊಡಿರೆದೆಯಲ್ಲಿ ಹಿರಿಯ ಹೊರೆಯ ಹೊತ್ತಳವಳು ಭರತ ಚಕ್ರೇಶಗೆ ಕೃಪೆಯಿಲ್ಲ , ಮಾಡಕೆ ಬರಹೇಳಬಹುದೆ ? ನೋಡಿವಳಾ ! " ಎಂದು ಆವಳನ್ನು ಗೇಲಿಗೆ ಹಚ್ಚಿದ್ದಾರೆ ಮತ್ತೊಬ್ಬ ಮುಗ್ಧೆ ಮಾತನಾಡಿದರೆ ಏನು ಘಟೀತಿಯೋ ಎಂದು ಮೌನದಿಂದಿದ್ದರೆ ಉಳಿದವರು [illegible] ಸುಮ್ಮನಿರಗೊಡುವರೆ ? 'ಮೌನವೀಕೆಗೆ ತನ್ನ ಗಂಡನಂತಾತ್ಮನ

ಜಾನಿಸುತ್ತಿದುವ ಪರಿಯೊ ! ಎಂದು ಆವಳನ್ನು ಕೆಣಕುವರು ಆಗ ಅವಳು ಮೌನವನ್ನು ಮೂಲೆಗೊತ್ತಿ 'ಧ್ಯಾನಗೀನವ ನೀವು ನಿಮ್ಮರಸನು ಬಲ್ಲಿರಾನೇನ ಬಲ್ಲೆನಾ ಗುಸುಟಿ ? ಈ ನಿಮ್ಮ ಸರಸ ಸಲ್ಲಾಪಕೆ ಮನೆದಲ್ಲಿ ಆನಂದಿಸುತ ಬಂದೆನಕ್ಕ' ಎಂದು ನುಡಿಯುವಳು ಹೀಗೆ ಸರಸವನ್ನಾಡುತ್ತ ಹೋಗುತ್ತಿರುವಾಗ ಒಬ್ಬಳು ಮತ್ತೊಬ್ಬಳ ಕಾಲಮೇಲೆ ಸ್ವಲ್ಪ ಮಸಿ ಮೆತ್ತಿರುವುದನ್ನು ಕಂಡು ಕೈ ಮುಟ್ಟಿ ಒರಸುತ್ತಾಳೆ ಒಡನೆಯೇ ಆಕೆಯು ಝಂಕಿಸಿ 'ಕಾಲ ಮೇಲದೆ ಕಪ್ಪು ತೊಡೆದುಕೊಳ್ಳೆಂದೊಲ್ದು ಹೇಳದೆ ತೊಡೆವರೆ ತಂಗಿ ?' ಎಂದು ಮಿಡುಕುವಳು ತಾನು ಮಾಡಿದುದು ಅಷ್ಟೇನೂ ಉಪಚಾರೋಕ್ತಿಗೆ ತಕ್ಕುದಲ್ಲವೆಂಬ ಭಾವನೆಯಿಂದ ಕಿರಿಯಳು ಓಲಗ ಮುಟ್ಟಲಾದುದು ಸುಮ್ಮನೈದಕ್ಕ, ಕೇಳಬಹುದು ನಮ್ಮ ಮಾತು' ಎಂದು ಅವಳನ್ನು ಸುಮ್ಮನೆ ಮಾಡುವಳು

ಈ ಸತಿಯರ ಪರಸ್ಪರ ಮೈತ್ರಿಯು ಅಸದೃಶವಾದುದು ಕುಸುಮಾಜಿಯ 'ರಾಜಲಾವಣ್ಯ !' ವನ್ನು ಕೇಳಿದ ರಾಜನು ಅವಳಲ್ಲಿ ಅನುರಕ್ತನಾಗಿ ಆ ದಿನವೆಲ್ಲಾ ಅವಳ ಮನೆಯಲ್ಲಿ ಕಳೆಯುವಂತೆ ತಕ್ಕ ಸನ್ನಿವೇಶವನ್ನು ಉಪಾಯದಿಂದ ಕಲ್ಪಿಸಿಕೊಳ್ಳುತ್ತಾನೆಯಷ್ಟೆ ಆಗ ಅವಳಿಗೆ ದೊರೆತ ಗೌರವಕ್ಕಾಗಲಿ, ಅವಳಿಗಾದ ಅಮೌಲ್ಯ ಸನ್ಮಾನ ಭಾಗ್ಯಕ್ಕಾಗಲಿ ಸವತಿಯರಾರಿಗೂ ಸ್ವಲ್ಪವೂ ಕಸಿವಿಸಿಯಿಲ್ಲ ತನಗಾದ ಸನ್ಮಾನಕ್ಕಾಗಿ ನಾಚುತ್ತಾ ಗೆಳತಿಯರೆದುರು ನಿಂತಿರುವ ಅವಳನ್ನು ಕುರಿತು ಬಾಯ್ತುಂಬ' ತಂಗಿ ಹೋಗಕ್ಕ ಹೋಗಾಣ್ಮನಾರೋಗಣೆ | ಗಂಗನೆಗೆಡೆಮಾಳ್ಪ ಭಾಗ್ಯ | ಸಂಗಡಿಸಿತು ನಿನಗದು ನಮ್ಮ ಭಾಗ್ಯವೆಂ | ದಿಂಗಿತಮಿಗೆ ಕಳುಹಿದರು' ನಾಚಿಕೆಯಿಂದ ತಲೆಬಾಗಿ ನಿಂತಿರುವ ಆ ಮುಗ್ಧೆಯ ಸುತ್ತಲೂ ನೆರೆದು ಅವಳ ತಲೆಯನ್ನು ನೇವರಿಸುತ್ತಾ ಉಪಚಾರೋಕ್ತಿಗಳಿಂದ ಬೀಳ್ಕೊಡುತ್ತಿರುವುದನ್ನು ಕಂಡು ಸಹೃದಯರ ಮನಸ್ಸು ಸಂತೋಷದಿಂದ ನಲಿಯುತ್ತದೆ , ಈ ಅಲೌಕಿಕ ಪ್ರೇಮದರ್ಶನದಿಂದ ಧನ್ಯವಾಗುತ್ತದೆ

ಗಂಡನಲ್ಲಿ ಅಪಾರವಾದ ಭಕ್ತಿ, ತಮ್ಮಲ್ಲಿ ಪರಸ್ಪರ ಸೋದರೀ ವಾತ್ಸಲ್ಯ—ಈ ಸದ್ಗುಣಗಳ ಸುವರ್ಣಕ್ಕೆ ಬಂಧುಪ್ರೇಮದ ಸುವಾಸನೆಯೂ ಸೇರಿದೆ ಭರತನ ರಾಣಿಯರು ತಮ್ಮ ಅತ್ತೆಯಲ್ಲಿಟ್ಟಿದ್ದ ಭಕ್ತಿ ವಿಶ್ವಾಸಗಳು ಆದರ್ಶಪೂರ್ಣವಾದುವು ಯಶೋಮತೀದೇವಿಯೂ ಅಷ್ಟೆ, ಆದರ್ಶಮೂರ್ತಿಯಾದ ಅತ್ತೆ , ತನ್ನ ಮಗನ ಮೇಲೆ ಎಷ್ಟು ಮಮತೆ ಅಭಿಮಾನಗಳುಂಟೋ ಸೊಸೆಯರಲ್ಲಿಯೂ ಅಷ್ಟೇ ಅಭಿಮಾನ ಮಮತೆಗಳು ಭರತಚಕ್ರಿ ದಿಗ್ವಿಜಯಕ್ಕಾಗಿ ಹೋಗುವ ಮುನ್ನ ತಾಯಿಯ ಅಡಿದಾವರೆಗಳಲ್ಲಿ ಮುಡಿಯಿಟ್ಟು ಹರಕೆಗೊಳ್ಳುವನು. ಅವನ ರಾಣಿಯರೂ ಒಬ್ಬೊಬ್ಬರಾಗಿ ಬಂದು ನಮಸ್ಕರಿಸುತ್ತಿರುವರು ಆಗ ಅತ್ತೆ 'ಬನ್ನವೆಂಬುದ ನಿಮ್ಮ ಕನಸಿನೊಳಗೆ ಕಾಣದೆನ್ನನುಜನ ಸುತೆಯರಿರ | ನನ್ನಣುಗನ ಕೂಡೆ ಲೀಲೆಯೊಳೋಲಾಡಿ ಬನ್ನಿ' ರೆಂದು ಹರಸುವಳು. ಹೊರಡುವ ಕಾಲದಲ್ಲಿ ಹಿರಿಯರ ಆಶೀರ್ವಾದವೊಂದೇ ಸಾಲದು ಈ ಸೊಸೆಯರಿಗೆ 'ಬುದ್ಧಿಯೇನತ್ತೆಮ್ಮ ನಮಗೆ ?' ಎಂದು ಕೇಳುತ್ತಾರೆ. ಅಸಾಮಾನ್ಯ ಪುರುಷನಾದ

ತನ್ನ ಮಗನೊತ್ತಿನಲ್ಲಿರುವ ಆ ವನಿತೆಯರಿಗೆ ಬುದ್ಧಿ ಹೇಳುವುದಿನ್ನೇನು ? ಆದರೂ ಗೌರವ ಕೊಟ್ಟು ಕೇಳಿದಾಗ ವಿಶ್ವಾಸವಿಟ್ಟು ಹೇಳಬೇಕಲ್ಲವೆ ? 'ನಿಮ್ಮ ಪತಿವೇಳ್ದ ಸೊಮ್ಮಿನೊಳಿಹುದದೆ ಬುದ್ಧಿ' ಎಂದು ಆದೇಶ ಕೊಡುತ್ತಾಳೆ ಆಗ ಸೊಸೆಯರೆಲ್ಲಾ ಒಟ್ಟಿಗೆ ಕಲೆತು ಪುನಃ ತಮ್ಮ ಅತ್ತೆಯ ಅಡಿದಾವರೆಗಳನ್ನು ಕಾಣುವ ತನಕ ಒಂದು ವ್ರತವನ್ನು ನಡೆಸಬೇಕೆಂದು ಸರ್ವಾನುಮತದಿಂದ ನಿಶ್ಚಯಿಸುತ್ತಾರೆ ಪರರಾಜ್ಯಕ್ಕೆಯ್ದುವ ಆ ಪೆಣ್ಗಳು ಸಂಚರವ್ರತವನ್ನು ಕೈಕೊಳ್ಳುವುದು ಅನಾವಶ್ಯಕ, ಬೇಡ— ಎಂದು ಅತ್ತೆ, ಸೊಸೆಯರ ಮೇಲಿನ ಮೋಹದಿಂದ, ಮಾತನಾಡಿದರೂ ಸೊಸೆಯರು 'ಎಲ್ಲಿ ಹೋದರೂ ಅದು ಭರತೋರ್ವಿಯೆ, ನಮ್ಮ ರಾಜ್ಯವೇ' ಎಂದು ಹೇಳಿ ಪುನಃ ಅತ್ತೆಯ ಪಾದಪದ್ಮಗಳನ್ನು ಕಾಣುವವರೆಗೆ 'ಮಲ್ಲಿಗೆಯನು ಸೂಡೆನೆಂದಳೊರ್ವಳು' 'ಜಾಜಿಯೊಲ್ಲೆನೆಂದೊರ್ವಳಾಡಿದಳು' ಮತ್ತೊರ್ವಳು 'ಅತ್ತೆಮ್ಮನ ಮೆಲ್ಲಡಿಗಳ ಕಾಣ್ಬತನಕ ಮೊಲ್ಲೆ ಬೇಡೆನಗೆಂದಳು ಚಿಲುಪಾಲು ವ್ರತವೆಂದಳೋರ್ವಳು ಫೇಣಿಯು ಮೆಲ್ಲಲೊಲ್ಲೆನೆಂದಳೊರ್ವಳು ಎಳೆಯೆಲೆ ವ್ರತವೆಂದಳೊರ್ವಳತ್ತೆಮ್ಮನ ತಳಿರಡಿಗಳ ಕಾಣ್ಬತನಕ' ಹೀಗೆಯೇ ಒಬ್ಬಳು ಗೋರೋಚನವನ್ನೂ ಮತ್ತೊಬ್ಬಳು ಕಸ್ತೂರಿಯನ್ನೂ ಇನ್ನೊಬ್ಬಳು ಪಟ್ಟೆ ವಸ್ತ್ರವನ್ನೂ, ಮಗದೊಬ್ಬಳು ಹೊಸಸೀರೆಯನ್ನೂ ತೊರೆದಳು ಒಬ್ಬರಲ್ಲ ಇಬ್ಬರಲ್ಲ, ತೊಂಬತ್ತಾರು ಸಾವಿರ ಸ್ತ್ರೀಯರು ಹೀಗೆ ಅತ್ತೆಯಲ್ಲಿ ಅನುರಕ್ತರಾಗಿದ್ದುದೂ ಇಷ್ಟು ಜನರನ್ನೂ ಅತ್ತೆ ಹೊಟ್ಟೆಯ ಮಕ್ಕಳಂತೆ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದುದೂ ರತ್ನಾಕರನ ಭವ್ಯಕಾವ್ಯದ ಸುಂದರ ಆದರ್ಶಚಿತ್ರದಲ್ಲಿ ಮಾತ್ರ ಕಂಡುಬರಲು ಸಾಧ್ಯ

ನಮ್ಮ ಸಮಾಜ ಸಂಸಾರಗಳಲ್ಲಿ ತೋರಿಬರುವ ಹಲವು ಹೃದಯ ವಿದ್ರಾವಕವಾದ ಭೀಷಣಚಿತ್ರಗಳಲ್ಲಿ ಅತ್ತಿಗೆ—ನಾದಿನಿಯರದೂ ಒಂದು ಇಬ್ಬರಲ್ಲಿ ಒಬ್ಬರು ತಮ್ಮ ಪ್ರಾಶಸ್ತ್ಯವನ್ನು ಹೆಚ್ಚಿಸಿಕೊಂಡು ಮತ್ತೊಬ್ಬರ ಬಾಳನ್ನು ಗೋಳಿನಲ್ಲಿ ಮುಳುಗಿಸುತ್ತಾರೆ ಅನೇಕ ವೇಳೆ ಸುಖಮಯವಾದ ಸಂಸಾರವನ್ನು ಸುಟ್ಟುಹಾಕುವ ಕೊಳ್ಳಿಗಳಾಗುತ್ತಾರೆ ಭರತನ ರಾಣಿಯರೂ ಸೋದರಿಯರೂ ಹಾಗಿಲ್ಲ ತಾವು ಷಟ್ಖಂಡ ಚಕ್ರೇಶ್ವರನ ಸೋದರಿಯರೆಂಬ ಒಣಜಂಭವಾಗಲಿ, ತಾವು ಲೋಕೇಶ್ವರನ ಕೊರ್ಠಮಡದಿಯರೆಂಬ ಗಂಡಗರ್ವವಾಗಲಿ ಇವರನ್ನು ಸೋಂಕದು ಭರತನ ಸೋದರಿಯರಾದ (ಇದು ರತ್ನಾಕರನ ಸ್ವಂತ ಸೃಷ್ಟಿ) ಗಂಗಾದೇವಿ ಸಿಂಧುದೇವಿಯರು ಪಟ್ಟದ ರಾಣಿ ಸುಭದ್ರೆಯ ಲಗ್ನಕ್ಕಾಗಿ ಬಂದಿದ್ದಾರ ಮದುವೆಗಾಗಿ ಸಿಂಗಾರವಾಗಿರುವ ಹೆಣ್ಣನ್ನು ನೋಡಬೇಕೆಂಬ ಚಪಲ, ಅಣ್ಣನ ಅಪ್ಪಣೆಯನ್ನು ಬೇಡಿದರು ಚದುರನಾದ ಅಣ್ಣ ಅವರ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ 'ಸ್ವೀಕಾರಬಟ್ಟು ಕರೆಸಿಕೊಂಡು ಹೋಗದೆ, ನೂಕಿ ಬಂಧುಗಳೆಯ್ದುಲವರು ! ಏಕವರ್ಬಂದರೊ ಕರೆದೆವೆಯೆಂಬರು ತೂಕ ತಗ್ಗುವುದಕ್ಕಾ ' ಎಂದ ಆದರ ಆ ಬಗೆಯ ಹೆಚ್ಚು ಕುಂದನ್ನು ಗಮನಿಸುವುದಕ್ಕೆ ಅವರೇನು ನಾಡಾಡಿಯ ಹೆಂಗಸರ ? "ನಾವೆಯ್ದೆ ಪರಿಭವವೇನಣ್ಣ ನಮಗೆ ? ಏನ

ಮಾಡುವರಣ್ಣ ಪರಕೆಮಗವರ ಸನ್ಮಾನವೇನೊಲಿದಿಟ್ಟುದೇನು ?" ಎಂದು ಬಲವಂತ ದಿಂದ ಅಪ್ಪಣೆಯನ್ನು ಪಡೆದು ಸುಭದ್ರೆಯ ಬಳಿಗೆ ಹೋಗುತ್ತಾರೆ ಅತ್ತಿಗೆ ನಾದಿನಿ ಯರಿಗೆ ಅದೇ ಪ್ರಥಮದರ್ಶನ ಆದರೂ ಅತ್ತಿಗೆಯರು ತಮ್ಮ ಬಿಗುಮಾನವನ್ನೆಲ್ಲಾ ಬದಿಗೊತ್ತಿ ನಾದಿನಿಯನ್ನು ಮಾತನಾಡಿಸಲು—ಸರಸವಾಡಲು—ಪ್ರಯತ್ನಿಸುತ್ತಾರೆ ಅವರು ಮಾತನಾಡಿಸುವ ಚದುರನ್ನು ನೋಡಿ—'ಈ ತಿಲಕವೆ ಚಕ್ರಧರನ ಸೋಲಿ ಪುದು? ಪೇಳೀತುರುಬೆ? ಮತ್ತೀ ಪೂವೆ? ಮಾತಾಡು ಹೆಣ್ಣೆ ' ಎಷ್ಟೋದಿನಗಳು ಚಿರಪರಿಚಿತರಾದವರೂ ಇಷ್ಟು ಸಲಿಗೆಯಿಂದ ಇರರು ಸುಭದ್ರೆ ಇನ್ನೂ ಬಾಲೆ, ಮದುವೆಯ ಕನ್ಯೆ ಅವರ ಉತ್ತರಕ್ಕೆ ಪ್ರತ್ಯುತ್ತರ ಕೊಡಲು ನಾಚಿಕೆ ಬಿಗುಮಾನ ಗಳು ಅಡ್ಡವಾಗಿ ಕುಳಿತಿವೆ ಅವಳ ಬಾಯಿ ಬಿಡಿಸಬೇಕೆಂದು ಅತ್ತಿಗೆಯರ ಆಗ್ರಹ ಸ್ವಲ್ಪ ಧುಡಾಯಿಸಿ ನೋಡುತ್ತಾರೆ 'ಸರಸಗುಣಗಳಿಲ್ಲದಿನಳ ರೂಪೇನು ಕಾಸರಕನ ಹಣ್ಣಿನಂತೆಂದು? ಕರಳಿಸಿ ನುಡಿವರು, ಮಾತಾಡಬೇಕೆಂದು' ಆದರೆ ಇವರ ಮಾತಿ ಗೆಲ್ಲಾ ಒಂದೇ ಮಂತ್ರ—'ಶಿರಬಾಗಿ ನಗುತಿಹುದು' ಆಗ ಮಧುವಾಣಿಯೆಂಬ ಅವಳ ಸಖಿ ಮಾತನಾಡುತ್ತಿರುವವರನ್ನು ಕುರಿತು 'ನಿಮ್ಮ ಪಾಡೇನು? ನಿಮ್ಮಣ್ಣನ ನುಡಿಗಳ ನೊಮ್ಮೊಮ್ಮೆ ಕಟ್ಟಿ ನಿಲ್ಲಿಪಳು ನಮ್ಮ ದೇವಿಯ ಮುಂದೆ ಪರರಿಗೆ ಜಾಣ್ಮೆಯೆ? ' ಎಂದು ಎದುರುಮೋಡಿ ಹಾಕುವಳು 'ಅಲ್ಲವೆ ಪೇಳೀಕೆಗುರೆ ತನ್ನ ಪತಿಯೊಡನಲ್ಲದೆ ನುಡಿಯದ ಛಲವೆ! ' ಎಂದು ಇನ್ನು ಸ್ವಲ್ಪ ಕಾಲ ವಿನೋದದಿಂದಿದ್ದು ಅಣ್ಣನ ಬಳಿಗೆ ಹಿಂದಿರುಗಿ ಬರುತ್ತಾರೆ 'ಕಂಡೆವಾ ಮದುವೆಯ ಪೆಣ್ಣನಣ್ಣಾಜಿ ಆಕೆಯ ಶೃಂಗಾರ ವಾಕೆಯ ಗಾಂಭೀರ್ಯ ಸಾಕು ಮತ್ತಾಕೆ ನೋಡಿದರೆ ಲೋಕದಂಗನೆಯೆ? ಪೆಣ್ಣಿನಲ್ಲೊಂದು ರತ್ನಶಲಾಕೆ ಹುಟ್ಟಿದುದೆಂದರೊಡನೆ' ಅಣ್ಣನನ್ನು ಕುರಿತು

ಭರತೇಶ್ವರ ಸುಭದ್ರೆಯರ ಕಲ್ಯಾಣ ಮಹೋತ್ಸವವು ಮುಗಿದ ಮರುದಿನ ಸೋದರಿಯರಿಬ್ಬರೂ ಮತ್ತೊಮ್ಮೆ ಸುಭದ್ರೆಯ ಬಳಿಗೆ ಬರುತ್ತಾರೆ ಈಗ ಆಗಲೆ ಅವಳ ಮೈಛಳಿ ಬಿಟ್ಟುಹೋಗಿದೆ ತನ್ನ ಸಖಿ ಅವರಿಗೆ ಹೇಳಿದ ಮಾತನ್ನು ಅನುಭವಕ್ಕೆ ತಂದುಕೊಡುವಂತೆ 'ರೋಡಾಡಿ ಹೋದಿರಿ ನಿನ್ನೆ, ನೀವಿಂದೇನ ಮಾಡಬೇಕೆಂದೆಣಿ ಸಿದಿರಿ? ನೋಡ ಬಂದಿರೊ? ಕಾಡಬಂದಿರೂ? ಹೇಳಿ' ಎಂದಳು ಅದಕ್ಕೆ ಅವರ ಉತ್ತರ—"ಕಾಡ ಬಂದವರಲ್ಲ, ನೋಡಬಂದವರೆ" ಆದರೆ ನಿನ್ನ ಕೊರಳಿಗಿಷ್ಟೇಕ ಚಂದನಲೇಪ? ಮುತ್ತಿನ ಸರ ಬಂದಿ ಮರೆಸವೆ ನೀರೆ? ಕರಗಳೊಳ್ನಿನ್ನಿನ ಬಳೆಗ ಳಿಂದಿಲ್ಲೀಗ ನೆರೆದವೆ ಹೊಸಬಳೆ ಏಕ ?" ಸುಭದ್ರೆ ಮಾತಿನ ಬಂಗಾರಕ್ಕೆ ಚಾತುರ್ಯದ ಕುಂದಣವಿಕ್ಕಿ 'ಹಳೆಯ ಬಳೆಯ ಬಿಟ್ಟು ಹೊಸಬಳೆ ತೊಟ್ಟರೇ ! ನಿಳೆಯೂಚು ಕೊರತೆಯೆ ? ಅಹಹಾ ! ಬಳೆಗಳ ಕುರುಹು ಕಂಡುದು ಚಿತ್ರ ನೀವೇನು ಬಳೆಗಾತಿಯರೊ !' ಎಂದು ಒಲೆದಾಡುತ್ತ ಕೇಳಿದಳು ಈ ಸರಸದ ಸರಸಿಯಲ್ಲಿ, ನಗುವಿನ ತರಂಗಗಳ ನಡುವೆ ನಲಿಯುತ್ತಾ, ಅತ್ತಿಗೆ ನಾದಿನಿಯರು ಸಂಸಾರವನ್ನು ಸುಖಮಯವಾಗಿ ಮಾಡಿರುವರು

ಇನ್ನು ಭರತನ ಪುತ್ರ ಸುಖವನ್ನು ಸ್ವಲ್ಪ ನೋಡೋಣ ಸ್ತ್ರೀಯರಿಗೆ ಮಕ್ಕಳಿಂದಾಗುವ ಸಂತೋಷಕ್ಕೆ ಪಾರವಿಲ್ಲ ಪ್ರಾಪಂಚಿಕ ವ್ಯವಹಾರಗಳಲ್ಲಿ ಪರಿಮಿತ ವ್ಯಾಪ್ತಿಯುಳ್ಳ ಆಕೆಗೆ ಸಂಸಾರವೇ ಸರ್ವಸ್ವ ಆ ಸಂಸಾರದ ಸಾರಸರ್ವಸ್ವಫಲವೇ ಸಂತಾನ ಆ ಪ್ರೇಮಫಲದ ಉದಯದೊಡನೆ ದಂಪತಿಗಳ ಪ್ರೇಮ ಕವಲೊಡೆದು ದ್ವಿಮುಖವಾಗುತ್ತದೆ, ಹಂಚಿಹೋಗುತ್ತದೆ ದಿಗ್ವಿಜಯಕ್ಕೆ ಹೋದ ಭರತನು ಮಕ್ಕಳಾದ ಮೇಲೆ ಮಕ್ಕಳಾಟಿಕೆಯಲ್ಲಿ ಮಗ್ನನಾಗಿ ಮೈಮರೆವ ದೃಶ್ಯ ಮನೋಜ್ಞವಾಗಿದೆ ಆತನ ಶೃಂಗಾರ ಜೀವನ ತೆಳ್ಳಿಯಾಗುತ್ತದೆ ಚ್ಯುತಿಯಿಲ್ಲದ, ಕಳಂಕವಿಲ್ಲದ ಸಂತೋಷ ಸಾಗರಕ್ಕೆ ಆತನು ಅಧಿಪತಿಯಾಗುತ್ತಾನೆ

ಒಂದು ದಿನ ರಾಜನು ಒಡ್ಡೋಲಗನನ್ನು ನೆರಹಿ, ಸಂಗೀತವನ್ನು ಕೇಳುತ್ತಾ, ಅದನ್ನು ಮೆಚ್ಚಿ ಮನ್ನಣೆ ಕೊಡುತ್ತಾ ಕುಳಿತಿದ್ದಾನ ಮಂದಾಕಿನಿಯೆಂಬ ದಾದಿ ಸಭಾಮಂಡಲಕ್ಕೆ ರಾಜಕುಮಾರನನ್ನು ಎತ್ತಿ ಕರೆತಂದು "ಚಂಡಿ ಮಾಡಿದನು ಸಣ್ಣರಸು ದೇವರ ಸಭಾಮಂಡಲವನ್ನು ನೋಡಬೇಕಂತ" ಎಂದು ಹೇಳಿ ಅಲ್ಲಿ ಬಿಟ್ಟು ಹೋದಳು ಮುದ್ದಿನ ಮುದ್ದೆಯಂತಿದ್ದ ಮಗುವನ್ನು ತೊಡೆಯ ಮೇಲೆ ಕೂಡಿಸಿಕೊಂಡು ಹಲವು ವಿಧದಿಂದ ಮುದ್ದಿಸುತ್ತಾ, ಆ ಮುದ್ದು ಮಾತುಗಳಿಂದ ಮನಸಾರ ನಕ್ಕು ನಲಿಯುತ್ತಾನೆ, ಭರತೇಶ್ವರ 'ಆದಿ ತೀರ್ಥಂಕರ' ಎಂದು ಹೇಳಿ ಕೊಟ್ಟರೆ ಆ ಮಗು 'ಆದಿಂಕರ' ಎನ್ನುತ್ತಾನೆ , 'ಚಿದಂಬರ ಪುರುಷ' ಎಂದು ಪಾರ ಹೇಳಿಕೊಟ್ಟರೆ 'ಚಿಂಬರಪೂಸ' ಎಂದು ಹೇಳುತ್ತಾನೆ ಹಾಗೆಯೇ 'ಗುರು ನಿರಂಜನ ಸಿದ್ಧ' ಎಂದು ತಂದೆ ಹೇಳಿಕೊಟ್ಟರೆ ಮಗ 'ನಿಂಜಸಿದ್ಧ' ಎನ್ನುತ್ತಾನೆ ಆಗ ತಾನೆ ಮಾತು ಕಲಿಯುತ್ತಿರುವ ಆ ಮಗುವಿನ ಬಾಲಭಾಷೆಯಿಂದ ತಂದೆಗೆ ಸ್ವರ್ಗ ಎರಡು ಬೆರಳು ಬಿಟ್ಟಿದೆ. ಎದುರಿಗೆ ಕುಳಿತಿರುವ ರಾಜರುಗಳನ್ನು ತೋರಿಸಿ 'ನೋಡಣ್ಣಾ ಮುಂದಿದ್ದವರಾರೆಂದು' ಕೇಳುತ್ತಾನೆ, ಚಕ್ರವರ್ತಿ ಆತನ ತೊಡೆಯ ಮೇಲಿರುವ ಸಿಂಹಕಿಶೋರ 'ಎಡಗಾಲ ನೀಡಿ ತೋರುವುದು ಭೂಭುಜರಾ' ಜೋಹುಕುಮಿನ ದೊರೆಗಳೆಲ್ಲಾ ಆದರಿಂದ ತಮಗೆಷ್ಟೋ ಗೌರವವಾದಂತೆ ಭಾವಿಸುವರು ಹೀಗೆಯೇ ವಿನೋದವಾಗಿ ಸ್ವಲ್ಪ ಕಾಲ ಕಳೆದ ಮೇಲೆ ಮಗನನ್ನು ರಾಣಿವಾಸಕ್ಕೆ ಕಳುಹಿಸುತ್ತಾನ

ದಿನವೊಂದು ಹೆರಿಗೆಯಾಗುತ್ತಿರುವ ಭರತನ ಹುಲುಸು ಸಂಸಾರದಲ್ಲಿ ತೊಟ್ಟಿಲ ಮಗುವಿನಿಂದ ಹಿಡಿದು ಕತ್ತಿ ಕಠಾರಿಗಳನ್ನು ಹಿರಿಯಬಲ್ಲ ತರುಣನವರೆಗೆ ಬೇರೆ ಬೇರೆ ವಯಸ್ಸಿನ ಹಲವಾರು ಮಕ್ಕಳಿದ್ದಾರೆ ವಿಧೇಯರಾಗಿ, ವಿನಯಪರರಾಗಿ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನಡೆಯುತ್ತಿರುವ ತನ್ನ ಮಕ್ಕಳನ್ನು ಕಂಡು ಭರತನು ಧನ್ಯನಾಗುತ್ತಾನೆ

ಒಟ್ಟಿನಲ್ಲಿ ಭರತನ ಜೀವನ ರಸವತ್ತಾದ ಜೀವನ. ವಿರಸಗಳು ಬಂದರೂ ಅವುಗಳನ್ನು ಸರಸಕ್ಕೆ ತಿರುಗಿಸಿಕೊಳ್ಳಬಲ್ಲ ಜಾಣ್ಮೆಯಿದೆ ಈತನಿಗೆ. ಒರಟು ಮೊರಟು

ಗಳನ್ನು ತಿದ್ದಿ ಹದಕ್ಕೆ ತಂದುಕೊಳ್ಳುವ ತಾಳ್ಮೆ ಇದೆ ಇವನ ಭಾವಮೈದುನ ವಿನಮಿ ಕ್ಷಾತ್ರ ತೇಜಸ್ಸನ್ನು ಅವಲಂಬಿಸಿ ಭೂಮಿಗೂ ಆಕಾಶಕ್ಕೂ ಏಕವಾಗಿ ರೊಚ್ಚೆಬ್ಬಿಸಿದವನು ಭರತನ ಮಹಿಮೆಯಿಂದ ಹಲ್ಲುಕಿತ್ತ ಹಾವಾಗುತ್ತಾನೆ, ತನ್ನ ತಂಗಿಯನ್ನು ಆತನಿಗೆ ಕೊಟ್ಟು ವಿವಾಹಮಹೋತ್ಸವವನ್ನು ಬೆಳಸುತ್ತಾನೆ ಭರತನ ತಮ್ಮನಾದ ಬಾಹುಬಲಿಯೂ ಅಷ್ಟೆ ತನ್ನ ಪರಾಕ್ರಮದ ಕೊಬ್ಬಿನಿಂದ ಅಣ್ಣನ ಮೇಲೆ ಇದಿರು ಬಿದ್ದರೂ ಆತನ ಸೂನೃತವಚನ ಮಂತ್ರದ ಮಹಿಮೆಯಿಂದ ಕಣ್ದೆರೆದು, ತನ್ನ ಕೋಪ ಮೋಹಗಳನ್ನು ಕೊಚ್ಚಿ ಮುಕ್ತಿ ಮಾರ್ಗವನ್ನು ಹಿಡಿಯುತ್ತಾನೆ ಕಾವ್ಯದಲ್ಲಿ ಸುಳಿದು ಹೋಗುವ ಇತರ ವ್ಯಕ್ತಿಗಳೆಲ್ಲರೂ ಭರತಚಕ್ರವರ್ತಿಯ ಆಜ್ಞಾನುವರ್ತಿಗಳಾಗಿ, ಆತನ ಸುಖವನ್ನು ಹೆಚ್ಚಿಸುವುದರಲ್ಲಿಯೇ ತಮ್ಮ ಜೀವನದ ಸಾರ್ಥಕ್ಯವನ್ನು ಪಡೆಯುತ್ತಿದ್ದವರು ಎಲ್ಲರೂ ನಾಯಕನ ಔನ್ನತ್ಯವನ್ನು ಚಿತ್ರಿಸಲು ಸಹಾಯಕವಾದ ಹಿನ್ನೆಲೆಯಾಗಿದ್ದಾರೆ

---

## ಪಾತ್ರ ಪರಿಚಯ

ನಮ್ಮ ಕವಿ ಪಾತ್ರಗಳನ್ನು ಸೃಷ್ಟಿಸಲು ಉಪಯೋಗಿಸಿರುವ ಹಿನ್ನೆಲೆ ಬಹು ದೊಡ್ಡದು, ಷಟ್ಖಂಡಗಳಷ್ಟು ವಿಸ್ತಾರವಾದುದು ಇದರ ಮೇಲೆ ಚಿತ್ರಿತವಾಗಿರುವ ಪಾತ್ರಗಳೂ ಅಸಂಖ್ಯಾತ ಆದುದರಿಂದ ಪಾತ್ರ ಪರಿಚಯಕ್ಕೆ ಕೈಹಾಕಿದಾಗ ಕೇವಲ ದಿಗ್ದರ್ಶನ ಮಾತ್ರ ಸಾಧ್ಯ

ಭರತೇಶ-ರತ್ನಾಕರನು ತನ್ನ ಪಾತ್ರಗಳನ್ನು ರಚಿಸುವುದರಲ್ಲಿ ಅಸಾಧಾರಣವಾದ ಚಾಣಾಕ್ಷ್ಯೆಯನ್ನು ತೋರಿದ್ದಾನೆ ಮೊದಲನೆಯದಾಗಿ ಕಥಾನಾಯಕನಾದ ಭರತನ ಪಾತ್ರವನ್ನೇ ತೆಗೆದುಕೊಂಡು ವಿವೇಚಿಸೋಣ 'ಕಾವ್ಯಪತಿ ಚಕ್ರಿ ಸಾಮಾನ್ಯನಲ್ಲ' ಜೈನ ಪುರಾಣದ ಪ್ರಕಾರ ಚಕ್ರವರ್ತಿಜನ್ಮ ಬಹುಪುಣ್ಯದ ಫಲ ಅದರಲ್ಲಿಯೂ ಭರತ ಅಸಾಮಾನ್ಯ ಗುಣಗಳುಳ್ಳ ಷಟ್ಖಂಡಗಳ ಚಕ್ರವರ್ತಿ 'ಪುರುಪರಮೇಶನ ಹಿರಿಯ ಕುಮಾರ', ನರಲೋಕಕ್ಕೆಲ್ಲಾ ಏಕಚ್ಛತ್ರಾಧಿಪತಿ, ಎಲ್ಲಕ್ಕೂ ಹೆಚ್ಚಾಗಿ 'ಮುರಿದು ಕಣ್ಣಿಟ್ಟರೆ ಕ್ಷಣಕೆ ಮುಕ್ತಿಯ ಕಾಂಬ ತೇಜಸ್ವಿ ಹದಿನಾರನೆಯ ಮನುವೂ ಪ್ರಥಮ ಚಕ್ರಿಯೂ ಆದ ಆತನ ಹಿರಿಮೆಯನ್ನು ಸೂತ್ರರೂಪದಲ್ಲಿ ಹೇಳುವುದಾದರೆ 'ಆ ಕ್ಷತ್ರಿಯ ಕುಲರತ್ನಗಾಹಾರವುಂಟು, ಮಲವಿಲ್ಲ, ಮೂತ್ರವಿಲ್ಲ' ಎಂದ ಮೇಲೆ 'ಈ ಲೋಕದ ಬಳಕೆಗಾರರ ಪೇಳ್ವ ತೆರನೆ" ಭರತ ತನ್ನ ಸಾಧನೆಯಿಂದ ಪರಿಪಕ್ವ ಚೇತನನಾಗಿದ್ದಾನೆ, ವೀತರಾಗನಾದ ಚಿದಂಬರ ಪುರುಷನಾಗಿದ್ದಾನೆ ಅಂತಹ ಮಹಿಮನು ಲೋಕದ ನಡೆವಳಿಕೆಯಲ್ಲಿ ಚಾಚೂ ತಪ್ಪದೆ—ಲೋಕ ಸಂಗ್ರಹಕ್ಕಾಗಿ ಇದು ಅಗತ್ಯ—ಮೋಕ್ಷಮಾರ್ಗದಲ್ಲಿ ಹೇಗೆ ನಡೆಯಬಹುದೆಂಬುದನ್ನು ಭರತನು ತನ್ನ ಆದರ್ಶ ಜೀವನದಿಂದ ತೋರಿಸುತ್ತಾನೆ ತ್ಯಾಗದ ಕಾಲ ಬರುವವರೆಗೆ ತ್ಯಾಗಿಯಾಗಬೇಕೆಂಬ ತವಕವಿಲ್ಲ, ಆಶೆಯಿಲ್ಲ ತ್ಯಾಗವು ಸನ್ನಿಹಿತವಾದಾಗ ಭೋಗವಿರಹದ ಕಾತರತೆಯಿಲ್ಲ, ಕೊರಗಿಲ್ಲ ಭೋಗಿಸುತ್ತಿದ್ದರೂ ಭೋಗಿಯಲ್ಲ ಆಯುಸ್ಸು ಮುಗಿವುದಕ್ಕೆ ಬಹು ಮುಂಚೆಯೇ ಆತ್ಮಸಾಕ್ಷಾತ್ಕಾರ ಸನ್ನಿಹಿತವಾಗಿದ್ದರೂ, ಸಂಸಾರವನ್ನು ತೊರೆಯುವುದಿಲ್ಲ ಕಾರಣವೇನೆಂದರೆ, ಆತನು ಚಕ್ರವರ್ತಿಯಾಗಿ ಪ್ರಜಾಪಾಲನ ಕಾರ್ಯವನ್ನು ಸಾಂಗವಾಗಿ ನೇರವೇರಿಸುತ್ತಾ ತನ್ನ ದೊಡ್ಡ ಆಯುಷ್ಯದಲ್ಲಿ ಬಹುಭಾಗವನ್ನು ಕಳೆಯಬೇಕಾಗಿದೆ ಈ ಸನ್ನಿವೇಶವು ಸಂಸಾರತ್ಯಾಗಕ್ಕೆ ಬಹು ದೊಡ್ಡ ಪ್ರತಿಬಂಧಕವಾದುದರಿಂದ ರಾಜನಾಗಿಯೇ ವಿರಕ್ತನಾಗಬೇಕಾಗಿದೆ ಮಗನಾದ ಅರ್ಕಕೀರ್ತಿಯು ದೊಡ್ಡವನಾಗಿ ರಾಜನಾಗುವವರೆಗೂ ಈ ಬಹಿರಾಡಂಬರದ ದೊಂಬರಾಟವನ್ನಾಡದೆ ಗತ್ಯಂತರವಿಲ್ಲ

ಭರತನು ಮೇಲ್ನೋಟಕ್ಕೆ ಉಪಭೋಗಿಯಾಗಿದ್ದರೂ, ಪದ್ಮಪತ್ರದ ಮೇಲಿನ ಜಲದಂತೆ—ಕೆಸರಿನಲ್ಲಿ ಹುಟ್ಟಿದರೂ ಕಮಲವು ಊರ್ಧ್ವಮುಖವಾಗಿರುವಂತೆ—

ಅಂಟಿಯೂ ಅಂಟದ ರಾಜಯೋಗಿಯಾಗಿರುತ್ತಾನೆ ಬುವಿಯಲ್ಲಿ ಬೇರು ಬಿಟ್ಟಿದ್ದರೂ ಅಂಬರದಲ್ಲಿ ಅರಳಿರುವ ಮಹೋನ್ನತ ವೃಕ್ಷ ಆತ ಭೋಗೋಪಭೋಗಗಳು ಆತನ ಮನಸ್ಸನ್ನು ಸೆರೆಹಿಡಿಯಲಾರವು, ಅವುಗಳನ್ನು ಮೆಟ್ಟಿ ಊರ್ಧ್ವದೃಷ್ಟಿಯನ್ನು ಪಡೆದಿದ್ದಾನೆ ಈತ ಇದಕ್ಕೆ ಅನುಗುಣವಾದ ಆತನ ವ್ಯಕ್ತಿತ್ವವನ್ನು ನೋಡೋಣ

ಭರತನಿಗೆ ಅನಾವಶ್ಯಕವಾದ ಉಪಭೋಗಗಳ ವರ್ಣನೆ ಇಲ್ಲಿ ಯಥೇಷ್ಟವಾಗಿ ಬರುವುದಾದರೂ, ಆ ವರ್ಣನೆ ಲೋಕೋದ್ಧಾರದ ದೃಷ್ಟಿಯಿಂದ ಅವಶ್ಯಕವೆಂದು ಕವಿಯ ಸಮಾಧಾನ ತನ್ನ ಕಥಾನಾಯಕನು ಸಂಸಾರಿಗಳಿಗೆಲ್ಲಾ ಆದರ್ಶ ಪುರುಷನೆಂದು ಅವನ ಭಾವನೆ ಶೃಂಗಾರಕ್ಕೆ ಗುರಿಯಿರಬೇಕೆಂದೂ, ಅದು ಮನುಷ್ಯನನ್ನು ಊರ್ಧ್ವಮುಖಕ್ಕೆ ಒಯ್ಯಬೇಕೆಂದೂ ಕವಿಯ ಇಷ್ಟ ಆದುದರಿಂದ ಹಲವು ಸಲ ಸುಪುಷ್ಟವಾಗಿ ಸುಂದರವಾಗಿ ಶೃಂಗಾರವರ್ಣನೆ ಬಂದರೂ, ಮರುನಿಮಿಷದಲ್ಲಿಯೇ ಚಿದಂಬರ ಧ್ಯಾನವು ಅದರ ಸ್ಥಾನವನ್ನು ಆಕ್ರಮಿಸುತ್ತದೆ ಅಲೆಯಾದೊಡನೆಯೇ ಬೇರೊಂದಲೆಯು ಬರಿದಾದ ಸ್ಥಾನವನ್ನು ಆಕ್ರಮಿಸುವಂತೆ ಶೃಂಗಾರ ಚಿದಂಬರ ಧ್ಯಾನಗಳು ಕಾವ್ಯದಲ್ಲಿ 'ಮುಟ್ಟಿಸಾಟ' ವಾಡುತ್ತಿವೆ ಭರತನ ಜೀವನದಲ್ಲೆಲ್ಲಾ ಈ ಭೋಗಯೋಗಗಳ ಸಮತೂಕ ಸ್ಪಷ್ಟವಾಗಿ ಕಂಡುಬರುತ್ತದೆ

ಭರತನ ಜೀವನಚಿತ್ರ ಶ್ರೀ ಕೃಷ್ಣನ ಜೀವನಚಿತ್ರವನ್ನು ಬಹುಮಟ್ಟಿಗೆ ಹೋಲುತ್ತದೆ ಒಂದು ಮತ್ತೊಂದಕ್ಕೆ ಸ್ಫೂರ್ತಿದಾಯಕವೆಂಬಂತಿದೆ ಕವಿಯ ಆವೇಶಕ್ಕೆ ಉಗಮಸ್ಥಾನವು ಕೃಷ್ಣನ ಮಹತ್ತಾದ, ಅದ್ಭುತವಾದ, ಅಸಾಮಾನ್ಯವಾದ ಜೀವನಚಿತ್ರವೇ ಇರಬೇಕು ಎನ್ನಿಸುತ್ತದೆ ಇಬ್ಬರ ಜೀವನದ ಸಾರತತ್ವವೂ ಒಂದೇ ಅವರ ವ್ಯಾಪ್ತಿ ಬೇರೆ ಬೇರೆ ಕಾರ್ಯರಂಗಗಳಲ್ಲಿ ವ್ಯಾಪ್ತವಾಗಿರಬಹುದಾದರೂ ಮನೋವೃತ್ತಿ ಒಂದೇ ಇಬ್ಬರೂ 'ಪದ್ಮಪತ್ರಮಿವಾಂಭಸ' ರಾದ ಜೀವಿಗಳು ಕೃಷ್ಣನು ಹದಿನಾರು ಸಾವಿರ ಗೋಪಿಕಾಸ್ತ್ರೀಯರಿಂದ ಪರಿವೃತನಾಗಿ ಲೋಲುಪ್ತಿಯಲ್ಲಿರುವಂತೆ ಕಂಡುಬಂದರೂ ಆತನು ಯೋಗಿ ತೊಂಬತ್ತಾರು ಸಹಸ್ರ ರಾಣಿಯರಿಂದ ಸಂಸೇವ್ಯನಾಗಿ ಕೇವಲ ರಾಗರಸದಲ್ಲಿ ಮುಳುಗಿದಂತೆ ತೋರುತ್ತಿದ್ದರೂ ಭರತನು ಮಹಾಯೋಗಿ ಹದಿನಾರು ಸಾವಿರ ಸ್ತ್ರೀಯರೊಡನೆ ಹದಿನಾರು ಸಾವಿರ ರೂಪಗಳಿಂದ ಸಂತೋಷಪಡಿಸಬಲ್ಲವನು ಶ್ರೀ ಕೃಷ್ಣ ಭರತನೂ ಕಡಮೆಯಲ್ಲ, ತೊಂಬಾತ್ತಾರು ಸಾವಿರ ಭರತರ ರೂಪಿಂದ ತನ್ನ ಸತಿಯರನ್ನು ತಣಿಸಿ ಕುಣಿಸಬಲ್ಲ ಗೀತೋಕ್ತ ಜೀವನವನ್ನು ನಡೆಸುತ್ತಿದ್ದ ಕೃಷ್ಣನಂತೆ ಭರತನೂ ಅಧ್ಯಾತ್ಮಯೋಗಿ, ಅಂತರ್ಮುಖಿ; ಮುಮುಕ್ಷು ಕೃಷ್ಣನ ಭುವನೈಕಮೋಹನ ರೂಪದಂತೆ ಭರತನ ರೂಪವೂ ಎಣೆಯಿಲ್ಲದುದು 'ನಸುನಗೆಯಿಂದ ಹೆಂಗಳ ನೋಡೆ ಜುಮ್ಮೆನಲೊಸರಿಸುವನು ಕರಣಗಳಾ'. 'ನಿಟ್ಟಿಸಿದರೆ ಮುತ್ತ ಮುದುಕಿಗಾದರೂ ಜುಂಮು! ದಟ್ಟಿಸುತಿಹುದು ರೂಪವನಾ"

ಕಾವ್ಯವು ಇಂತಹುದೆಂದು ಹೇಳದೆ, ಕೆಳಗಿನ ಪದ್ಯಗಳನ್ನು ಓದಿದಾಗ, ಕೇಳಿದವರು ಇದನ್ನು ಕೃಷ್ಣನ ಕಾವ್ಯವೆಂದೇ ಭ್ರಮಿಸಿಯಾರು!

ಸುಳಿದ ಮಾತ್ರದೊಳು ಮಾನಿನಿಯರ ಹೃದಯದ |
ಸುಳುಹುಗಾಣ್ಬನು ಭಾವಿತಾತ್ಮ |
ಸುಳಿಗುರುಳಿನ ಸೊಬಗೆಯರ ತನ್ನಯ ಸುತ್ತ |
ಸುಳಿದಾಡಿಸುವನು ಸೋಲದೊಳು ||

ಒಬ್ಬಳಮೇಲೆ ತನಗೆ ಸೋಲವಿದ್ದರೂ |
ದುಬ್ಬುಗಾಣಿಸನದ ನುಡಿದು |
ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹ |
ನುಬ್ಬಸವಿಲ್ಲದೆಲ್ಲರೊಳು ||

ಮಾರ್ಗವಲ್ಲೆಂಬಂತೆ ತೋರ್ಪುದನ್ಯರಿಗೆ ಸ |
ನ್ಮಾರ್ಗದೊಳವನಿರುತಿಹನು |
ಆರ್ಗೆ ತಿಳಿಯಬಹುದಾತ್ಮವಿಜ್ಞಾನಿಯಂ |
ತರ್ಗತವನು ಜಿನ ಬಲ್ಲಾ ||

ಕಟಿಕಿ ನುಡಿಗಳಿಂದ ಕೃಷ್ಣನನ್ನು ಸ್ತುತಿಸಿ ವೈಯುಂಡವರಿಗೆ 'ಸಿಕ್ಕಿದಂತಿಹನು ಸಿಕ್ಕನು ರತಿಸುಖದಲ್ಲಿ ಸೊಕ್ಕಿದಂತಿಹನಲ್ಲಿ ಸೊಕ್ಕ', 'ರಕ್ಕರಂತಿಹನದು ರಕ್ಕಲ್ಲ ನಿಜವ ಕಣ್ಣಿಕ್ಕಿ ಕಂಡವನ ಲೀಲೆಯದು' ಎಂಬುದನ್ನು ಕೇಳಿದೊಡನೆಯೇ ಕೃಷ್ಣನ ಮೂರ್ತಿ ಕಣ್ಣೆದುರಿಗೆ ನರ್ತನವಾಡುತ್ತದೆ ಇಂತಹ ಆದರ್ಶ ಪುರುಷನಾದ ಭರತನ ಹೆಸರೇ ಭರತಖಂಡವೆಂಬ ಹೆಸರಿಗೆ ಮೂಲವೆಂಬುದನ್ನು ಕೇಳಿ ಸಂತೋಷಪಡೋಣ

**ಬಾಹುಬಲಿ**—ಭರತನ ತಮ್ಮನಾದ ಭುಜಬಲಿ, ಕಲಿಯುಗ ಮದನ ಪುರಾಣ (ವೈದಿಕ) ಪುರುಷನಾದ ಮದನನಿಗಿರುವ ಶೃಂಗಾರ ಸಾಧನಗಳೂ ಭೋಗ ಪರಿಕರಗಳೂ ಚಾಚೂ ತಪ್ಪದೆ ಭುಜಬಲಿಯ ಕರಗತವಾಗಿವೆ ಇಷ್ಟೇ ಅಲ್ಲ ಮನ್ಮಥನ ಪರ್ಯಾಯನಾಮಗಳೂ ಬಾಹುಬಲಿಗೆ ಅರ್ಪಿತವಾಗಿವೆ ಸಮಸ್ತ ವಿಚಾರಗಳಲ್ಲಿಯೂ ಈತನು ಪುರಾಣೋಕ್ತ ಮಾರನೇ. ಆದರೆ ಒಂದು ವ್ಯತ್ಯಾಸವಿದೆ ಪುರಾಣೋಕ್ತ ಮಾರನು ಮಾನವರನ್ನು ಮೋಹಪಾಶದಲ್ಲಿ ಸಿಲುಕಿಸಿ ಗೋರಿಗೊಳಿಸುವುದರಲ್ಲಿ ಮಾತ್ರ ಪ್ರವೃತ್ತನಾಗಿದ್ದಾನೆ, ಅಭಿನವ ಮದನನಾದ ಭುಜಬಲಿ ತನ್ನ ಹೆಸರೆಂತಂತೆ ಅದ್ವಿತೀಯ ಬಾಹುಬಲ ಸಮನ್ವಿತನಾಗಿದ್ದಾನೆ ಪೌದನಪುರವು ಆತನಾಳುವ ನಾಡಿಗೆ ರಾಜಧಾನಿ ಈತನು ಸೋಲದ ಹೊರತು ಭರತನಿಗೆ ಚಕ್ರವರ್ತಿಯೆಂಬ ಬಿರುದು ಸಲ್ಲದು ಆದಕ್ಕಾಗಿಯೇ ಪೌದನಪುರವು ಸಮೀಪಿಸಿದೊಡನೆಯೇ ಚಕ್ರರತ್ನವು ಮುಂದೆ ಸಾಗದೆ ನಿಂತುಬಿಡುತ್ತದೆ (ಇತರ ಜೈನ ಕವಿಗಳ ದೃಷ್ಟಿಯಲ್ಲಿ ಬಾಹುಬಲಿಯೇ ಭರತನಿಗಿಂತಲೂ ಹೆಚ್ಚು ಸತ್ವಶಾಲಿ ; ಭರತನೊಡನೆ ಜಲಯುದ್ಧ ದೃಷ್ಟಿಯುದ್ಧಗಳನ್ನು ನಡೆಸಿ ಜಯಶೀಲನಾಗುತ್ತಾನೆ ಆದರೆ ರತ್ನಾಕರನು ಧೀರೋದಾತ್ತನಾದ ತನ್ನ ಕಥಾನಾಯಕನಿಗೆ ಹೆಚ್ಚು ಮಹತ್ತನ್ನು ಕಲ್ಪಿಸುವುದಕ್ಕಾಗಿ ಬಾಹುಬಲಿಯ ಪ್ರಭೆಯನ್ನು ತಗ್ಗಿಸಿದ್ದಾನೆ.) ಬಾಹುಬಲಿಗೆ ತನ್ನ ಅಣ್ಣನಲ್ಲಿ ಗೌರವವಿಲ್ಲದೆ ಇಲ್ಲ ,

ಆದರೆ ಅಣ್ಣನೆಂದು ಕ್ಷತ್ರಿಯ ಜಾತಿಗೆ ಅಪಮಾನ ತರುವುದಕ್ಕಾಗುತ್ತದೆಯೆ ? ಯುದ್ಧದಲ್ಲಿ ಸೋದರನಮಾವನೆ ? "ಗುಣಕೆರಗುವೆನಹುದಣ್ಣನೆಂದೊಮ್ಮೆ ಝುಂಕಣೆಗೆರಗುವೆನೆ ? ತಾನೀಗ ಅಣಿದೋರಿ ನಿಂದು, ಬಣ್ಣಕ್ಕೆ ನಿನ್ನ ಕಳುಹಿ, ಪ್ರೇರಣೆಸುತಿದ್ದನು ಭಾಪು ನೋಡ !' ಎಂದು ತನ್ನಲ್ಲಿ ಸಂಧಾನಕ್ಕಾಗಿ ಬಂದ ದಕ್ಷಿಣಾಂಕನ ಮುಂದೆ ಹೇಳುತ್ತಾನೆ ತನ್ನ ಅಣ್ಣನು ಈಗ ಬಂದಿರುವುದು ಚಕ್ರವರ್ತಿಯಾಗಿಯೇ ಹೊರತು ಅಣ್ಣನಾಗಿ ಅಲ್ಲ ಇಲ್ಲದಿದ್ದರೆ ದೂದಟ್ಟುವ ಪ್ರಮೇಯವೇನಿದೆ ? ನೇರವಾಗಿ ಬಂದು ತನ್ನ ಅರಮನೆಯಲ್ಲಿಯೇ ಇಳಿದುಕೊಳ್ಳಬಹುದಾಗಿತ್ತಲ್ಲ ! ಹಾಗೆ ಮಾಡಿದ್ದರೆ ತನ್ನ ರಾಜ್ಯವೆಲ್ಲಾ ಆತನದೆಂದೇ ಭಾವಿಸಿ ಗೌರವಿಸಬಹುದಾಗಿತ್ತು ಹಾಗಲ್ಲದೆ "ಉತ್ತಮರಾಣಿಯ ಮಗನೊಬ್ಬನನ್ನನು ತೊತ್ತಿರ ಮಗನ ಕಾಂಬಂತೆ" ಕಾಣುತ್ತಿರುವನಲ್ಲ ! "ಕೇಳಿಬ್ಬರರಸಿಯರುಂಟ್ಟೆಸೆ ದೊರೆ ಪಾಟಿ ಉಾಳಿಗವೆಣ್ಣಿಲ್ಲ ಪಿತಗೆ !"

ರಾಜಧರ್ಮವನ್ನು ಪಾಲಿಸಹೊರಟಿರುವ ಬಾಹುಬಲಿ ಯುದ್ಧಕ್ಕೆ ಸಿದ್ಧನಾಗಿ ಹೊರಟುದು ನಿಜ ಆದರೆ ಅಣ್ಣನ ಇದಿರಿನಲ್ಲಿ ಬಹಳ ವಿನಯದಿಂದ ನಡೆದುಕೊಳ್ಳುತ್ತಾನೆ ಅಣ್ಣನ ಮೃದು ನುಡಿಗಳ ಕಾವಿನಲ್ಲಿ ಬೆಣ್ಣೆಯಂತೆ ಕರಗಿಹೋಗುತ್ತಾನೆ ಮೃದು ನುಡಿಗಳ ಕಶಾಹತಿಯು ಹೃದಯದಮೇಲೆ ಒಂದೇ ಸಮನೆ ಬೀಳುತ್ತಿದ್ದರೂ ಬುದ್ಧಿ ಕ್ರೋಧದ ಕಡೆ ತಿರುಗುವುದಿಲ್ಲ ಅಣ್ಣನ ಮಾತುಗಳಿಗೆ ಪ್ರತಿ ನುಡಿಯುವುದಿರಲಿ, ತಾನು ಮಾಡಿದುದು ನ್ಯಾಯವೆಂದು ಸಾಧಿಸುವ ಸಾಹಸಕ್ಕೆ ಸಹ ಕೈಯಿಕ್ಕುವುದಿಲ್ಲ ಮೌನದಿಂದ, ಸಹನೆಯಿಂದ ಅಣ್ಣನಾಡುವ ನುಡಿಗಳನ್ನೆಲ್ಲಾ ತಲೆತಗ್ಗಿಸಿಕೊಂಡು ಕೇಳಿ ಕೃತಕಾರ್ಯಪಶ್ಚಾತ್ತಾಪದಿಂದ ದಗ್ಧನಾಗಿ, ಆ ಅನುತಾಪದ, ಸಿಗ್ಗಿನ ದಾವಾನಲದಲ್ಲಿ ತನ್ನ ಮೋಹಜಾಲಗಳನ್ನೆಲ್ಲಾ ಸುಟ್ಟು ಯೋಗಿಯಾಗುತ್ತಾನ ಸ್ವಯಂ ಮನ್ಮಥನು ಯೋಗಿಯಾಗುವುದೆಂದರೆ ನೀರಿಗೆ ಬೆಂಕಿ ಬಿದ್ದಂತೆ ಇಂತಹ ಅಸಾಧ್ಯವಾದುದನ್ನು ಸಾಧ್ಯವಾಗುವಂತೆ ಮಾಡಿದುದರಿಂದಲೇ ಆತನ ಕೀರ್ತಿ ಆಚಂದ್ರಾರ್ಕಸ್ಥಾಯಿಯಾಗಿ ನಿಂತಿರುವುದು ಆತನ ಪುಣ್ಯಮೂರ್ತಿಯು ಇಂದಿಗೂ ಗೊಮ್ಮಟೇಶ್ವರನೆಂಬ ಹೆಸರಿನಿಂದ ದಿಗಂತ ವಿಶ್ರಾಂತವಾಗಿ ಜನರ ಆದರ ಗೌರವಗಳಿಗೆ ಪಾತ್ರವಾಗಿದೆ , ಜೈನರೆಲ್ಲರ ಪೂಜಾಮೂರ್ತಿಯಾಗಿದೆ

**ಪಂಡಿತೆ**—ಸ್ತ್ರೀ ವ್ಯಕ್ತಿಗಳನ್ನು ಚಿತ್ರಿಸುವುದರಲ್ಲಿ ಕವಿ ಅಪ್ರತಿಮವಾದ ಕುಶಲತೆಯನ್ನು ತೋರಿಸಿದ್ದಾನೆ ತೊಂಬತ್ತಾರು ಸಹಸ್ರ ಸ್ತ್ರೀಯರನ್ನು ರಂಗದಲ್ಲಿ ತಂದಿರುವ ಈತನಿಗೆ ಸ್ತ್ರೀ ಪಾತ್ರಗಳ ಕಡೆಗೆ ಒಲವು ಹೆಚ್ಚು ಭರತನ ಸಂಸಾರ ಚಿತ್ರದಲ್ಲಿ, ಆತನ ಶೃಂಗಾರ ಜೀವನ ನಿರೂಪಣೆಯಲ್ಲಿ ಇದು ತಕ್ಕ ಮಟ್ಟಿಗೆ ಈಗಾಗಲೇ ಕಾಣಿಸಿದೆ ಸದ್ಯಕ್ಕೆ ಸ್ತ್ರೀ ಸಮೂಹದ ದಿಗ್ದರ್ಶಿಕೆಯಂತೆ ತೋರುವ ಪಂಡಿತೆಯನ್ನು ಕುರಿತು ನಾಲ್ಕು ಮಾತುಗಳಾಡುತ್ತೇವೆ ಇದರಿಂದ ಕವಿಯು ಚಿಕ್ಕ ಚಿಕ್ಕ ಪಾತ್ರಗಳನ್ನು ಕೂಡ ಎಷ್ಟು ರಸವತ್ತಾಗಿ ವರ್ಣಿಸುವನೆಂಬುದು ವ್ಯಕ್ತವಾಗುತ್ತದೆ ಚಿಕ್ಕದು ದೊಡ್ಡದೆಂಬ ತಾರತಮ್ಯವಿಲ್ಲದೆ ಕುಸುರಿಗೆಲಸವನ್ನು ಮಾಡಿರುವ ಜಾಣ್ಮೆಯು ಎದ್ದುಕಾಣುತ್ತದೆ.

ಪಂಡಿತೆಯು ದಾದಿಯಾದರೂ ಪ್ರಥಮಚಕ್ರಿಯ ಪಟ್ಟದ ರಾಣಿಯರಿಗೆ ಪಾಠ ಹೇಳಿಕೊಟ್ಟಿರುವ—ಕಾವ್ಯಾಲಂಕಾರ ಶಾಸ್ತ್ರಗಳಲ್ಲಿ ಪಾರಂಗತರನ್ನಾಗಿ ಮಾಡಿರುವ— ದಾದಿ ದಾದಿಯಾದರೂ ತನ್ನ ಜಾಣ್ಮೆಯಿಂದ, ವಿದ್ವತ್ತಿನಿಂದ ರಾಜನ ಮತ್ತು ಆತನ ಪರಿವಾರದವರ ಆದರ ಗೌರವಗಳಿಗೆ ಪಾತ್ರಳಾಗಿರುವವಳು ಸಮಯ ಬಂದಾಗ ರಾಜ ನನ್ನಾಗಲಿ, ರಾಣಿಯನ್ನಾಗಲಿ ಝಂಕಿಸಿ ನುಡಿದು ಬುದ್ಧಿಗಲಿಸುವಷ್ಟು ಸ್ವಾತಂತ್ರ್ಯವಿದೆ ಆಕೆಗೆ ರಾಜನ ಚಿತ್ತವೃತ್ತಿಯನ್ನನುಸರಿಸಿ ತನ್ನ ಜಾಣ್ನುಡಿಗಳಿಂದ ಆತನ ಶೃಂಗಾರ ಜೀವನವನ್ನು ಮುಂದುವರಿಸುತ್ತಾಳೆ ಆಕೆಯ ಮಾತಿನ ಮೋಡಿ ಎಲ್ಲರನ್ನೂ ಮೋಹ ಗೊಳಿಸುವಂತಹುದು ರಾಜನು ಉಪ್ಪರಿಗೆಯಲ್ಲಿ ಓಲಗವನ್ನು ನೆರಹಿದ್ದಾನೆ ರಾಣಿಯ ರೆಲ್ಲರೂ ಬಂದ ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದಾರೆ ಒಬ್ಬಳು ಕಾಣಿಕೆಯಾಗಿ ಪಾದರಿಯ ಅಲರೊಂದನ್ನು ಅರ್ಪಿಸುತ್ತಿರುವಾಗ ಅದು ಜಾರಿ ಭರತನ ಪಾದಗಳ ಬಳಿ ಬಿತ್ತು ಆತನು ಅದನ್ನು ಸ್ವಾಭಾವಿಕವಾಗಿ ಕಾಲಿನಿಂದ ಅತ್ತ ನೂಕಿದ ಒಡನೆಯೇ ಸಭೆಯಲ್ಲಿ ಕುಳಿತಿರುವ ಪಂಡಿತೆ 'ಪರದಾರ ಸೋದರನೊತ್ತಿಗೆ ಪಾದರಿ ಬರಬಹುದೆ ಭರತೇಶ ! ಚರಣದಿಂದೊದೆದುದಾಯ್ತು' ಎಂದು ಶ್ಲೇಷೆಯಿಂದ ರಾಜನನ್ನು ಹೊಗಳಿ ಆತನನ್ನು ಗೌರವಿಸಿದಳು ಆದರೆ ಇತ್ತ ಪಾದರಿಪುಷ್ಪವನ್ನು ಅರ್ಪಿಸಿದ ಸುಕುಮಾರಿಗೆ ಮನನೋಯುವುದಿಲ್ಲವೇ ? ಇದನ್ನು ಮನದಂದು ಪಂಡಿತೆ "ಕಡುಶೀಲವತಿಯರು ನಿನ್ನ ಪೆಂಡಿರು, ತಮ್ಮ ಕಡೆಗೊಬ್ಬ ಪಾದರಿ ಬರಲು, ಪಿಡಿತಂದು ನಿನಗೊಪ್ಪಿಸಿದರು ನೀನೊದೆದುದು ಬೆಡಗಾಯ್ತು ಶೀಲನಿಧಾನ " ಎಂದು ಹೇಳುತ್ತಾಳೆ ರಾಜನನ್ನು ಶ್ಲಾಘಿಸುವುದರ ಜೊತೆಗೆ ರಾಣಿಯ ಖೇದವನ್ನೂ ಹೋಗಲಾಡಿಸುತ್ತಾಳೆ ಮತ್ತೊಬ್ಬ ರಾಣಿ ಮುತ್ತೊಂದನ್ನು ತಂದು ಭರತನಲ್ಲಿ ಕಾಣಿಕೆಯಿತ್ತಳು ಅದನ್ನು ಕಂಡು ಪಂಡಿತೆಯ ಸಮಯಸ್ಫೂರ್ತಿ ಜಾಗ್ರತವಾಗುತ್ತದೆ 'ವದನ ವದನ ಸೋಂಕೆ ಮುತ್ತ ಕೊಡುವುದು ಲೋಕದೊಳುಂಟು ಭರತಚಕ್ರೇಶ ಇದು ಚಿತ್ರ, ಕರಯುಗ ಸೋಂಕೆ ಮುತ್ತೀವುದೆಂ'ದು ಹೇಳಿ ಎಲ್ಲರನ್ನೂ ಹರ್ಷಗೊಳಿಸಿದಳು

ಭರತಚಕ್ರೇಶ್ವರನು ತನ್ನ ಮೋಹದ ಮಡದಿ ಕುಸುಮಾಜಿಯು ರಚಿಸಿದ್ದ 'ರಾಜಲಾವಣ್ಯ' ಕಾವ್ಯವನ್ನು ಕೇಳಿ, ಅದನ್ನು ಬರೆದು ಓದಿದ ಅಮರಾಜಿ ಸುಮನಾಜಿ ಯರಿಗೆ ಮೆಚ್ಚೀಯಲು ಯತ್ನಿಸಿದಾಗ, ಅದು ಅಗತ್ಯವಿಲ್ಲವೆಂದು ರಾಣಿಯರೆಲ್ಲರೂ ಕಾಲ್ಗೆರಗುವರು ರಾಣಿಯಲ್ಲಿರುವ ಪರಸ್ಪರ ಅಭೇದಭಾವವನ್ನು ಅರಿತಿದ್ದರೂ ರಾಜನು ಅದರ ಅರ್ಥವನ್ನು ಅರಿಯದವನಂತೆ ನಟಿಸಲು, ಪಂಡಿತೆ 'ಒರ್ವರೊರ್ವರಗೆರವಿಲ್ಲ, ತನ್ನೊಳು ಸ್ನೇಹ ಪರ್ವಿಯೊಂದಾಗಿಹರರಸ ' ಎಂದು ಆತನಿಗೆ ಸಮಾಧಾನ ಹೇಳು ತ್ತಾಳೆ. ಚುರುಕು ಬುದ್ಧಿಯ ಆ ಮುದುಕಿಗೆ ರಾಜನ ನಟನೆ ಅರ್ಥವಾಗದೆ ಹೋಗಿಲ್ಲ 'ಅರಿಯೆಯಾ ನೀನಿದ ನಗೆಕಾರ ! ಬಗೆಕಾರ ! ಮರೆಕಾರ ! ಬಲುಟೌಳಿಕಾರ !' ಎಂದು ಆತನ ಹುರುಳನ್ನು ಬಯಲಿಗೆಳೆಯುತ್ತಾಳೆ. 'ಸಾಕೆಮ್ಮ ದೇವಿಯರೆರಗಿ ಹೊತ್ತಾಯ್ತು ಸಾಕು ಬೇಹೇಳಿರೆಂಡೆನ್ನು ' ಎಂದು ಝಂಕಿಸಿ ನುಡಿಯುತ್ತಾಳೆ ಆಗ ರಾಜನು

ಆಕೆಯ ಅಪ್ಪಣೆಯಂತೆ ಎಲ್ಲರನ್ನೂ ಏಳಹೇಳಿ ಅಮರಾಜಿ ಸುಮನಾಜಿಯರಿಗೆ ಆಲಿಂಗನದ ಮೆಚ್ಚಿತ್ತು ಸನ್ಮಾನ ಮಾಡುತ್ತಾನೆ ಆದರೆ ಕುಸುಮಾಜಿ ಇದಕ್ಕೂ ಹೆಚ್ಚಿನ ಆದರಕ್ಕೆ, ಗೌರವಕ್ಕೆ ಅರ್ಹಳು ಆದುದರಿಂದ ಆದಿನವನ್ನೆಲ್ಲಾ ಅವಳ ಮನೆಯಲ್ಲಿಯೇ —ಅವಳ ಸಹವಾಸದಲ್ಲಿಯೇ—ಕಳೆಯಬೇಕೆಂಬ ಆಸೆ ತಾನೇ ಆ ನುಡಿಯನ್ನು ಬಾಯ್ಬಿಟ್ಟು ಹೇಳಲು ಸ್ವಲ್ಪ ಸಂಕೋಚ ಅದಕ್ಕಾಗಿ ಪಂಡಿತೆಯನ್ನು ಕುರಿತು 'ಪಂಡಿತೆ ! ನಾವೆಮ್ಮ ಮನೆಯೊಳಿದ್ದನ್ನವ ಕೊಂಡರೊಳ್ಳಿತೊ ? ಭುಕ್ತಿಗೆಮ್ಮ ಪೆಂಡಿರೊಳೊರ್ವಳ ಮನೆಗೆ ಹೋಹುದು ಲೇಸೊ ?' ಎಂದು ಕೇಳಿದ ಇಂಗಿತಜ್ಞಳಾದ ಪಂಡಿತೆ ಆಲೋಚಿಸಿ ಹೇಳುವವಳಂತೆ ನಟಿಸಿ 'ಒಡೆಯ ! ಬಿನ್ನಹವಿಂದು ಕುಸುಮಾಜಿಯರಮನೆಗಡಿಯಿಟ್ಟಿರುತ್ತಮವೆಂದು' ಹೇಳಿದಳು ಆದರೆ ಕುಸುಮಾಜಿಯ ಮನೆಗೇ ಏಕೆ ? ಪ್ರಶ್ನೆಯೇಳಲು ಪಂಡಿತೆ ಅವಕಾಶವನ್ನೇ ಕೊಡುವುದಿಲ್ಲ 'ಹೊಸ ಕಾವ್ಯ ಮೂವರಿಂದಾದುದಿಬ್ಬರನೆ ಮನ್ನಿಸಿದೆಯಿನ್ನೊಬ್ಬಳಿಗಿಲ್ಲ ಅಸಿಯಳ ಮನೆಗೆಯ್ದಿ ಮನ್ನಿಪುದುಚಿತ' ರಾಯನ ರೊಟ್ಟೆಯನ್ನು ಜಾರಿಸಿ ತುಪ್ಪದಲ್ಲೇ ಹಾಕಿದಳು ಆ ಜಾಣೆ ರಾಜನು ಈ ಮಾತುಗಳನ್ನು ಕೇಳಿ 'ಎದೆಯೊಳಾನಂದ, ಮುಖದೊಳಿಷ್ಟು ಮಾಂದ್ಯ ಭಾವದೊಳೊಡಬಟ್ಟ' ಇವರ ಸಂಭಾಷಣೆಯ ಕಾಲದಲ್ಲಿ ಕುಸುಮಾಜಿ ನಾಚಿಕೆಯೊಡನೆ ಸಂತೋಷವನ್ನು ಬೆರಸಿ ಸವಿಯುತ್ತಾ, ತಲೆಬಾಗಿ ನಿಂತಿದ್ದಾಳೆ ಪಂಡಿತೆ ಅವಳ ಮನಸ್ಥಿತಿಯನ್ನರಿತು 'ಅಮ್ಮ ! ರಾಯನಿಗಿಂದು ನಿನ್ನರಮನೆಯಲ್ಲಿ ಸಮ್ಮಾನ ಮುಂದೆ ನೀನೆಯ್ದಿ, ಜಮ್ಮನೆ ಜೋಕೆಮಾಡೆಂದಳು'

ಪಂಡಿತೆಯ ಪಾತ್ರ ಒಳ್ಳೆಯ ಭಕ್ಷ್ಯಭೋಜ್ಯದ ನಡುವೆ ಉಪ್ಪಿನಕಾಯಿ ಇದ್ದ ಹಾಗೆ ಸುಂದರವಾದ ಶೃಂಗಾರಮಯ ಸನ್ನಿವೇಶಗಳಲ್ಲಿ ಅವಳಾಡುವ ಒಂದೊಂದು ನುಡಿಯೂ ಎಷ್ಟೋ ಅಚ್ಚುಮೆಚ್ಚಾಗಿದೆ

ರತ್ನಾಕರನ ಸೃಷ್ಟಿಯಲ್ಲಿನ ಪಾತ್ರಗಳೆಲ್ಲವೂ ಸುಂದರವಾಗಿವೆ , ಸಜೀವವಾಗಿವೆ, ಆತನ ಮಂತ್ರಶಕ್ತಿಗೆ ಒಳಗಾಗಿ ನಗುತ್ತವೆ, ಕುಣಿಯುತ್ತವೆ, ಕೆರಳುತ್ತವೆ ಅಸದೃಶವಾದ ಆತನ ಅನುಭವಶಕ್ತಿಯಿಂದ ಕಳೆಗೊಂಡು ಕಳಕಳಿಸುತ್ತವೆ

# ಕಾವ್ಯದಲ್ಲಿ ಅಂತರ್ಗತವಾಗಿರುವ ಸಾಮಾಜಿಕ ಚಿತ್ರ

'ಸಾಹಿತ್ಯ ಜೀವನದ ಪ್ರತಿಬಿಂಬ' ಕವಿಯು ತಾನು ಕಂಡು ಅನುಭವಿಸಿದ ಸುಂದರ ಸನ್ನಿವೇಶಗಳನ್ನು ಮನಸ್ಸಿನ ಮೂಲೆಯಲ್ಲಿ ರಾಶಿ ಹಾಕಿಕೊಂಡು, ತನಗೆ ಬೇಕಾದಾಗ ಬೇಕಾದುದನ್ನು ಆ ಉಗ್ರಾಣದಿಂದ ಬಯಲಿಗೆ ತರುತ್ತಾನೆ ಹಾಗೆ ತರುವುದಕ್ಕೆ ಮುಂಚೆ ಅವುಗಳನ್ನು ತನ್ನ ಪ್ರತಿಭೆಯಿಂದ ಉಜ್ಜಿ ಉಜ್ವಲಗೊಳಿಸುತ್ತಾನೆ, ತನ್ನ ವಿದ್ವತ್ತಿನ ಅಡಿಗಲ್ಲಮೇಲೆ ಅವುಗಳ ಅಂಕುಡೊಂಕುಗಳನ್ನು ಸವರಿ ನೇರವಮಾಡುತ್ತಾನೆ, ಆದರ್ಶದ ಮೆರಗು ಹಾಕುತ್ತಾನೆ ಆಗ ಅದು ಉತ್ತಮ ಕಾವ್ಯವಾಗುತ್ತದೆ ರತ್ನಾಕರನು ತನ್ನ ಕಾವ್ಯರತ್ನದಲ್ಲಿ ತಂದಿರುವ ಹಲವು ಸುಂದರ ಸನ್ನಿವೇಶಗಳಿಗೆ, ಅವನು ಕಂಡು ಅನುಭವಿಸಿದ ಸಮಾಜ ಚಿತ್ರಗಳು ಪ್ರೇರಕವಾಗಿರಬೇಕು, ಬಗೆಗಣ್ಣಿನೆದುರು ಕುಣಿಯುತ್ತಿದ್ದ ಆ ಚಿತ್ರಗಳನ್ನು ತನ್ನ ಕಾವ್ಯದಲ್ಲಿ ಚಿತ್ರಿಸಿರಬೇಕು ತಾನು ಸ್ವತಃ ರಾಜನ ಮಗ ಆತನು ಯಾವುದಾದರೊಂದು ಚಿಕ್ಕ ಸಂಸ್ಥಾನಕ್ಕೆ ರಾಜನಾಗಿದ್ದರೂ ಇದ್ದಿರಬಹುದು ರಾಜಾಸ್ಥಾನದ ಹಲವು ಆಗುಹೋಗುಗಳನ್ನು ಆತನು ಕಣ್ಣಾರ ಕಂಡಿರುವನೆಂಬುದಂತೂ ನಿರ್ವಿವಾದ ಅಲ್ಲಿಯ ಸಂಪತ್ತು, ಶೃಂಗಾರ, ವೈಭವ, ವೈಖರಿಗಳೆಲ್ಲವೂ ಆತನ ಕಾವ್ಯದಲ್ಲಿ ಹೆಪ್ಪುಗಟ್ಟಿ ಕುಳಿತಿವೆ ಅವ್ಯಾಹತವಾದ ಅಸದೃಶ ಸಂಪತ್ತಿನಿಂದ ಕೂಡಿ, ಕನ್ನಡನಾಡಿನ ಕೀರ್ತಿಧ್ವಜವನ್ನು ಮುಗಿಲು ಮುಟ್ಟಿಸಿದ್ದ ವಿಜಯನಗರ ಸಾಮ್ರಾಜ್ಯದ ಭವ್ಯಚಿತ್ರವು ಕವಿಯ ಕಣ್ಣೆದುರಿಗಿರುವಂತೆ ತೋರುತ್ತದೆ, ಆತನು ಕಾವ್ಯಕರ್ಮಕ್ಕೆ ಕೈಹಾಕಿರುವಾಗ ಆ ರಾಜ್ಯದ ಜನರ ರಸಿಕತೆಗೆ ಕೊನೆ ಮೊದಲುಂಟೆ ? ಅವರ ಭೋಗ ವೈಭವಕ್ಕೆ ಕೊರತೆಯುಂಟೆ ? ಅವರ ಐಶ್ವರ್ಯಕ್ಕೆ ಎಲ್ಲೆಯುಂಟೆ ? ಇದನ್ನು ಕಣ್ಣಾರೆ ಕಂಡು, ಮನಸಾರೆ ಸವಿದು, ಹೊನಲಾಗಿ ಉಕ್ಕಿಸಿರುವುದೇ 'ಭರತೇಶ ವೈಭವ' ವೆಂದು ತೋರುತ್ತದೆ

ವಿಜಯನಗರಸಾಮ್ರಾಜ್ಯದ ವೈಭವವನ್ನು, ರಸಿಕತೆಯನ್ನು ಹಲವು ಚರಿತ್ರಕಾರರು ಮುಕ್ತಕಂಠರಾಗಿ ಹೊಗಳಿದ್ದಾರೆ ಅವರ ಭೋಗ ಸಾಮಗ್ರಿಗಳ ವರ್ಣನೆ ಚರಿತ್ರೆಯಾದರೂ ಕಾಲಿಲ್ಲದ ಕಥೆಯಂತೆ ಭಾಸವಾಗುತ್ತದೆ ರಾಜನ ಅಂತಃಪುರವೆಂದರೆ ಗಂಡುನೊಣ ಕೂಡ ನುಸುಳಲಸಾಧ್ಯವಾದ ಪ್ರಮೀಳಾ ಸಾಮ್ರಾಜ್ಯ ಅರಮನೆಯ ಹೊರಗೆ ರಾಜನ ರಾಜ್ಯಾಡಳಿತವಿರುವಂತೆ ಅರಮನೆಯ ಒಳಗೆ ಸ್ತ್ರೀ ಸಾಮ್ರಾಜ್ಯ ರಾಜನಿಗಿರುವಂತೆ ರಾಣಿಗೂ ಸಚಿವರು ಸೇವಕರು ಅಸಂಖ್ಯಾತರಾಗಿರುತ್ತಾರೆ. ರಾಜನು ಹಲವು ಸಾಮಂತರಿಗೆ ಅಧಿಪತಿಯಾಗಿರುವಂತೆ ಪಟ್ಟದರಾಣಿ ಹಲವು ರಾಣಿಯರಿಗೆ ಹಿರಿಯಳು. ರಾಣಿಯೊಬ್ಬಳು ತನ್ನ ಮಹಲಿನಿಂದ ಹೊರಗೆ ಕಾಲಿಟ್ಟಳೆಂದರೆ ಇಪ್ಪತ್ತೈದು ಮೂವತ್ತು ಜನ ವೇತ್ರಧಾರಿಣಿಯರು ಭುಜಗಳ ಮೇಲೆ ಚಾವಟಿಗಳನ್ನು ಹಾಕಿಕೊಂಡು ಹೊರಗೆ ಬರಬೇಕು ಅವರ ಹಿಂದೆ ಮಂಗಳವಾದ್ಯಗಳನ್ನು

ಬಾರಿಸುತ್ತಾ ಹಲವು ಮಂಗಳಾಂಗಿಯರು , ಅವರನ್ನು ಅನುಸರಿಸಿ ಸುಮಾರು ಇಪ್ಪತ್ತು ಜನ ರಜತವೇತ್ರಧಾರಿಣಿಯರಾದ ಸ್ತ್ರೀ ಭಟರು, ಅವರ ಕಾಪಿನಲ್ಲಿ ರತ್ನ ಖಚಿತವಾದ ಬಂಗಾರದ ಕಳಶಗಳನ್ನು ಹೊತ್ತು ಸುರಸುಂದರಿಯರಾದ ಅರವತ್ತು ಜನ ಚೇಟಿಯರು ಬರುವರು ಎಲ್ಲಕ್ಕೂ ಹಿಂದೆ ರಾಣಿಯ ಸವಾರಿ ಇಂತಹ ರಾಣಿಯರು ಐನೂರು ಆರುನೂರು ಜನ ಈ ರಾಣಿಯರಲ್ಲದೆ ರಾಜನ ಪ್ರೇಮಕ್ಕೆ, ಕಾಮಸಂತೃಪ್ತಿಗೆ ಮೀಸಲಾದ ಹಲವು ವಿಲಾಸವತಿಯರು ಒಟ್ಟು ಅರಮನೆಯ ಜನಗಣತಿ ಹನ್ನೆರಡು ಸಹಸ್ರ ಇದರಲ್ಲಿ ಪುರುಷವ್ಯಕ್ತಿ ರಾಜನೊಬ್ಬನೇ ! ಅಸಂಖ್ಯಾತ ತಾರೆಗಳ ಮಧ್ಯದ ಉಡುರಾಜ ರತ್ನಾಕರನ ಸೃಷ್ಟಿಯಲ್ಲಿ ಕಂಡುಬರುವ ಎಲ್ಲ ಬಗೆಯ ಪ್ರಮದೆಯರೂ ಇವರಲ್ಲಿ ಉಂಟು. ಸಂಗೀತ ನರ್ತನಗಳಿಂದ ಹಿಡಿದು ಕತ್ತಿ ಗುರಾಣಿಗಳನ್ನು ಧರಿಸಿ ಕುಸ್ತಿಮಾಡುವವರವರೆಗೆ—ಜ್ಯೋತಿಷಿಯರು, ಭವಿಷ್ಯವಾದಿಗಳು, ಕರಣಿಕರು, ಪಹರೆಯವರು, ಮಂತ್ರಾಲೋಚಕರು, ವೈದ್ಯರು, ವಿದುಷಿಯರು, ನ್ಯಾಯಾಧಿಪತಿಗಳು— ಎಲ್ಲರೂ ಸ್ತ್ರೀಯರೇ

ಕುಸುಮಾಜಿ ಭರತನಿಗೆ ಊಟಮಾಡಿಸುವ ದೃಶ್ಯ ವಿಜಯನಗರದ ಸಾಮ್ರಾಜನ ಭೋಜನ ಸಮಾರಂಭದ ಮಾರ್ಪೊಳಪೇ ರಾಜನು ಊಟಮಾಡುವಾಗ ಎಲ್ಲರೂ ಹೊರಟುಹೋಗಬೇಕು ಆ ದಿನದ ಅಚ್ಚುಮೆಚ್ಚಿನ ರಾಣಿಯೊಡನೆ ಒಬ್ಬರಿಬ್ಬರು ಸಖಿಯರಿದ್ದರೆ ಸಾಕು ಮೂರು ಕಾಲಿನ ಬಂಗಾರದ ಒಂದು ಅಡ್ಡಣಿಗೆ; ಅದರ ಮೇಲೆ ರತ್ನಖಚಿತವಾದ ಬಂಗಾರದ ತಾಟು , ಅಡಿಗೆಯ ಸಾಮಾನುಗಳೆಲ್ಲಾ ಬಂಗಾರದವೇ , ವ್ಯಂಜನ ವಸ್ತುಗಳಿಗೆ ರತ್ನ ಖಚಿತವಾದ ಬಂಗಾರದ ಪಾತ್ರೆಗಳು. ರಾಣಿಯೇ ಸ್ವತಃ ಕೈಮುಟ್ಟಿ ರಾಜನಿಗೆ ಊಟಮಾಡಿಸಬೇಕು ಊಟವಾದನಂತರ ಕೈತೊಳೆದು, ಮೇಲಕ್ಕೆಬ್ಬಿಸಿ ಶಯನಾಗಾರಕ್ಕೆ ಕೈಹಿಡಿದು ಕರೆದೊಯ್ಯಬೇಕು ಹೀಗೆಯೇ ರತ್ನಾಕರನ ಕಾವ್ಯ ಪ್ರಪಂಚದಲ್ಲಿ ಕಾಣಬರುವ ರಾಜನ ಅಂತಃಪುರದ ಒಡ್ಡೋಲಗವೂ ವಿದ್ಯಾನಗರದ ಅಂತಃಪುರಕ್ಕೆ ಸೇರಿದುದೇ

ವಿಜಯನಗರದ ರಾಜ್ಞಿಯರು ಸಾಹಿತ್ಯಾಕಾಶದ ಧ್ರುವತಾರೆಗಳಾಗಿ ಬೆಳಗಿದವರು 'ರಾಜ ಲಾವಣ್ಯ' ಕಾವ್ಯವನ್ನು ಕುಸುಮಾಜಿ ಕಾವ್ಯಪ್ರಪಂಚದಲ್ಲಿ ರಚಿಸಿದ್ದರೆ, ರಾಮಭದ್ರಾಂಬೆ ತನ್ನ ಇನಿಯನಾದ ರಘುನಾಥನ ಹೆಸರಿನಲ್ಲಿ 'ರಘುನಾಥಾಭ್ಯುದಯ ' ವನ್ನು ಬರೆದಳು ತಂಜಾವೂರಿನ ರಾಜನಾದ ಈ ರಘುನಾಥರಾಯ ತನ್ನ ರಾಜಧಾನಿಯಲ್ಲಿ ಆಸ್ಥಾನದ ವಿದುಷಿಯರನ್ನೆಲ್ಲಾ ಕರೆಸಿ ಒಂದು ಪರೀಕ್ಷೆ ನಡೆಸಿದನಂತೆ ! ಚಿತ್ರ, ಬಂಧ, ಗರ್ಭ, ಆಶುಕವಿತೆಗಳಲ್ಲಿ ನಿಷ್ಣಾತರಾದ ಹಲವು ರಮಣೀ ರತ್ನಗಳು ಇದರಲ್ಲಿ ಭಾಗವಹಿಸಿದ್ದರಂತೆ ಘಂಟೆಗೆ ನೂರು ಪದ್ಯಗಳನ್ನು ನಿರ್ಮಿಸಬಲ್ಲ ಶತಲೇಖನೀವಿದ್ಯಾ ನಿಪುಣೆಯರೂ, ಅಷ್ಟಭಾಷಾ ಪ್ರವೀಣೆಯರೂ ಆದ ಅವರನ್ನು ಕಂಡೇ ರತ್ನಾಕರನ ಕಾವ್ಯಕರ್ಮ ಅಷ್ಟು ಕಳೆಗೊಂಡಿರುವುದು ರಘುನಾಥ ರಾಜನ ಕೊಡುಗೈಯ ಫಲವಾಗಿ ಲಲಿತಕಲೆಗಳು ಡಾಂಗುಡಿಯಿಟ್ಟು ಹಬ್ಬಿ ಹರಡಿಹೋದವು ಗಾನಕುಶಲರನ್ನೂ, ವೀಣೆ ರಾವಣಹಸ್ತಾದಿ ತಂತ್ರೀವಾದ್ಯ ವಾದಕರನ್ನೂ ಆತ

ಪರೀಕ್ಷಿಸಿ ಅರ್ಹರಾದವರಿಗೆ ಕನಕಾಭಿಷೇಕದಿಂದ ಗೌರವಿಸಿದನಂತೆ ! ಸಂಗೀತ ಮಾತ್ರ ವಲ್ಲದೆ ನರ್ತನದಲ್ಲಿಯೂ ಆತನಿಗೆ ಅತಿಶಯವಾದ ಅಭಿರುಚಿಯಿತ್ತು ಸುಸಂಸ್ಕೃತ ರಾದ ಸ್ತ್ರೀಯರ ನರ್ತನಗಳನ್ನು ಆಗಾಗ ಏರ್ಪಡಿಸಿ ಪ್ರೋತ್ಸಾಹಿಸುತ್ತಿದ್ದ ಆತನನ್ನು, ನರ್ತನದ ಒಂದು ರೂಪಕ್ಕೆ ' ರಘುನಾಥ ವಿಲಾಸ ' ವೆಂದು ಹೆಸರಿಟ್ಟು, ಗೌರವಿಸಿದ ರಂತೆ !

ರತ್ನಾಕರನ ಕಾವ್ಯದಲ್ಲಿ ಬರುವ ನಾಟ್ಯಾಂಗನೆಯರಾದರೂ ವಿಜಯನಗರದ ವೇಶ್ಯೆಯರೇ ! ವೇಶ್ಯೆಯರ ಸುದ್ದಿ ಬರದೆ ವಿಜಯನಗರದ ಸ್ತ್ರೀಯರ ಚರಿತ್ರೆ ಸಂಪೂರ್ಣ ವಾಗದು. ಬಂಗಾರದ ಹೊಗೆಯಾಡುತ್ತಿದ್ದ ಆ ನಗರಕ್ಕೆ ಅದು ಅವಶ್ಯವಾಗಿತ್ತೊ ಏನೊ ! ಅಬ್ದುಲ್ ರಜಾಕ್ ಎಂಬ ಚರಿತ್ರಕಾರನು ಹೇಳುವಂತೆ ಹನ್ನೆರಡು ಸಹಸ್ರ ಪೋಲೀಸಿನವರಿಗೆ ಸಂಬಳ ಕೊಡುವಷ್ಟು ಹಣ ವೇಶ್ಯೆಯರ ತಲೆಗಂದಾಯದಿಂದ ವಸೂಲಾಗುತ್ತಿತ್ತಂತೆ ! ಇದರಿಂದ ಅವರ ಬಾಹುಳ್ಯದ ಜೊತೆಗೆ ಅವರ ಐಶ್ವರ್ಯವೂ ವ್ಯಕ್ತವಾಗುತ್ತದೆ ಮುನ್ನೂರು ಗಜ ಉದ್ದವೂ ಇನ್ನೂರು ಗಜ ಅಗಲವೂ ಉಳ್ಳ ಒಂದು ದೊಡ್ಡ ರಸ್ತೆ ಅದರ ಇಕ್ಕೆಲಗಳಲ್ಲಿಯೂ ಗಗನಚುಂಬಿತಗಳಾದ ಸೌಧಗಳು ರಸ್ತೆಯ ಎರಡು ಕೊನೆಯಲ್ಲಿಯೂ ದ್ವಾರದಲ್ಲಿ ಸಿಂಹ, ಹುಲಿ, ಚಿರತೆಗಳ ಬೊಂಬೆಗಳು– ಜೀವಸಹಿತವಾದುವುಗಳೋ ಎಂಬ ಭ್ರಾಂತಿಯನ್ನು ಹುಟ್ಟಿಸುವಂತೆ ಸುಂದರವಾಗಿ ಬಣ್ಣ ಹಾಕಿದವುಗಳು ರಸ್ತೆಗೆಲ್ಲಾ ಪನ್ನೀರನ್ನು ಚೆಲ್ಲಿದೆ. ಪ್ರತಿಯೊಂದು ಸೌಧದ ಮುಂದು ಗಡೆಯೂ ಸಂಗಮವರೀ ಕಲ್ಲಿನಿಂದ ಮಾಡಿದ ಆಸನಗಳು ಈ ಮನೆಗಳ ಬಾಗಿಲು ಗಳಲ್ಲಿ ಪರಿಪರಿಯಾಗಿ ಅಲಂಕೃತವಾದ ಕುರ್ಚಿಗಳ ಮೇಲೆ ವೇಶ್ಯೆಯರು ಕುಳಿತಿರುವರು ಪ್ರತಿಯೊಬ್ಬರೂ ಕೈತೊಳೆದು ಮುಟ್ಟಬೇಕಾದಂತಹ ತರುಣಿಯರಾದ ಸುರಸುಂದರಿ ಯರು ಒಬ್ಬೊಬ್ಬಳೂ ಮುತ್ತು, ರತ್ನಗಳ ಅಮೂಲ್ಯ ಆಭರಣಗಳಿಂದ ಅಲಂಕೃತ ಳಾಗಿರುವಳು ಒಬ್ಬೊಬ್ಬಳ ಬಳಿಯಲ್ಲಿಯೂ ಒಬ್ಬರಿಬ್ಬರು ಸುರಸುಂದರವಾಗಿ ಅಲಂಕೃತ ರಾದ ಸೇವಕಿಯರು—ಬಂದವರನ್ನು ಆಹ್ವಾನಿಸಲು ಮತ್ತು ಉಲ್ಲಾಸಗೊಳಿಸಲು ಈ ವೇಶ್ಯೆಯರೆಲ್ಲರೂ ಹಬ್ಬ ಹರಿದಿನಗಳಲ್ಲಿ ಸಕಲಾಭರಣಭೂಷಿತೆಯರಾಗಿ ರಾಜನದುರು ನರ್ತನ ಮಾಡುವರು ಆಗ ರಾಜನೆದುರು ತಾಂಬೂಲವನ್ನು ಸವಿಯಬಹುದು ಸಹ ಅದರಲ್ಲಿಯೂ ಮಹಾನವಮಿಯ ಹಬ್ಬವೆಂದರೆ ಆದಿನ ರಸಿಕತೆಯ ಸೂರೆಯಾಗಿ ಹೋಗುತ್ತಿತ್ತು

ರತ್ನಾಕರ ಕವಿ ತನ್ನ ಕಾವ್ಯದಲ್ಲಿ ಅಮರವಾಗಿ ಮಾಡಿರುವ ಮಹಾನವಮಿಯ ಹಬ್ಬ ವಿಜಯನಗರದ ವೈಭವದ ವರ್ಣನೆಯೇ ಆಗಿದೆ ಅದು ಒಂದು ಮತಸಂಬಂಧ ವಾದ ಹಬ್ಬವಾದರೂ ಅದಕ್ಕೆ ರಾಜಕೀಯದ ಕಳೆ ಬಂದಿತ್ತು ದೇಶದೇಶದ ಸಾಮಂತ ರಾಜರೆಲ್ಲರೂ ಕರ್ಣಾಟಕ ಸಿಂಹಾಸನಾಧಿಪತಿಗೆ ಕಪ್ಪಕಾಣಿಕೆಗಳನ್ನು ತಂದೊಪ್ಪಿಸುತ್ತಿ ದ್ದರು ಉಪ್ಪರಿಗೆಯಲ್ಲಿ ರತ್ನಸಿಂಹಾಸನದಮೇಲೆ ವಿರಾಜಿತನಾಗಿರುವ ಅಧಿರಾಜನ ಸುತ್ತಲೂ ಹಲವು ಚಿಕ್ಕಪುಟ್ಟ ರಾಜರು ಸಂದಣಿಸಿ ಕುಳಿತಿರುವರು ರಾಜನ ಇದಿರಿಗೆ

ಯೋಧರ ಪ್ರದರ್ಶನ, ಕುಸ್ತಿ ಕಾಳಗಗಳು—ನಡೆಯುವುವು ಕಥೆಗಾರರು, ಸಂಗೀತಗಾರರು, ತಮ್ಮ ಕೌಶಲ್ಯದಿಂದ ರಾಜನನ್ನು ರಮಿಸುವರು ಸಂಗೀತ ನರ್ತನಗಳಿಗಿದ್ದ ಗೌರವವಂತೂ 'ನಭೂತೋ ನ ಭವಿಷ್ಯತಿ ' ಎಳೆವರೆಯದ ಸುರಸುಂದರಿಯರು ನರ್ತಕಿಯರು ಅವರ ಇದಿರಿಗೆ ತೆಳುವಾದೊಂದು ಪರದೆ ಪರದೆ ಹಾರಿದೊಡನೆಯೇ ನಯ ನುಣುಪುಗಳಿಂದ ಹೆಜ್ಜೆಯಿಕ್ಕುತ್ತಾ ಹಾವಭಾವ ವಿಲಾಸ ವಿಭ್ರಮುಗಳಿಂದ ನೋಡುಗರ ಬುದ್ಧಿಯನ್ನು ಸೂರೆಗೊಳ್ಳುವ ನರ್ತಕಿಯರು 'ಸಂಜೆಗೆಂಪ್ರೊಲೆವಂತೆ ತೆರೆ ತೊಲಗಿತು ಕಣ್ಗೆ ಕಂಜಾಕ್ಷಿಯರು ಕಾಣಿಸಿದರು.' ಎಂಬ ಕವಿಯ ಮಾತನ್ನು ಸಾರ್ಥಕಗೊಳಿಸುವರು ಸಂಗೀತ ನರ್ತನಗಳ ಆತನ ಅಲೌಕಿಕ ವರ್ಣನಗೆ ಉಗಮಸ್ಥಾನ ಇದೇ

ಕವಿಯು ಸಮಾಜವನ್ನು ಪ್ರತಿಬಿಂಬಿಸುವುದರ ಜೊತೆಗೆ ಸಮಾಜವನ್ನು ರೂಪುಗೊಳಿಸುವ ಕೆಲಸವನ್ನೂ ತಕ್ಕಮಟ್ಟಿಗೆ ನಡೆಸುತ್ತಾನೆ ಜನರ ಆಸೆ ಅಭಿರುಚಿಗಳನ್ನು ತಕ್ಕಮಟ್ಟಿಗೆ ನೇರ್ಪುಗೊಳಿಸುತ್ತಾನೆ ರತ್ನಾಕರನು ತನ್ನ ಕಾವ್ಯದಲ್ಲಿ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿ ಸಮಾಜದಲ್ಲಿ, ಸಂಸಾರದಲ್ಲಿ ಅವರ ಸ್ಥಾನಮಾನಗಳೇನೆಂಬುದನ್ನು ಜನರಿಗೆ ತೋರಿಸಹೊರಟಿದ್ದಾನೆ "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಮನುವಿನ ಮೂಲಮಂತ್ರದಿಂದ ಹಿಡಿದು 'ಸ್ತ್ರೀ ಶೂದ್ರಯೋಃ' ಎಂಬ ಶಾಂತಿ ಮಂತ್ರದವರೆಗೆ ಸ್ತ್ರೀ ಯೆಂಬುದೊಂದು 'ಹಾಸ್ಯುಂಡು ಬೀಸಿ ಒಗೆವ ಬಾಳೆಯೆಲೆ' ಯೆಂಬ ಭಾವನೆ ನಮ್ಮ ಜನತೆಯಲ್ಲಿ ಬೆಳೆದು, ಬಲಿತು, ಬೇರೂರಿ ಹೋಗಿತ್ತೆಂದು ತೋರುತ್ತದೆ ಸ್ತ್ರೀಯ ಸೃಷ್ಟಿ ತಾಯಿಯಾಗುವುದಕ್ಕೆ—ಎಂಬುದಕ್ಕಿಂತ ಹೆಚ್ಚು ಉದಾತ್ತ ದೃಷ್ಟಿ ನಮ್ಮ ಕವಿಗಳಿಗೆ, ಜನಕ್ಕೆ ಬಂದಂತೆ ತೋರುವುದಿಲ್ಲ. ರತ್ನಾಕರ ಕವಿ ಸ್ತ್ರೀಯರ ವಿಚಾರದಲ್ಲಿ ಹೆಚ್ಚು ಉದಾತ್ತ ದೃಷ್ಟಿಯುಳ್ಳವನಾಗಿದ್ದಾನೆ , ಹೆಚ್ಚು ಸಹಾನುಭೂತಿಯುತನಾಗಿದ್ದಾನ ಸ್ತ್ರೀಯು ಬರಿಯ ಉಪಭೋಗವಸ್ತುವಷ್ಟೇ ಅಲ್ಲ ಆಕೆಗೂ ಒಂದು ಆತ್ಮವಿದೆ ಆತ್ಮವನ್ನು ಸಂತೋಷಗೊಳಿಸುವುದು ಪುರುಷನ ಧರ್ಮ ಹೆಂಗಸು ಕಲಾಜೀವಿಯಾದರ ಗಂಡನನ್ನು ಸಂತೋಷಪಡಿಸುತ್ತಾಳೆ ಪುರುಷನು ಆಕೆಗೆ ತಕ್ಕ ಪರಿಕರಗಳನ್ನೂ ಅನುಕೂಲ್ಯಗಳನ್ನೂ ಒದಗಿಸಿ ಆಕೆಯ ಜೀವನವನ್ನು ಪರಿಪೂರ್ಣವಾಗಿ ಮಾಡಬೇಕು ಭರತ ಚಕ್ರಿಯು ಇಂತಹ ಅನುಕೂಲ್ಯಗಳನ್ನೆಲ್ಲಾ ತನ್ನ ಹೆಂಡಿರಿಗೆ ಒದಗಿಸಿದ್ದನು ಅವನ ಹೆಂಡಿರೆಲ್ಲರೂ ಪಂಡಿತೆಯ ಸಹಾಯದಿಂದ ಕಾವ್ಯಾಲಂಕಾರಗಳನ್ನು ಅರಿತು, ಹಲವು ಕಲೆಗಳಲ್ಲಿ ಪ್ರತ್ಯುತ್ಪನ್ನಮತಿಗಳಾಗಿರುವವರು ಕುಸುಮಾಜಿಯ ಕಾವ್ಯಕಲೆಯೂ ವೀಣಾವಾದನವೂ ಸಂಗೀತವೂ ಆಕೆಯ ಅಸಾಮಾನ್ಯ ಕುಶಲಮತಿಯನ್ನು ಪ್ರದರ್ಶಿಸುತ್ತವೆ ಸಂಗೀತಕ್ಕೆ ಆಕೆಯಿಂದ, ಆಕಗೆ ಸಂಗೀತದಿಂದ ಪ್ರಾಶಸ್ತ್ಯ ಬೆಳೆದಿರುವಂತೆ ತೋರುತ್ತದೆ, ಪದ್ಮಿನಿಯೇ ಮೊದಲಾದ ಹಲವು ಸ್ತ್ರೀಯರು ನಾಟ್ಯವಿದ್ಯೆಯಲ್ಲಿಯೂ ಅಭಿನಯ ಚಾತುರ್ಯದಲ್ಲಿಯೂ ಅದ್ವಿತೀಯ ಕಲಾಭಿಜ್ಞೆಯರಾಗಿದ್ದಾರೆ, ಸಂಗೀತ, ನಾಟ್ಯ, ಅಭಿನಯಗಳು ಆತನ

ರಾಣಿಯರಿಗೆ ಕರತಲಾಮಲಕವಾಗಿವೆ ಇದರಿಂದ ಆತನ ಜೀವನ ತುಂಬುಜೀವನವಾಗಿ ಸುಖಭರಿತವಾಗಿದೆ

ಮಾನವನ ಮೋಕ್ಷ ಮಾರ್ಗದಲ್ಲಿ ಅಡ್ಡವಾಗಿರುವ ಒಂದು ದೊಡ್ಡ ಮುಳ್ಳು ಬೇಲಿಯೇ ಸ್ತ್ರೀ , ಮಾನವನನ್ನು ಅಧೋಗತಿಯ ಹೆದ್ದಾರಿಯಲ್ಲಿ ನಾಗಾಲೋಟದಿಂದ ಸೆಳೆದೊಯ್ಯುವ, ನರಕದ ಅಗಾಧ ಮಡುವಿನಲ್ಲಿ ಎತ್ತಿಹಾಕುವ ಕುಟಿಲಗಾಮಿ ಆಕೆ— ಎಂಬ ಸಂಪ್ರದಾಯಬದ್ಧವಾದ ಭಾವನೆಗಳ ಬುಡಕ್ಕೆ ಕೊಡಲಿ ಹಾಕಿದ್ದಾನೆ ರತ್ನಾಕರ

ಚಕ್ರಿಯ ಸ್ತ್ರೀರತ್ನ ನರಕಕೊಯ್ವಳು ಎಂದು
ವಕ್ರದೊಳ್ಕೆಲಬರಾಡುವರು |
ಅಕ್ರಮವಾ ಮಾತು ಪರಸಿದ್ಧಾಂತ ವಾ |
ಕ್ಯಕ್ರಮವೊಂದುಂಟು ಕೇಳಿ ||

ಗಂಡ ಪಾಪಿಯಾದರೆ ಹೆಂಡತಿ ಪಾಪಿಯಾಗುತ್ತಾಳೆ

ದುರ್ಗತಿಗೆಯ್ದುವ ಚಕ್ರಿಯ ಸ್ತ್ರೀರತ್ನ |
ದುರ್ಗತಿಗೆಯ್ದುವಳ್ಸಹಜ |

ಆದರೆ—

ಸ್ವರ್ಗಕ್ಕ ಮುಕ್ತಿಗೈದುವರ ಸ್ತ್ರೀರತ್ನಕ್ಕೆ |
ಸ್ವರ್ಗವಂತಿದು ಸುಸಿದ್ಧಾಂತ ||

ಗಂಡಸಿನಂತೆ ಹೆಂಗಸಿಗಾದರೂ ಸದ್ಗತಿ ಸಾಧ್ಯ.

ಪುರುಷರ ಪರಿಣಾಮಕನುಸಾರಿಯಾದೊಂದು |
ಪರಿಣಾಮ ಸ್ತ್ರೀ ರತ್ನಕುಂಟು |
ಪುರುಷನೈದಿದಗತಿಯತ್ಯಲ್ಪ'ದೂರ ಸಾ |
ರಿರುತಿಹಳವಳದರಿಂದ ||

'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ.' ಎಂದು ಹೇಳುವ ಜಾತಿಗೆ ಸೇರಿದ ವ್ಯಕ್ತಿ ರತ್ನಾಕರ

---

## ರತ್ನಾಕರನ ವ್ಯಕ್ತಿತ್ವ

ರತ್ನಾಕರನ ಕವಿತಾಶಕ್ತಿಯನ್ನು ನೋಡಬೇಕಾದರೆ ಆತನು ಜಿನಸೇನಾದಿ ಇತರ ಕವಿಗಳ ಮಾರ್ಗವನ್ನು ಬಿಟ್ಟು ತಾನೇ ಪ್ರತ್ಯೇಕವಾಗಿ, ಸ್ವತಂತ್ರವಾಗಿ ಮಾಡಿ ಕೊಂಡಿರುವ ಮಾರ್ಪಾಟುಗಳನ್ನು ಗಮನಿಸಬೇಕು ಇದು ಮುಖ್ಯವಾಗಿ ಭೋಗಸಂಧಿ ಇದಲ್ಲದೆ ಕಾವ್ಯದಲ್ಲಿ ಬರುವ ಹಲವು ವರ್ಣನೆಗಳು ನಾವು ನೋಡಲು ಯೋಗ್ಯವಾದವು ಗಳು ಅವು ಮೂಲದ ಪಡಿಯಚ್ಚಲ್ಲ , ರತ್ನಾಕರನ ಸ್ವಂತ ಆಸ್ತಿ

ನಮ್ಮ ಹಿಂದಿನ ಸಾಹಿತ್ಯದ ಬಹುಭಾಗ ಚರ್ವಿತಚರ್ವಣ—"ಹಾಡಿದ್ದೇ ಹಾಡುವ ಕಿಸುಬಾಯಿದಾಸನಂತೆ" ಸಂಪ್ರದಾಯದ ಕಲ್ಲುಕಟ್ಟಿಗೆ ಸಿಕ್ಕಿ ಸಾಹಿತ್ಯದ ಹೊಳೆ ನಿಂತ ನೀರಾಗಿದೆ ನಡುವೆ ಹುಲುಸಾಗಿ ಬೆಳೆದುಕೊಂಡಿರುವ ಕವಿಸಮಯದ ಕುದುರೆಯ ಗೊರಚಿ, ಮಲೆತ ನೀರಿನಲ್ಲಿ ಕೊಳಕು ನಾರುತ್ತದೆ ಮಹಾಕಾವ್ಯದಲ್ಲಿ ಅಷ್ಟಾದಶಪುರಾಣಗಳಿರಬೇಕೆಂಬ ಸ್ವರ್ಣ ಶೃಂಖಲೆಗೆ ಪಂಪನಂತಹ ಪ್ರತಿಭಾವಂತನಾದ ಮಹಾಕವಿಯೂ ಒಳಗಾಗಿದ್ದಾನೆ , ಜಿನಸೇನನ ಮಹಾಪುರಾಣದಲ್ಲಿ ಇಲ್ಲದಿದ್ದರೂ, ತನ್ನ ಗ್ರಂಥದಲ್ಲಿ (ಆದಿಪುರಾಣ) ಯುದ್ಧೋದ್ಯೋಗಕ್ಕೆ ಮುಂಚೆ ಜಲಕೇಳಿ, ವನವಿಹಾ ರಾದಿ ವರ್ಣನೆಗಳನ್ನು ಎಳತಂದಿದ್ದಾನೆ ಕೆಲವು ವೇಳೆ ಇವುಗಳಿಗೆ ಔಚಿತ್ಯವನ್ನು ಕಲ್ಪಿಸುವುದು ಕೂಡ ಅಸಾಧ್ಯವಾಗುತ್ತದೆ ರತ್ನಾಕರ ಕವಿಯ ಮನಸ್ಸಿಗೆ ಈ ಔಚಿತ್ಯದ ಕೊಲೆ ಹಿಡಿಸಲಿಲ್ಲವೆಂದು ತೋರುತ್ತದೆ 'ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ| ರಚಿಸುವರಾನಂತು ಪೇಳೆ | ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ | ನಿಚಿತ ಪ್ರಯೋಜನ ವೆನಗೆ' ಎಂದು ಘಂಟಾಘೋಷವಾಗಿ ಹೇಳುತ್ತಾನೆ ತನ್ನ ಗ್ರಂಥದಲ್ಲಿ ವರ್ಣನೆಗಳೇ ಇಲ್ಲವೆಂದಲ್ಲ ಆದರೆ ಅವುಗಳಿಗೆ ಬಲವಂತಮಾಘಸ್ನಾನದ ದುರ್ದೆಶೆಯೇನೂ ಬಂದಿಲ್ಲ , ಸ್ವಾಭಾವಿಕವಾಗಿವೆ ಕಾವ್ಯವೆಂದೊಡನೆಯೇ ಸಮುದ್ರ ನಗರಗಳ ವರ್ಣನೆ ಯಿಂದ ಆರಂಭವಾದುದಾಗಿರಬೇಕೆಂಬ ಆವಶ್ಯಕತೆ ಈತನಿಗೆ ಅನಿವಾರ್ಯವೆಂದು ತೋರಲಿಲ್ಲ

ಕವಿಯು ಗ್ರಂಥವನ್ನು ಬರೆಯುತ್ತಿರುವುದು ಜನರು ಅವುಗಳನ್ನು ಓದಿ, ರಸಾ ಸ್ವಾದನದಿಂದ ಸಂತೋಷಪಡಲೆಂದೇ ಹೊರತು ವಿದ್ವಜ್ಜನಗೋಷ್ಠಿಯಲ್ಲಿ ಬಿರುದು ಬಾವಲಿಗಳನ್ನು ಸಂಪಾದಿಸುವುದಕ್ಕಲ್ಲ ಮನಸ್ಸುಮಾಡಿದರೆ ತಾನೂ 'ಓದುಗಬ್ಬ' ವನ್ನು ಬರೆಯಬಲ್ಲ , ಇತರರಿಗಿಂತ ಪ್ರೌಢಿಮೆಯಲ್ಲಿ ತಾನೇನೂ ಕೀಳಲ್ಲ ಬೇಕಾದರೆ ತನ್ನ ಕಾವ್ಯವನ್ನು ಹೆಪ್ಪುಗಟ್ಟಿದ ಪಾಂಡಿತ್ಯವಾಗಿ ಮಾಡಿ ಇರಿಸಬಲ್ಲ ಆದರೆ ತನ್ನ ಗ್ರಂಥ ಕಬ್ಬಿನಂತಿರಬೇಕೇ ಹೊರತು ಬಿದಿರಂತೆ ಆಗಬಾರದು ಅದಕ್ಕಾಗಿ 'ಹಾಡು ಗಬ್ಬ'ವನ್ನು ರಚಿಸುತ್ತಿದ್ದಾನೆ ತನ್ನ ಗ್ರಂಥವನ್ನು ಓದಿದರೆ 'ಅಯ್ಯಯ್ಯ ! ಚೆನ್ನಾ ದುದು' ಎಂದು ಕನ್ನಡಿಗರು ಹೇಳುವುದಷ್ಟೇ ಅಲ್ಲ , ಅದನ್ನು ಅರ್ಥಮಾಡಿಕೊಂಡು ತೆಲುಗರು 'ರಯ್ಯಾ, ಮಂಚಿದಿ' ಎಂದೂ, ತುಳುವರು 'ಅಯ್ಯಯ್ಯ ! ಎಂಚ

ಪ್ರೋಲ್ಲರ್ಗಂಡೆಂ' ದೂ ಹೇಳುವಷ್ಟು ಸುಲಭವಾಗಿರಬೇಕು, ಸುಲಲಿತವಾಗಿರಬೇಕು ಅದಕ್ಕಾಗಿ 'ರಳ, ಕುಳ, ಶಿಥಿಲ, ಸಮಾಸ, ಮುಂತಾದ ವ್ಯಾಕರಣ ಪ್ರಕ್ರಿಯೆಗಳ 'ಕೋಟಲೆಯು' ತನ್ನ ಗ್ರಂಥದಲ್ಲಿಲ್ಲವೆಂದೂ, ಸಕಲ ಲಕ್ಷಣಗಳನ್ನು ತನ್ನ ಗ್ರಂಥದಲ್ಲಿ ತರಬೇಕೆಂಬ ಬಿರುದಿಗೆ ಬಿದ್ದು ಅದನ್ನು 'ಪುಸ್ತಕದ ಬದನೆಕಾಯಿ' ಮಾಡಲು ತನಗೆ ಇಷ್ಟವಿಲ್ಲವೆಂದೂ ಹೇಳಿಕೊಂಡಿದ್ದಾನೆ

ರತ್ನಾಕರನ ಶೃಂಗಾರಸ ನಿರೂಪಣೆಯೂ, ಸ್ತ್ರೀ ಪಾತ್ರ ಸೃಷ್ಟಿಯ ನೂತನ ರೀತಿಯದು ಶೃಂಗಾರರಸ ನಿರೂಪಣೆಯಲ್ಲಿ ತನ್ನದೇ ಆದ ಒಂದು ಹೊಸ ಜೀವನ ತತ್ತ್ವವನ್ನೇ ಬೋಧಿಸಹೊರಟಿದ್ದಾನೆ, ಕವಿಯು ತತ್ತ್ವಜ್ಞನೂ ಆಗಿದ್ದಾನೆ ಇತರ ಜೈನಕವಿಗಳು ಸಾಂಪ್ರದಾಯಿಕವಾಗಿ ಹೇಳುವಂತೆ ಈ ಪ್ರಪಂಚದ ಕ್ಷಣಭಂಗುರತೆಯನ್ನು ಜ್ಞಾಪಕದಲ್ಲಿಟ್ಟುಕೊಂಡಿರಬೇಕಾದರೂ, ದೂರದ ಫಲಗಳನ್ನು ನೆನೆದು ಕೈಲಿರುವುದನ್ನು ಎಸೆಯುವುದು ಮೂಢತನ, ಇಲ್ಲಿನ ಸುಖವನ್ನು ನಿರ್ದುಷ್ಟರೀತಿಯಲ್ಲಿ ಸಾಧ್ಯವಾದಷ್ಟು ಸವಿದು, ಪರಸು ಸುಖದ ಕಡೆಗೆ ಕೈನೀಡೋಣ—ಎಂಬುದು ಈತನ ತತ್ತ್ವ

ತನು ರೂಪು ವಿಭವ ಯೌವನ |
ಧನ ಸೌಭಾಗ್ಯಾಯುರಾದ್ಧಿಗಳ್ಗೆಣೆ ಕುಡು ಮಿಂ |
ಚಿನ ಪೊಳೆಪು ಮುಗಿಲ ನೆಳಲಿಂ |
ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಜಿದ ಭೋಗಂ ||

ಎಂಬ ನಿರಾಶಾವಾದವನ್ನು ಖಂಡಿಸಿ ಯೋಗಭೋಗಗಳ ಸಾಮರಸ್ಯ ಸಿದ್ಧಾಂತವನ್ನು ಧೈರ್ಯದಿಂದ ಓದುಗರ ಮುಂದಿಡುತ್ತಾನೆ, ರತ್ನಾಕರವರ್ಣಿ ಹಾಗೆಯೇ ಸ್ತ್ರೀಯರು ಮಾನವನನ್ನು ಸಂಸಾರದ ಸಾಗರದಲ್ಲಿ ಮೇಲಕ್ಕೇಳದಂತ ಮುಳುಗಿಸುವ ಹಿರಿಯ ಗುಂಡುಗಳೆಂಬ ಹೇಳಿಕೆಯನ್ನು ತಳ್ಳಿಹಾಕುತ್ತಾನೆ ಈತನ ಮಾತುಗಳು ಬರಿಯ ಗಿಳಿಯ ಮಾತುಗಳಲ್ಲ ಆತನಿಗೆ ಜೀವನವು ಬರಿಯ ತಮಾಷೆಯಲ್ಲ ಪರೀಕ್ಷೆಯಿಂದ, ದೀರ್ಘಾಲೋಚನೆಯಿಂದ ಅದರ ಯೋಗ್ಯತೆಯನ್ನು ಕಂಡುಹಿಡಿದು, ಅದನ್ನು ತನ್ನ ಕಥೆಯ ಮೂಲಕ ಲೋಕದಲ್ಲಿ ಹರಡಿ, ಲೋಕಕಲ್ಯಾಣವನ್ನು ಸಾಧಿಸಬೇಕೆಂಬ ಉದಾತ್ತಧ್ಯೇಯವಿದೆ, ಕವಿಗೆ ಈ ಉದಾತ್ತಧ್ಯೇಯವನ್ನು ಧೈರ್ಯದಿಂದ ಹೊರಕ್ಕೆ ತಂದು ತನ್ನ ಮಹತ್ತನ್ನು ಮತ್ತಷ್ಟು ಹೆಚ್ಚಿಸಿಕೊಂಡಿದ್ದಾನೆ

ಹೀಗೆ ರತ್ನಾಕರನು ನಿರಂಕುಶಮತಿ, ಸ್ವತಂತ್ರ ಮಾರ್ಗಾವಲಂಬಿ ತತ್ತ್ವ ನಿರೂಪಣೆಯಲ್ಲಿ -'ಇದಮಿತ್ಥಂ' ಎಂದು ಇದುವರೆಗೆ ಯಾರೂ ಕೊನೆಯ ಮಾತು ಹೇಳಿಲ್ಲ ಹಾಗೆಯೇ ರತ್ನಾಕರನ ಮಾತಾದರೂ ಕೊನೆಯ ಮಾತಲ್ಲದೆ ಹೋಗಬಹುದು ಆದರೆ ಆತನು ಒಬ್ಬ ನೂತನ ಮಾರ್ಗದರ್ಶಕನೆಂಬುದಂತೂ ನಿರ್ವಿವಾದ ಆತನೊಬ್ಬ ಔಚಿತ್ಯ ನಿಯಮಪಾಲಕ, ಇತರ ನಿಯಮಗಳ ಕಟ್ಟುಪಾಡುಗಳಿಂದ ಸ್ವತಂತ್ರವಾಗಿರತಕ್ಕವನು ಕಾವ್ಯದ ಆರಂಭದಲ್ಲಿಯೇ ಈತನದೊಂದು ಹೊಸ ಮಾರ್ಗವಿದೆ ಈತನ ವರ್ಣನಾ ವಿಧಾನವೂ ನೂತನವಾದುದೇ ವರ್ಣನೆಗಾಗಿ ವರ್ಣನೆಯಲ್ಲ, ಕಥೆಗಾಗಿ ವರ್ಣನೆ. ವರ್ಣನೆಯಿಂದ ಕಥೆ ಮುಂದುವರಿಯುತ್ತದೆ

# ರತ್ನಾಕರನ ಶೈಲಿ

'The style expresses the man' ಎಂದು ಇಂದು ಪಾಶ್ಚಾತ್ಯರು ಹೇಳುವ ಮಾತನ್ನು ನಮ್ಮವರು ಎಂದೋ ಹೇಳಿದರು 'ಶೀಲಸ್ಯ ಇಯಂ ಶೈಲೀ' ಎಂದು ಕವಿಯ ಶೈಲಿಯಿಂದ ಆತನ ಮನೋಧರ್ಮವೇನೆಂಬುದನ್ನು ನಾವು ಸುಲಭವಾಗಿ ಗ್ರಹಿಸಬಹುದು ದೀರ್ಘಾಲೋಚನೆಯ ಫಲವಾಗಿ ಭಾವೋದಯವಾಗುತ್ತದೆ ಆ ಭಾವವು ಹೊರದೋರಿದಾಗ ಅದನ್ನು ಶೈಲಿ ಎಂದು ಕರೆಯುತ್ತೇವೆ ಭಾವವು ಬದಲಾದರೆ ಶೈಲಿಯೂ ಬದಲಾಯಿಸುತ್ತದೆ ಈ ಶೈಲಿಯನ್ನು ಅದರ ಹಿಮ್ಮುಖವಾದ ಭಾವವನ್ನು ಹಿಡಿದು, ರತ್ನಾಕರನ ಮನೋಧರ್ಮವನ್ನು ನಾವು ಬಹುಮಟ್ಟಿಗೆ ನಿರ್ಧರಿಸ ಬಹುದು

ಕವಿಯು ತನ್ನ ಕಾವ್ಯವನ್ನು ಪಂಡಿತರಂಜನೆಗಾಗಿ ಬರೆದಿಲ್ಲ, ಸ್ತ್ರೀಯರು ಮನ ಯಲ್ಲಿ ಹಾಡಿಕೊಳ್ಳಲು ಅನುಕೂಲವಾಗುವಂತೆ ಸಾಂಗತ್ಯದಲ್ಲಿ ಬರೆದಿದ್ದಾನ, ಹೊನ್ನ ಮ್ಮನು ಹದಿಬದೆಯ ಧರ್ಮವನ್ನು ಬರದಿರುವಂತೆ ಸಾಂಗತ್ಯದ ಧಾಟಿ ಸ್ತ್ರೀಯರಿಗೆ ಬಹು ಸಹಜವಾದುದು ಗರತಿಯರಿಗೆ ಸಂಬಂಧಿಸಿದ ಜನಪದ ಸಾಹಿತ್ಯದಲ್ಲಿ ಬಹು ಭಾಗವು ಸಾಂಗತ್ಯದ ಛಂದಸ್ಸಿನಲ್ಲೇ ರಚಿತವಾದುದು ಹೀಗೆ ಉದ್ದಿಶ್ಯ ವ್ಯಾಪ್ತಿಗಳಲ್ಲಿ ಹೆಚ್ಚು ಆಡಂಬರವಿಲ್ಲದ ನಮ್ಮ ಕವಿಯ ಬರವಣಿಗೆ ಲಲಿತಮನೋಹರವಾಗಿದೆ ಕಣ್ಣಿಗೆ ಕಾಣುವ ವಸ್ತುವನ್ನು ವರ್ಣಿಸಲು ಹೆಚ್ಚು ಕಲ್ಪನಾಶಕ್ತಿ ಬೇಕಿಲ್ಲ ಅದರ ಅನುಭವ ವೇದ್ಯವಾಗುವುದಕ್ಕಾದರೂ ಹೆಚ್ಚು ಕಷ್ಟವಾಗುವುದಿಲ್ಲ ಇದರಿಂದ ರತ್ನಾಕರನ ಶೈಲಿ ಸುಲಭವಾಗಿದೆ, ಸ್ವಾಭಾವಿಕವಾಗಿದೆ ಇರುವ ವಸ್ತುವನ್ನು ಅದು ಇರುವಹಾಗೆ ವರ್ಣಿಸುವ ಚಾತುರ್ಯ ನಮ್ಮ ಕವಿಗೆ ಬೇಕಾದಷ್ಟಿದೆ ಜನರ ಅನುಭವದಲ್ಲಿರುವ ಹೋಲಿಕೆಗಳನ್ನು ತರುವುದರ ಮೂಲಕ ಈ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸಿ ದ್ದಾನೆ ಕುಂಭದ್ರೋಣದಂತೆ ಸುರಿಯುತ್ತಿರುವ ಮಳೆಯನ್ನು ವರ್ಣಿಸುವಾಗ "ಕಿರುಧಾರೆಯಲ್ಲ, ತೆಂಗಿನ ಮರಗಳ ತೋರ | ದುರುವ ಧಾರೆಯೊಳೆಡೆಬಿಡದೆ" ಬರುತ್ತಿತ್ತೆಂದು ವರ್ಣಿಸಿದ್ದಾನೆ ಹಾಗೆಯೇ "ಅಗಣಿತ ದೈವಗಳೊಂದು ಹಬ್ಬವ ಮಾಡ। ಲಗಲದೊಳ್ನೆರೆದೊತ್ತಲಾಗಿ। ಗಗನವೆಂದೆಂಬ ಸೇವಗೆಯೊರಳಿಂದ ಸೇವಗೆ ಯಿಳಿಪೊಲು ಮಳೆಯಾಯ್ತು" ಗುಡುಗನ್ನು ವರ್ಣಿಸುವಾಗ—

"ಕೊಡದ ಸಾಲಂದದ ಮುಗಿಲ, ಕಾಮನಬಿಲ್ಲ। ಬಡಿಗೆಯಿಂ ಬಡಿಯೆ ದೈವಗಳು
ಒಡೆದಂತೆ ಗುಡುಗಾದುದೊಳಗಿದ್ದ ನೀರು ತೊ। ಟ್ಟಿಡುವಂತೆ ಕರೆದುದು ವೃಷ್ಟಿ ||"

ತನ್ನ ಅನುಭವವನ್ನು ಮಾತ್ರವೇ ಉಪಯೋಗಿಸಿಕೊಂಡು ಕಣ್ಣಿಗೆ ಕಟ್ಟುವಂತೆ ಚಿತ್ರಿಸಬಲ್ಲ ಕೌಶಲವಿದೆ, ನಮ್ಮ ಕವಿಗೆ

ಕಣ್ಣಿಗೆ ಕಾಣಿಸದ, ಶ್ರವ್ಯೇಂದ್ರಿಯಕ್ಕೆ ಮಾತ್ರ ಗೋಚರವಾಗಬಲ್ಲ ವಿಷಯ ಗಳನ್ನು ವರ್ಣಿಸುವುದರಲ್ಲಿಯೂ ಕವಿಯು ಅಸಾಮಾನ್ಯವಾದ ಜಾಣ್ಮೆಯನ್ನು ತೋರಿ

ದ್ದಾನೆ ಇವನ ಸಂಗೀತವರ್ಣನ ಅನ್ಯಾದೃಶವಾದುದು ಅಲ್ಲಿ ಪಾರಿಭಾಷಿಕಶಬ್ದಗಳ ಗೊಂದಲವಿಲ್ಲ, ಸಂಗೀತ ಶಾಸ್ತ್ರದ ಗ-ಧವಿಲ್ಲದವನಿಗೂ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ ಕವಿಯು ತಾನು ಅನುಭವಿಸಿ ಆನಂದಪಟ್ಟಿದ್ದಾನ ಆ ಆನಂದವನ್ನು ನಿರ್ವಂಚನೆ ಯಿಂದ ಓದುಗರ ಪಾಲುಮಾಡುತ್ತಾನ ಅಲ್ಲಿಯ ಉಪಮಾನಗಳಂತೂ ಜೀವನದಿಂದ ತಾವಾಗಿಯೇ ಎದ್ದು ಬಂದಿರುವಂತೆ ಕಾಣುತ್ತವೆ

ಒಳಗುಣ್ಮಿದಾನಂದ ರಸ ತನ್ನ ತನು ತುಂಬಿ | ತುಳುಕಿ ಹೊರಗೆ ಸೂಸುವಂತೆ ।
ತೆಳುವಸುರಿಂದ ಬಾಯ್ದೆರೆಯೊಳು ಸುಸ್ವರ । ಹೊಳೆದು ಮೋಹಿಸುತಿದ್ದುದಾಗ ॥

ಸುಳಿನಾಭಿಯೊಳು ಹುಟ್ಟಿ ಮೆಲ್ಲೆದೆಯೊಳು ಬೆಳೆ | ದೊಳಗೊರಲೊಳು ಪ್ರಾಯವಡೆದು ।
ಎಳೆಯಳ ಬ್ರಂಹರಂಧ್ರವನೇರಿ ಬಾಯ್ದೆರೆ | ಗಿಳಿದು ಮೋಹಿಸಿದುದಾಳಾಪ ॥

ಬೆಳಗಿನೊಳೋಲಾಡುವಂತೆ ಸಂಗೀತದ | ಸುಳಿಯೊಳು ತೇಲಾಡುವಂತೆ ।
ತೆಳುಗಾಳಿಯೇರಿ ವೈಹಾಳಿಯ ಮಾಡುವಂ | ತೆಳೆವೆಂಗಳರಸಿ ಹಾಡಿದಳು ॥

ಕೆಂಬಾಯಿ ನಸುದೆರೆದಾಯೆಂದು ರಾಗವ | ನಂಬುಜಾನನೆ ತುಡುಕಿದಳು ||

ವೀಣೆಯ ನುಡಿಸುತ ಪಾಡಿದವರಳೀಗ | ವೀಣೆಗಳೆರಡನೊಂದಾಗಿ ।
ಹೂಣಿ ನುಡಿಸುತಿದ್ದಳೆಂಬೊಲಿಹುದು ಮಣ್ಚು | ರಾಣಿಯ ದನಿಯ ಚೆಲ್ವಿಕೆಯ ॥

ಸಂಗೀತದ ದೃಶ್ಯ ಕಣ್ಣಿಗೆ ಕಟ್ಟಿದಂತಿದೆ ಇಷ್ಟನ್ನೇ ತೆಗೆದುಕೊಂಡು ತುಲನೆ ಮಾಡಿದಾಗ ಜಗತ್ತಿನ ಯಾವ ಸಂಗೀತದ ಭಾವಗೀತಕ್ಕೆ ತಾನೇ ಇದು ಕಡಮೆ ಯಾದೀತು ? ಆದರೂ ನಿರಾಭರಣ ಸುಂದರಿ ! ಕಲ್ಪನಾ ಚಾತುರ್ಯಕ್ಕಿಂತಲೂ ಕವಿಯ ರಸಾನುಭವವು ಹೆಚ್ಚು ಬೆಲೆ ಬಾಳಬಲ್ಲದು

ಕವಿಯು ಮಾಡಿರುವ ನರ್ತನ ವರ್ಣನೆಯೂ ಮನೋಹರವಾಗಿದೆ—

ನೋಟದೊಳಗೆ ಕೊಂದರೊಮ್ಮೆ ನೋಟಕರನು | ನಾಟಿಸಿ ನಸುನಗೆಯಿಂದ |
ಲೂಟಿ ಮಾಡಿಧರು ಮೈಯೊಲೆದಾಟದಿಂದೆದೆ | ಗೋಟೆಯ ಕೊಂಡರೇನೆಂಬೆ ॥

ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ । ಜಳಧಿಯ ಸುಳಿಯೊ ಎಂಬಂತೆ |
ಬಲಕೆಡಕೊಲೆದು ಹರಿವಳೆಳವಿಸಿಲಲ್ಲಿ । ಎಳನಾಗ ಹರಿವಂತೆ ಮುರಿದು ॥

ಅತ್ಯಂತ ಗಹನವಾದ ವೇದಾಂತ ವಿಚಾರಗಳೂ ರತ್ನಾಕರನ ಕೈಯಲ್ಲಿ ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾಗಿಬಿಡುತ್ತವೆ.

ದೊರೆಯೆದ್ದು ಹೋಗೆನೆ ಹೋಗಿ, ಬಾರೆಂದರೆ | ಬರುತಿಹ ಸೇವಕರಂತೆ ।
ಕರಣ ನಾಲ್ಕಿಂದ್ರಿಯವೈದವನುಸುರಿದಂ |ತಿರುತಿಹವೇನ ಬಣ್ಣಿಪೆನು ॥

ಬೇಕಾದರಾಡಿಸಿ ಗಾಳಿಪಟವನರ್ತಿ | ಸಾಕಾಗೆ ಸುರುಳುವನಂತೆ |
ನೂಕಿಚಿತ್ತವ ಹೊರಗಾಡಿಸುವನು ತನ್ನೊ । ಳೇಕವಾಗಿರಿಸುವನೊಮ್ಮೆ ॥

ಹೆಣ್ಣು ಸೊಂಕದ ಮುನ್ನ ಪುಟವೇರುತಿಹುದದು | ಹೆಣ್ಣ ತೋಳ್ವಲೆಗೆ ಬಿದ್ದಾಗ |
ಪೊಣ್ಣಪೊಣ್ಣನೆ ಹಾರುವೆರಳೆ ಮೋಸದಿ ಕಾಲು | ಕಣ್ಣಿಗೆ ಸಿಲುಕಿದಂತಿಹುದು |
ಹೆಣ್ಣ ಹಿಡಿದಮೇಲೆ ಮಣ್ಣ ಹಿಡಿಯಬೇಕು । ಹೊನ್ನ ಹಿಡಿಯಬೇಕು ಸಹಜ |
ಹೆಣ್ಣು ಹೊನ್ನು ಮಣ್ಣು ಪಿಡಿದಾತ್ಮರೆಲ್ಲರು । ಮಣ್ಣು ಹಿಡಿದ ಲೋಹದಂತೆ ||

ಹೀಗೆ ಕವಿಯು ಮನಸ್ಸಿಗೆ ಮಾತ್ರ ವೇದ್ಯವಾಗಬಲ್ಲ ವಿಷಯಗಳನ್ನು ಸಹ ಸುಂದರವಾಗಿ, ಸಹಜವಾಗಿ ಚಿತ್ರಿಸಬಲ್ಲ ಕಲೆಗಾರನಾಗಿದ್ದಾನೆ

ರತ್ನಾಕರನಲ್ಲಿ, ಅವನ ಶೈಲಿಯಲ್ಲಿ ಕುಸುರಿಗೆಲಸ ಹೆಚ್ಚು ವರ್ಣನೀಯ ವಸ್ತುವಿನ ಪ್ರತಿಯೊಂದು ಪದರನ್ನೂ ಜಕಣಾಚಾರಿಯಂತೆ ಬಿಚ್ಚಿ ತೋರಿಸುವ ಸ್ವಭಾವ ಇದರಿಂದ ಒಂದೇ ಭಾವವು ಎರಡೆರಡು ಸಲ ಮೂರು ಮೂರು ಸಲ ಬರಬೇಕಾಗುತ್ತದೆ—ಹೇಳಿದ್ದನ್ನೇ ಬೇರೊಂದು ವಿಧದಲ್ಲಿ ಹೇಳಬೇಕಾಗುತ್ತದೆ ಓದುಗರ ಊಹೆಗೆ ಹೆಚ್ಚು ಅವಕಾಶವನ್ನೇ ಕೊಡುವುದಿಲ್ಲ ಕವಿ ತಾನು ಹಿಡಿದ ಕೆಲಸದಲ್ಲಿ ಮತ್ತೊಬ್ಬರೇಕೆ ಕೈಹಾಕಬೇಕೆಂದು ಕೇಳುವ ಮನೋಧರ್ಮ ಅವನ ಶೈಲಿಯಲ್ಲಿ ಉದ್ದಕ್ಕೂ ಇದು ಕಂಡುಬರುತ್ತದೆ

ರತ್ನಾಕರನು ಆಯ್ದುಕೊಂಡಿರುವ ಕಥಾವಸ್ತುವಿನಲ್ಲಿ ಹಲವು ಬಗೆಯ ಭಾವಾವೇಗಗಳು ಬರಲು ಆಸ್ಪದವಿಲ್ಲ ಉಗ್ರಭಾವಗಳಿಗೆ ಇಲ್ಲಿ ಎಡೆಯಿಲ್ಲ ಇದರಿಂದ ಈತನ ಶೈಲಿಯಲ್ಲಿ ಒಂದು ಸತ್ವವು ಕಡಮೆಯಾಗಿರುವಂತೆ ತೋರಿಬರುತ್ತದೆ ನಾಗಚಂದ್ರ ಕವಿಯಂತೆ ಇವನಲ್ಲಿಯೂ ಭಾವಕ್ಕನುಗುಣವಾದ ಪದಸಮೂಹವು ಕಂಡುಬರುವುದಿಲ್ಲ ಕವಿಯ ಮನೋಭಾವ ಬಹು ಕೋಮಲವಾದುದು ಮನಸ್ಸು ಕೆರಳಿಸಬಲ್ಲ—ಕೆಚ್ಚಿನ ಕಿಚ್ಚನ್ನು ಹೆಚ್ಚಿಸಬಲ್ಲ—ಉಗ್ರಭಾವಗಳು ಆತನಲ್ಲಿ ಕಡಮೆ ಅವನ ದೃಷ್ಟಿಯೆಲ್ಲವೂ ಸುಂದರವಾದ, ಕೋಮಲವಾದ, ಕಳಕಳಿಸುವ ಲಲಿತಕಲೆಯ ಕಡೆಗೇ ಆತನು ಕೊಡುವ ಉಪಮೆಗಳಲ್ಲಿ ಮನಸ್ಸನ್ನು ಉದ್ರೇಕಗೊಳಿಸುವಷ್ಟು ಕಾವಿಲ್ಲ ಹೇಳುವುದನ್ನು ಮನದಟ್ಟಾಗುವಂತೆ ಹೇಳಲು ಮಾತ್ರ ಸಹಕಾರಿಗಳಾಗುತ್ತವೆ ವಾಠಕರ ಮನಸ್ಸಿನಲ್ಲಿ ಅಚ್ಚೊತ್ತುವುದಕ್ಕಾಗಿ ಒಂದೇ ಬಾರಿ ಮೂರು ನಾಲ್ಕು ಉದಾಹರಣೆಗಳನ್ನು ಕೊಡುವುದಕ್ಕೂ ಕವಿ ಹಿಂಜರಿಯುವುದಿಲ್ಲ ಎಂದ ಮಾತ್ರಕ್ಕೆ ಅವನ ಉಪಮೆಗಳು ಅಯೋಗ್ಯವೆಂದು ಹೇಳುವಂತಿಲ್ಲ ಜನಸಾಮಾನ್ಯರ ಅನುಭವದಲ್ಲಿನ ಉಪಮೆಗಳನ್ನೇ ಆರಿಸಿ ತೆಗೆದು ಅವರ ಮುಂದಿಡಬೇಕೆಂಬುದು ಅವನ ಉದ್ದೇಶ ಸಮಯ ಬಂದಾಗ ಉತ್ತಮವಾದ ಉಪಮೆಗಳನ್ನೂ ಕೊಡಬಲ್ಲ ನಾಟಕರಂಗದಲ್ಲಿ ತೆರೆ ಓರೆಯಾದುದನ್ನು " ಸಂಜೆಗೆಂಪೊಲೆವಂತೆ ತೆರೆ ತೊಲಗಿತು ಕಣ್ಗೆ ಕಂಜಾಕ್ಷಿಯರು ಕಾಣಿಸಿದರು " ಎಂಬ ಸುಂದರ ಉಪಮಾನದಿಂದ ತೋರುತ್ತಾನೆ ಎಷ್ಟು ಸುಂದರವಾದ ಭಾವ ! ಪ್ರಕೃತಿಯಲ್ಲಿ ನಡೆವ ವ್ಯಾಪಾರವನ್ನು ಕವಿ ಕಣ್ಣಿಟ್ಟು ನೋಡುವ ಶಕ್ತಿಯುಳ್ಳವನಾಗಿದ್ದಾನೆ ನೈಸರ್ಗಿಕವಾದ ಇಂತಹ ಉಪಮೆಗಳು ಅಲ್ಲೊಂದು ಇಲ್ಲೊಂದು

ಕಾವ್ಯದಲ್ಲಿ ಕಾಣುಬರುತ್ತವೆಯಾದರೂ ಅತ್ಯುತ್ತಮ ಕಾವ್ಯ ಲಕ್ಷಣವುಳ್ಳ ಉಪಮೆಗಳೇ ಅಲ್ಪಸಂಖ್ಯೆಯೆಂದೇ ಹೇಳಬೇಕು

ಈತನ ಶೈಲಿಯಲ್ಲಿ ಮೇಲೆಯೇ ಹೇಳಿರುವಂತೆ ಆಡಂಬರವಿಲ್ಲ ಯಾವುದನ್ನು ಹೇಳಬೇಕಾದರೂ ಉದ್ದಿಷ್ಟ ಪರಿಣಾಮವನ್ನು ಮನಸ್ಸಿನಲ್ಲಿಟ್ಟುಕೊಂಡೇ ಹೇಳುವುದು. ಒಂದು ದೃಷ್ಟಿಯಿಂದ ಮಿತಿಯೆಂಬುದು ಇವನ ಮನೆದೇವತೆ ಆಯಾ ಸಂದರ್ಭದಲ್ಲಿ ಎಷ್ಟು ಪ್ರಕೃತವೋ ಅಷ್ಟುಮಾತ್ರ ಹೇಳುತ್ತಾನೆ ಸಂಗೀತದ ವಿಚಾರವನ್ನು ಎತ್ತಿದರೆ ಅದರಿಂದ ಬರುವ ಸಂತೋಷದ ವಿಚಾರವೆಷ್ಟೋ ಅಷ್ಟೆ ಹೊರತು ಒಂದು ಹೆಜ್ಜೆ ಆಚೆ ಈಚೆ ಇಡುವುದಿಲ್ಲ ಆದೊಂದನ್ನೇ ಬೇರ್ಪಡಿಸಿದಾಗ ಅದು ಸ್ವಸಂಪೂರ್ಣವಾಗಿರುವಂತೆ ತೋರುತ್ತದೆ "ಉಚಿತಕ್ಕೆ ತಕ್ಕಷ್ಟು ಪೇಳ್ವೆನ್" ಎಂಬ ಈತನ ಸತ್ಯಸಂಕಲ್ಪ ಈಡೇರಿದೆ

# ಸಾಹಿತ್ಯದಲ್ಲಿ ರತ್ನಾಕರನ ಸ್ಥಾನ

ಕನ್ನಡ ಸಾಹಿತ್ಯ ಸಾಮ್ರಾಜ್ಯದಲ್ಲಿ ರತ್ನಾಕರನ ಸ್ಥಾನವಾವುದು ? ಈ ಪ್ರಶ್ನೆಗೆ ಒಂದೇ ಮಾತಿನಲ್ಲಿ ಉತ್ತರ ಕೊಡುವುದಾದರೆ ಹೀಗೆ ಹೇಳಬಹುದು ಭಾಮಿನಿ ಷಟ್ಪದಿಗೆ ಕುಮಾರವ್ಯಾಸನು ಹೇಗೋ, ರಗಳೆಗಳಿಗೆ ಹರಿಹರನು ಹೇಗೋ ಸಾಂಗತ್ಯಕ್ಕೆ ರತ್ನಾಕರ ಹಾಗೆ ಆಯಾ ಛಂದಸ್ಸಿಗೆ ಅವರವರು ಸಾಮ್ರಾಟರು ಕನ್ನಡ ಸಾಹಿತ್ಯ ಸಾಮ್ರಾಜ್ಯದ ಆಧಾರಸ್ತಂಭಗಳಂತಿರುವ ಉತ್ತಮ ಕವಿಗಳ ಸಾಲಿನಲ್ಲಿ ಅವರ ಭುಜಕ್ಕೆ ಭುಜವಾನಿಸಿ ಕುಳಿತುಕೊಳ್ಳುವ ಯೋಗ್ಯತೆಯುಳ್ಳವನು ನಮ್ಮ ಕವಿ ಕಾವ್ಯ-ಧರ್ಮಗಳ ಸಮನ್ವಯರೂಪವಾದ ತನ್ನ ಕಾವ್ಯರತ್ನದಿಂದ ಅಜರಾಮರವಾದ ಕೀರ್ತಿಯನ್ನು ಗಳಿಸಿರುವವನು

ಜಗದೊಳ್ ಸನ್ನಿದವಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತೆ ನೆ ।
ಟ್ಟಗೆ ಮಾತಾಡುವ ಬಲ್ಮೆ, ಚಿತ್ತದೊಳೊರಲ್ದಿರ್ದರ್ಥಮಂ ಕೂಡೆ ನಾ ।
ಲಗೆಯಿಂ ರಂಜಿಸುವೊಂದು ಬಿನ್ನಣಮದಿನ್ನಾವಂಗೆ ಪುಣ್ಯೈಕ ಭಾ ।
ಗಿಗೆ ಸೃಷ್ಟಿಂ ದೊರೆಕೊಳ್ಗುಮಾತನೆ ವಲಂ ಶೃಂಗಾರ ರತ್ನಾಕರಂ ॥

—ಕವಿಕಾಮ

# ಗ್ರಂಥಪಾಠ

'ಭರತೇಶ ವೈಭವ' ದ ಗ್ರಂಥಪಾಠವನ್ನು ಮೂರು ಓಲೆ ಪ್ರತಿಗಳು, ಎರಡು ಕಾಗದದ ಪ್ರತಿಗಳು ಮತ್ತು ಒಂದು ಅಚ್ಚಿನ ಪ್ರತಿ—ಇವುಗಳ ಸಹಾಯದಿಂದ ಸಿದ್ಧಗೊಳಿಸಿದೆ ದೊರೆತ ಮೂರು ಓಲೆಯ ಪ್ರತಿಗಳೂ ಅಸಮಗ್ರವಾದವು ಅವುಗಳಲ್ಲಿ ಎರಡು ಓರಿಯಂಟಲ್ ಲೈಬ್ರರಿಗೆ ಸೇರಿದುವು ಮತ್ತೊಂದು ಮಹಾರಾಜಾ ಕಾಲೇಜಿನ ಕನ್ನಡ ಸಹಾಯಕಾಧ್ಯಾಪಕರಾದ ಶ್ರೀಮಾನ್ ವಿ ಸೀತಾರಾಮಯ್ಯ ಎಂ ಎ ಅವರ ಕೃಪೆಯಿಂದ ದೊರೆತುದು ಇವುಗಳಲ್ಲಿ ಕ್ರಮವಾಗಿ ಮೊದಲ ೭೧ ಸಂಧಿಗಳು (ಓಲೇ ಪ್ರತಿ ನಂ ೨೭೪), ಸಂಧಿ ೨೨ ರಿಂದ ೮೦ ರವರೆಗೆ (ಓಲೇ ಪ್ರತಿ ನಂ ೨೭೫), ಮೊದಲ ಐವತ್ತು ಸಂಧಿಗಳು ಇವೆ ಇವುಗಳನ್ನು ಚ, ಛ, ಜ—ಎಂದು ನಿರ್ದೇಶಿಸಿದೆ ಶ್ರೀಮಾನ್ ಉಗ್ರಾಣದ ಮಂಗೇಶರಾಯರು ಸಂಪಾದಿಸಿ ಪ್ರಕಟಿಸಿರುವ ಅಚ್ಚಿನ ಪ್ರತಿಯನ್ನು 'ಗ' ಎಂದು ನಿರ್ದೇಶಿಸಿದೆ ಓರಿಯಂಟಲ್ ಲೈಬ್ರರಿಯ ಕಾಗದದ ಪ್ರತಿಗಳೆರಡನ್ನು (A ೨೪೨ ಮೊದಲ ೧೫ ಸಂಧಿಗಳು, A ೨೪೩-೧೬ ರಿಂದ ೩೧ ನೇ ಸಂಧಿ, A ೨೪೪-೩೨ ರಿಂದ ೪೬ ನೆಯ ಸಂಧಿ, A ೨೪೫ ೪೭ ರಿಂದ ೬೪ ನೆಯ ಸಂಧಿ, A ೨೪೬ ೬೫ ರಿಂದ ೮೦ ನೆಯ ಸಂಧಿ,—ಮತ್ತು, B ೧೨೬–ಸಂಧಿ ೧ ರಿಂದ ೧೭, B ೧೫೪–ಸಂಧಿ ೨೭–೫೪, B ೧೫೫ ಸಂಧಿ ೫೪ ೮೦) ಕ, ಖ, ಎಂದು ನಿರ್ದೇಶಿಸಿದೆ ಅಚ್ಚಿನ ಪ್ರತಿಯು ಬಹುಮಟ್ಟಿಗೆ ಶುದ್ಧವಾಗಿಯೇ ಇರುವುದರಿಂದ ಪಾಠಾಂತರಗಳು ಹುಲುಸಾಗಿರಬೇಕಾದುದರ ಆವಶ್ಯಕತೆ ಅಷ್ಟಾಗಿ ಕಂಡುಬರಲಿಲ್ಲ ಅರ್ಥವ್ಯತ್ಯಾಸವೋ ಸಂದೇಹವೋ ಬಂದಕಡೆ ಮಾತ್ರ ಪಾಠಾಂತರಗಳನ್ನು ಕೊಟ್ಟಿದೆ

ಓರಿಯಂಟಲ್ ಲೈಬ್ರರಿಯ ಗ್ರಂಥಪ್ರತಿಗಳನ್ನು ದೊರಕಿಸಿಕೊಟ್ಟ ನನ್ನ ಪೂಜ್ಯ ಗುರುಗಳಾದ ಶ್ರೀಮಾನ್ ಎ ಆರ್ ಕೃಷ್ಣಶಾಸ್ತ್ರಿಗಳಿಗೂ, ಲೈಬ್ರರಿಯ ಅಧಿಕಾರ ವರ್ಗದವರಿಗೂ, 'ಜ' ಓಲೇ ಪ್ರತಿಯನ್ನು ದೊರಕಿಸಿಕೊಟ್ಟ ಶ್ರೀಮಾನ್ ವಿ. ಸೀತಾರಾಮಯ್ಯ, ಎಂ ಎ., ಅವರಿಗೂ ನನ್ನ ಅನಂತ ವಂದನೆಗಳು

# ಆಸ್ಥಾನ ಸಂಧಿ

ಪರಮ ಪರಂಜ್ಯೋತಿ ಕೋಟಿ ಚಂದ್ರಾದಿತ್ಯ
ಕಿರಣ ಸುಜ್ಞಾನ ಪ್ರಕಾಶ
ಸುರರ ಮುಕುಟಮಣಿ ರಂಜಿತ ಚರಣಾಬ್ಜ
ಶರಣಾಗು ಪ್ರಥಮ ಜಿನೇಶ ೧

ಬಿನ್ನಹ ಗುರುವೆ ಧ್ಯಾನಕೆ ಬೇಸರಾದಾಗ
ನಿನ್ನನಾದಿಯ ಮಾಡಿಕೊಂಡು
ಕನ್ನಡದೊಳಗೊಂದು ಕಥೆಯ ಪೇಳುವೆನದು
ನಿನ್ನಾಜ್ಞೆ ಕಂಡ ನನ್ನೊಡೆಯಾ ೨

ಕಬ್ಬಿಗರೋದುಗಬ್ಬವ ಹಾಡುಗಬ್ಬವ
ಕಬ್ಬದೊಳೊರೆವರಿವೆರಡು
ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ
ಕಬ್ಬೆ ಹೇಳಲೆ ಸರಸ್ವತಿಯೆ ೩

ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು
ರಯ್ಯಾ ಮಂಚಿದಿಯೆನೆ ತೆಲುಗಾ
ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು
ಮೈಯ್ಯುಬ್ಬಿ ಕೇಳಬೇಕಣ್ಣಾ ೪

ರಳ ಕುಳ ಶಿಥಿಲ ಸ್ವನಾಸ ಮುಂತಾದವ
ರೊಳಗಿಲ್ಲ ಕೆಲವುಳ್ಳರುಂಟು
ಕೆಲವಿಲ್ಲಾದರುವಿಲ್ಲವೇಕೆಂದವರ ಕೋ
ಟಲೆಯೇಕೆ ಹಾಡುಗಬ್ಬದೊಳು ೫

ಸಕಲ ಲಕ್ಷಣವು ವಸ್ತುಕಕೆ, ವರ್ಣಕಕಿಷ್ಟು
ವಿಕಳವಾದರು ದೋಷವಿಲ್ಲ
ಸಲಕ ಲಕ್ಷಣಕಾಗಿ ಬಿರುಸು ಮಾಡಿದರೆ ಪು
ಸ್ತಕದ ಬದನೆಕಾಯಹುದು ೬

ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು
ಕಂದಿ ಕುಂದಿಹುದೋ ನಿರ್ಮಲವೊ
ಸಂಧಿಸಿ ಶಬ್ದದೋಷಗಳೊಮ್ಮೆ ಸುಕಥೆಗೆ
ಬಂದರೆ ಧರ್ಮ ಮಾಸುವುದೇ ೭

ಗಣನೆಯಿಲ್ಲದ ರಾಜ್ಯಸುಖದೊಳೋಲಾಡಿ ಧಾ
ರಿಣಿ ಮೆಚ್ಚೆ ಜಿನಯೋಗಿಯಾಗಿ
ಕ್ಷಣಕೆ ಕರ್ಮವ ಸುಟ್ಟು ಜಿನನಾದ ಭೂಭುಜಾ
ಗ್ರಣಿಯ ವೈಭವವ ಲಾಲಿಸಿರೊ ೮

ಆಗಮವಧ್ಯಾತ್ಮವಳವಟ್ಟು ಶೃಂಗಾರ
ತ್ಯಾಗ ಭೋಗದ ಮೋಡಿ ಮೆರೆಯೆ
ಭೋಗಿ ಯೋಗಿಗಳೆದೆ ಜುಮ್ಮು ಜುಮ್ಮೆನೆ ನೇಮ
ವಾಗಿ ಸೊಲ್ಲಿಸುವೆನಾಲಿಸಿರೊ ೯

ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ
ರಚಿಸುವರಾನಂತು ಪೇಳೆ
ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ
ನಿಚಿತ ಪ್ರಯೋಜನವೆನಗೆ ೧೦

ಭರತಭೂತಳಕೆ ಸಿಂಗಾರವಾದಯೋಧ್ಯಾ
ಪುರದೊಳು ಮೂಲೋಕ ಪೊಗಳೆ
ಭರತಚಕ್ರೇಶ್ವರ ಸುಖಬಾಳುತಿರ್ದನಾ
ಸಿರಿಯನಿನ್ನೇನ ಬಣ್ಣಿಪೆನು ೧೧

ಪುರು ಪರಮೇಶನ ಹಿರಿಯ ಕುಮಾರನು
ನರಲೋಕಕೊಬ್ಬನೆ ರಾಯ
ಮುರಿದು ಕಣ್ಣಿಟ್ಟರೆ ಕ್ಷಣಕೆ ಮುಕ್ತಿಯ ಕಾಂಬ
ಭರತ ಚಕ್ರಿಯ ಹೇಳಲಳವೇ ೧೨

ಹದಿನಾರನೆಯ ಮನು ಪ್ರಥಮಚಕ್ರೇಶ್ವರ
ಸುದತಿಜನಕೆ ರಾಜಮದನ
ಚದುರರ ತಲೆವಣಿ ತದ್ಭವಮೋಕ್ಷ ಸಂ
ಪದನ ಬಣ್ಣಿಸಲೆನ್ನ ಹವಣೆ ೧೩

ಧರೆಯೊಳಿಲ್ಲವ ಸುಟ್ಟರುಂಟಲ್ಲಿ ಭಸ್ಮ ಕ
ರ್ಪೂರವ ಸುಟ್ಟರೆ ಭಸ್ಮವುಂಟೆ
ನರತತಿಗಾಹಾರ ನಿಹಾರವುಂಟೆಮ್ಮ
ಭರತೇಶಗಿಲ್ಲ ನಿಹಾರಾ ೧೪

ಕೋಮಲಾಂಗನು ಹೇಮವರ್ಣನು ಜಗವೆ
ಕಾಮಿಸತಕ್ಕ ಚೆನ್ನಿಗನು
ಆಮೋದವುಕ್ಕುವ ಜವ್ವನಿಗನು ಸರ್ವ
ಭೂಮೀಶರೊಡೆಯನಾ ಚಕ್ರಿ ೧೫

ಆ ವಿಭುವೊಂದಿನದುದಯದೊಳೆದ್ದು
ದೇವತಾರ್ಚನೆಯನು ಮಾಡಿ
ಚಾವಡಿಗೈದಿ ತಾನೋಲಗವಾದೊಂದು
ಶ್ರೀ ವಿಲಾಸವನೇನನೆಂಬೆ ೧೬

ನವರತ್ನ ಹೇಮನಿರ್ಮಿತವೆನಿಪಾಸ್ಥಾನ
ಭವನದೊಳಾ ರಾಜರತ್ನ
ಛವಿವಡೆದೆಸೆದನು ರತ್ನಪುಷ್ಪಕದೊಳು
ದಿವಿಜೇಂದ್ರನೊಪ್ಪುವಂದದೊಳು ೧೭

ತನುಕಾಂತಿ ತುಂಬಿದ ಸಭೆಯೆಂಬ ಕೊಳದಲ್ಲಿ
ಕನಕಸಿಂಹಾಸನವೆಂಬ
ಕನಕಾಂಬುಜದ ಮೇಲಾ ರಾಜ [ಹಂಸ] ನಿ
ದ್ದನು ರಾಜಹಂಸನೆಂಬಂತೆ ೧೮

ಉದಯಗಿರಿಯ ಮೇಲೆ ಮೆರೆವ ಭಾನುವಿಗೆ ಮ
ತ್ತಿದಿರಾದ ಪ್ರತಿಸೂರ್ಯನಂತೆ
ಪದುಳದುತ್ತುಂಗ ಸಿಂಹಾಸನವೇರಿ ದೇ
ಹದ ಕಾಂತಿ ಮೆರೆಯೆ ಮೆರೆದನು ೧೯

ಆವ ಬಿಂಕವೊ ಎಡಗಾಲ ಗದ್ದುಗೆಯ ಮೇ
ಲೋವಿ ಮಡಿದು ಮತ್ತೆ ಕೆಳಗೆ
ಹಾವುಗೆಯೊಳು ಪೆಂಡೆಯದ ಬಲಗಾಲೂರಿ
ರೀವಿಯೊಳೆಸೆದನಾ ರಾಯ ೨೦

ಬಲಗೈಯೊಳಾಂತ ಹೊನ್ನೊರೆಯ ಕಠಾರಿಯ
ಕೆಲಕೂರಿ ಮತ್ತೆಡಗೈಯಾ
ಮಲಗಿನ ಮೇಲೂರಿ ಬೀರಸಿರಿಯನಾಳ್ದ
ಕಲಿಗಳ ದೇವನೊಪ್ಪಿದನು ೨೧

ನೆರುಸುಯ್ಯಗಾಳಿಗೆ ತೇಲ್ವ ದುಕೂಲದ
ಸೆರಗು ಸೇರುವೆ ದೊರೆ ಹೊದೆದು
ತೆರಪಿನೆದೆಯ ಹೊನ್ನ ಜನ್ನಿವಾರದ ರೇಖೆ
ಮೆರೆಯೆ ರಾಜೇಂದ್ರ ಮೆರೆದನು ೨೨

ಮಿರುಪ ಕಿರೀಟವುಂಟದನಂದು ಧರಿಸಿ ತಿ
ಲ್ಲುರೆ ಮನದೊಂದು ಲೀಲೆಯೊಳು
ತುರುಬು ಚುಂಗೆಸೆಯೆ ಚಿಮ್ಮುರಿಸುತ್ತ ಸೊಬಗನೆ
ಕರೆವುತಿದ್ದನು ನೋಡುವರಿಗೆ ೨೩

ಜೋಕೆವಿಡಿದು ನೀಡುವೆಳೆಯ ಫಳಿಗೆಯ ಪ
ರಾಕಿನೊಳಗೆ ಕೈಕೊಳುತ
ಏಕೆ ನುಡಿಯನೊ ಇನ್ನೊಮ್ಮೆಯೆಂಬಂತೊಂದು
ತೂಕದೊಳೆಸೆದನಾ ರಾಯ ೨೪

ಉಬ್ಬಿ ಬೆಳೆದು ಬಾಗಿತಿಲ್ಲ ರೇಖೆಗೆ ಬಂದು
ಹುಬ್ಬಿನಂತೆಸೆವೆಳೆ ಮೀಸೆ
ಹುಬ್ಬು ಮೀಸೆಯ ನೋಡಿ ನಲಿವ ಬವರಿಕಣ್ಣು
ಹಬ್ಬವ ಮಾಳ್ಪನೆಲ್ಲರಿಗೆ ೨೫

ಕುಂಡಲಗಳ ಕಾಂತಿ, ಕಂಗಳ ಪ್ರಭೆ, ಗಂಡ
ಮಂಡಲದೊಳಗಾಡಲವನಾ
ಮಂಡೆಯೊಲೆದರೆ ಹೆಂಗಳಿಗೆ ಮನ್ಮಥನದೊ
ಖಂಡೆಯವಲುಗಿದಂತಿಹುದು ೨೬

ಪದಕ ಕಡಗ ಕಂಠಮಾಲೆಯ ನವರತ್ನ
ಮುದಿತಾಂಶು ದೇಹಕಾಂತಿಯೊಳು
ಪುದಿದು ಪೊಳೆಯೆ ಕಣ್ಗೆ ಶೋಭಿಪನಿಂದ್ರಚಾ
ಪದೊಳು ಮಾಡಿದ ನೃಪನಂತೆ ೨೭

ಶಾಲಿಯ ತೆರೆಯ ತಟ್ಟುಚ್ಚಿ ದೀಪದ ಕಾಂತಿ
ಥಾಳಿಸುವಂತೆ ಲೋಕದೊಳು
ಆ ಲಲಿತಾಂಗನ ತನುಕಾಂತಿ ಪೊದೆದ ದು
ಕೂಲದ ಹೊರಗೆಸ್ಥಿರಂಜಿಸಿತು ೨೮

ಬಳಸಿನ ನುಡಿಗಳೇನೋಲಗದೆಳೆವೆಂಗ
ಳೊಲಿದುಟ್ಟ ಬಿಳಿಯ ಶೀರೆಗಳೊ
ಚೆಲುವನ ತನುಕಾಂತಿ ಸೋಂಕಿದ ರಂಗು ಮಾ
ದಲವಣ್ಣವೆನಲೆಸೆದಿಹುದು ೨೯

ಹೆಂಗಳ ರೂಪು ಗಂಡರಿಗೆ ಗಂಡರ ರೂಪು
ಹೆಂಗಳ ಸೋಲಿಪುದೆಂಬ
ಪಾಂಗಲ್ಲವವನ ಚೆಲ್ವಿಕೆ ಗಂಡು ಪೆಣ್ಗಳ
ಕಂಗಳ ಸೆರೆವಿಡಿದಿಹುದು ೩೦

ತರತರವಿಡಿದು ಥಾಳಿಸುತಿಹ ದೀರ್ಘ ಚಾ
ಮರಗಳ ಸಾಲೊಳೆಸೆದನು
ಹರಿವ ಬೆಳ್ಮುಗಿಲೊಳು ತೋರಿ ಮರಸುವ ಚಂ
ದಿರನೋ ಭಾಸ್ಕರನೋಯೆಂಬಂತೆ ೩೧

ಬಲದೊಳು ಭೂಭುಜರೆಡದಲ್ಲಿ ಗಣಿಕೆಯ
ರೊಲುಮೆಯ ಕವಿಗಳು ಮುಂದೆ
ನಿಲೆ ಹಿಂದೆ ಹಿತವರು ಬಳಸಿದೆಕ್ಕಡಿಗರ
ಬಲು ಬಜಾವಣೆಯೊಳೊಪ್ಪಿದನು ೩೨

ವಾರನಾರಿಯರು ತಾವಾರನಾರಿಯರೊ ಶೃಂ
ಗಾರಕೆ ಸೋತು ಭೂವರನಾ
ಹಾರುತ್ತಿದ್ದರು ಸುರಪಶುವ ಗೋದಾನಕ್ಕೆ
ಹಾರುವ ಹಾರುವನಂತೆ ೩೩

ಅಂಬುಜವೆಲ್ಲವು ರವಿಯ ನೋಳ್ಪಂತ ನೀ
ಲಾಂಬುಜ ನೋಳ್ಪಂತೆ ಶಶಿಯಾ
ತುಂಬಿದ ಸಭೆಯೆಲ್ಲ ನೃಪನ ನೋಡುವ ಮಿಕ್ಕ
ಹಂಬಲ ಮರೆದುದಲ್ಲಲ್ಲಿ ೩೪

ರೋಮಾಂಚನಸಿದ್ಧ ಜುಂಜುಂಮಾಲಪ, ಗಾ
ನಾಮೋದ ಚುಂಚುವಾಲಾದ್ಯ
ಶ್ರೀಮಂತ್ರಗಾಂಧಾರ ರಾಗವರ್ತಕರೆಂಬ
ರಾ ಮಹೀಪತಿಯ ಗಾಯಕರು ೩೫

ಬಚ್ಚಬಾಯ್ದೆರೆಯದೆ ಭ್ರಾಂತುಗೊಂಡಂತೆ ಮೈ
ಯೆಲ್ಲ ತೂಗಾಡದೊಂದಿನಿಸು
ಅಲ್ಲಾಟವುಂಟೋಜೆವಿಡಿದು ಬಾಯ್ದೆರೆಯುಂಟು
ಸಲ್ಲಲಿತದೊಳು ಹಾಡಿದರು ೩೬

ಜೋಡು ಜೋಡಾಗಿ ತಾವರೆಯಿದಿರೊಳು ಸ್ವರ
ಮಾಡುವ ತುಂಬಿಗಳಂತೆ
ನೋಡುತ ಭರತರಾಜನ ಮುಖಪದ್ಮವ
ಮಾಡಿದರಾಳಾಪಗಳನು ೩೭

ಭರತರಾಜನ ಮುಖಚಂದ್ರನ ಕಂಡ ಜಾ
ಣರಿಗೆ ಮಹಾಳಾಪವುಕ್ಕಿ
ಬರುತಿದ್ದವಿಂದುವ ಕಂಡ ಸಮುದ್ರದ
ಭರತದಂತೇನ ಬಣ್ಣಿಪೆನು ೩೮

ವೀಣೆಯ ದನಿಯಾವುದದರೊಳು ಪಾಡುವ
ಗಾನದ ಧ್ವನಿಯಾವುದೆಂದು
ಕಾಣಿಸಿಕೊಳ್ಳದೆ ಜಿನಸಿದ್ಧಮಹಿಮೆಯ
ಕಾಣಿಸಿ ಪಾಡಿದರೊಲ್ದು ೩೯

ರನ್ನ ಮೂರರ ಗುಣವನು ಮುಖವೀಣೆಯ
ಸನ್ನಾಹದಿಂದ ಹಾಡಿದರು
ಚೆನ್ನಾಯ್ತು ಸೊಬಗಾಯ್ತು ಲೇಸು ಲೇ
ಸಿನ್ನೊಮ್ಮೆಯೆಂದು ಕೇಳ್ವಂತೆ ೪೦

ದನಿ ಲೇಸು ಮೇಳದ ಜೋಕೆ ಲೇಸಾಳಾಪ
ವನುಭವ ಲೇಸು ಮತ್ತಲ್ಲಿ
ಜಿನನಾಮ ಕೂಡಿತು ಲೇಸು ಲೇಸೆಂದು ರಾ
ಯನ ಮುಂದೆ ನುಡಿವರಿಚ್ಛೆಗರು ೪೧

ತುಂಬಿಯ ಗಾನವಂತಿರಲಿ ಕೋಕಿಲನಾದ
ವೆಂಬರ ಮಾತದಂತಿರಲಿ
ತುಂಬುರ ನಾರದರಿನ್ನೇಕ ಹೋಪುರೆ
ಯೆಂಬಂತೆ ಸೊಗಸಿ ಹಾಡಿದರು ೪೨

ಸಮವಸರಣದೊಳು ವಿಮಲಕಿರಣದೊಳ
ಗಮಲ ಮುನಿಗಳ ವೃಂದದೊಳು
ಕಮಲಕರ್ಣಿಕೆಗೆ ಸೋಂಕದೆ ನಿಂದ ದೇವನ
ಗಮಕವನೊಲ್ದು ಪಾಡಿದರು ೪೩

ಜಿನನ ಪೊಗಳಿ ಕೂಡೆ ಸಿದ್ಧರ ಕೀರ್ತಿಸಿ
ಮುನಿಗಳ ವಂದಿಸಿ ಮತ್ತೆ
ತನುವಿನೊಳಿದ್ದಾತ್ಮತತ್ವವಿಚಾರವ
ಜನಪತಿ ಮೆಚ್ಚೆ ಹಾಡಿದರು ೪೪

ನರುಗಬ್ಬಿನೊಳಗಣ ರಸವ ಕಾಣದೆ ಪಶು
ಹೊರಗಣೆಲೆಯ ಸವಿವಂತೆ
ಅರಿದೊಳಗಾತ್ಮಸುಖವನುಣಲರಿಯದೆ
ಹೊರಗೆಳಸುವರಂಗಸುಖಕೆ ೪೫

ತಿಳಿವೆ ಶರೀರ ತಿಳಿವೆ ರೂಪು ಬೆಳಗೆ ವ್ಯೋ
ಬೆಳಗೆ ತಾನಾಗಿರುತಿಹುದು
ತಿಳಿವು ಬೆಳಗುಗಳೆ ಹಂಸನ ಕುರುಹೆಂದು
ತಿಳಿದು ನೋಳ್ಪವನೀಗ ಧನ್ಯ ೪೬

ನಾಲಗೆ ಕುಡುಹು ಶರೀರವೆ ವಾದ್ಯ ನಿ
ರಾಳಾತ್ಮನೇ ವಾದ್ಯಕಾರ
ತಾಳಿ ನುಡಿಸುತಿರ್ದು ಬಿಟ್ಟುಹೋದರೆ ದೇಹ
ಡೋಳಿನಂದದೊಳು ಬಿದ್ದಿಹುದು ೪೭

ವಾದ್ಯಗಳಾರಾರು ಪಿಡಿದು ಬಾಜಿಸಿದರೆ
ವೇದ್ಯವೆನಿಸಿ ದನಿಯಹವು
ಚೋದ್ಯವೀ ತನುವಾದ್ಯ ತಾಳ್ದೋರ್ವಗಲ್ಲದೆ
ಭೇದ್ಯವಾಗದು ಧ್ವನಿಗೊಡದು ೪೮

ಲೋಹವ ಹೊಕ್ಕಗ್ನಿ ಹೊಯ್ಲಿಗಿಡುವುದಾ
ಲೋಹವನಗಲೆ ಹೊಯ್ಲುಂಟೆ
ದೇಹವ ಹೊಕ್ಕಿದ್ದರಾತ್ಮಗೆ ಬಾಧೆಯು
ದೇಹವಳಿಯೆ ಬಾಧೆಯುಂಟೆ ೪೯

ಹೊತ್ತ ದೇಹವ ಬರುಮರಣದೊಳ್ಬಿಟ್ಟರೆ
ಮತ್ತೊಂದು ದೇಹ ಮುಂದಹುದು
ಹೊತ್ತ ದೇಹವ ಬಿಟ್ಟು ಮತ್ತೊಂದು ದೇಹವ
ಪತ್ತದೆ ನಿಲ್ವುದು ಮುಕ್ತಿ ೫೦

ಹಿಡಿದ ದೇಹವ ಬಿಟ್ಟು ಮತ್ತೊಂದು ದೇಹವ
ಪಿಡಿಯದೆ ನಿಲ್ವುದೆಂತೆನಲು
ಬಿಡದೆ ಸುಜ್ಞಾನಾಗ್ನಿಯಿಂದ ಕರ್ಮದ ಬೇರ
ಸುಡುವುದೊಂದೆಂದು ಪಾಡಿದರು ೫೧

ಹುಟ್ಟಿತಾಗಳೆ ನಸುನಗೆ ಮೊಗದೊಳು ಮನ
ದಟ್ಟಿತಾ ನುಡಿಯದೆ ಚಕ್ರಿ
ಇಟ್ಟವರ ಮೇಲೆ ತನ್ನ ಕೋಮಲಹಸ್ತ
ಮುಟ್ಟಿ ದೇವಾಂಗ ವಸ್ತ್ರವನು ೫೨

ಗಾನ ನಿಂದುದು ಗಾಯಕರ ಮೆಚ್ಚು ಮಿಗೆ ಬಂದು
ದಾನಂದ ಸಂದುದು ಸಭೆಗೆ
ಭೂನಾಥನಾಸ್ಥಾನದೊಳಗಿದ್ದ ನಿಲ್ಲಿಗಾ
ಸ್ಥಾನದ ಸಂಧಿ ಸುಗಂಧಿ ೫೩

# ಕವಿವಾಕ್ಯ ಸಂಧಿ

ಸಂಗೀತಗೋಷ್ಠಿ ನಿಂದುದು ಸಾಹಿತ್ಯ ಸು
ಸಂಗತಿಗೆಳಸಿ ನೃಪೇಂದ್ರ
ತುಂಗ ವಿದ್ವಾಂಸರ ನೆರವಿಗೊಯ್ಯನೆ ತನ್ನ
ಕಂಗಳ ಕಾಂತಿದೋರಿದನು ೧

ಕವಿಗಳು ಹಲಬರುಂಟವರ ಮಧ್ಯದಳೊಬ್ಬ
ದಿವಿಜಕಲಾಧರನೆಂಬ
ಕವಿಯಿದ್ದನವನ ಮೊಗವ ನೋಡಲೊಡನಾ
ಕವಿ ನುಡಿದನು ಭಾವರಿದು ೨

ಶ್ರೀ ಜಿನಚರಣಾಬ್ಜ ಸುರಭಿ ಮಧುವ್ರತ
ರಾಜಾಧಿರಾಜಾಗ್ರಗಣ್ಯ
ರಾಜಿತ ಹಂಸಕಲಾನಂದ ನಿನಗೆ ಮ
ಹಾಜಯ ಸಿದ್ಧಿರಸ್ತೆಂದಾ ೩

ಜಯಸಿದ್ಧಿಯೆಂಬುದು ವೈರಿಭೂಪರನೊತ್ತಿ
ಜಯಿಸಿದರದು ಲೌಕಿಕಾರ್ಥ
ಭಯಬಡಿಸುವ ಕಾಲಕರ್ಮವನೊತ್ತಿ
ಜಯಿಸಿದರದು ಪರಮಾರ್ಥ ೪

ಲೌಕಿಕ ಜಯವಂತರುಂಟು ಪಲಂಬರಾ
ಲೌಕಿಕ ಪರಮಾರ್ಥವೆರಡಾ
ಭೂಕಾಂತರಲ್ಲಿ ಪಡೆವುದು ದುರ್ಲಭ ಸುವಿ
ವೇಕ ಬೇಕದಕೆ ಚಕ್ರೇಶ ೫

ಭೋಗವಿಚಾರವು ಬೇಕು ನೃಪತಿಗಾತ್ಮ
ಯೋಗವಿಚಾರವು ಬೇಕು
ರಾಗರಸಿಕನಾಗಬೇಕು ಭಾವಿಸೆ ವೀತ
ರಾಗರಸಿಕನಾಗಬೇಕು ೬

ಕೊಡಬೇಕು ಕೊಡುವಲ್ಲಿ ವಿಚಿತ್ರವರಿಯಬೇಕು
ನುಡಿಬೇಕು ಮೌನವೂ ಬೇಕು
ಬಡವರಂತಿರಬೇಕು ಪ್ರಭುವಿನಂತಿರಬೇಕು
ನಡೆಯಿದು ಜಾತಿಕ್ಷತ್ರಿಯರ ೭

ಪ್ರಜೆ ಪರಿವಾರಕ್ಕೆ ಹಿತನಂತೆ ವೈರಿಭೂ
ಭುಜರಿಗೆ ಭುಜಗೇಂದ್ರನಂತೆ
ನಿಜಗುರುವಿಗೆ ಭೃತ್ಯನಂತೆ ಧಾರ್ಮಿಕರಿಗೆ
ನಿಜಬಂಧುವಾಗಿರಬೇಕು ೮

ಪರವೆಂಗಳಿಗೆ ಹೇಡಿ ಕದನಕ್ಕೆ ಕಡುಗಲಿ
ಪರಮತಕ್ಕಾಡಂಬಡೆ ಮೂರ್ಖ
ಅರುಹನಾಗಮದೊಳರ್ತಿಗನಾತ್ಮ ಕಲೆಯೊಳು
ಸರಸನಾಗಿರಬೇಕು ನೃಪತಿ ೯

ಹವಣಿಸಿಕೊಳ್ಳಬೇಕಿಂದ್ರಿಯವರ್ಗವ
ನವಿಚಳನಾಗಿರಬೇಕು
ಭುವನಕಿಂದಿನ ರಾಯ ಸ್ವರ್ಗಕ ನಾಳಿನ
ದಿವಿಜೇಂದ್ರನೆನಿಸಿರಬೇಕು ೧೦

ಎರಳೆ ಮೀನಾನ ಪತಂಗ ತುಂಬಿಗಳು ಕಾ
ತರಿಸಿಯೊಂದೊಂದಿಂದ್ರಿಯದೊಳು
ಪರಿಭವವಡೆದವಿನ್ನೈದಿಂದ್ರಿಯಕೆ ಸಿಕ್ಕಿ
ದರಸು ಕೆಡುವುದಾವ ಚೋದ್ಯ ೧೧

ಜ್ಞಾನಶೂನ್ಯನ ಪಂಚೇಂದ್ರಿಯ ಪಂಚಾಗ್ನಿ
ಜ್ಞಾನಿಯಿಂದ್ರಿಯ ಪಂಚರತ್ನ
ಜ್ಞಾನವಿಲ್ಲದೆ ಭೋಗಿಸುವ ಭೋಗಿ ಭವರೋಗಿ
ಜ್ಞಾನವಿಡಿದ ಭೋಗಿ ಯೋಗಿ ೧೨

ಜ್ಞಾನಿಯ ಮುಟ್ಟಲಮ್ಮದು ಕರ್ಮವೆನ್ನಲಾ
ಜ್ಞಾನ ತಾನಾವುದೆಂದೆನಲು
ಜ್ಞಾನವೆ ನಾನು ಶರೀರ ನಾನಲ್ಲೆಂಬ
ಮಾನಸದನುಭವವಲ್ತೆ ೧೩

ಆಗಾಗ ದೇಹ ಬೇರಾತ್ಮ ಬೇರೆಂದು ತಿ
ಳಾಗಿಸಿ ತನ್ನ ತಾ ನೆಮ್ಮಿ
ಭೋಗಿಸಿದರೆ ಕರ್ಮಬಂಧವಿಲ್ಲಾಗಿಯಾ
ಭೋಗಿ ತಾನೇ ಯೋಗಿಯಲ್ತೆ ೧೪

ಭೂಮಿಯೊಳಗೆ ಹೂಳ್ದ ಲೋಹವಮಣ್ಬಿಡಿವುದು
ಹೇಮ ಮಣ್ಬಿಡಿವುದೇ ನೃಪತಿ
ಕಾಮಿಸಿ ಭೋಗಿಸುವಗೆ ಕರ್ಮಬಂಧ, ನಿ
ಷ್ಕಾಮಭೋಗಿಗೆ ಬಂಧವುಂಟೆ ೧೫

ನಿನ್ನ ವರ್ತನವಿದು ಪರಮರಹಸ್ಯವಿಂ
ದಿನ್ನೊಬ್ಬರೊಳು ಕಾಣ್ಬೊಡಿಲ್ಲ
ನಿನ್ನ ನಡೆಯ ನಿನ್ನ ನುಡಿಯ ನಿನ್ನೊಳೆ ಕಂಡು
ನಿನ್ನ ಮುಂದೋದಿದೆನರಸ ೧೬

ಹೊರಗೆಲ್ಲವ ತೊರೆದೊಳಗೆ ನಿರ್ಮಲವಾಗಿ
ಮೆರೆವವರುಂಟು ಲೋಕದೊಳು
ಹೊರಗೆಲ್ಲವಿದ್ದೊಳಗೇನುವಿಲ್ಲೆನೆ ಬಚ್ಚ
ಬರಿದಾದರಾರು ನಿನ್ನಂತೆ ೧೭

ಅವನವನನ ಗೆಲ್ವರಾವುದುಪಾಯವೆಂ
ದವನಿಯೊಳೆಣಿಸುವರುಂಟು
ಜವನ ಜಯಿಸುವರುಪಾಯವೇನೆಂದೆಂಬ
ಭುವನೇಶರುಂಟೆ ನಿನ್ನಂತೆ ೧೮

ಗಾನ ಮದ್ದಳೆ ತಾಳ ಲಯಕೆ ನರ್ತಿಪ ಮಂದ
ಯಾನೆಗೆ ಶಿರದ ಕುಂಭದೊಳು
ಧ್ಯಾನವಿಪ್ಪಂತೆ ರಾಜ್ಯದೊಳಿರ್ದು ಮುಕ್ತಿಸಂ
ಧಾನದೊಳಗೆ ನಿನ್ನ ನೆನಹು ೧೯

ಪಟಗಾರನುರೆ ಸೂತ್ರವಿಡಿದಿದ್ದರಾ ಗಾಳಿ
ಪಟ ಗಗನದೊಳಾಡುವಂತೆ
ಕುಟಿಲವಲ್ಲಾತ್ಮ ನಿನ್ನಂಗದೊಳಿರ್ದು ಸಂ
ಘಟಿಸಿ ಮುಕ್ತಿಯೊಳಿದೆ ಬುದ್ಧಿ ೨೦

ಮೊಲೆ ಮುಡಿ ಮುಖ ನಖ ಕಟಿ ತುಟಿಯೆಂದರೆ
ಒಲಿದೀವರುಂಟು ಲೋಕದೊಳು
ಒಳ ಹೊರಗಾತ್ಮ ಶರೀರವೆಂಬೀನುಡಿ
ಗೊಲಿದೀವರಾರು ನಿನ್ನಂತೆ ೨೧

ಗದ್ದುಗೆಯೇರಿ ದುಷ್ಕಥೆಗೇಳಿ ಹಲಬರು
ಬಿದ್ದುಹೋಗುವರಧೋಗತಿಗೆ
ಗದ್ದುಗೆಯೇರಿ ಸತ್ಕಥೆಗೇಳಿ ಮುಕ್ತಿಯ
ಹೊದ್ದುವರಾರು ನಿನ್ನಂತೆ ೨೨

ಒಳಗಿದ್ದ ದೇವನ ಕಾಣದೆ ಹೊರಗೆ ದೇ
ಗುಲವ ಪೂಜಿಸುವೆಗ್ಗನಂತೆ
ಒಳಗಣಾತ್ಮನ ಬಿಟ್ಟು ವೈಯನೆ ತಾನೆಂದು
ಸಲೆ ಹೊಗಳಿಸಿಕೊಳುತಿಹರು ೨೩

ಇಂದ್ರನಂತಿನನಂತೆ ಚಂದ್ರನಂತೆಂದು ನ
ರೇಂದ್ರರು ಹೊಗಳೆ ಮೆಚ್ಚುವರು
ಇಂದ್ರಾದಿಗಳು ಲಯಕೊಳಗಾದರಾತ್ಮ ಜಿ
ನೇಂದ್ರನೆಂದೆನಲೊಲ್ವೆ ನೀನು ೨೪

ನೃತ್ಯಕೇಳಿಯೊಳು ಸಂಗೀತಕೇಳಿಯೊಳು ಸಾ
ಹಿತ್ಯಕೇಳಿಯೊಳಾತ್ಮಕಲೆಯ
ಅತ್ಯಂತ ಮಮತೆಯೊಳಾದರಿಸುವ ಕೃತ
ಕೃತ್ಯರಾರರಸ ನಿನ್ನಂತೆ ೨೫

ಭೋಗವಿಲ್ಲದೆ ಭೋಗಿಯಹುದು ನಿನ್ನೊಳಗಾತ್ಮ
ಯೋಗವಿಲ್ಲದೆ ಯೋಗಿಯಹುದು
ಭೋಗದೊಳಿದ್ದು ಯೋಗವ ಮಾಡಿ ಭವಮುಕ್ತ
ರಾಗುವರಾರು ನಿನ್ನಂತೆ ೨೬

ತನು ಜಿನಗೃಹವೆಂದು ಮನ ಸಿಂಹಪೀಠವೆಂ
ದನುಪಮಾತ್ಮನೆ ಜಿನನೆಂದು
ಜಿನಹನೆಲ್ಲವ ಬಿಟ್ಟು ಕಣ್ಮುಚ್ಚಿ ನೋಳ್ಪಾಗ
ಜಿನನಾಥ ತೋರುವನೊಳಗೆ ೨೭

ಕಲಿತು ಮರೆದುದೊಂದು ಪದ್ಯವ ನೆನೆದುದ
ನೊಳಗೊಳಗಾಲೋಚಿಪಂತೆ
ತಿಳಿವು ಬೆಳಗು ನನ್ನ ರೂಪೆಂದು ನೆನಹು ವ್ಯೆ
ಯೊಳಗಾಡಲಾತ್ಮ ತೋರುವನು ೨೮

ಸುರುಚಿರ ಛಾಯಾಪ್ರತಿಮೆಗೆ ಛಾಯಾ
ಪುರುಷಗೆ ಸದೃಶನನೆಂದು
ಸ್ಮರಿಸುತ ಕಣ್ಮುಚ್ಚಿ ನೋಡಿದವರಂತೆ
ಪರಮಾತ್ಮ ತೋರುವನೊಳಗೆ ೨೯

ಭೊಗ್ಗನೊಂದೇ ದಿನದೊಳು ತೋರನಾತ್ಮನು
ಬಗ್ಗಿದಾಗಳೆ ಬಾಗಿಲಹುದೆ
ನುಗ್ಗಿಯ ಮರನಲ್ಲ ಕರ್ಮವೆಂಬುದು ಕರ್ಮ
ಜಗ್ಗಲೊಯ್ಯನೆ ತೋರುತಿಹನು ೩೦

ಎಳೆಮಿಂಚಿನಂದದ ಬೊಂಬೆಯೊ ತಿಂಗಳ
ತಿಳಿವೆಳಗಿನೊಳಾದ ರೂಪೋ
ಪಳಿಕಿನ ಪುತ್ಥಳಿಯೋಯೆನೆ ಕ್ರಮದಿಂದ
ಹೊಳೆವುದೊಳಗೆ ತನ್ನ ರೂಪು ೩೧

ನುಡಿಯಿಲ್ಲ ನಡೆಯಿಲ್ಲ ತನುವಿಲ್ಲ ಮನವಿಲ್ಲ
ಕಡೆಗೆ ಪಂಚೇಂದ್ರಿಯವಿಲ್ಲ
ಕಡೆಸುಖ ಸುಜ್ಞಾನ ಕಾಂತಿಯೆ ರೂಪಾಗಿ
ವೊಡಲು ತುಂಬಿಹುದಾತ್ಮರೂಪು ೩೨

ದೇವ ನೀನಧ್ಯಾತ್ಮಸೂರ್ಯ ಸಿನ್ನಿದಿರಲ್ಲಿ
ನಾವೆಲ್ಲರಧ್ಯಾತ್ಮರಸವ
ಈ ವಿಧವೆಂಬುದು ರವಿಗೆ ಪ್ರಕಾಶವ
ದೀವಿಗೆಗಳು ತೋರ್ಪ ರೀತಿ ೩೩

ಬಾವನ್ನ ವೃಕ್ಷದೊತ್ತಿನೊಳಿರ್ದ ಮರಗಳು
ತಾವೆಲ್ಲ ಕಮ್ಮನಪ್ಪಂತೆ
ದೇವ ನಿನ್ನೊಡನಾಡಿ ನಾವೆಲ್ಲರರಿದೆವು
ಜೀವಶುದ್ಧಿಯ ತುದಿಮೊದಲ ೩೪

ದಿವಿಜಕಲಾಧರ ಕವಿಯಿಂತು ರಚಿಸಿದ
ನವಸುಪ್ರಸಂಗ ರಾಯನಿಗೆ
ಕಿವಿಹೊಕ್ಕುದೆದೆದಟ್ಟಿತಧ್ಯಾತ್ಮವೆಂಬಾಗ
ಲವಲವಿಸುವನಾ ನೃಪತಿ ೩೫

ತನ್ನಂತರಂಗಾನುಭವವನೆಲ್ಲವನೀತ
ಮುನ್ನ ಕಂಡಂತೆ ಪೇಳ್ದಪನು
ಬಿನ್ನಣೆಯಹುದೆಂದು ಬಾಯ್ದೆರೆದುಸುರದೆ
ತನ್ನೆದೆಯೊಳು ಮೆಚ್ಚಿ ನನೆದ ೩೬

ತರ್ಕಶಾಸ್ತ್ರದೊಳೊಡ್ಡಿ ತಗರು ತಗರಿನಂತೆ
ಮಾರ್ಕೊಂಡು ಹೊಡೆದಾಡಬಹುದು
ಅರ್ಕನಂತೆಸೆವಾತ್ಮಯೋಗವಿಂತಿಹುದೆಂದು
ಬೇರ್ಕೆಯ್ದು ವಚನಿಸಲರಿದು ೩೭

ಆಗಮ ಕಾವ್ಯ ನಾಟಕದೊಳೆಲ್ಲರ ತಲೆ
ದೂಗಿಸಿ ಮಲಗಿಸಬಹುದು
ಮೂಗರು ಕಂಡ ಕನಸಿನಂತೆ ಮೆರೆವಾತ್ಮ
ಯೋಗವನಾರಾಡಬಹುದು ೩೮

ಉಂಡವ ತೇಗುವನಂತಾತ್ಮನ ಭಾವಿಸಿ
ಕಂಡವನದ ಪೇಳಬೇಕು
ಕಂಡು ಪೇಳಿದರು ನಿರ್ಭವ್ಯರೊಪ್ಪರು ಭವ್ಯ
ಪುಂಡರೀಕರು ಮೆಚ್ಚಬೇಕು ೩೯

ಈ ಕವಿಯಾಸನ್ನಭವ್ಯನಹುದು ಸಿದ್ಧ
ಲೋಕಪಥಿಕನಹುದೆಂದು
ವಾಕುದೋರದೆ ಮುನ್ನ ನೆನೆದು ಮತ್ತೊಯ್ಯನೆ
ವಾಕುತೋರಿದನಾ ಚಕ್ರಿ ೪೦

ಬಾರೈ ದಿವಿಜಕಲಾಧರ ಸುಕವಿಯೆಂ
ದಾರಾಯನೊತ್ತಿಗೆ ಕರೆದು
ತೋರಹಸ್ತದಲುಡುಗೊರೆಯನಿತ್ತನು ಕಲ್ಪ
ಭೂರುಹಕೆ ಕೈನೀಡಿದಂತೆ ೪೧

ಬಳಿಕಿಷ್ಟು ನಗೆಗೂಡಿ ಚೆನ್ನಾಯ್ತು ನಿನ್ನಾತ್ಮ
ನೊಳಗೆ ಕಂಡೈ ಲೇಸ ನುಡಿದೈ
ಬಳಲಿದೆ ಕುಳ್ಳಿರೆಂದಿಂತಯ್ದು ನುಡಿಯಿಂದ
ಕಳುಹಿದನವನನು ರಾಯ ೪೨

ಕವಿಯ ಜ್ಞಾನಕೆ ರಾಯ ರಾಯನುದಾರ ಗೌ
ರವಕೆಲ್ಲರರ್ತಿಸುವಾಗ
ಧವಲ ಶಂಖಧ್ವನಿ ಘಳಿಯಾರದಲ್ಲಿ ಭುಂ
ಭುವ ಭುಂವೆನೆ ಕೇಳಲಾಯ್ತು ೪೩

ಆರೋಗಣೆವೇಳೆಗೆ ಸನ್ನೆಯಾಯ್ತೆಂದು
ಆ ರಾಜಸಭೆ ಭೋಂಕನೆದ್ದು
ಆ ರಾಯಗೆರಗಿ ಬೀಳ್ಕೊಂಡುದು ಕಡಲ ಮ
ಹಾರವವೆನೆ ಧ್ವನಿ ಮಸಗೆ ೪೪

ಓಲಗ ಹರಿದುಪೊಯ್ತೆನೆ ಯೆದ್ದು ಆ ನರ
ಪಾಲಕ ಜಿನ ಶರಣೆಂದು
ಕಾಲತೊಡವು ಝಣಝಣರೆನಲೆದ್ದಸೊ
ಡ್ಡೋಲಗದಿಂದ ಜೀಯೆನಲು ೪೫

ನಿತ್ಯದಾನವನೀಯದಾರೋಗಿಸೆನೆಂಬ
ಸತ್ಯಾಂಗವುಂಟಾ ನೃಪಗೆ
ನಿತ್ಯದಾನಕೆ ಮುನಿಗಳ ತರಬೇಕೆಂಬ
ಕೃತ್ಯಕೆ ಸನ್ನದ್ಧನಾದ ೪೬

ಕವಿ ತನ್ನ ಹೃದಯವನರಿದುದ ಮೆಚ್ಚುತ
ಭುವನೇಶನೆದ್ದ ಯೋಗಿಗಳ
ಭವನಕೆ ತರಲುನುವಾದನೆಂಬಲ್ಲಿಗೆ
ಕವಿವಾಕ್ಯ ಸಂಧಿ ಸುಗಂಧಿ ೪೭

## ಮುನಿಭುಕ್ತಿ ಸಂಧಿ

ಜಿನನೊಬ್ಬ ಬಲ್ಲನಾ ಭರತಚಕ್ರೇಶನ
ಮನದನುಭವವದಿನ್ನೆಂತೊ
ಮುನಿಗಳ ಚರಿಗೆಯ ಕಾಲವನರಿದರ
ಮನೆಯ ಬಾಗಿಲಿಗೆ ನಡೆದನು ೧

ಛತ್ರ ಚಾಮರ ಖಡ್ಗ ಹಾವುಗೆ ಮುಂತಾದ
ಧಾತ್ರೀಶಚಿಹ್ನವನಿರಿಸಿ
ಪಾತ್ರದಾ[1]ನದ[1] ಪೇಕ್ಷೆಯಿಂದೊಬ್ಬ ಶ್ರಾವಕ
ಮಾತ್ರವೆಂದೆನೆ ನಡೆತಂದ ೨

ಒಡನಿದ್ದ ಸೇವಕರೆಲ್ಲರ ತೊಲಗಿಸಿ
[2]ಮ[2]ಡಿಮುಟ್ಟ ಧೋತ್ರವನುಟ್ಟು
ಬೆಡಗು ಬಿನ್ನಣ ಬೇರೆ ಹೊದೆದ ದುಕೂಲವ
ಉ[3]ಡಿ[3]ಸುತ್ತಿ ನಡೆದನಾ ರಾಯ ೩

ಬಲಿ ಪುಷ್ಪದಿಂದ ಪೂಜಿಸಿ ನಿಧಿಯನು ತರ
ಲೊಲಿದು ದ್ರವ್ಯಾರ್ಥಿ ಪೋಪಂತೆ
ಚೆಲುವರರಸನರ್ಚನಾದ್ರವ್ಯವೆರಸಿ ನಿ
ರ್ಮಲಯೋಗಿ ಪಥಕ್ಕೈದಿದನು ೪

ತೊಟ್ಟ ಮೋಹನನಾಟ್ಯದೊಳು ಮನ್ಮಥ ಬಾಳು
ಬಟ್ಟಲನಾಂತು ಬಹಂತೆ
ಬಟ್ಟಲು ಗಿಂಡಿವಿಡಿದು ಗರುವಿಕೆಯೊಡ
ಬಟ್ಟು ಬಹೆರಸನೊಪ್ಪಿದನು ೫

ರಾಜನ ಮುಂದೆ ಭೃತ್ಯಗೆ ಗುರುವಿನ ಮುಂದೆ
ರಾಜಗೆ ಹೆಮ್ಮು ಸಲ್ಲೆಂಬ
ರಾಜನೀತಿಯನರಿದಾ ರಾಜ ನಡೆದನು
ರಾಜವಿಡಾಯವ ಬಿಟ್ಟು ೬

---

[1] ನಾ (ಕ ಖ ಚ ಛ) [2] ಎು (ಕ. ಖ ಚ ಛ) [3] ಡ (ಕ ಖ ಚ ಛ.)

ಕೂಡಿದ್ದರೆಲ್ಲರ ನಿಲಿಸಿ ಏಕಾಕಿತ್ವ
ಗೂಡಿ ನಡೆದನಹುದಾಗ
ಬೇಡವೆಂದರು ಬಿಟ್ಟುದಿಲ್ಲ ವೈಗಂಪಿಗೆ
ಪಾಡುತ್ತೈದಿದುವು ತುಂಬಿಗಳು ೭

ಬೇಡವೆಂದರು ಬೇಡ ಕಳುವುದ ಬಿಡುವನೆ
ಬೇಡವಣ್ಣದ ತುಂಬಿವಿಂಡು
ಬೇಡವೆಂದರು ಬರುತಿರ್ದುದು ತ್ಯಾಗಿಯ
ಬೇಡುವ ಯಾಚಕರಂತೆ ೮

ಹಾವುಗೆ ಮೆಟ್ಟದೆ ಕನ್ನಡಿ ನೆಲದಲ್ಲಿ
ಭೂವರನಡಿಯಿಡುವಾಗ
ಮಾವಿನ ಕೆಂದಳಿರ್ಗೆದರಿದಂತೆಸೆದುದು
ಹಾವುಗೆ ಹೆಜ್ಜೆಯ ಕೆಂಪು ೯

ಎಡಬಲನತ್ತಿತ್ತ ನೋಡದೆ ಮುಂಬಜ್ಜೆ
ಇಡಿದು ನಿಟ್ಟಿಸುತೊಯ್ಯನೈದಿ
ಕಡೆಯ ಚಾವಡಿಯ ಮುಂಗಡೆಯ ಬಾಗಿಲ್ವಾಡ
ದೆಡೆಯ ಮುಸುಕದಲ್ಲಿ ನಿಂದ ೧೦

ಬಳಿಕ ಹಸ್ತದ ಗಿಂಡಿ ಬಟ್ಟಲನಲ್ಲಿ ಹೊಂ
ಬಲಿಗೆಯ ಮೇಲೊಯ್ಯನಿರಿಸಿ
ಹೊಳೆವ ಸುವರ್ಣದ ಕಂಭವನೆಮ್ಮಿ ದಿ
ಗ್ವಲಯವ ನೋಡುತ ನಿಂದ ೧೧

ನಿಲಿಸಿ ನಾಸಾಗ್ರದೊಳೆಡಗೈಯ ಬೆರಳೊಂದ
ಬಲಗೈಯ ಜಾನುವಿಗಿಟ್ಟು
ಚೆಲುವನೆಸೆದನು ಕಂಭವ ನೆಮ್ಮಿ ತಾ ನಿಂದ
ನಿಲುಗಡೆ ಜಗವ ಸೋಲಿಸುತ ೧೨

ಇನನ ಬರವನಾಶೆಮಾಡುವ ರಾತ್ರಿಯ
ವನಜದಂತಾ ಚಕ್ರವರ್ತಿ
ಮುನಿಗಳ ಬರವ ನಿ[1]ಚ್ಚೈಸುತ[1] ತಾನೊಬ್ಬ
ಮುನಿಯಂತೆ ಜಾನಿಸುತಿದ್ದ ೧೩

---

[1] ಶ್ಚೈಸ-ತ್ತಾ (ಕ), ಶ್ಚೈಸ ತ್ತಾ (ಖ) ಶ್ಚೈಸುತ (ಘ)

ಮುನಿಗಳು ಬಪ್ಪ ಬಟ್ಟೆಯ ಚರ್ಮದೃಷ್ಟಿಯೊ
ಳನುಮಿಸಿ ನೋಡುವನೊಮ್ಮೆ
ತನುವಿನೊಳಿದ್ದಾತ್ಮರೂಪ ಸುಜ್ಞಾನಲೋ
ಚನದಿಂದ ನೋಡುವನೊಮ್ಮೆ ೧೪

ಕೆಲಬಲದೊಳಗತಿ ಸನ್ನಿಧಿಯಲ್ಲದೆ
ಕೆಲಬರೊಳಗದವರಾಗ
ಗಲಭೆ ಮಾಡದೆ ತಲೆಮರಸಿಕೊಂಡೊಡೆಯನ
ಬಳಸಿನೊಳಿದ್ದರೀಕ್ಷಿಸುತ ೧೫

ಲೋಕವೆಲ್ಲೆನ್ನನೋಲೈಸುತಿರ್ದರು ನಾನು
ಲೋಕವ ಬೆರಸೆನೆಂಬುದನು
ಲೋಕವರಿಕೆ ಮಾಡಲೆಂದು ನಿಂದಂತೆ ತಾ
ನೇಕಾಕಿಯಾಗಿರ್ದನಾಗ ೧೬

ಸಾರದಾನವನೀವೆನೆಂದು ಯೋಗೀಂದ್ರರ
ಹಾರುವುದೊಂದಲ್ಲದಾಗ
ಆರೋಗಿಪನೆಂಬ ನೆನಹಿಲ್ಲದಾ ದಾನ
ಶೂರನಿದ್ದನು ಸುಚಿತ್ತದೊಳು ೧೭

ಭಾವರಿಂಗೊಟ್ಟ ಯೋಗೀಂದ್ರರನಲ್ಲಲ್ಲಿ
ಶ್ರಾವಕರೆಲ್ಲ ನಿಲ್ಲಿಸಲು
ಭೂವರಾಗ್ರಣಿಯರಮನೆಯತ್ತ ಹೊಳೆದುದಿ
ಲ್ಲಾ ವೇಳೆಯೊಳು ಯೋಗಿರೂಪು ೧೮

ಬಲದ ಬೀದಿಯ ನೋಳ್ಪನೆಡದ ಬೀದಿಯ ನೋಳ್ಪ
ನೊಲಿದಿದಿರ್ವೀದಿಯ ನೋಳ್ಪ
ಬಲಗೈಯ ಪೆಗಲಿಕ್ಕಿ ಬಪ್ಪ ಯೋಗೀಂದ್ರರ
ಸುಳುಹುಗಾಣದೆ ಚಿಂತೆಮಾಳ್ಪ ೧೯

ಇಂದೇನು ಪರ್ವೋಪವಾಸವೊ ಮುನಿಗಳಿ
ಗೆಂದಾಗ ತಿಥಿಯನಾರೈವ
ಇಂದಿದು ಪರ್ವವಲ್ಲೇಕೆ ಚಿತ್ತೈಸಿತಿ
ಲ್ಲೆಂದೆದೆಯೊಳು ಮರುಗುವನು ೨೦

ದಿನ ಬಂಜೆಯಾಗದೆ ಪರಮಾತ್ಮರತರಾದ
ಮುನಿಗಳಿಗನ್ನದಾನವನು
ಮನಮುಟ್ಟಿ ಮಾಡುವ ಭಾಗ್ಯವೆಂಬುದನಾವ
ಮನುಜ ಪಡೆಯಬಹುದೆಂಬ ೨೧

ಹಡಗು ದ್ವೀಪಕೆ ಹೋಗುತಿರಲಲ್ಲಿ ವಸ್ತುವ
ಗಡಣಿಸಿ ಕಳುಹುವನಂತೆ
ಬಿಡದೆ ಮುಕ್ತಿಗೆ ಹೋಹ ಮುನಿಯ ಕೈಗನ್ನವ
ನಿಡಬೇಡವೆ ಎಂದು ನೆನೆವ ೨೨

ಉಣಲರಿಯದ ಜಿನಪ್ರತಿಮೆಯ ಪೂಜೆಯಿಂ
ದುಣಿಸುವುದುಪಚಾರಭಕ್ತಿ
ಉಣಬಲ್ಲ ಮುನಿಯೆಂಬ ಜಿನಗನ್ನವೀವ ಸಂ
ದಣಿ ಮುಖ್ಯಭಕ್ತಿಯೆಂದೆಂಬ ೨೩

ಏಕೆಂದು ಮುನಿಗಳೀ ದೆಸೆಗೈದುತಿಲ್ಲೆಂದು
ಭೂಕಾಂತ ಚಿಂತಿಸುವಾಗ
ಆಕಾಶದೊಳಗೊಂದು ವಿಸ್ಮಯವಾದ ಮ
ಹಾಕಾಂತಿಯೊಡ್ಡು ಕಾಣಿಸಿತು ೨೪

ಅತ್ತಿತ್ತ ನೋಳ್ಪುದ ಮಾಣ್ದೊಡನಾಕಾಶ
ದತ್ತ ಕಣ್ಣಿಟ್ಟು ನೋಡಿದನು
ಹತ್ತಿರವಲ್ಲ ದೂರದೊಳಾ ಪ್ರಭೆಯೊಡ್ಡು
ಇತ್ತುದಾ ನೃಪಗೆ ಕೌತುಕವ ೨೫

ಏನೆನ್ನಬಹುದೀ ಪ್ರಭೆ ನೋಡೆ ಬೇರೊಂದು
ಭಾನುವಿನಂತೆ ತೋರುತಿದೆ
ಶ್ರೀ ನಿರಂಜನಸಿದ್ಧ ಎನುತ ನೋಳ್ಪಾಗದು
ತಾನೆರಡಾಗಿ ಕಾಣಿಸಿತು ೨೬

ಜಿನ ಜಿನ ಒಂದಾದುದೊಡನೆರಡಾದುದು
ಇನನಂತೆ ಚಂದ್ರನಂತೆಂದು
ಜನಪ ನೋಳ್ಪಾಗಳಾ ಪ್ರಭೆಗಳು ಮುಟ್ಟು ಮು
ಟ್ಟೆನೆ ಬರುತಿರ್ದುವು ತನಗೆ ೨೭

ಆಹಾ ಪ್ರಭೆಯಿದು ಚಾರಣ ಮುನಿಗಳ
ರೂಹಾಗಬೇಕಹುದೆಂದು
ಊಹಿಸುತಿದ್ದವ ನೋಡುತಿದ್ದಾ ಮುನಿ
ರೂಹವ ಕಂಡ ಬಾನದೊಳು ೨೮

ಹಿಂದುದು ಚಿಂತೆ ಸಂತಸವಾಯ್ತು ರೋಮಾಂಚ
ನೆರೆದುದಾಗಳೆ ದೇಹ ತುಂಬಿ
ಭರತನ ಪುಣ್ಯವೆ ಬಾಸೆಂದು ಕೆಲದೊಳ
ಗಿರಿಸಿದರ್ಚನೆಯ ಕೈಗಾಂತ ೨೯

ಗಿಂಡಿ ಬಟ್ಟಲನೆತ್ತಿಕೊಳುವನಿತರೊಳಿಂದು
ಮಂಡಲ ರವಿಮಂಡಲಗಳು
ಮಂಡಿತ ಮುನಿಗಳಾದಂತಿರ್ವರಾಗ ಭೂ
ಮಂಡಲಕಿಳಿತಂದರೊಡನೆ ೩೦

ಬಡವ ನಿಧಾನವ ಕಂಡಂತೆ ನಲಿವುತ
ನಡೆದನಾ ನೃಪನಿದಿರಾಗಿ
ಒಡನೆ ನಿಲಿಸಿದನು ಮುನಿಗಳಿರ್ವರನು ಮೈ
ಗೊಡೆ ತಿಷ್ಠ ತಿಷ್ಠಯೆಂದಾಗ ೩೧

ಭರದಿ ಗಂಧಾಕ್ಷತ ಪುಷ್ಪಗಳಿಂದ
ದರುಶನಾಂಜಲಿ ಮಾಡಿ ಕೂಡೆ
ಹಿರಿಯ ಗಿಂಡಿಯನೆತ್ತಿ ಜಲಶುದ್ಧಿಯಿತ್ತನಾ
ದರ ಮಿಗೆ ಭಾವಶುದ್ಧಿಯೊಳು ೩೨

ಬಲಗೊಂಡನುರೆ ಮೂರು ಬಾರಿ ತನ್ನೊಳು ತಾನು
ಗೆಲವೇರಿ ಮುನಿಗಳಿರ್ವರಿಗೆ
ನಲಿದೆರಗಿದನು ನಿಧಾನದೆಡೆಗೆ ದೀಪ
ಕಳಿಕೆ ತಾನೆರಗುವಂದದೊಳು ೩೩

ಮುನಿಗಳಿಗೊಲ್ದು ನಿವಾಳಿಯನಿಟ್ಟೆನ್ನ
ಮನೆಗೆ ಚಿತ್ತೈಸಬೇಕೆಂದು
ಮನುಜೇಶ ಮೈಯಿಕ್ಕಿ ನಡೆದನು ಮುಂದೆ ಬೆ
ನ್ನನೆ ಗಮಿಸಿದರು ಯೋಗಿಗಳು ೩೪

ನಿಧಿಯನರಸುತಿದ್ದ ಕಂಡವನೊಯ್ಯನಾ
ನಿಧಿಯನೊಯ್ವಂತಾತ್ಮಗೃಹಕೆ
ನಿಧಿಗಧಿನಾಥನು ಕೊಂಡೊಯ್ದನಾ ಗುಣ
ನಿಧಿಗಳ ತನ್ನರಮನೆಗೆ ೩೫

ಹೊನ್ನಬಾಗಿಲುಗಳ ರನ್ನದೋರಣಗಳ
ಪನ್ನೀರು ಸಾದಿನಿಂದೆಸೆವ
ಕನ್ನಡಿನೆಲದರಮನೆಯೊಳು ಹೊಕ್ಕು ಸ
ಭಿನ್ನಾಂತರಂಗರೈದಿದರು ೩೬

ಕಿರಿಜೆಡೆಗೈದಿ ಸೇವಕರು ನಿಂದರು ಮತ್ತೆ
ಕಿರಿಜೆಡೆಗಿದಿರಾಗಿ ಬಂದು
ಕಿರುನಡುವೆಸೆಯೆ ಊಳಿಗವೆಂಗಳೂಳಿಗ
ಮರಿದೆಸಗಲು ರಾಯ ನಡೆದ ೩೭

ತಗ್ಗು ಸೋಪಾನದೊಳಿಳಿವಾಗ ಮುನಿಗಳ್ಗೆ
ಬೊಗ್ಗನೆ ಕೈಲಾಗುಗೊಡುವ
ಉಗ್ಗಡದೇರು ಸೋಪಾನದೊಳವರ ಕೈ
ಯೊಗ್ಗಿ ಹಿಡಿದು ಮೇಲೆ ನೆಗೆವ ೩೮

ಸ್ವಾಮಿ ಶ್ರೀಪಾದವೆಚ್ಚರಿಕೆಯೆಂಬನು ಕೂಡೆ
ಆ ಮಾತನುಪಚಾರವೆಂಬ
ವ್ಯೋಮದೊಳೆಯ್ದುವ ನಿಮಗೆ ಪೈಸರವುಂಟು
ಶ್ರೀ ಮುನಿತಿಲಕರಿಗೆಂಬ ೩೯

ಅದಕಲ್ಲ ಸ್ವಾಮಿಗಳಿರ ನೋಡಿ ನಾವಿಪ್ಪ
ಸದನವೆಲ್ಲ ಡೊಂಕು ನಮ್ಮ
ಹೃದಯವಿನ್ನೆಷ್ಟು ಡೊಂಕೋ ನೀವು ಬಲ್ಲಿರೆಂ
ದೆದೆಗಿಂಪುದೋರೆ ನುಡಿದನು ೪೦

ಮನೆ ಡೊಂಕು ಮನಸು ಡೊಂಕಾದರು ನಿಮ್ಮ ಶಿ
ಷ್ಯನ ಮೇಲಣತಿ ಪ್ರೀತಿಯಿಂದ
ಜಿನಕಲ್ಪರಿರ ಬಿಜಯಂಗೈದಿರಿನ್ನೆನ್ನ
ಮನೆ ಮನೆಗಳು ನೇರವೆಂದ ೪೧

ಆಹುವ ನೃಪನ ಮಾತಿಗೆ ನಸುನಗುತಿಷ್ಟು
ನೋಡುವರಾ ಮುನಿವರರು
ಕೂಡೊಂದು ಮಾತ ನುಡಿಯರಿಬ್ಬರುಪಶಾಂತಿ
ಗೂಡಿ ನಡೆದರು ಮೌನದೊಳು ೪೨

ನುಡಿಯಬೇಕೆಂಬಚ್ಚೆಯುಂಟು ಭಿಕ್ಷೆಗೆ ಮುನ್ನ
ನುಡಿಯೆವೆಂಬುದೆ ವ್ರತ ತಮಗೆ
ಒಡಲೊಳಾತನ ಭಕ್ತಿರಸಕೆ ಮೆಚ್ಚುತ ಮುಂದೆ
ನಡೆದರು ನಡೆಚಿನರುಗಳು ೪೩

ಭಯ ಭಕ್ತಿ ವಿನಯದಿಂದಾ ರಾಯ ರಾಜಾ
ಲಯಕೆ ಯೋಗಿಗಳನೊಯ್ವಾಗ
ಜಯ ಮಹಾಲಕ್ಷ್ಮಿಯರಿದಿರುಗೊಂಬಂತೆ ರಾ
ಣಿಯರು ಬಂದರು ಚಕ್ರಧರನ ೪೪

ನವರತ್ನದಾಭರಣದ ಕಾಂತಿ ದೇಹ
ಚ್ಛವಿಯೊಳು ಬೆರಸಿ ಬಿಂಬಿಸಲು
ಭವನದ ನೆಳಲನೊತ್ತರಿಸುತ ಬಂದರು
ದಿವಿಜಲತಾಂಗಿಯರಂತೆ ೪೫

ಆರತಿಯೆತ್ತಿ ಸಿವಾಳಿಯನಿಟ್ಟು ಗಂ
ಭೀರ ಗಮಕದೋಜೆಯಿಂದ
ಚಾರಣ ಯೋಗೀಂದ್ರರಡಿಗಳಿಗಾ ನೃಪ
ನಾರಿಯರೊಲ್ದೆರಗಿದರು ೪೬

ಕ್ರಮದಿಂದ ಬಿಜಯಂಗೈಸಿದಂತಾ ಯೋಗಿ
ಕ್ರಮಕಮಲಂಗಳ ತೊಳೆದು
ದ್ಯುಮಣಿ ಹುಟ್ಟಿದ ಮನೆಯೋ ಎನೆ ಬೆಳಗು
ಳ್ಳಮೃತಗೃಹವನೈದಿಸಿದನು ೪೭

ಉನ್ನತಾಸನವಿತ್ತು ಪಾದಪೂಜೆಯ ಮಾಡಿ
ಹೊನ್ನುಪಕರಣವ ಹರಹಿ
ತನ್ನಬಲೆಯರು ತಾನೆಚ್ಚತ್ತು ಮುನಿಗಳಿ
ಗನ್ನದಾನವನಿತ್ತರೊಸೆದು ೪೮

ದಾತೃಗಳೊಳಗವನೀಶನುತ್ತಮನು ಸು
ಪಾತ್ರದೊಳುತ್ತಮರವರು
ದಾತೃವಿತ್ತನು ಪಾತ್ರವಾಂತುದು ಸಿದ್ಧಾಂತ
ಸೂತ್ರದೊಳೆಂತು ಪೇಳ್ದಂತೆ ೪೯

ಬಡಿಸುವ ಸ್ತ್ರೀಯರ ಯುಕ್ತಿ ಹಸ್ತಕೆ ತುತ್ತ
ಗೊಡುವ ರಾಯನದೊಂದು ಯುಕ್ತಿ
ಬಡವಿಲ್ಲದೆಸೆವ ಸ್ತ್ರೀಪುರುಷರ ಭಕ್ತಿ ಹೋ
ತಡೆಯದಿನ್ನವರಿಗೆ ಮುಕ್ತಿ ೫೦

ಭಿನ್ನರುಚಿಗೆ ಹಿಗ್ಗದೊಂದು ವಸ್ತುವ ಬೇಡಿ
ಸನ್ನೆದೋರದೆ ಮುನಿವರರು
ತನ್ನ ಕೈನುಟ್ಟಿ ಚಕ್ರೇಶ್ವರನಿತ್ತ ದಿ
ವ್ಯಾನ್ನವ ಕೊಂಡು ದಣಿದರು ೫೧

ಬದ್ಧಪಲ್ಯಂಕಾಸನದೊಳೊಡನೆ ಮುಖ
ಶುದ್ಧಿಯ ಕೊಂಡು ಕೈದೊಳೆದು
ಸಿದ್ಧರ ಜಪಿಸಿ ಕಣ್ಮುಚ್ಚಿ ನಿರಂಜನ
ಸಿದ್ಧನ ನೋಡಿದರೊಳಗೆ ೫೨

ಲೆಪ್ಪದ ಪುತ್ಥಲಿವೊಲು ಕುಳಿತತ್ತಿತ್ತ
ಲೊಪ್ಪಚ್ಚಿ ದೇಹ ಕಂಪಿಸದೆ
ನೆಪ್ಪರಿದಾತ್ಮನ ನೋಡಿ ಸಿದ್ಧಾಂತದೊ
ಳಿಪ್ಪ ಮಂತ್ರವ ಜಪಿಸಿದರು ೫೩

ಕೂಡೆ ಕಣ್ದೆರೆದಿದಿರೊಳಗಿರ್ದ ರಾಯನ
ನೋಡಿದರಾನಂದದಿಂದ
ಆಡಲರಿಯೆನವನುತ್ಸಾಹವನು ಭಕ್ತಿ
ಗೂಡಿ ನಮೋಸ್ತು ಮಾಡಿದನು ೫೪

ಸಲೆ ಚಂದ್ರಗತಿಯೆಂಬ ಮುನಿ ಅಕ್ಷಯಂ ದಾನ
ಫಲಮಸ್ತು ತೇ ಎಂದನೊಡನ
ನಲವಿನೊಳಾದಿತ್ಯಗತಿಯೆಂಬ ಯೋಗಿ ನಿ
ರ್ಮಲಿನಾತ್ಮಸಿದ್ಧಿರಸ್ತೆಂದ ೫೫

ಹಂಸನಾಥನೆ ಬಲ್ಲ ಭರತೇಶನಾ ಮುನಿ
ಹಂಸರಾಶೀರ್ವಾದಗೇಳ್ದು
ಸಂಸಿದ್ಧಿವಡೆದಂತೆ ನಲಿದನು ಸತ್ಪಾತ್ರ
ತಾಂ ಸಿಕ್ಕೆ ನಲಿಯದರಾರು ೫೬

ರಾಣಿಯರೆಲ್ಲರೊಲ್ದಿರಗಿದರಾಗ ನೇ
ರಾಣಿಯ ಬೊಂಬೆಗಳಂತೆ
ಕಾಣುತೆಲ್ಲರ ಹರಸಿದರು ಯೋಗಿಗಳು ಗೀ
ರ್ವಾಣ ಭಾಷೆಯೊಳವರರಿಯೆ ೫೭

ಸುರವಾಕ್ಯ ಸುರಭೇರಿ ಹೂಮಳೆ ಹೊಂಮಳೆ
ಸುರಭೀರವವೆಂದಿಂತು
ಸುರಕೃತ ಪಂಚವೈಭವಗಳಾದುವು ಮರ್ತು
ಭರತೇಶದಾನವೈಭವವೆ ೫೮

ಮುನಿಗಳೆದ್ದರು ಜಿನ ಶರಣೆಂದು ನೃಪನರ
ಮನೆಯಿಂದ ಶಾಂತಭಾವದೊಳು
ನನಗೆ ನೀವೇ ಶರಣೆನುತಿದ್ದನಾ ರಾಯ
ಮುನಿಗಳ ಹಿಂದೆ ರಾಗದೊಳು ೫೯

ನಿಲ್ಲೆಲೆ ಭವ್ಯಯೆಂಬರು ಯೋಗಿಗಳು ದೇವ
ರೊಲ್ಲಗೆ ಚಿತ್ತೈಸಿಯೆನುತ
ಮೆಲ್ಲಗೆರಡುರೂಪ ಕೈಕೊಂಡು ಕೈಲಾಗಿ
ನಲ್ಲಿ ನಡಸಿದನಿರ್ವರನು ೬೦

ನಾಕೆಂಟು ಮಾರು ನಡೆದು ಮುನಿಗಳು ಕೂಡೆ
ಸಾಕು ನಿಲ್ಲೆಂಬರು ನೃಪನ
ಸಾಕಾಗದಿದೆ ನಿಮ್ಮ ಸೇವೆಯಿನ್ನೊಪ್ಪಚ್ಚಿ
ಬೇಕು ಬಿತ್ತೈಸಿಯೆಂದೆಂಬ ೬೧

ಮತ್ತೆಕಿರಿದು ದೂರ ನಡೆದರು ಮುನಿಗಳಿ
ನ್ನಿತ್ತ ಬಾರದಿರೆಂಬರೊಡನೆ
ಇತ್ತ ಬಾರೆಂದೆನ್ನನುದ್ಧರಿಸದೆ ದೇವ
ರೊತ್ತರಿಸರೆ ಎಂದು ನುಡಿವ ೬೨

ಮನದಲ್ಲಿ ಹಿಗ್ಗುತಿಹರು ಯೋಗಿನಾಥರು
ಮನುವಿನ ವಿನಯವ ಕಂಡು
ಜಿನನ ಕುಮಾರನಲ್ಲವೆ ಎಂದು ನುಡಿಯದೆ
ನೆನೆವುತ ನಡೆದರೋಜೆಯೊಳು ೬೩

ಕಡೆಯ ಬಾಗಿಲುಮುಟ್ಟ ಬಿಡದೆ ಬಂದನು ಮತ್ತು
ಬಿಡವಿಚ್ಛಿಯಾದುದಿಲ್ಲವರ
ಬಿಡದೆ ಹಂಸರ ಕಾಣ್ಬ ಯೋಗಿರತ್ನರ ಕಂಡು
ಬಿಡುವರೆ ಮೋಕ್ಷಗಾಮಿಗಳು ೬೪

ಆದೀಶನಾಣೆ ನೀನಿನ್ನು ನಿಲ್ಲೆಂದವ
ರಾದರ ಮಿಗೆ ನಿಲಿಸಿದರು
ಪಾದಕೆರಗಿದನಿರ್ವರಿಗೊಡನೊಂದೆ ರೂ
ಪಾದನಾ ವಿಸ್ಮಯರೂಪ ೬೫

ನಡೆನೋಡಿ ನಲವಿಂದ ಹರಸಿದರವರು ಮ
ತ್ತೊಡನೆ ಲಂಘಿಸಿದರಂಬರಕೆ
ಕುಡಿಮಿಂಚಿನಂತೆ ಹೊಳೆದು ಹೋಹ ಯತಿಗಳ
ಬೆಡಗ ಕಣ್ಣಿಟ್ಟು ನೋಡಿದನು ೬೬

ದಿಟ್ಟಿಗೆ ತೋರುವನಿತು ಹೊತ್ತು ಮುನಿಗಳ
ನಿಟ್ಟಿಸಿ ಮಿಗೆ ಹಾಯ್ದು ಮೇಲೆ
ತೊಟ್ಟನೆ ತನ್ನರಮನೆಯತ್ತಲೊಲಿದನು
ಪಟ್ಟವರ್ಧನ ಸಾರ್ವಭೌಮ ೬೭

ಕನಕ ರತ್ನದ ಹಾವುಗೆಯ ಮೆಟ್ಟಿ ಬೀಸುವ
ಕನಕ ಚಾಮರಗಳೊಗ್ಗಿನೊಳು
ಮನುಜೇಶನರಮನೆಗಡಿಯಿಟ್ಟನಲ್ಲಿಗೆ
ಮುನಿಭುಕ್ತಿಸಂಧಿ ಸುಗಂಧಿ ೬೮

# ಆರೋಗಣೆ ಸಂಧಿ

ರಾಜರ ದೇವ ರಾಜಾದಿತ್ಯ ರಾಜಾಧಿ
ರಾಜರ ರಾಜನಾ ಚಕ್ರಿ
ರಾಜಮಂದಿರಕೋಜೆಯಿಂದಡಿಯಿಟ್ಟನು
ರಾಜವಿಡಾಯ ಬಿಮ್ಮನಲು ೧

ಕರೆದೊಬ್ಬ ಹಿತವನನೀ ಹೊನ್ನರಾಶಿಯ
ಪುರದೊಳಿಹ ಬಡವರಿಗೆ
ತಿರುಕರಿಗೆರೆವರ್ಗೆ ವೆಚ್ಚಿಸು ಹೋಗೆಂದು
ದೊರೆ ಹೊಕ್ಕನೂಡನರಮನಯ ೨

ಯತಿಗಳ ಗುಣವ ಬಣ್ಣಿಸುತ ದಾನದೊಳಾದ
ಅತಿಶಯಕಾನಂದಬಡುತ
ಪತಿ ಬಹ ದಾರಿಯ ನೋಡುತಲಾ ಪತಿ
ವ್ರತೆಯರಿದ್ದರು ಗೆಲುವಿನೊಳು ೩

ಕಂಡರು ಮುಖಕಾಂತಿ ಥಳಥಳಿಸುತ ಬಹ
ಗಂಡನ ತಮ್ಮದಿರಿನೊಳು
ತಂಡ ತಂಡದೊಳೆಲ್ಲರಿದಿರಾಗಿ ಬಂದು ಮುಂ
ಕೊಂಡು ನುಡಿದರೊಳಗರಿದು ೪

ದೇವರ ಪರಿಯೆಂದಿನಂದವಲ್ಲಿಂದೊಂದು
ಭಾವವಾಗೆಮಗೆ ತೋರುತಿದೆ
ಭಾವಿಸುವಾಗೊಂದು ಪರಮಲಾಭವ ಪೆತ್ತ
ರೀವಿಯೊಳಿದೆಯೆಂದರೊಸೆದು ೫

ಅಕ್ಕಾಜಿ ನೀ ನೋಡು ತಾ ನೋಡು ತಂಗಿ ನೋ
ಡಕ್ಕರಿಂದರಸನ ಮೊಗವ
ಅಕ್ಕೊ ಸತ್ಯವೊ ನಮ್ಮ ಮಾತೆಂದು ಕೇಳ್ವರು
ನಕ್ಕಾಡಿ ತಾವು ತಮ್ಮೊಳಗೆ ೬

ನಮ್ಮೊಳು ನಾವು ಕೆಲರು ಕೆಲಬರ ಕೇಳಿ
ನಮ್ಮ ನಾವಹುದಹುದೆಂದು
ಸುಮ್ಮಾನಪಡೆದರೇಕಹುದೆಂದು ಸ್ವಾಮಿಯು
ನೊಮ್ಮೆ ಕೇಳುವೆವೆಂದರೊಡನೆ ೭

ಅಹುದೊ ಅಲ್ಲವೊ ನಾವು ಕಂಡ ಕಾಣ್ಕೆಯು ದೇವ
ಸಹಜದಿಂದುಸಿರಬೇಕೆಂದು
ಮಹಿಳೆಯರೆಲ್ಲರು ನಗುತ ಕೇಳಲು ರಾಯ
ನಹುದಹುದಹುದೆಂದನಾಗ ೮

ಚೆನ್ನಾಗಿ ಕಂಡಿರಿ ನಿಮ್ಮಂತೆ ಕಾಣ್ಬವ
ರಿನ್ನುಂಟೆ ನನ್ನೆದೆಯೊಳಗ
ಬನ್ನಿ ನಾವೆಲ್ಲವಿನ್ನಾರೋಗಿಸುವುದೆಂದು
ಮನ್ನಿಸಿ ಕರೆವುತ ನಡೆದ ೯

ಪಾದವ ತೊಳೆದಂಗದಟ್ಟೆನನಿಕ್ಕಿದ
ರಾದರದಿಂದೊಳಹೊಕ್ಕು
ಮೇದಿನೀಪತಿ ಕಂಡು ತನಗೊಬ್ಬಗೆಂದು ಸಂ
ಬೋಧಿಸಿದಂದು ಕುಳ್ಳಿರನು ೧೦

ಮುಂದಕೆ ನಡೆಯದೆ ನಿಂದನಲ್ಲಿಯೆ ಪಂಡಿ
ರೆಂದೆಂದು ತನಗಾದ ಮೇಲೆ
ಸಂದಣಿಗೊಂಡುಂಬರಾ ಪರಿಗೆಂದು ತಾ
ವಿಂದು ಯೋಚಿಸಿದರೆಂದರಿದ ೧೧

ಸ್ವಾಮಿಗಾರೋಗಣೆಯಾದ ಬಳಿಕಲುಂಬ
ನೇಮವುಂಟೆಮಗದರಿಂದ
ಸ್ವಾಮಿ ಭೋಜನಕೆ ಚಿತ್ತೈಸಬೇಕೆಂದೆಲ್ಲ
ಕೈಮುಗಿದರು ಭಕ್ತಿಯಿಂದ ೧೨

ಎಂದಿನ ಕ್ರಮವಿಂದು ಬೇಡಿ ನೀವೆಲ್ಲ ನಾ
ವಂದುದ ಕೇಳಿ ನೀವಿಂದು
ಒಂದಾಗಿ ಪಂತಿಯೊಳುಣಬೇಕು ಬನ್ನಿರೌ
ಎಂದು ಕರೆದನಬಲೆಯರ ೧೩

ಒಬ್ಬರ ಮೊಗವನೊಬ್ಬರು ನೋಡಿ ತಮ್ಮೊಳು
ಸಿಬ್ಬಿದಿಗೊಂಡು ಚಿಂತಿಪರು
ಒಬ್ಬರ ಪರಿಣತಿಯೊಬ್ಬರಿಗಿಲ್ಲದೊ
ಜ್ಜೊಬ್ಬರಿಂತಾಡಿದರಾಗ ೧೪

ಪುರುಷಗನ್ನವನಿತ್ತು ಶೇಷಾನ್ನವನುಂಬ
ತರುಣಿಯವಳಿ ಸ್ವರ್ಗಸರಣಿ
ಸರಿಪಂತಿಯೊಳಗುಂಬ ಬಾಲೆ ತರುಣಿ ಕಾಡ
ಬಿರಣಿಯೆಂದೊರ್ವಳಾಡಿದಳು ೧೫

ತಾನು ಬೆರೆತುಕೊಂಡು ಪತಿಯು ಪಂತಿಯೊಳುಂಬ
ಳಾನಾರಿ ದುರುಳಿ ತನ್ನರಸ
ತಾನೆ ಕರೆದರುಂಡುರೇನೆಂದು ಮತ್ತೊರ್ವ
ಮಾನಿನಿ ಕಿವಿಯೊಳಾಡಿದಳು ೧೬

ಪತಿಗುತ್ತರವ ಕೊಡಬಾರದು ಕೈಕೊಂಡ
ವ್ರತವ ಕೆಡಿಸಬಾರದಿದಕೆ
ಗತಿಯಾವುದತಿ ವೇಳೆಯಾಯ್ತೆಂದು ಕೆಲವರು
ಮತಿವಂತೆಯರು ಚಿಂತಿಸಿದರು ೧೭

ಏಕಾಂತ ಕೆಲರೊಳು ಯೋಚನೆ ಕೆಲರೊಳು
ಮೂಕತೆ ಕಲರೊಳೊಂದೆರಡು
ವಾಕು ಕೆಲರೊಳಿರೆ ಮನದೊಳಗರಿದಾ
ಭೂಕಾಂತ ನುಡಿದನಿಂತೆಂದು ೧೮

ಬನ್ನಿರೌ ನಿಮಗೆ ವ್ರತವ ಕೊಟ್ಟ ಗುರುವಾರು
ನನ್ನ ಕೇಳದೆ ವ್ರತವುಂಟೆ
ನನ್ನ ಕೇಳದೆ ಕೊಂಡರುರೆ ಕೇಳಿರದಕೇನು
ನನ್ನಾಣೆ ಸತ್ಯವೊ ಸಟೆಯೊ ೧೯

ಗುರುಸಾಕ್ಷಿ ದೇವಸಾಕ್ಷಿಕವಾಗಿ ನೇಮವ
ಧರಿಸಿತಿಲ್ಲರಸ ನಿನ್ನಾಣೆ
ಸರಸಕೊಂದೇಳೆಂಟು ದಿನ ನಡಿಸಿದೆವದು
ಬರುತಿರ್ದುದೆಮಗರ್ತಿಯಾಗಿ ೨೦

ತರುಣಿಗಳಿರ ಬನ್ನಿ ತಪಸಿಗಳಗ್ರಗ
ಣ್ಯರ ಪಾನೀಯಾಮೃತನುಂಬ
ಬರಲೊಲ್ಲದೆಮ್ಮನೇತಕೆ ನೋಯಿಸುವಿರಿ ನಿ
ಷ್ಕರುಣೆಯರಿರ ಬನ್ನಿರೆಂದ ೨೧

ಗಂಡನ ನುಡಿಗೇಳ್ದರಹುದೆಂದರೊಡಬಟ್ಟು
ಗಂಡ ಪೇಳ್ದಂತೆ ಕೇಳಿದರು
ಪೆಂಡಿರು ಕೇಳ್ವುದೇನವನ ವಾಕ್ಯವನು ಷ
ಟ್ಖಂಡದೊಳಾರು ಮೀರುವರು ೨೨

ಹೊಂಗಿಂಡಿಯುದಕುವ ತನ್ನ ಕೈವಿಡಿದೆತ್ತಿ
ಹೆಂಗಳ ಕರೆದು ಕೈವಿಡಿದು
ಅಂಗಾಲ ತೊಳೆದೊಳಗೈತನ್ನಿರೆಂದೀವ
ನಂಗಜರೂಪನರ್ತಿಯೊಳು ೨೩

ಮಡದಿಯೊರ್ವಳಿಗೆ ಗಿಂಡಿಯ ತನ್ನ ಕೈಮುಟ್ಟಿ
ಕೊಡುವಾಗ ಜಗುಳಿತಾ ಗಿಂಡಿ
ಒಡನೊರ್ವಳಾಗಳೆ ಜಿನಸಿದ್ಧ ಸಿದ್ಧಯೆಂ
ದೆಡೆಯೊಳಾಂತಳು ರಾಯ ಮೆಚ್ಚೆ ೨೪

ಬಾಡಿತವಳ ಮೊಗ ಬಳಲಿತವಳ ನೋಟ
ನೋಡನಳಧರವಾರಿದುದು
ಬೇಡವೆಂದರೆ ಕೇಳಿರಕಟ ನೀವೇ ಜೋಲಿ
ಮಾಡಿದಿರೆನ್ನಲ್ಲಿ ತಪ್ಪೆ ೨೫

ಈಕೆ ಕಂಭನ ನೆಮ್ಮಿ ನಿಂದಳಯ್ಯಯ್ಯೊ ನೋ
ಡಾಕೆ ಗೋಡೆಯನೊರಗಿದಳು
ಹಾ ಕಷ್ಟ ಭರತನ ಭಾಗ್ಯವೇತರದೆಂಬ
ನಾ ಕಾಂತೆಯರ ಚಿತ್ತ ಕರಗೆ ೨೬

ತಲೆಯ ತಡಹುವನು ಗಲ್ಲನ ಪಿಡಿಮೊಯ್ದು
ನಲುಗುತ ನೋಡುವನು
ಬಳಲಿದಿರೆಲ್ಲರೂ ಹೊತ್ತಾಯ್ತು ಬನ್ನಿರೆಂ
ದೊಳಗೃಹಕೊಡನೆ ನಡೆದನು ೨೭

ಮಂಗಳ ಮೃದುತರಾಸನದಲ್ಲಿ ಚೌಕ ಸು
ಖಾಂಗವಾಗಿರೆ ನೃಪ ಕುಳಿತ
ಜಂಗಮಲತೆಗಳಂದದಿ ಬಂದು ಕುಳಿತರಾ
ಹೆಂಗಳೆಲ್ಲರು ಪಂತಿಯಾಗಿ ೨೮

ಸ್ತ್ರೀಯರು ತನ್ನೆಡ ಬಲದಲ್ಲಿ ಸಾಲಾಗಿ
ವೈಯೂರದಿಂದ ಕುಳ್ಳಿರಲು
ರಾಯನಿದ್ದನು ರತ್ನಹಾರದ ನಡುವಣ
ನಾಯಕರತ್ನದಂದದೊಳು ೨೯

ಹಲಬರು ರಾಯನ ಪಂತಿಯೊಳೂಟಕೆ
ಕುಳಿತರು ಮತ್ತವರಲ್ಲಿ
ಕೆಲಬರಾರೋಗಣೆಗೆಡೆಮಾಡಲನುವಾಗಿ
ಸುಳಿದಾಡುತಿರ್ದರರ್ತಿಯೊಳು ೩೦

ಕಾಂಚನದಿಂದ ರತ್ನಗಳಿಂದ ಬೆಳ್ಳಿಯಿಂ
ಸಂಚಿಸಿದುಪಕರಣಗಳ
ಚಂಚಲಾಕ್ಷಿಯರಾಂತು ಸುಳಿದರಾಗತ್ತಿತ್ತ
ಮಿಂಚಿನ ಲತೆಗಳೆಂಬಂತೆ ೩೧

ಲಾವಣ್ಯ ಧಗಧಗಿಸುವ ನರಪತಿಯ ಮುಂ
ದೋವಿಟ್ಟ ಹೊಂಬರಿವಾಣ
ಭಾವಿಸಲೊಪ್ಪಿತು ರವಿಯ ಸನ್ನಿಧಿಯ ಹೊಂ
ದಾವರೆಯಂತೆ ಚೆಲ್ವಿನೊಳು ೩೨

ಬಟ್ಟ ಹೊಂಬರಿವಾಣದಂಚಿನೊಳಗೆ ಸಾಲು
ಬಟ್ಟಲು ಕೆಲವು ಬಟ್ಟಲೊಳು
ಇಟ್ಟ ಮಾಣಿಕದ ಸೋಟಿಗಗಳೆಸೆಯೆ ತಿಟ್ಟ
ವಟ್ಟ ತಿಂತಿಣಿಯೊಳೊಪ್ಪಿದನು ೩೩

ಆರೋಗಣೆಗೆ ಕುಳಿತಾ ರಾಯನೊತ್ತಿನ
ನಾರಿಯರೆಸೆದರೆಂತೆನಲು
ದೇವಾಮೃತವನುಂಬಮರೇಂದ್ರನೊತ್ತಿನ
ದೇವಾಂಗನೆಯರೆಂಬಂತೆ ೩೪

ತಂದೆಡೆ ಮಾಡುತ್ತಿದ್ದರು ವನಿತೆಯರೊಲ
ವಿಂದ ದಿವ್ಯಾನ್ನ ಪಾನಗಳ
ಅಂದುಗೆಗಳ ಗೆಜ್ಜೆಗಳ ದನಿ ಝುಲಿಝುಲಿ
ರೆಂದೆನೆ ಪಂತಿ ಪಂತಿಯೊಳು ೩೫

ತೊಟ್ಟಿರವಕೆ ಜಡೆ ಕಾಷೆಯಂದದೊಳಿಳಿ
ಬಿಟ್ಟ ಸಿಕ್ಕಿದ ಮೇಲು ಸೆರಗು
ಬಟ್ಟವೆಂಗಳು ಕೆಲಬರು ಸುಳಿದರು ಹೊನ್ನ
ಚಟ್ಟಿ ಸುಟ್ಟುಗಗಳನಾಂತು ೩೬

ಹೊಂಗೆಲಸದ ಭಾಜನದೊಳಿದ್ದಮೃತ ಸಾ
ರಂಗಳ ಸಕಲ ಭಕ್ಷ್ಯಗಳ
ತಂಗಿಗಕ್ಕಗೆ ಸ್ವಾಮಿಗಕ್ಕಾಜಿಗೆಂದು ಬಿ
ಡಂಗಿಯರುಣಬಡಿಸುವರು ೩೭

ಇವಳು ಗಂಡನ ಪಂತಿಯೊಳು ಕುಳಿತುಂಬುವ
ಳಿವಳಿಗಾನಿಕ್ಕುವಳೆಂಬ
ಸವತಿ ಮತ್ಸರವಿಲ್ಲ ತಾವೆಂದರವರೆಂಬ
ಸವಿನಯ ಮಿಗೆ ಬಡಿಸಿದರು ೩೮

ಸಾರವಸ್ತುಗಳು ತಂದಗಲೆಲ್ಲ ತುಂಬುವಂ
ತಾರಯ್ದು ಬಡಿಸಿದ ಮೇಲೆ
ಆ ರತಿ ಪ್ರತಿಯಲ್ಲವೆಂಬ ಪೆಂಗಳು ಪತಿ
ಗಾರತಿಯೆತ್ತಿದರೊಸೆದು ೩೯

ಕುಸುಮಾಂಜಲಿ ಮಾಡಿ ಕೈಮುಗಿದೊಡನೊಂದು
ದೆಸೆಗೆ ಸಾರಿದರಬಲೆಯರು
ನಸುನಕ್ಕನಾ ರಾಯನಾ ಸತಿಯರದೊಂದು
ಹೊಸಬಗೆ ಭಕ್ತಿಯ ಕಂಡು ೪೦

ಕಡುಕು ಚಿಮ್ಮುರಿ ಬೊಟ್ಟು ಯಜ್ಞೋಪವೀತ ಪೊ
ನ್ನುಡಿದಾರ ದೋತ್ರವೆಂಬಿಷ್ಟು
ಗಡಣಿಸಿ ಮೈಯಮೇಲಿದ್ದುವು ಮತ್ತೊಂದು
ತೊಡಕಿಲ್ಲದೊಡನೊಪ್ಪವಡೆದ ೪೧

ಹಸ್ತಪ್ರಕ್ಷಾಲನ ಕೈಗಟ್ಟಿ ಮೊದಲಾದ
ಪ್ರಸ್ತುತಕ್ರಿಯೆಂಗಳ ಮಾಡಿ
ವಿಸ್ತೀರ್ಣತಲ್ಪದಮೇಲೆ ಬಲಿದನು ಪ್ರ
ಶಸ್ತ ಪಲ್ಯಂಕಾಸನವ ೪೨

ಎಡದ ಗುಲ್ಫದ ಮೇಲೆ ಬಲದ ಗುಲ್ಫವನಿಟ್ಟು
ತೊಡೆ ಬೆಡಗೆಸೆಯೆ ಕುಳ್ಳಿರ್ದು
ಎಡದ ಹಸ್ತದ ಮೇಲೆ ಬಲದ ಹಸ್ತವನು ಸಂ
ಘಡಿಸಿಟ್ಟನಂಘ್ರಿಯಮೇಲೆ ೪೩

ಶಾಂತಭಾವದೊಳು ಕಣ್ಮುಚ್ಚಿ ನೆನಹು ಲೋ
ಕಾಂತಕೆ ನಡಸಿ ಸಿದ್ಧರನು
ಅಂತರಂಗಕೆ ತಂದು ಪೂಜಿಸಿ ಬೀಳ್ಕೊಟ್ಟು
ಕಂತುಸನ್ನಿಭನು ಕಣ್ದೆರೆದ ೪೪
ಬಟ್ಟೆನಮೇಲೆಡಗೈಯೂರಿ ಬಲಗೈಯ್ಯ
ನಿಟ್ಟನು ಹರಿವಾಣದಲ್ಲಿ
ಕೊಟ್ಟನು ತನುವಿಗೆ ಹಂಸನಾಥಗೆ ಮುನ್ನ
ಕೂಟ್ಟ ದಿವ್ಯಾನ್ನ ಪಾನಗಳ ೪೫

ಜ್ಞಾನಾನ್ನವನಾತ್ಮಗರ್ಪಿಸುತಿಹನನ್ನ
ಪಾನವ ಮೈಗೀವುತಿಹನು
ಜ್ಞಾನಿಗಳಲ್ಲದೆ ಭರತೇಶನೆದೆಯ ಸಂ
ಧಾನವ ಬಲ್ಲವರಾರು ೪೬

ದುಷ್ಟರಾಜನ ಮಾತನವನ ರಾಜ್ಯದೊಳಿರು
ವಷ್ಟು ದಿವಸ ಕೇಳ್ವರಂತೆ
ಅಷ್ಟಕರ್ಮದೊಳು ತಾನಿರ್ದುದನರಿದಾತ್ಮ
ದೃಷ್ಟಿಯುಂಡನು ಕಾಲವರಿದು ೪೭

ಅರಸನಾರೋಗಿಸುತಿದ್ದು ಕಿಕ್ಕಣ್ಣಿಂದ
ಅರಸಿಯರುಗಳ ನೋಡಿದನು
ಕರವ ಹಿಡಿದುಕೊಂಡು ಸುಮ್ಮನೆ ಕ್ಕುಳಿತಿದ್ದ
ಪರಿಗಂಡು ವಿಸ್ಮಯನ್ನಾದ ೪೮

ಏಕೆ ತುತ್ತಿಡರೆಂದು ಕೈಸನ್ನೆಯಿಂದವ
ಲೋಕಿಸಿದನು ನರನಾಥ
ಆ ಕುಶಲೆಯರೆಡೆಮಾಡುವವರ ಕರೆ
ದೇಕಾಂತದೊಳು ಪೇಳ್ದರೊಂದ ೪೯

ಎಡೆಮಾಡುವಬಲೆಯರೆಯ್ತಂದು ರಾಯ ತು
ತ್ತಿಡುವನ್ನದೊಳಗೊಂದು ತುತ್ತ
ತುಡುಕಿ ತೆಗೆದುಕೊಂಡು ಪೋಗಿ ಪೆಂಗಳಿಗೆಲ್ಲ
ಎಡೆಮಾಡಿದರು ಹವಣರಿದು ೫೦

ಎಲ್ಲರು ತುತ್ತಿಟ್ಟರದಕೆ ರಾಯನು ತಲೆ
ಯಲ್ಲಾಡಿ ತಣಿದನದೆಯೊಳು
ಅಲ್ಲವೆ ಮತ್ತೇನು ಪತಿಭಕ್ತಿ ಮನೆಮನೆ
ಗೆಲ್ಲಕೆ ಬಹುದೇ ಲೋಕದೊಳು ೫೧

ಪುರುಷನಿಧಾನನ ಶೇಷಾನ್ನ ತಾವುಂಬ
ಹರಿವಾಣಕ್ಕೆಯ್ತರಲೊಡನೆ
ಪುರುಷನಾಥನೆ ಒಲ್ಲನವರ ಮನಸಿನೊಂದು
ಹರುಷವನುಂಡರರ್ತಿಯೊಳು ೫೨

ಜೀವಬಲವ ದೇಹಬಲವ ಹೆಚ್ಚಿಸುವ ಸಂ
ಜೀವನರಸಪಿಂಡವೆನಿಪ
ಮೂವತ್ತೆರಡು ತುತ್ತುಗಳಿಂದ ತಣಿದನು
ಭೂವರನಾ ಸಮಯದೊಳು ೫೩

ರಾಜ ಕೈತೊಳೆದನು ಸತಿಯರು ಕೈದೊಳೆ
ದೋಜೆಯಿಂದಿದಿರೊಳು ನಿಲಲು
ಆ ಜನಪತಿಯೆಡೆಮಾಡಿದ ಸತಿಯರು
ಭೋಜಿಸಲೆಂದು ಸೂಚಿಸಿದ ೫೪

ನವಗಿನ್ನು ಭೋಜನಾಂತದ ಕ್ರಿಯೆ ಕಿರಿದುಂಟು
ಅವರಿಗೆ ಬಡಿಸಿ ನೀವೆಂದು
ಯುವತಿಯರಿಗೆ ಸನ್ನೆ ಮಾಡಿ ಕಣ್ಮುಚ್ಚಿ ಮಾ
ನರಪತಿ ಯೋಗದೊಳಿದ್ದ ೫೫

ಕುಳ್ಳಿರಿರಕ್ಕ ನೀವೆಲ್ಲ ಬಳಲ್ದಿರೆಂ
ದೊಳ್ಳಿತ ನುಡಿದು ಭಾವೆಯರು
ಎಲ್ಲರಿಗುಣಬಡಿಸಿದರವರಂದ
ದಲ್ಲಿಯೆ ಸವಿದರನ್ನವನು ೫೬

ಸ್ಮರಿಸಿ ಸಿದ್ಧಾಂತನಮಂತ್ರವನು ಚಿದಂಬರ
ಪುರುಷನ ನೋಡಿ ಬೀಳ್ಕೊಂಡು
ಭರತೇಶ ಕಣ್ದೆರೆದೆದ್ದನು ಜಿನಸಿದ್ಧ
ಶರಣೆಂದು ಪರಮಲೀಲೆಯೊಳು ೫೭

ಹೆಚ್ಚಡವನು ಹೊದೆವುತ ಹಾವುಗೆಯು ಮೆಟ್ಟಿ
ಸಚ್ಚಿದಾನಂದ ರೂಪವನು
ಮೆಚ್ಚಿ ಭಾವಿಸುತ ಬಂದನು ಚಂದ್ರಶಾಲೆಗೆ
ಹೆಚ್ಚು ಕುಂದಿಲ್ಲದ ಚಂದ್ರ ೫೮

ತೂಗುಮಂಚದ ಮೇಲೆ ಪೊರಗುಮೂಡೆಗೆ ವಾಮ
ಭಾಗವನಿಟ್ಟು ಕುಳಿತನು
ಆಗಳೆ ಬಂದರು ಧುಳಧುಳನಬಲೆಯ
ರಾ ಗಾಡಿಕಾರನಿದ್ದೆಡೆಗೆ ೫೯

ಪರಿಮಳದೊಡೆವುತ ಪನ್ನೀರ ಚಿಮ್ಮುತ
ತಿರುಹುತ ಬೀಸಣಿಗೆಗಳ
ಚರಣವನೊತ್ತುತ ವೀಳೆಯಗೊಡುತ ಸೌಂ
ದರಿಯರಿದ್ದರು ಬಳಸಿನೊಳು ೬೦

ನಿಂದೋಲಗ ಸಾಕು ಕುಳ್ಳಿರಿಯೆಂದೊಲ
ವಿಂದವನೀಶ ನುಡಿದನು
ಮಂದಗಮನೆಯರು ಮೃದುತಲ್ಪದೊಳಗೋಜೆ ೬೧
ಯಿಂದೆಲ್ಲರೊಲ್ದು ಕುಳಿತರು

ವಾರಿಜಾಕ್ಷಿಯರೊಳು ಸರಸಸಲ್ಲಾಪ ಗಂ
ಭೀರ ಪ್ರಸಂಗ ಕೇಳಿಯೊಳು
ಆ ರಾಜಯೋಗೀಂದ್ರನಿರುತಿದ್ದನಿಲ್ಲಿಗೆ
ಆರೋಗಣೆಯ ಸುಸಂಧಿ ೬೨

## ಉಪ್ಪರಿಗೆ ಸಂಧಿ

ಮತ್ತೊಂದು ದಿನದುದಯದೊಳೆದ್ದು ಜಿನಸಿದ್ಧ
ರುತ್ತಮಾರಾಧನೆಗೈದು
ಚಿತ್ರಜರೂಪನುಪ್ಪರಿಗೆಯೊಳೋಲಗ
ವಿತ್ತನದೇನ ಬಣ್ಣಿಪೆನು ೧

ಕುಂದಣದುಪ್ಪರಿಗೆಯಮೇಲೆ ನವರತ್ನ
ದಿಂದಾದ ಮಂಟಪದಲ್ಲಿ
ಪೊಂದಾಪರೆಯಂತೆ ಹೊಳೆವ ಗದ್ದುಗೆಯಲ್ಲಿ
ಬಂದು ಕುಳಿತನು ರಾಜೇಂದ್ರ ೨

ತನುಕಾಂತಿ ಭೂಷಣಕಾಂತಿಯಾ ಮಂಟಪ
ದನುಪಮಕಾಂತಿ ಮೇಳೈಸೆ
ಜನಪತಿ ತಾನೊಬ್ಬ ದಿನಪತಿಯಂತಿರ್ದ
ದಿನಪತಿಯುದಯ ಕಾಲದೊಳು ೩

ಕಾಳಂಜಿ ಹಡಪ ಚಾಮರ ಗಿಂಡಿ ಮೊದಲಾದ
ಊಳಿಗದಂಬುಜಾಕ್ಷಿಯರು
ಸಾಲಭಂಜಿಕೆಗಳಂತೆಡಬಲದಲ್ಲಿ ನಿಂ
ದೋಲೈಸುತಿದ್ದರೋಜೆಯೊಳು ೪

ಮಂಡಿತಾಲಂಕಾರ ಕಾವ್ಯವ ರಾಯನ
ಪೆಂಡಿರಿಗೋದಿಸಿದವಳು
ಪಂಡಿತೆಯೆಂದೆಂಬ ದಾದಿ ಬಂದರಸನ
ಕಂಡು ಕ್ಕಮುಗಿದಳರ್ತಿಯೊಳು ೫

ರಾಣಿಯರೆಲ್ಲ ಸಿಂಗರಿಸಿ ಲೀಲೆಯೊಳು ಕೈ
ಗಾಣಿಕೆಗಳ ಕೈವಿಡಿದು
ಪ್ರಾಣನಾಥನ ಕಾಣಲುಪ್ಪರಿಗೆಯನು ಬಿ
ನ್ನಾಣದಿಂದಡರಿದರಾಗ ೬

ಮದನನರ್ತಿಗೆ ಮೇರುಗಿರಿಯನೇರಲು ತನ್ನ
ಸುದತಿಯರರಸಿ ಬಹಂತೆ
ಚದುರೆಯರೇರುತಿದ್ದರು ಮೇರುಸೌಧ ನಾ
ಮದ ಹಿರಿದುಪ್ಪರಿಗೆಯನು ೭

ನೋಡಿ ಬಾ ತಂಗಿ ಯೆಚ್ಚರಿಕೆಯಕ್ಕಾಚಿ ಕೈ
ನೀಡಕ್ಕ ಕೋ ಹಿಡಿ ತಾಯಿ
ಓಡದಿರಕ್ಕಾ ಬಾ ಬಾ ತಂಗಿಯೆಂದು ಮಾ
ತಾಡುತೇರಿದರೊಲವಿನೊಳು ೮

ಹರಿವುತಿದ್ದಪಳಿಗೆ ಹರಿ ಹರಿ ಮುಂದೆ ನಿ
ನ್ನರಸನೀವನು ದೊಡ್ಡ ಮೆಚ್ಚ
ಬರಲಾರದವರೇನನಾಡರೆನುತ ತಾವು
ಸರಸವಾಡುತ ಪತ್ತುತಿಹರು ೯

ತವಕಿಸಿ ನಡೆ ನಡೆಯೆನುತಿಪ್ಪಳಿವಳೆಷ್ಟು
ದಿವಸದಿಂ ಕಾಣಳೊ ಪತಿಯ
ನಿವಗೆ ಹಿತನ ಪೇಳ್ದುದೆನ್ನದು ತಪ್ಪು ಮೌ
ನವ ಮಾಳ್ಪೆನೆನುತೇರುತಿಹಳು ೧೦

ಜವ್ವನ ಸೊಕ್ಕಿವರಿಗೆ ನೋಡು ನಾಡನ
ಕವ್ವರೆಗೊಂಡೇರುತಹರೆ
ಅವ್ವ ನೀವೇನನಾಡಿರಿ ಚಕ್ರವರ್ತಿಯ
ಸುವ್ವಲಾಲೆಯನಾಡಿಸುವರು ೧೧

ಮೌನವೀಕೆಗೆ ತನ್ನಗಂಡನಂತಾತ್ಮನ
ಜಾನಿಸುತ್ತೈದುವ ಪರಿಯೊ
ಏನೆಂದು ತಿಳಿಯಬಾರದು ಹೇಳು ನಿನಗೆ ಸು
ಧ್ಯಾನವ ಕಲಿಸಿದನಾರೆ ೧೨

ಧ್ಯಾನಗೀನವ ನೀವು ನಿಮ್ಮರಸನು ಬಲ್ಲಿ
ರಾನೇನ ಬಲ್ಲೆನಾ ಗುಸುಟ
ಈ ನಿಮ್ಮ ಸರಸಸಲ್ಲಾಪಕೆ ಮನದಲ್ಲಿ
ಆನಂದಿಸುತ ಬಂದೆನಕ್ಕ ೧೩

ಹಿಂದುಳಿದರೆ ಮುಂದೆ ನಡೆದರೆ ಸುಮ್ಮನೆ
ಬಂದರೆ ಮಾತನಾಡಿದರೆ
ಒಂದೊಂದ ಕಲ್ಪಿಸುವಿರಿ ನಿಮ್ಮನುರೆ ಗೆಲು
ವಂದವನಾ ಚಕ್ರಿ ಬಲ್ಲ ೧೪

ಜಿನದ ಸಾಕಿನ್ನು ಸುಮ್ಮನೆ ಬನ್ನಿ ಮಂಟಪ
ಸನಿಹವಾದುದು ಹೆಣ್ಣುಗಳಿರ
ತನುವನೋಸರಿಸಿ ಕಂಡೋಜೆಯೊಳ್ಪೆತನ್ನಿ
ರೆನುತೇರುತಿಹರಲ್ಲಿ ಕೆಲರು ೧೫

ನಡೆವಾಗ ಸವತಿಯ ಕಾಲಮೇಲೊಂದು ಕ
ಪ್ಪಿಡಿದರೆ ಕಂಡೊರ್ವಳದನು
ತೊಡೆದಳು ಕೈಮುಟ್ಟಿ ತಂಗಿ ಹಾ ಹಾಯೆಂದು
ಒಡನಾಕೆ ಝುಂಕಿಸಿ ಹೋಗೆ ೧೬

ಕಾಲಮೇಲದೆ ಕಪ್ಪು ತೊಡೆದುಕೊಳ್ಳೆಂದೊಲ್ದು
ಹೇಳದೆ ತೊಡೆವರೆ ತಂಗಿ
ಓಲಗ ಮುಟ್ಟಲಾನುದು ಸುಮ್ಮನೈದಕ್ಕ
ಕೇಳಬಹುದು ನಮ್ಮ ಮಾತು ೧೭

ಇಂತು ವಿನೋದ ವಿನಯದಿಂದ ಭೂಪನ
ಕಾಂತೆಯರೆಲ್ಲರೋಜೆಯೊಳು
ಅಂತರಿಸದೆ ನಡೆದರು ಮುಟ್ಟ ಮುಟ್ಟಲೆಂ
ಬಂತಾಗಲೋಲಗಸಾಲೆ ೧೮

ಅರಸಿಯರಾನಂದದಿಂದ ಮಾಡವನೇರಿ
ಬರುತಿಪ್ಪರೆಂಬ ವಾರ್ತೆಯನು
ಚರಣದಂದುಗೆ ಕಟಿಸೂತ್ರದ ದನಿಮುಂದೆ
ಹರಿದು ಹೇಳಿದುವರಸನಿಗೆ ೧೯

ಅಳುಕುತೋಸರಿಸಿಕೊಳ್ಳುತ ಮೆಲ್ಲನರಸನ
ಬಳಿಗೆ ನಡೆದು ಮುಂದೆ ನಿಂದು
ನಳಿತೋಳ ನೀಡಿ ಕಾಣಿಕೆಗೊಟ್ಟು ಕೈಮುಗಿ
ದೊಳಸಾರಿ ನಿಂದರೋಜೆಯೊಳು ೨೦

ನೀಲಾಂಗಿಯೊರ್ವಳು ಬಂದು ಕಾಣಿಕೆಗೊಂದು
ನೀಲಾಂಬುಜವ ತಂದಿತ್ತು
ಮೇಲೆ ಕೈಮುಗಿದು ನಿಂದಳು ಕೆಲನೊಳಗಿಂದ್ರ
ನೀಲದ ಪುತ್ತಳಿಯಂತೆ ೨೧

ರಾಶಿಯೊರ್ವಳು ಬಂದು ಹೊಂದಾವರೆಯ ಕೈ
ಗಾಣಿಕೆಯಿತ್ತು ಕೈಮುಗಿದು
ಕ್ಷೋಣೀಶನೆಡೆದ ಭಾಗವ ಸಾರಿ ನಿಂದಳು
ಮಾಣಿಕಬೊಂಬೆಯೆಂಬಂತೆ ೨೨

ಕೆಂಪಿಯೊರ್ವಳು ಬಂದು ರಾಯನ ಹಸ್ತಕೆ
ಸಂಪಗೆ ಹೂಗಳ ನೀಡಿ
ಪೆಂಪಿದ ಕೈಮುಗಿದಬಲೆಯರೆಲ್ಲರ
ಗುಂಗಿನೊಳಗೆ ನಿಂದಳೊಡನೆ ೨೩

ಕರಿಯಳೊಬ್ಬಳು ಬಂದು ಚಕ್ರವರ್ತಿಗೆ ತನ್ನ
ಕರಕುಶಲದೊಳು ರಚಿಸಿದ
ಸುರಗಿಯ ಮಾಲೆಯನಿತ್ತಳು ರತಿದೇವಿ
ಸುರಗಿಯ ಮದನಗೀವಂತೆ ೨೪

ಅಂಗಜವೀರಗೆ ಪೂವಿನ ಖಡ್ಗವ
ಸಂಗಡಿಸುವ ರತಿಯಂತೆ
ಹೊಂಗೇದಗೆಯ ಕಠಾರಿಯನೊರ್ವ ಳ
ತಾಂಗಿ ತಂದಿತ್ತಳು ನೃಪಗೆ ೨೫

ಬಟ್ಟಜವ್ವನೆಯೊರ್ವಳಡಿಯಿಟ್ಟು ಕಾಣ್ಕೆಗೆ
ಬೆಟ್ಟದಾವರೆಯ ತಂದಿತ್ತು
ನಿಟ್ಟಿಸಿ ಕೈಮುಗಿದರಸನ ಗದ್ದುಗೆ
ಮುಟ್ಟಿ ನಿಂದಳು ವಿಭವದೊಳು ೨೬

ಮೈಯೊಡ್ಡಿ ಸಂಮುಖದೊಳು ನಿಲ್ಲದೆಲ್ಲರ
ಮೈಯ ಮರೆಗೆ ಸಾರುವವಳ
ಕೈಯಹಿಡಿದು ಕರೆತಂದೊರ್ವಳರಸಗೆ
ಕೈಯ ಕಾಣ್ಕೆಯ ಕೊಡಿಸಿದಳು ೨೭

ಅಂಜುಂತಂಜುತ ಬಾಲೆ ಬಂದೊರ್ವಳರಸಗೆ
ಕೆಂಜಾಜಿ ಸರಗೊಡುವಾಗ
ಕಂಜಾಜಿ ಜಗುಳಿತು ಕಾಣಿಕೆಯಲ್ಲ ಪು
ಷ್ಪಾಂಜಲಿ ಯೆಂದರಾಳಿಯರು ೨೮

ಎಲ್ಲರ ಮುಂದೊರ್ವ ಮುಗ್ಧೆ ನಾಚುತ ಬಂದು
ಮಲ್ಲಿಗೆ ಸರಗೊಡುವಾಗ
ಮಲ್ಲಿಗೆ ಜಾರಿತು ಜಾರಿದರೇನದೆ
ಮ್ಮಲ್ಲಿಗೆ ಯೆಂದನು ನೃಪತಿ ೨೯

ಪಾದರಿಯಲರನೊರ್ವಳು ಕೊಡುತಿರೆ ಜಾರಿ
ಪಾದದೆಡೆಗೆ ಬಿದ್ದುದವನ
ಪಾದದಿಂದೊದೆದನು ಸೋತು ಕಾಲ್ಗೆರಗಿದ
ಪಾದರಿಯನು ನೂಕುವಂತೆ ೩೦

ಪರದಾರಸೋದರನೊತ್ತಿಗೆ ಪಾದರಿ
ಬರಬಹುದೇ ಭರತೇಶ
ಚರಣದಿಂದೊದೆದುದದಾಯ್ತೆಂದು ಪಂಡಿತೆ
ಅರಸನ ನಸುನಗಿಸಿದಳು ೩೧

ಕಡುಶೀಲವತಿಯರು ನಿನ್ನ ಪೆಂಡಿರು ತಮ್ಮ
ಕಡೆಗೊಬ್ಬ ಪಾದರಿ ಬರಲು
ಪಿಡಿತಂದು ನಿನಗೊಪ್ಪಿಸಿದರು ನೀನೊದೆದುದು
ಬೆಡಗಾಯ್ತು ಶೀಲನಿಧಾನ ೩೨

ಕಡೆಗಣ್ಣ ಪ್ರಭೆಯಿತ್ತಲತ್ತಲೊಲೆದು ನೋಡೆ
ಕುಡಿಮಿಂಚಿನಂತಾಡುತಿರಲು
ನಡೆತಂದು ರಮಣಿಯೊರ್ವಳು ರಾಯಗಿತ್ತಳು
ಮುಡಿವಾಳದೊಂದು ಝಲ್ಲಿಯನು ೩೩

ಭಾವೆ ಭಾವಗೆ ಕಾಣ್ಕೆಯಿಕ್ಕೆಂದು ಕಿವಿಯಲ್ಲಿ
ಭಾವಕಿಯರು ಪೇಳೆ ನಗುತ
ಮಾವಿನ ತಳಿರ ತಂದಿತ್ತಳೊರ್ವಳು ತನ್ನ
ಮಾವನ ಮಗನ ಹಸ್ತದೊಳು ೩೪

ಓಲಗದೊಳಗೆಲ್ಲರಚ್ಚರಿವಡೆ ಮಲ್ಲಿ
ಕಾಲತೆ ನಡೆದು ಬಹಂತೆ
ಸಾಲು ಮುತ್ತಿನ ತೊಡಿಗೆಯ ತೊಟ್ಟು ಬಂದೊರ್ವ
ಲೋಲಾಕ್ಷಿ ಕಂಡಳಾ ನೃಪನ ೩೫

ಜ್ಯೋತಿಯಂದದ ರತ್ನಭೂಷಣ ಮೈತುಂಬಿ
ಜೋತೊಲೆದಾಡಲೊರ್ವಬಲೆ
ಜ್ಯೋತಿರ್ಲೋಕದ ಪೆಣ್ಣೊಯೆಂದೆನೆ ಬಂದು
ಭೂತಳ ಪತಿಯ ಸಾರಿದಳು ೩೬

ಸೇರಿಸಿ ಮುತ್ತು ಮಾಣಿಕದೊಟ್ಟು ಕರಿಯಳು
ಸಾರಿ ಕಂಡಳು ರವಿಗಳುಕಿ
ತಾರಗೆ ಮಿಂಬುಳು ಸಹವಾಗಿ ಮರೆಹೊಕ್ಕ
ಕಾರಿರುಳೆಂಗನೆಯಂತೆ ೩೭

ಗಂಡ ಪೆಂಡಿರು ತಾವು ನಿರ್ದೋಷರೆಂದೆಡೆ
ಗೊಂಡು ದಿಬ್ಬೆಗೆ ಕೈಯನಿಕ್ಕಿ
ಕೆಂಡವ ಪಿಡಿದು ತಂದೀವಂತೆ ಕೊಟ್ಟಳು
ಗಂಡಗೊರ್ವಳು ಮಾಣಿಕವನು ೩೮

ಮುತ್ತಿನ ಮಣಿಯನೊರ್ವಳು ತಂದು ನೃಪನ ಕೈ
ಗಿತ್ತು ಕೈಮುಗಿದಳಂತದನು
ಒತ್ತಿನೊಳಿದ್ದ ಪಂಡಿತೆ ಕಂಡು ನುಡಿದಳು
ಮತ್ತೊಂದು ಬಿನದದ ಮಾತ ೩೯

ವದನ ವದನ ಸೋಂಕಿ ಮುತ್ತ ಕೊಡುವುದು ಲೋ
ಕದೊಳುಂಟು ಭರತಚಕ್ರೇಶ
ಇದು ಚಿತ್ರ ಕರಯುಗ ಸೋಂಕಿ ಮುತ್ತೀವುದೆಂ
ದೆದೆಯೊಳಿನಿಸು ನಗಿಸಿದಳು ೪೦

ಎಲ್ಲರನೀಕ್ಷಿಸಿ ಕಿರಿದು ಹೊತ್ತಿನಮೇಲೆ
ಮೆಲ್ಲನೆ ಕೃಸನ್ನೆಯಿಂದ
ಕುಳ್ಳಿರವೇಳ್ದನು ಭೂಪಾಲನಾ ಹೆಂಗ
ಳೆಲ್ಲರು ಕುಳಿತರೊಪ್ಪದೊಳು ೪೧

ರಾಯ ನೋಡಿದನು ಗಾಯಕಿಯರ ಮೊಗವನಾ
ಗಾಯಕಿಯರು ನೋಟವರಿದು
ರಾಯೆ ಬಜಾವಣೆ ಗಮಕವೆಸೆಯೆ ಪಾಡ
ಲಾಯತವಾದರು ಕೂಡೆ ೪೨

ಆರೆದೆರೆವಬ್ಬದೊಳಿರುತಿದ್ದ ಮರಿದುಂಬಿ
ಸ್ವರಮಾಡಿ ಪೊರನುಡುವಂತೆ
ಗರಗರಿಕೆಯೊಳು ಕೆಂಬಾಯ್ದೆರೆದಾಳಾಪ
ವಿರಚನೆಮಾಡಿದರೊಸೆದು ೪೩

ನೋಟ ರಾಯನಮೇಲೆ ನೆನಹು ರಾಗದಮೇಲೆ
ನೀಟತಂತಿಯಮೇಲೆ ಬೆರಳು
ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸ
ಘಾಟಿಕಯಿಂದ ಪಾಡಿದರು ೪೪

ರಾಗಿಸಿದರು ಮೊದಲುದಯರಾಗವನನು
ರಾಗಿಸುವಂತೆ ಚಕ್ರೇಶ
ಆಗ ಮೇಲಮರೇಂದ್ರ ಸುಳಿದನಾದರೆ ಮುಂದೆ
ಹೋಗದಲ್ಲಿಯೆ ನಿಲುವಂತೆ ೪೫

ನಲಿದು ಸಂಗೀತ ಸಮುದ್ರವ ಹೊಕ್ಕು ಮು
ಕ್ಕುಳಿಸಿ ಮುತ್ತುಗುಳುವಂದದೊಳು
ಗಳತುಂಬಿ ಗಾನವ ತೆಗೆದು ಬಾಯ್ದೆರೆಯೊಳು
ಸುಳುವುಗಾಣಿಸಿದರೋಜೆಯೊಳು ೪೬

ಉಕ್ಕಂದವಾಗಿ ತುಂಬಿದ ಗಾನರಸವನು
ದಿಕ್ಕುದಿಕ್ಕಿಗೆ ಚಿಮ್ಮುವಂತೆ
ಚೊಕ್ಕ ಚೊಕ್ಕನೆ ತಾನಗಳ ತಂದು ಕೊರಳಲ್ಲಿ
ಜಕ್ಕುಲಿಸಿದರು ಜಾಣೆಯರು ೪೭

ಸಿಕ್ಕಿದ ನಲ್ಲಳು ಮುನಿದ ನಲ್ಲನ ಮುಂದೆ
ಬಿಕ್ಕಳಿಸುತ ನುಡಿವಂತೆ
ಲೆಕ್ಕ ಟವಣೆಯಾಗಿ ಕೊರಳು ಕುಣಿದು ದನಿ
ಯಿಕ್ಕುವ ರಾಗ ರಂಜಿಸಿತು ೪೮

ನಾಭಿಯಿಂದೇಳಿಸಿ ಯೆದೆಯೊಳೋಲಾಡಿಸಿ
ಶೋಭೆಯಮಾಡಿ ಕಂಠದೊಳು
ಈ ಭೂಪ ಮೆಚ್ಚ ರಾಗಿಸಿದಳು ಶ್ರೀದೇವಿ
ಶೋಭನವನು ಪಾಡುವಂತೆ ೪೯

ಉದಯಭಾಸ್ಕರ ವೀಟಿಕಾಧರಬಿಂಬೆಯು
ರುದಯಭಾಸ್ಕರನ ಕಾಲದೊಳು
ಉದಯರಾಗದೊಳರುಹನ ಪಾಡಿದರು ಜ್ಞಾನ
ಉದಯವಹಂತೆ ಕೇಳ್ವರಿಗೆ ೫೦

ನೆರೆವಾಗು ಗಾನಕೇಳೇಳೆಂದು ಮುಟ್ಟಿದ್ದ
ಸರಸತಿಯನು ಜಾಣೆ ತನ್ನ
ಬೆರಳಿಂದ ಮಿಡಿವಂತೆ ಭಾರಿದಂಡಿಗೆಗೊರ್ವ
ತರಳಾಕ್ಷಿ ಮಿಡಿದಳಂಗುಲಿಯ ೫೧

ನೆರೆದು ಸಿಪ್ರಿಯೊಳಿದ್ದ ನಲ್ಲನ ಮುದ್ದಿಸಿ
ಕರೆವುತಂಗುಲಿಯಿಂದ ಮಿಡಿದು
ಸರಸಕೆ ನಲ್ಲಳೇಳಿಸುವಂತೆ ಪಾಡುತ
ತರುಣಿ ಮಿಡಿದಳು ದಂಡಿಗೆಯ ೫೨

ನೀರಸವೀ ಸಂಸಾರವೆಂದು ನೆನೆದು ಪೇಸಿ
ಬೆರಳ ಮಿಡಿವಳೋ ಯೆಂಬಂತೆ
ನರನಾಥನೆಡೆಗೆ ಕಾಣಿಸಿತಾಕೆ ತಂತಿಯ
ಬೆರಳಿಂದ ಮಿಡಿದ ಬಿನ್ನಾಣ ೫೩

ಕಿನ್ನರಿ ಕಿನ್ನರಿ ವಿದ್ಯಾಧರಿ ದರಿ
ಯಿನ್ನವರ್ಗಾರಣೆಯೆನಲು
ಭಿನ್ನಾಭಿನ್ನ ಭಕ್ತಿಗಳ ಕಿನ್ನರಿಯಿಂದ
ಬಿನ್ನಾಣವಡೆದು ಪಾಡಿದರು ೫೪

ಹೊಂಗೊರಳದರೊಳು ಭರತರಾಜನ ಶಿಕ್ಷ
ಹೆಂಗಳವರು ಚೆಲುವೆಯರು
ಸಂಗೀತ ಮೋಹಿಸುತಿದ್ದಿತು ಕೇಳ್ವರಿ
ಗಿಂಗಡಲೊಳಗೆ ಹೊಕ್ಕಂತೆ ೫೫

ಅರುಹಂತದೇವನ ಸಿದ್ಧರ ಮುನಿಗಳ
ಸ್ಮರಿಸಿ ಚಕ್ರೇಶನ ಮನದ
ಸರಿಯನರಿದು ಭೋಗಯೋಗಗಳೆರಡನು
ಬೆರಸಿ ಹಾಡಿದರು ನೀರೆಯರು ೫೬

ಸುಳಿದ ಮಾತ್ರದೊಳು ಮಾನಿನಿಯರ ಹೃದಯದ
ಸುಳುಹ ಕಾಣ್ಬನು ಭಾವಿತಾತ್ಮ
ಸುಳಿಗುರುಳಿನ ಸೊಬಗೆಯರ ತನ್ನಯ್ಯ,ಸುತ್ತ
ಸುಳಿದಾಡಿಸುವನು ಸೋಲದೊಳು ೫೭

ನಸುನಗೆಯಿಂದ ಹೆಂಗಳ ನೋಡಿ ಜುಮ್ಮೆನ
ಲೊಸರಿಸುವನು ಕರಣಗಳ
ಬೆಸುಗಯಾದಂತಿದ್ದು ಬೇರುಪಟ್ಟಿಹನಾತ್ಮ
ರಸಿಕನೊಳಗ ಬಲ್ಲರಾರು ೫೮

ಸರಸವನಾಡನಾಡಿದನಾದರದರಲ್ಲಿ
ವಿರಸವ ಮೊಳೆದೋರಲೀಸ
ಪರವಶಗೊಳಿಸುವನಂಗನೆಯರ ತನ್ನ
ಪರಿಣತಿಯೆಚ್ಚರಾಗಿಹುದು ೫೯

ಮುನಿಯನು ಮುನಿಯಲೀಸನು ಸಟೆಗೊಂದಿಷ್ಟು
ಮುನಿದನಾದರೆ ಕೂಡೆ ತಿಳಿವಾ
ತನಿವಾಲ ಕಾಸಿದಂತಿಹುದಾತ್ಮರಸಿಕನ
ಅನುಭವ ಕುಲ ಸತಿಯರೊಳು ೬೦

ಒಬ್ಬಳ ಮೇಲೆ ತನಗೆ ಸೋಲವಿದ್ದರು
ದುಬ್ಬಗಾಣಿಕನದ ನುಡಿದು
ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹ
ನುಬ್ಬಸವಿಲ್ಲದಲ್ಲರೊಳು ೬೧

ಸಿಕ್ಕಿದಂತಿಹನು ಸಿಕ್ಕನು ರತಿಸುಖದಲ್ಲಿ
ಸೊಕ್ಕಿದಂತಿಹನಲ್ಲಿ ಸೊಕ್ಕಾ
ರಕ್ಕರಂತಿಹನದು ರಕ್ಕಲ್ಲ ನಿಜವ ಕ
ಣ್ಣಿಕ್ಕಿ ಕಂಡವನ ಲೀಲೆಯದು ೬೨

ಗೂಳಿ ನಡೆವ ಹಜ್ಜೆ ತೋರುವುದಲ್ಲದೆ
ಗಾಳಿಯ ಹೆಜ್ಜೆ ತೋರುವುದೆ
ಜಾಳುಗಳೊಳಗುಗಾಣಿಸುವುದಲ್ಲದೆ ತತ್ವ
ಶೀಲನೊಳಗ ಕಾಣ್ಬರಾರು ೬೩

ಇದು ನಮ್ಮ ಭರತ ಚಕ್ರೇಶನ ನಡೆಯಲ್ಲ
ದಿದರೊಳಿನ್ನರಸಿದರಿಲ್ಲ
ಅದು ತಾನು ಪೂರ್ವದೊಳಾತ್ಮಭಾವನೆಯ ಮಾ
ಡಿದ ಫಲವೆಂದು ಹಾಡಿದರು ೬೪

ಕೊಟ್ಟನವರ ಕರೆದುಡುಗೊರೆಗಳನೆದೆ
ದಟ್ಟಿ ಹಾಡಿದಿರಿ ಲೇಸೆಂದಾ
ಪಟ್ಟವರ್ಧನನ ಕಾಲ್ಗೆರಗಿ ಬೀಳ್ಕೊಂಡವ
ರೊಟ್ಟೈಜಯಾಗಿ ಕುಳಿತರು ೬೫

ಸರಸಿಜಗಳು ಬಳಸಿರೆ ನಟ್ಟನಡುವೆ ತೋ
ರ್ಪರಸಂಚೆಯಂತೆ ರಾಜೇಂದ್ರ
ಅರಸಿಯರೋಲಗದೊಳಗಿದ್ದನಿಲ್ಲಿಗು
ಪ್ಪರಿಗೆಯ ಸಂಧಿ ಸುಗಂಧಿ ೬೬

## ರಾಜಲಾವಣ್ಯ ಸಂಧಿ

ಪೆಂಡಿರೋಲಗದೊಳಗಭಿನವ ಕುಸುಮಕೋ
ದಂಡನಾ ನೃಪನೊಪ್ಪುವಾಗ
ಸಂಡಿತೆಯೊಡನೊರ್ವ ಗಾಯಕಿ ಕಿವಿಗಚ್ಚಿ
ಕೊಂಡು ನುಡಿದಳೊಂದು ಮಾತ ೧

ಗರಗರನೆದ್ದಳು ಪಂಡಿತೆ ಕೈಮುಗಿ
ದರಸ ಬಿನ್ನಹವೆಂದು ನಗುತ
ಸರಸಲೀಲೆಯದೊಂದು ಹೊಸಕಾವ್ಯವುಂಟವ
ಧರಿಸಬೇಕೆಂದಳುಬ್ಬಿನೊಳು ೨

ಆರು ಪೇಳಿದರದನಾರ ವರ್ಣನೆಯದು
ಆರು ಮತ್ತಾ ಹೊಸಕೃತಿಯ
ಆರಯ್ದು ತಿದ್ದಿದರೆಂದು ಕೇಳಿದನು ವಿ
ಚಾರಸಂಮುಖ ಕಾರ್ಯಕುಶಲ ೩

ಪರರುಸುರಿದುದಲ್ಲ ಪರರ ವರ್ಣನೆಯಲ್ಲ
ಪರರು ತಿದ್ದುವ ದಕ್ಷರಿಲ್ಲ
ಅರಸ ನಿನ್ನರಮನೆಯೊಳಗಾದ ಕೃತಿ ನಿನ್ನ
ಚರಿತ ನೀನೇ ತಿದ್ದಬೇಕು ೪

ಅರಮನೆಯೊಳಗಾದುದೆಂದರಾರೆಂದು ನಿ
ರ್ಧರಿಸಬಹುದು ಹೊಸ ಕೃತಿಯ
ವಿರಚಿಸಿದಾಕೆಯು ಹೆಸರ ಹೇಳೆಂದನು
ದರಹಾಸದಿಂದ ಭೂವರನು ೫

ಅರಗಿಳಿಯೊಡನೊಲ್ದು ಕುಸುಮಾಜಿಯರು ನಿನ್ನೆ
ಸರಸದಿ ನುಡಿದಾಡಲದನು
ನೆರಮನೆಯೊಳಗಿದ್ದ ಸುಮನಾಜಿಯರು ಕೇಳ್ದು
ಚರಿತೆ ಮಾಡಿದರವನೀಶ ೬

ಸುಮನಾಜಿಯುತ ನಿಳಯಕೆ ನಿನ್ನೆ ೯ನದಕೆಂ
ದಮರಾಜಿಯರು ನಡೆತಂದು
ಅಮೃತವಾಚಕನೆಂಬ ಗಿಳಿಯೊಡನಾಕ ಸಂ
ಕ್ರಮಿಸಿ ನುಡಿವುದ ಕೇಳಿದರು ೭

ಕುಸುಮಾಜಿ ನುಡಿದಂದ ಚೆನ್ನಾಯ್ತು ಸುನುನಾಜಿ
ಪೊಸಕೃತಿ ಮಾಡು ನೀನದನು
ಒಸೆದಾನು ಬರವೆನೆಂದಮರಾಜಿ ಬರೆದು ಪೇ
ಳಿಸಿದ ಕಾವ್ಯವ ಕೇಳು ರಾಯ ೮

ಆದರಾಗಲಿ ನೀನು ಕುಳ್ಳಿರು ಕಾವ್ಯವ
ಓದಿಸೆಂದನು ನರನಾಥ
ಓದಲುಜ್ಜುಗಿಸಿ ಪುಸ್ತಕವನಾಂತೊರ್ವ ತ
ಳೋದರಿ ಕುಳಿತಳದಿರೊಳು ೯

ದಿಗಿಲನೆದ್ದಳು ಕುಸುಮಾಜಿ ಕೈಮುಗಿದಿಂದು
ಹಗಲೊಂದು ನೋಂಪಿಯುಂಟೆನಗೆ
ಸುಗತನಿವಾಸಕೆ ಪೋಪೆನೆಂದಳು ರಾಯ
ನಗುತ ನುಡಿದನಾಕೆಗಿಂತು ೧೦

ಲೇಸಾಯ್ತು ಹೋಗು ಕಂಕಣ ಬೇಡವೇ ನೋಂಪಿ
ಗೀ ಸುವರ್ಣದ ಕಂಕಣವನು
ಕೋ ಸುಮ್ಮನೇಕೆ ಹೋದಪೆ ಪಿಡಿಯೆಂದು ವಿ
ಲಾಸದಿ ಕೈಯ ನೀಡಿದನು ೧೧

ನಿಜವೆಂದು ರಾಯನ ಕರದ ಕಂಕಣಕೆ ವಾ
ರಿಜಮುಖಿ ಕೈಯ ನೀಡಿದಳು
ಗಜ ತನ್ನ ಕರಿಣಿಯ ಕರಪಿಡಿವಂತೆ ಭೂ
ಭುಜ ಪಿಡಿದನು ಕೈಯನವಳ ೧೨

ಆರ ಚಾಳ್ಪಿಸುವೌ ನಿನಗೆ ನಾನರಿಯದಂ
ತಾರಿತ್ತರಿಂದು ನೋಂಪಿಯನು
ನಾರಿ ಕುಳ್ಳಿರು ಸಾಕು ನನ್ನಾಣೆಯೆಂದೊತ್ತಿ
ದಾ ರಾಯನೊಯ್ದನಾಕೆಯನು ೧೩

ನೀನರ್ತಿಗೆಂದರಗಿಳಿಯನೋದಿಸಲದು
ಮಾನಿನಿಯರಿಗರ್ತಿಯಾಯ್ತು
ನಾನದ ಕೇಳ್ದರ್ತಿ ಮಾಡಬೇಡವೆ ಸುಖ
ಗಾನದೊಳೀಕ್ಷ್ವರೆ ಮುಗ್ಧೆ ೧೪

ಬಲ್ಲೆನು ನೀನೆದ್ದ ಬಗೆಯ ನೀನೇಕಾಂತ
ದಲ್ಲಿ ಗಿಳಿಯೊಳಾಡಿದುದನು
ಎಲ್ಲರ ಮುಂದೆ ರಚ್ಚೆಗೆ ತಂದರೆಂದೆದ್ದೆ
ಯಲ್ಲವೆ ಕಮಲದಳಾಕ್ಷಿ ೧೫

ಅನ್ಯರಿಗೊಳಗುದೋರದೆ ನಡೆವುದು ಕುಲ
ಕನ್ಯಾಂಗ ಲಕ್ಷಣವಹುದು
ಅನ್ಯರಾರಿವರೆಲ್ಲರೆನ್ನವರಲ್ಲವೆ
ಶೂನ್ಯಮಧ್ಯಯೆ ಕುಳ್ಳಿರೆಂದಾ ೧೬

ಕಂಡೆಯ ಪಂಡಿತೆ ಕುಸುಮಾಜಿ ಕುಸುಮದ
ಚೆಂಡಿನಂತೆದ್ದ ಲಂಘನವ
ಕಂಡೆನಹುದು ಸ್ವಾಮಿ ಕಾಂತೆಯರೊಳಗನು
ಕಂಡವರಾರು ನಿನ್ನಂತೆ ೧೭

ಲಜ್ಜೆಯಾದುದು ದೇವ ತನ್ನೆದೆಯಾಟದ
ಹಜ್ಜೆ ತೋರಿತು ಪರರ್ಗೆಂದು
ಸಜ್ಜನಸತಿಯರ ಗುಣವದು ನೀನಾಕೆ
ಗುಜ್ಜುಗಿಸಿದ ಬೋಧೆಯಾಯ್ತು ೧೮

ಬೆಡಗಾಯ್ತು ದೇವರು ಕುಸುಮಾಜಿಯರ ಹಸ್ತ
ವಿಡಿದು ನಿಲ್ಲಿಸಿದುದಿನ್ನಾಕೆ
ಒಡೆಯ ನಿನ್ನೊತ್ತಿನೊಳಿರಲು ನಾಣ್ಚುವಳು ಕ
ನ್ನೊಡಹುಟ್ಟಿದವರೊತ್ತಿಲಿರಲಿ ೧೯

ಅಹುದೆಯಾದರೆ ಹೋಗು ಕುಸುಮಾಜಿ ನೀನೆಲ್ಲ
ಮಹಿಳೆಯರೊಡನೆಂದಿನಂತೆ
ಸಹಜದಿ ಕುಳ್ಳಿರೆಂದರಸ ಬೀಳ್ಕೊಡಲಾಕೆ
ವಹಿಲದಿಂದೈದಿ ಕುಳಿತಳು ೨೦

ಇನ್ನೋದು ಕಾವ್ಯವನೆಂದನಾ ಪಾಡುವ
ಕನ್ನೆಯಾ ಹೊತ್ತಗೆವಿಡಿದು
ಕನ್ನೆಗೋಗಿಲೆ ತಾನೆ ಬಾಯ್ದೆರೆದುದೊಯೆಂಬ
ಬಿನ್ನಣವೆಸೆಯಲೋದಿದಳು ೨೧

ಪಡಲಿಗೆಗಿಟ್ಟು ಹೊತ್ತಗೆಯ ದಾರವನೊತ್ತಿ
ಸಡಿಲಿಸಿ ಕಿರಿದೋಲೆಗಳನು
ಎಡಗೈಯೊಳಾಂತೋದಿದಳು ಬಲಗೈಯಿಂದ
ಮಿಡುವುತ ಭಾರಿ ದಂಡಿಗೆಯ ೨೨

ಹೂವ ಸೋಕದೆ ಗಗನದೊಳೊಪ್ಪುವೆಮ್ಮಯ
ಮಾವಾಜಿಯಡಿಗಳ ನೆನೆದು
ಭಾವಾಜಿಗೆಮ್ಮಕ್ಕನಮರಾಜಿಯಾಜ್ಞೆಯಿಂ
ದೋವಿ ಪೇಳುವೆನೊಂದು ಕೃತಿಯ ೨೩

ಶೃಂಗಾರ ಹಾರನ ಸೊಬಗನ ನುಡಿಯ ಬೆ
ಡಂಗನ ಗಿಳಿಯೊಡನೆನ್ನ
ತಂಗಿಯೊಲಿದು ಕುಸುಮಾಜಿ ಬಣ್ಣಿಸಿದುದ
ಸಂಗತಿಮಾಡಿ ಪೇಳುವೆನು ೨೪

ಅಮೃತವಾಚಕ ಕೇಳು ಭರತ ಚಕ್ರೇಶ್ವರ
ರಮಣಿಯರೆಲ್ಲರ ಮನವ
ಭ್ರಮೆಗೊಳಿಸುವ ರೂಪನಾವ ನೋಂಪಿಯ ಮುನ್ನ
ಕ್ರಮದಲ್ಲಿ ನೋಂತು ಪಡೆದನೊ ೨೫

ರೂಪ ಪಡೆಯಲಿ ರೂಪಿಗೆ ತಕ್ಕ ಶೃಂಗಾರ
ಚಾಪಲ ವಿನಯ ವಿಡಾಯ
ಭೂಪತಿಗೇತರಿಂದಾದವಿಂತಿವರ ಸ್ವ
ರೂಪ ಹೇಳೆನಗರಗಿಳಿಯೆ ೨೬

ಅಂಬರದೊಳಗಿದ್ದ ಸೂರ್ಯನೊಬ್ಬನು ಜಲ
ತುಂಬಿದ ಹಲವು ಕುಂಭದೊಳು
ಬಿಂಬಿಸುವಂತೆಲ್ಲ ಪೆಂಗಳೆದೆಯೊಳೀತ
ನಿಂಬುಗೊಂಡಿಹ [illegible] ೨೭

ಸಾರತಾಪಸನಿದ್ದ ವನದಲ್ಲಿ ಹುಲಿ ಹುಲ್ಲೆ
ಸ್ವೈರವಿಲ್ಲದೆ ಸುಳಿವಂತೆ
ನಾರಿಯರೆಲ್ಲರು ಸವತಿಮತ್ಸರವಿಲ್ಲ
ದೀ ರಾಯಗೊಲಿದಂದವೇನು ೨೮

ತವರೂರ ಮರೆಯಿಸಿ ನಿದ್ರೆಯ ತೊರೆಯಿಸಿ
ಸವಿಗಳನರಿಯಿಸಿ ನಮ್ಮ
ದಿವರಾತ್ರಿಯೆನ್ನದೆ ಸುಖಸೊಳೋಲಾಡಿಸು
ವವಗಡ ಯಾತರಿಂದಾಯ್ತು ೨೯

ಧರೆಯೊಳೊಬ್ಬರನೊಮ್ಮೆ ಕಂಡು ಮತ್ತೊಮ್ಮೆ ಕಂ
ಡರೆ ಮೊದಲನಿತೊಪ್ಪವಿಲ್ಲ
ಭರತೇಶ ದಿನ ದಿನಕೆಮ್ಮ ನೋಟಕೆ ಹೊಸ
ಪುರುಷನಾಗಿಹ ಪರಿಯೇನು ೩೦

ನಗೆಯ ಚೆಲ್ವಿಕೆಯು ಮೋಹನಕಾಂತಿ ರಸವನು
ಮೊಗವೆತ್ತಲಲೆದುದತ್ತತ್ತ
ಮೊಗೆದು ಮೊಗೆದು ಚೆಲ್ಲುವಂತೆ ರಾಯನ ಮುದ್ದು
ಮೊಗವೊಪ್ಪುತಿಹುದರಗಿಳಿಯೆ ೩೧

ಪೆರೆನೊಸಲಹುದಾದರಾ ಪೆರೆಯೊಳಗಣ
ಕರೆಯಸ್ತವ್ಯಸ್ತವೆಂದದನು
ಜರಿವಂತೆ ಕಸ್ತೂರಿ ತಿಲಕವೊಪ್ಪಿಹೊಳೆವೆ
ವೆರೆಯನ ಪಣೆ ಗೆಲ್ದುದೆನ್ನಾ ೩೨

ಕಬ್ಬುವಿಲ್ಲಿಗೆ ಕಣೆದೊಟ್ಟು ಹೆಂಗಳನೆಸು
ವುಬ್ಬಸವೇಕೆಂದು ಕರೆದು
ಕಬ್ಬುವಿಲ್ಲಗೆ ಹೇಳು ಭರತರಾಜನ ನಿಡು
ಹುಬ್ಬನೋಲೈಸೆಂದು ಗಿಳಿಯೆ ೩೩

ತಿಂಗಳ ಬೆಳಗು ಸೋಂಕಲು ಕೂಡೆ ಶಶಿಕಾಂತ
ರಂಗಿಸುವಂತೆಮ್ಮ ನೃಪನ
ಕಂಗಳ ಪ್ರಭೆ ತಾಗಲೊಡನೆ ಕಾಂತೆಯರಂತ
ರಂಗವೊಸರುವುದು ಪಕ್ಕಿ ೩೪

ಕಂಪಿನುಸಿರಿಗೆ ಕವಿದ ತುಂಬಿಗಳ ಸುಖ
ದಿಂಪಾದ ನೃಪನ ನಾಸಿಕಕೆ
ಕಂಪಿಗೆ ಸೋತೆರಗಿದ ಭೃಂಗಗಳ ಕೊಳ್ವ
ಸಂಪಗೆ ಪಾಟಿಯೆ ಕೀರಾ ೩೫

ಮಿರುಗುವ ಕನ್ನಡಿಯೊಳು ಹರಹಿದ ಸಣ್ಣ
ಹರುವೆಯ ಬಿತ್ತುಗಳಂತೆ
ತುರುಗಿದ ಬವರಿಯಿಂದೆಸೆವ ಗಲ್ಲಗಳೊಂದು
ಮೆರಹು ಸಾಲದೆ ಚಕ್ರಧರನ ೩೬

ಚಿತ್ರದಿಚ್ಚೆಯ ಕರ್ಣದೊಳು ಸಂಗಳೊರೆವಾಗ
ವತ್ತಿದ ಬೆಳುನಗೆಯಂತೆ
ಚಿತ್ರಜರೂಪನ ಕಿವಿಗಳೊಸೆವುವು
ಮುತ್ತಿನ ಚೌಕುಳಿ ಗಿಳಿಯೆ ೩೭

ಮಕರಂದ ತುಂಬಿದ ತಾವರೆ ರವಿಯುದ
ಯಕೆ ಮೆಲ್ಲನರೆವೆರೆಸಂತೆ
ಶುಕರಾಜ ನೊಗಯಿಸುವುದತ್ತಿ ಕರ್ಪೂರವೀ
ಟಿಕೆಯ ಕೆಂಬಾಯ್ದೆರೆ ದೊರೆಯ ೩೮

ಮುತ್ತಿನಮಣಿಗಲತೆಗೆ ಮೂಡಿ ಕುಂಬಳ
ಬಿತ್ತಿನಂದದಿ ಕೊರೆಕೊರದು
ಕೆತ್ತಿಸಿದಂತೆಸೆವವನ ಕೆಂಬಲ್ಗಳ
ಬಿತ್ತರವಾದ ಸೋಲಿಸದು ೩೯

ಮರಿಗಿಳಿ ಕೇಳೆಮ್ಮ ನೃಪನೊಮ್ಮೆ ನುಡಿಗೆ ಬಾ
ಯ್ದೆರೆಯೆ ಚೆಂದುಟಿ ಜಿಹ್ವೆಯಾಟ
ನೆರೆಕಲ್ಪವೃಕ್ಷದ ತಳಿರು ನೇರಿಲಹಣ್ಣ
ಮರೆಯೊಳಿಹಂತಪ ಚಿತ್ರ ೪೦

ಬಿಂಗದ ಕುಪ್ಪಿಗೆಗಿಳಿವ ಕುಂಕುಮದ ನಿ
ರಂಗದಿ ತಾಂಬೂಲರಸವ
ತುಂಗುವಾಗಿಧಿಗೆ ತೋರುವುದರಸನ
ನುಂಗೊರಳೆನ ಬಣ್ಣ ವೆಸ್ಸು ೪೧

ಮೋಹಿನಿಯರ ಮೋಹಪಾಶ ಹೊಂಬಣ್ಣದ
ರಾಹುಗಳಿನೆ ವೈರಿಶಶಿಗೆ
ರೂಹಿಸಿ ಶೃಂಗಾರ ವೀರದೊಳಾಜಾನು
ಬಾಹುಗಳೆಸೆದುವಾ ನೃಪನ ೪೨

ಅರಲಂಬಗರಸನಿಮ್ಮಡಿ ಚೆಲ್ವನವನ್ನೈದು
ಸರಲನಾಂತೊಡೆ ಹತ್ತು ಸರಲಾ
ದೊರೆ ಪಿಡಿವುದು ಮೋದಿಯಿನೆ ಕರಗಳ ಹತ್ತು
ಬೆರಳೆಸದುವು ಸರಲಗೊಸು ೪೩

ಕರತಲಗಳ ಕೆಂಪು ನಖಗಳ ಥಾಳ ವ್ಯಂ
ಗುರಗಳ ರಶ್ಮಿ ಬಿಂಬಿಸಲು
ಬೆರಕೆ ವರ್ಣದ ತಾವರೆಯ ನಾಳಗಳಂತೆ
ಗೊರೆಯ ಭುಜಗಳೊಪ್ಪುತಿಹವು ೪೪

ಭೂವರನಿಕ್ಕಿದ ಹಾರಪದಕದ ರ
ತ್ನಾವಳಿ ನೆರೆದ ಪೇರುರವು
ಲಾವಣ್ಯಜಲಧಿಯ ನಡುವಿದ್ದ ರತ್ನದ
ದೀವಿಯೊ ಯೆನಲೊಪ್ಪುತಿಹುದು ೪೫

ಮರೆಯೇಕೆ ಕೇಳೊಮ್ಮೆ ನೃಪನ ತೆಳ್ವಸಿರಿಣ
ಕಿರುರೋಮರಾಜಿಯ ಕಂಡು
ಇರುಹಿನ ಸಾಲೆಂದು ತೊಡೆಪೆನದಕೆ ರಾಯ
ನುರೆ ನಕ್ಕ ನಾನು ನಾಣ್ಚಿದೆನು ೪೬

ನೋಟ ಬೇಟದ ನಗೆ ನುಡಿ ಸಿಂಗರದ ಸ
ಘಾಟಿಯೊಳಗೆಮ್ಮ ನೃಪಗೆ
ಸಾಟಿಯೆ ಅಮೃತವಾಚಕ ಹೇಳು ಹೇಳ್ನಿಮ್ಮ
ಮೋಟುಗಬ್ಬಿನ ಬಿಲ್ಲಿನವನು ೪೭

ಅಂಗಜನಲಗುದೋರುವನೆಮ್ಮ ರಾಯ ತ
ನ್ನಂಗಕಾಂತಿಯ ತೋರಿ ಗೆಲುವ
ಇಂಗಿತಕುಶಲನಾವನೋ ನಿನ್ನರಸೋ ವಿ
ಹಂಗ ಹೇಳೆನಗದ ನೀನು ೪೮

ಅಂಗಸೌಂದರದಿಂದ ಹೆಂಗಳ ಗೆಲಬೇಕು
ಸಂಗರದೊಳು ಖಡ್ಗಬೇಕು
ಹೆಂಗಳ ಸನುರಕೆ ಖಡ್ಗವೆ ಹೂವಿನ
ಭೃಂಗಾರಕಗ್ನಿಯು ಕಾಹೆ ೪೯

ಮೈಯೊಳು ಚುಂಬನಕಧರವೆ ಸಿಹಿಯೆಂಬ
ಹುಯ್ಯಲಾತಿರಲಿ ಕೇಳವನ
ವೈಯೆಲ್ಲ ಸಿಹಿಯೆಂದರೇನ ಹೇಳಲಿ ನನ್ನ
ಬೈಯದಿರೆಲೆ ಪಕ್ಷಿವರ್ಣ ೫೦

ಪೃಥಿವೀಪತಿಯು ಕಂಡು ಹೆಬ್ಬೆಟ್ಟಗೊಂಡಿಂತು
ಕಥಿಸಿದಳೆನದಿರು ಖಗವೆ
ಪ್ರಥಮ ತೀರ್ಥೇಶನ ಹಿರಿಯಕುಮಾರನ
ಕಥನವ ಪೇಳ್ವಳು ನಾನೆ ೫೧

ಆವನ ಗುಣವನವನೊಪ್ಪವ ಕಡೆಗಂಡು
ವಿವರಿಸಲೆನ್ನಳವಲ್ಲ
ಇವು ಸೂಚನಾರ್ಥ ವರ್ಣನೆಗಳೆಂದರಿದು ನೀ
ನವಧರಿಸಮೃತ ವಾಚಾಂಕ ೫೨

ನಿನ್ನೊಳಗಿರಲಿ ನಾ ನುಡಿದ ನುಡಿಗಳಿವ
ನನ್ನಿಗರಿಗೆ ಹೇಳಬೇಡ
ನನ್ನವನೆಂದು ನಿನ್ನೊಡನೆ ಹೇಳಿದೆನಲ್ಲ
ದಿನ್ನೊಬ್ಬರಿಗೆ ಹೇಳ್ವಳಲ್ಲ ೫೩

ಅಹುದಲ್ಲವೆನ್ನದೆ ಸುಮ್ಮನಿರ್ದಪೆಯೆಲೆ
ವಿಹಗ ಪೇಳ್ನಿನ್ನಯ ಮನಕೆ
ಬಹವೊ ಬಾರವೊ ನನ್ನ ನುಡಿಗಳೆಂದಸಿಯಳಾ
ಗ್ರಹಿಸಿ ಕೇಳಿದಳದರೊಡನೆ ೫೪

ಆಕ್ಕ ನಿನ್ನೀ ನುಡಿ ನನ್ನ ಚಿತ್ತಕೆ ಬಾರ
ದಕ್ಕಟ ಬಂದರುಸುರೆನೆ
ಪಕ್ಕಿಗೇತಕೆ ಬಹುದೀ ಚಾತ್ರ್ಯವೆಂದುದು
ಚೊಕ್ಕಮಾತಿನ ರಾಜಕೀರ ೫೫

ಆದರಿಂದ ಸುಮ್ಮನಾಲಿಸುತಿದ್ದೆನಕ್ಕ ನೀ
ನೊದವಿಪೇಳಿಂದ ಮೇಲೆನ್ನ
ಎದೆಯರಿಂದನಿತ ಸೊಲ್ಲಿಪೆನು ಕೇಳಿಂದುದಿಂ
ತಿದು ರಾಜಲಾವಣ್ಯಸಂಧಿ ೫೬

# ಅರಗಿಳಿಯಾಳಾಪ ಸಂಧಿ

ಕೇಳಕ್ಕ ಕುಸುಮಾಜಿ ನಿನ್ನ ಮುಂದಿಂತೆಂದು
ಹೇಳುವ ದಕ್ಷನಾನಲ್ಲ
ಹೇಳೆಂದು ನೀನೆಂದಮೇಲೆ ನಿನ್ನಾಜ್ಞೆಯ
ತಾಳಿ ನುಡಿವೆನು ಬಲ್ಲನಿತ ೧

ಅಕ್ಕ ನೀನಾಡಿದ ನುಡಿಯೆಲ್ಲ ನೃಪತಿಗೆ
ತಕ್ಕವಲ್ಲದೆ ಟೌಳಿಯುಂಟೆ
ಮುಕ್ಕೊಡೆಯೊಡೆಯನ ಹಿರಿಯ ಪುತ್ರಗೆ ದಶ
ದಿಕ್ಕಿನೊಳೆಣೆಯಹರಾರು ೨

ಆವನಿಗೆ ರಾಜನಾದವನಿಗೆ ಸಾಟಿಯಿ
ಲ್ಲವನಿಗೆ ರಾಣಿಯರಾದ
ನಿವಗೆಣೆಯಿಲ್ಲ ನಿಮ್ಮೊಡನಾಡಿ ಪಾಡಿದ
ನವಗಾರು ಸರಿಯೆಂದುದೊಡನೆ ೩

ಭೂವಳಯಾಂಬಿಕೆಯತ್ತೆ ಯಶಸ್ವತಿ
ದೇವಿ ಪಡೆದಳಾ ನೃಪನ
ನೀವೆಲ್ಲರಾವ ನೋಂಪಿಯ ಫಲದಿಂದ ಮಾ
ದೇವಿಯರಾದಿರೆಂದರಿಯೆ ೪

ರಾಜಪುರುಷನೊಳು ರಾಜೀವ ವದನೆದ
ರಾಜಾಂಗನೆಯರೊಪ್ಪಿರಲು
ಜಾಜಿಯ ಲತೆಗಳು ವನದೊಳಶೋಕಯ
ಭೂಜವನಪ್ಪಿದಂತಿಹುದು ೫

ಪುರುಷರೊಳವ ರತ್ನ ಸ್ತ್ರೀಯರೊಳಗೆ ನೀವು
ಸುರುಚಿರ ರತ್ನಗಳಕ್ಕ
ಬೆರಸಿದ ಬಗೆಯಿದು ರತ್ನ ರತ್ನವ ಕೂಡಿ
ಹರ ಮಾಡಿದಂತೆ ತೋರುತಿದೆ ೬

ಪತಿ ಹೊಲ್ಲ ಸತಿ ಲೇಸು ಸತಿ ಹೊಲ್ಲ ಪತಿ ಲೇಸೆಂ
ಬತಿ ವಿಕೃತಿಗಳುಂಟು ಪರರ್ಗೆ
ಪತಿ ಲೇಸು ಸತಿಯರು ಲೇಸು ಲೇಸೆಂಬಂತೆ
ನುತಿವೆತ್ತರಾರು ನಿಮ್ಮಂತೆ ೭

ಜಾಣೆ ಜಾಣನು ಕೂಡಲದು ತಂತಿಗೂಡಿದ
ವೀಣೆಯ ನುಡಿಸಿದಂತಿಹುದು
ಜಾಣೆ ಹೆಡ್ಡನು ಕೂಡಲಿಹುದದು ವೀಣೆಗೆ
ನೇಣು ಬಿಗಿದು ಮಿಡಿದಂತೆ ೮

ಸಮರೂಪ ಸಮಪ್ರಾಯ ಸಮಗುಣಗಣ ನಿಮ್ಮ
ರಮಣಗು ನಿಮಗು ಚೆನ್ನಾಗಿ
ಸಮನಿಸಿತದರಿಂದ ನಿಮಗನ್ಯೋನ್ಯ ಸಂ
ಭ್ರಮ ಮೋಹ ದೊರೆಕೊಂಡುದಕ್ಕ ೯

ಮನವೆಚ್ಚಿದೆಡೆಯಲ್ಲಿ ತನುಮೆಚ್ಚುವುದು ನುಡಿ
ಯನುಕೂಲಪಹುದದರಿಂದ
ಮನದಿಚ್ಛೆಯರಸನ ಪೊಗಳಿದೆ ಲೇಸು ಸ
ಜ್ಜನಸತಿಯರ ತಲೆವಣಿಯೆ ೧೦

ನೀನೇನ ನುಡಿವೆ ನಿನ್ನಿನಿಯನ ಲಾಲನೆ
ತಾನೇ ನುಡಿಸಿತಕ್ಕ ನಿನ್ನ
ಆನಂದರಸವ ತನ್ನೆದೆಗಿತ್ತ ಪುರುಷನ
ಮಾನಿನಿ ಬಣ್ಣಿಸದಿಹಳೆ ೧೧

ಕೇಳುತಿದ್ದಳು ಕುಸುಮಾಜಿಯಾ ಗಿಳಿಯ ವಾ
ಗ್ಜಾಲದ ಮರ್ಮಕಲಗಳಾ
ಈ ಲೇಸು ಹೊಸತಿದು ಗಿಳಿಯಲ್ಲವೆಂದಾಗ
ಳಾಲೋಚನೆಯ ಮಾಡಿದಳು ೧೨

ಕಲಿಸಿದಷ್ಟನೆ ನುಡಿವುದು ಪಕ್ಕಿಗುಳ್ಳುದೀ
ಗಿಳಿ ಹೊಸ ಕಲೆಯ ತಾನೆನಗೆ
ಕಲಿಸುತಿದ್ದಪುದಿದು ಗಿಳಿಯಲ್ಲವೆಂದು ತ
ನ್ನೊಳಗೆ ತಾ ನೆನೆದಳಾ ಜಾಣೆ ೧೩

ವ್ಯಂತರನಾಗಲಿ ಸುರನಾಗಲಿದರ ದೇ
ಹಾಂತರಾಳದೊಳಡಗೊಂಡು
ಇಂತು ನುಡಿವನಾಗಬೇಕೆಂದು ನೆನೆದಳಾ
ಕಾಂತೆ ತಾನೇನು ಕೋವಿದೆಯೊ ೧೪

ಅವರೊಳು ಪುರುಷರ ನುಡಿಯಲ್ಲವೀ ನುಡಿ
ಯುವತಿಯ ನುಡಿಯದರಿಂದ
ಇವಳಾವಳೆಂಬುದನರಿವೆ ನಾನೆಂದಾಕೆ
ಸವಿನುಡಿಯಿಂದ ಕೇಳಿದಳು ೧೫

ಪಕ್ಕಿ ನಿನ್ನೀ ನುಡಿ ಸತ್ಯ ನಿನ್ನಯ ವೇಷ
ರಕ್ಕಾಗಿ ನನಗೆ ತೋರುತಿದೆ
ಚಿಕ್ಕ ವೇಷವ ಬಿಟ್ಟು ದೊಡ್ಡ ವೇಷವ ತೋರಿ
ಚಕ್ಕನೆನ್ನೊಡನೆ ಮಾತಾಡು ೧೬

ಚದುರರ ಕೂಡತಿ ಚಾತುರ್ಯ ಸಲ್ಲದು
ಸುದತಿಯಲ್ಲವೆ ನೀನು ನಿನ್ನ
ಸದಮಲಾಕಾರವ ತೋರೆಂದು ನುಡಿದಳಾ
ಚದುರರ ದೇವನರ್ಧಾಂಗಿ ೧೭

ಭೋಂಕನೆ ಗಿಳಿಯ ಕೆಲದೊಳನುಪಮರತ್ನ
ಸಂಕುಲಭೂಷಣವೆಸೆಯೆ
ಕುಂಕುಮವರ್ಣದ ಕೋರಿಜವ್ವನದೊರ್ವ
ಪಂಕಜಾನನೆ ನಿಂದಳಾಗ ೧೮

ಅಬಲೆ ನೀನಾರಿಲ್ಲಿಗೇತಕೆ ಬಂದೆಯೆಂ
ದಬುಜಾಕ್ಷಿ ಬೆಸಗೊಂಡಳವಳ
ಸೊಬಗೆ ಕೇಳಾನು ವ್ಯಂತರಕನ್ನೆ ಗಿರಿವನ
ಶಿಬಿರದೊಳಿಹೆನೆಂದಳಾಕೆ ೧೯

ಲೀಲಾರ್ಥ ಗಗನದೊಳಗೆ ಹೋಗುತಿರ್ದೆನು
ಬಾಲೆ ನೀನೀ ಗಿಳಿಯೊಡನೆ
ಸೊಲ್ಲು ನುಡಿವುತಿರೆ ಬಂದೆನಾ ನುಡಿಗಳ
ಕೇಳಲೆನಗೆ ಪ್ರೇಮವಾಗಿ ೨೦

ಕನ್ನಡಹಕ್ಕಿಯಂಗವ ಹೊಕ್ಕು ನಿಜರೂಪ
ನಿನ್ನಲ್ಲಿ ಕುಸುಮರಾಜಿ ಮಾಜಿ
ನಿನ್ನೊಡನುಸುರುತಿದ್ದೆನು ನೀನು ತಿಳಿದುದು
ಚೆನ್ನಾಯ್ತು ಜಾಣನರ್ಧಾಂಗಿ ೨೧

ರೂಪು ಯೌವನ ಜಾಣ್ಮೆ ಸಿರಿಯ ಪಡೆಯಬಹು
ದೀ ಪತಿಭಕ್ತಿಸಂಪದವ
ಆ ಪುರುಷೋತ್ತಮನರ್ಧಾಂಗಿಯಾದಿರ ನೀ
ವೇ ಪಡೆದಿರಿ ಪರರ್ಗುಂಟೆ ೨೨

ಆ ರಾಯ ನವಗೆರವಲ್ಲವೆಂತೆನೆ ಪರ
ನಾರಿಸಹೋದರನೆಂಬ
ವಾರತೆಯುಂಟದರಿಂದೆಮಗಣ್ಣನು
ನಾರಿ ಕೇಳೆಂದಳಾ ದಿವಿಜೆ ೨೩

ಅಕ್ಕ ಕೇಳೆಂದಿಷ್ಟು ಹೊತ್ತು ಗಿಳಿಯ ಮೈಯ
ಹೊಕ್ಕು ಪೇಳ್ದುದು ಗಿಳಿಗಿರಲಿ
ಚೊಕ್ಕ ನೀನತ್ತಿಗೆ ನಾದುನಿಯೆಂದೆಂಬ
ಲೆಕ್ಕವಿರಲಿ ನಿನಗೆನಗೆ ೨೪

ಅತ್ತಿಗೆ ಕೇಳು ನನ್ನಣ್ಣಾಜಿಯೊಳು ನೀನು
ಚಿತ್ತವಿತ್ತುದ ಕಂಡು ನನ್ನ
ಚಿತ್ತ ಮೆಚ್ಚಿತು ಮೆಚ್ಚಿ ನಿನಗೆ ನಾನೀವುದೇ
ನುತ್ತಮಗುಣಭೂಷಣಾಂಗಿ ೨೫

ಉಡಿಗೆ ತೊಡಿಗೆಯೊಂದ ಕೊಡುವೆನಿಡುವೆನೆಂಬ
ನುಡಿ ಸಾಕು ನಿನಗೊಂದು ಚಿಂತೆ
ಎಡೆಗೊಂಡ ವೇಳೆಯೊಳೆನ್ನ ನೆನೆವುದೆಂದು
ನುಡಿದಳು ಬಯಲಾದಳೊಡನೆ ೨೬

ಬೆಕ್ಕಸಬಟ್ಟಳು ಕುಸುಮರಾಜಿ ಕೆಲಬಲ
ದಿಕ್ಕ ನೋಡಿದಳು ಮತ್ತಿನಿಸು
ನಕ್ಕಳು ಜಿನಸಿದ್ಧಯೆಂದಳಷ್ಟರೊಳು ಹೆ
ಮ್ಮಕ್ಕಳಾಟಕೆ ಬಂದರೊಸೆದು ೨೭

ಬಂದಕ್ಕ ತಂಗಿಯರಿಗೆ ವಿನಯವ ಮಾಡಿ
    ಹಿಂದಾದ ಚೋದ್ಯವಾರ್ತೆಯನು
ಒಂದು ನುಡಿಯದೆ ಕುಸುಮಾಜಿ ಮಾಜಿಕೊಂ
    ಡೆಂದಿನಂತಿದ್ದಳಾಟವೊಳು ೨೮

ತಪ್ಪುಳ್ಳರೀ ಕೃತಿಯೊಳು ತಪ್ಪ ತಿದ್ದುವು
    ದೊಪ್ಪವಾದರೆ ಕೇಳ್ವುದೆಮಗೆ
ತಪ್ಪಿಲ್ಲ ತಾಗಿಲ್ಲ ಜಿನ ಶರಣೇ ಕಾವ್ಯ
    ವೊಪ್ಪುತಿರಲಿ ಸರ್ವಕಾಲ ೨೯

ಎಂದು ನಾಂದಿಯನೋದಿ ಪುುಗಿದು ಗಾಯಕಿ ನಲ
    ವಿಂದ ಹೊತ್ತಗೆಯಕಟ್ಟಿದಳು
ಮಂದಸ್ಮಿತಮುಖನಾಗಿ ರಾಜೇಂದ್ರನಾ
    ನಂದಿಸುತಿದ್ದನೇನೆಂಬೆ ೩೦

## ಮನ್ನಣ ಸಂಧಿ

ತನ್ನೆದೆಯೊಳಗೆ ತಾನಾ ಕಾವ್ಯರಚನೆಯ
ಮುನ್ನ ಭಾವಿಸಿ ನೋಡಿ ಮೆಚ್ಚಿ
ಚೆನ್ನಾದುದೀ ಕೃತಿಯಿದಕೆ ವಿಚಾರವುಂ
ಟೆನ್ನೆಂದು ನುಡಿದನಾ ರಾಯ ೧

ಇದು ಸುಮನಾಜಿಯ ಕವಿತೆಯಲ್ಲಮರಾಜಿ
ಪದೆದು ಪೇಳಿದ ಕೃತಿಯೆಂದ
ಅದ ಕೇಳುತಿರ್ಪರು ನಕ್ಕರೊಬ್ಬೊಬ್ಬರ
ವದನವ ನೋಡಿ ತಮ್ಮೊಳಗೆ ೨

ಆಗಳೆ ಪೇಳ್ದೆ ನಾನಕ್ಕ ನೀನೆನ್ನ ಮೇ
ಲೀ ಗುಟ್ಟು ಹೊರಿಸದಿರೆಂದು
ಈಗಳಾದುದೆಯೆಂದು ಸುಮನಾಜಿ ನಗುತೊಡ
ನಾಗಹುದಹುದೆಂದಳುಬ್ಬಿ ೩

ಜಾಣರನಾರು ಚಾಳಿಸಬಹುದದು ತಾನ
ಕಾಣಿಸಿತಲ್ಲ ಕಣ್ಣಾರೆ
ಹೂಣಿದ ಹೊರೆ ಜಾರಿದಂತಾದುದೆನಗೆಂದು
ಜಾಣೆ ನುಡಿದಳರ್ತಿಯಿಂದ ೪

ಮೊದಲರ್ಧವಮಳ ಕವಿತ್ವವಾ ಕಡೆಯರ್ಧ
ವದು ನಿನ್ನ ಸುಕವಿತ್ವವೆಂದ
ಅದು ತಪ್ಪದಹುದಹುದೆಂದಳಂದಮರಾಜಿ
ಮುದದಿಂದ ನಗುತ ರಾಯನೊಳು ೫

ಎಂತು ಜಯಿಸಬಹುದಕ್ಕ ನೋಡೆರಸನೆ
ಮ್ಮಂತರಂಗದ ಸುಕ್ಕು ಸುಳುಹ
ಅಂತರಿಸದೆ ಹೇಳುತಿದ್ದಪನೆಂದೆಲ್ಲ
ಕಾಂತೆಯರೊಳಗ ನಲಿದರು ೬

ಲೇಸಾದುದೀ ಕೃತಿ ನಿಮ್ಮ ಕವಿತ್ವದ
ಭ್ಯಾಸವೊಳ್ಳಿತು ಸತಿಯರಿರ
ಈ ಸುಕಥೆಗೆ ಮೆಚ್ಚಿದೆನು ಬೇಡಿ ನೀವೆಂದು
ದೀ ಸಮಯದೊಳೀಯಬ ಕು ೭

ಭೂಷಣಾವಳಿಯಿೀಗ ಕಡವೆಯಿಲ್ಲಿರುಗೆ ವಿ
ಶೇಷವಾಗಿದ್ದ ವಿನ್ನವರ
ಘೋಷಣೆಯಂತಿರಲೆಂದಾತ್ಮಸತಿಗೆ ಸಂ
ತೋಷವ ತೋರಿ ನುಡಿದನು ೮

ಮುನ್ನುಳ್ಳ ಭೂಷಣವಿರಲಡಕೇನೀಗ
ನನ್ನ ಭೂಷಣವನಿತ್ತಪೆನು
ಬನ್ನಿಯೆಂದವರ ಕರೆವುತ ಭೂಷಣಾಂಗ
ತನ್ನ ಕೈಯಿಕ್ಕಿದನರಸ ೯

ಬೇಡವೆಂದರು ರಾಯ ಕೊಡುತಿಪ್ಪನಿಡಕೆ ನಾ
ಮಾಡುವೆನೆನುತಿಬ್ಬರದ್ದು
ಕೂಡಣ ಸತಿಯರ್ಗೆ ಸೂಚಿಸಿ ಸಾಷ್ಟಾಂಗ
ಗೂಡಿ ತಾವೆಲ್ಲೆರಗಿದರು ೧೦

ಬಲುಫಾಳಿ ಬೀಸಲು ಮರದಿಂದ ನೆಲಕೆ ಬ
ದ್ದೆಳಲತೆಗಳೊಯೆಂಬ ತೆರದಿ
ಲಲಿತಾಂಗ ನಿಮಿರ್ದು ಸಾಷ್ಟಾಂಗವೆರಗಿದ ಕೋ
ಮಲೆಯರ ಭಾವ ರಂಜಿಸಿತು ೧೧

ಕಂಡನರಸನಿವರೆಲ್ಲರೇತಕೆ ಸಾಲು
ಗೊಂಡೆರಗಿದರೆಂದು ನಗುತ
ಪಂಡಿತೆಯಾಸ್ಯವ ನೋಡಿದವನವಳಿದೆ
ಗೊಂಡು ನುಡಿವಳೆಪೆಯುರಿದು ೧೨

ಕ್ಷಿತಿಪ ನೀನಾಭರಣವನೀವೆನೆನಲದು
ಸತಿಯರ್ಗೆ ರುಚಿಯಾದುದಿಲ್ಲ
ಅತಿಯಲಂಕಾರವ ಪಾಲ್ಮಾಡಿ ನೋಡರು
ಪತಿಭಕ್ತಿಯರ ಚರಿತವದು ೧೩

ಒಲ್ಲೆವೆಂದರು ಬೇಡವೆಂದವರು ನೀನು
ತುಬಲ್ಲಿ ವಿೀಗೆ ಕರೆವಾಗ
ವಲ್ಲಭಗಿದಿರುತ್ತರವ ಕೊಡಲಾಗದೆಂ
ದೆಲ್ಲರೆದಗಿದರು ನೃಪತಿ ೧೪

ಇರ್ವರಿಗೀವೆನೆಂದಾನು ಕರೆದರೇಕೆ
ಸರ್ವರೆರಗಿದರಂತಿವರು
ಒರ್ವರೊರ್ವರಿಗೆರವಿಲ್ಲ ತನ್ನೊಳು ಸ್ನೇಹ
ಪರ್ವಿಯೊಂದಾಗಿಹರರಸ ೧೫

ಅರಿಯೆಯು ನೀನಿದ ನಗೆಕಾರ ಬಗೆಕಾರ
ಮರೆಕಾರ ಬಲು ಟೌಳಿಕಾರ
ಅರಿಯದಂದದೊಳಿನ್ನ ಕೇಳ್ವೆಯೆಂದವಳೊಳ
ಗರಿದೊತ್ತಿ ನುಡಿದಳು ನೃಪನ ೧೬

ಸಾಕೆಮ್ಮ ದೇವಿಯೆಕಿರಗಿ ಪೊತ್ತಾಯತ್ತ ಪ
ರಾಕು ಬೇಡೇಳಿರೆಂದಿನ್ನು
ವಾಕುದೋರೆಂದು ಝುಂಕಿಸಿದಳಾ ಪಂಡಿತೆ
ಭೂಕಾಂತ ನಸುನಕ್ಕನದಕೆ ೧೭

ಏಳಿರೌ ಬಳಲಿದಿರೆಂದು ನುಡಿದನು ಭೂ
ಪಾಲನದಕೆ ನಸುನಗುತ
ಬಾಲೆಯರೆದ್ದು ನಿಂದರು ಕೇಳಲಳವೆ ತ
ತ್ಕಾಲದೊಂದಧಿಕ ಲೀಲೆಯನು

ಮುಟ್ಟತಿವರ ಮೇಲೆ ನನಗರ್ತಿ ನಾನೊಂದ
ಕೊಟ್ಟಪೆನೆನಲೊಲ್ಲರಿವರು
ಕೊಟ್ಟಲ್ಲದೆನ್ನುಬ್ಬ ನಿಲ್ಲದಿನ್ನಿದಕೇನು
ತಿಟ್ಟವೆಂದೆಡೆಯೊಳು ನೆನೆದ ೧೯

ಭಂಗಾರವನೊಲ್ಲದಿರೆ ಮಾಣಲಿವರನಾ
ಲಿಂಗಿಸಿಯಾದರು ಬಿಡುವಾ
ಪಾಂಗಾವುದೊತ್ತಿಗೆ ಬಾರರೆಂದೆಣಿಸಿ ತಂ
ತ್ರಾಂಗವನೊಡನೊಂದ ಕಂಡ ೨೦

ಅಮರೆ ಬಾ ಸುಮನೆ ಬಾ ಕುಸುಮಾಜಿ ಚಿತ್ರಾವಿ
ಭ್ರಮದೊಳಿದ್ದಪಳದಕೊಂದು
ಕ್ರಮಮನನೇಕಾಂತದೊಳಗೆ ಪೇಳ್ವೆನೆಂದು ಭೂ
ರಮಣ ತನ್ನೊತ್ತಿಗೆ ಕರೆದ ೨೧

ನಡೆದು ಸಮೀಪಕೆ ಬಂದ ಪೆಂಗಳನೆಡ
ಗಡೆ ಬಲಗಡೆಯೊಳು ನಿಲಿಸಿ
ನುಡಿವಂತೆ ಕಿವಿಗೆ ಮೋರೆಯ ತೋರುತಿಬ್ಬರ
ನೊಡನಪ್ಪಿಕೊಂಡನಾ ನೃಪತಿ ೨೨

ಘೊಳ್ಳನೆ ಸತಿಯರೆಲ್ಲರು ನಕ್ಕರದಕೆ ಭೂ
ವಲ್ಲಭ ತಾ ನಸುನಕ್ಕ
ಒಳ್ಳಿತಂತಾಯ್ತಾಗಬೇಕೆಂದು ಕುಸುಮಾಜಿ
ಗೆಲ್ಲವಡೆದು ನಕ್ಕಳೊಡನೆ ೨೩

ಕೋಣೆಯೊಳಾನೊಂದ ನುಡಿದಾಡಲದ ತಂದು
ಕ್ಷೋಣೀಶಗರಿಕೆ ಮಾಡಿದಿರಿ
ಕಾಣದೆ ದೈವವಿಲ್ಲವೆ ನಿವಗಾ ಫಲ
ಕಾಣಿಸಿತಿಂತು ಕಣ್ಣಾರೆ ೨೪

ರಸೆಗ ಮೊಗಕೆ ಸಾರ್ಚಿ ನಗುತ್ತಳು ಕಂಭದ
ಮರೆಗೆ ಹೋಹಳು ಕೂಡೆ ಬಹಳು
ಎರೆಯನಿದಿರೊಳಿಷ್ಟು ನಾಣ್ಚುತ ನಗುತ ಹೊಂ
ಮಿರಿದಾಡುತಿರ್ದಳಾ ತರುಣಿ ೨೫

ಅರಸ ಕಿಕ್ಕಣ್ಣಿಂದ ನೋಡುವನಾಕೆಯ
ಸರಸ ಲೀಲೆಗೆ ಹಿಗ್ಗಿ ನಗುವ
ಶಿರಬಾಗಿಕೊಂಡಿದ್ದಳೀಗಳುಬ್ಬಿದಳೆಂದು
ಹರುಷವ್ವೈದಿದನೆದೆಯೊಳಗೆ ೨೬

ಅಮರಾಜಿ ಸುಮನಾಜಿಯರು ಮುಂದೆ ನಿಂದಿಷ್ಟು
ನಮಿತಮುಖಾಬ್ಜೆಯರಾಗಿ
ವಿಮಲಕಟಾಕ್ಷದಿ ನೋಡಿ ಲಜ್ಜೆಯೊಳಾತ್ಮ
ರಮಣನೊಳಿಂತು ನುಡಿದಳು ೨೭

ಜನದ ಗೋಷ್ಠಿಯೊಳಿದ ನೆನೆಯಬಹುದೆ ದೇವ
ರೆನುತ ತಾವಿರ್ವರು ತಮ್ಮ
ಮನದೊಳು ಸಂತಸ ಮಾತಿನೊಳಿನಿಸು ರಂ
ಜನೆಯನಾಡಿದರು ಗಾಡಿಯೊಳು ೨೮

ಅರಿವರೊಳಗನ್ಯರಿವರೆನ್ನ ಸೇವೆಯು
ನಾರಿಯರೆನ್ನ ರಾಣಿಯರು
ನಾರಿಯರೆಲ್ಲರು ನಾನೊಬ್ಬ ಪುರುಷ ನೀ
ವೋರಂತೆ ನಾಣ್ಚಲೇಕೆಂದ ೨೯

ಕುಸುಮಾಜಿಗೊಂದು ತಂತ್ರವ ಪೇಳ್ವೆನೆಂದೆನ್ನ
ಹುಸಿಗಿಂತು ಕರೆಯಲದೇಕೆ
ಕುಸುಮಾಜಿ ನಕ್ಕಳಲ್ಲವೆ ತಂತ್ರವದು ತಾನೆ
ಹುಸಿಯಾವುದೆನ್ನೊಳಗೆಂದ ೩೦

ಗೆಲಲರಿದಕ್ಕ ನಾವರಸನನೆಂದು ತ
ಮ್ಮೊಳಗೆ ತಾವಿರ್ವರು ನುಡಿದು
ಒಳಸರಿದೊಯ್ಯನೆ ಗದ್ದುಗೆಯೊತ್ತಿಂದ
ತೊಲಗಿ ಪೆಂಗಳು ಸಾರ್ದರತ್ತ ೩೧

ನೋಡಿದರಾ ಕುಸುಮಾಜಿಯ ತಂಗಿ ನೀ
ನಾಡಿದ ನುಡಿ ಹಸನಾಯ್ತು
ನೋಡು ನಿನ್ನನು ನಾವು ಸ್ತುತಿಮಾಡಲಾ ಫಲ
ಕೂಡೆ ಕಾಣಿಸಿತೆಂದರವರು ೩೨

ಅಹುದು ನಾನಾವ ಗುಣಜ್ಞೆ ನೀವೆನ್ನನು
ಸ್ನೇಹದಿಂದ ಕೀರ್ತಿಸಲೇಕೆ
ಬಹುಗುಣಿಗಳು ಸ್ವಲ್ಪಗುಣಿಗಳ ಕೊಂಡಾಡ
ಬಹುದೇ ಎಂದಳು ಶಶಿವದನೆ ೩೩

ನಾನೊಮ್ಮೆ ಕಿರಿಯಳು ನಿಮ್ಮ ಕೀರ್ತಿಸಬಹು
ದೀ ಸುಕೃತಿ ನನಗೇಕೆ
ಹೀನಾಧಿಕವೆಂಬ ಹೆಚ್ಚು ಕುಂದಿಲ್ಲವೆ
ಏನಕ್ಕ ನೀವರಿಯದುದೆ ೩೪

ಬಿನದಕೆಂದೆವು ತಂಗಿ ನೋಯದಿರೆಂದರೆ
ವನಿತೆಯರಾರು ನಿನ್ನಂತೆ
ಬಿನದಕಾಡಿವೆನಕ್ಕಯೆಂದಳದಕೆ ರಾಯ
ಮನವುಬ್ಬಿ ನಗುತಿದ್ದನೊಳಗೆ ೩೫

ತಳತಳಿಸುವ ಮೊಗದಿಂದ ಲೀಲೆಯೊಳಿದ್ದ
ಲಲನೆಯರೆಲ್ಲರ ನೋಡಿ
ಬಳಿಕೊಂದು ಮಾತನಾಡಿದನು ಸುಜಾಣರ
ತಿಲಕನಾ ಪಂಡಿತೆಯೊಡನೆ ೩೬

ಪಂಡಿತೆ ನಾವೆಮ್ಮ ಮನೆಯೊಳಿದ್ದನ್ನವ
ಕೊಂಡರೊಳ್ಳಿತೊ ಭುಕ್ತಿಗೆಮ್ಮ
ಪೆಂಡಿರೊಳೊರ್ವಳ ಮನೆಗೆ ಹೋಹುದು ಲೇಸೊ
ಕಂಡುದನುಸುರು ನೀನೆಂದ ೩೭

ಅರಿದಳಾಗಳೆ ಚಿತ್ತ ಕುಸುಮಾಜಿಯೊಳು ತನ
ಗೆರಕವಾಯ್ತಾಕಯು ಮನೆಗೆ
ಒರಗಲ್ಬೈಯ್ದುವೆನೆಂಬ ಗೊನೆಹವಿದೆಂದದ
ಮರಸಿಕೊಂಡಿಂತು ನುಡಿದಳು ೩೮

ಇಂದಿಗಾರೋಗಣೆ ದೇವರ ಗೃಹದಲ್ಲಿ
ಚಂದವಲ್ಲೊರ್ವಳ ಮನೆಗೆ
ಸಂದರುತ್ತಮವೆಂದಳರಸಿಗೆ ಮನಸಿನ
ಗಂದೆಯು ತುರಿಸಿದಂತಾಯ್ತು ೩೯

ಹೇಳಾದರಾವಳ ಮನೆಗೆಯ್ದಬಹುದೆಂದು
ಕೇಳಿದನೊಡನೆ ಪಂಡಿತೆಯು
ಆಲೋಚಿಸಿಕೊಂಡು ಬಿನ್ನವಿಸುವೆನೆಂದು
ಕೌಳಿಕವೌನವಡೆದಳು ೪೦

ಮೂಗಿನ ಮೇಲ್ಬೆರಳನಿಟ್ಟು ಕಣ್ಮುಚ್ಚಿ
ತೂಗಾಡಿ ತಲೆಯನೊಂದಿನಿಸು
ಯೋಗಿಗಳಂತಿಷ್ಟು ಜಾನಿಸಿ ಕಣ್ದೆರೆ
ದಾಗಳೆ ನುಡಿದಳಾ ಕುಟಿಲೆ ೪೧

ಒಡೆಯ ಬಿನ್ನಹವಿಂದು ಕುಸುಮಬಾಣೋತ್ತಮನೆ
ಗಡಿಯಿಟ್ಟರುತ್ತಮವೆಂದು
ನುಡಿದಳೆಂತುತ್ತಮವಾಯ್ತೆಂದು ಹೇಳೆಂದು
ನುಡಿಸಿದನವಳ ಬಾಯಿಂದ ೪೨

ಹೊಸಕಾವ್ಯ ಮೂವರಿಂದಾದುದಿಬ್ಬರನೆ ಮ
ನ್ನಿಸಿದೆಯಿನ್ನೊಬ್ಬಳಿಗಿಲ್ಲ
ಅಸಿಯಳ ಮನೆಗೆಯ್ದಿ ಮನ್ನಿಪ್ರಗುಣಿತವೆಂ
ದುಸುರಿದೆನೆಂದಳಾ ಜಾಣೆ ೪೩

ಆಮ್ಮ ರಾಯನಿಗಿಂದು ನಿನ್ನರಮನೆಯಲ್ಲಿ
ಸುಮ್ಮಾನ ಮುಂಡೆ ನೀನಯ್ದಿ
ಜುಮ್ಮನೆ ಜೋಕೆಮಾಡೆಂದಳು ಪಂಡಿತೆ
ಹೆಮ್ಮಕ್ಕಳೆಲ್ಲರ ಮುಂದೆ ೪೪

ಸವತಿಯರೆಡೆಯೊಳು ಸತಿ ನಾಣ್ಚುತಿರ್ದ್ದಳಾ
ಸವತಿಯರೇನು ಜಾಣೆಯರೊ
ಆವರ ತಂತ್ರವ ಬಲ್ಲರಹುದದ ಹಿಕ್ಕಪೆ
ಸುವಿನಯ ಮಿಗೆ ಕಳುಹಿದರು ೪೫

ತಂಗಿ ಹೋಗಕ್ಕ ಹೋಗಾಣ್ಮನಾರೋಗಣೆ
ಗಂಗನೆಗೆಡೆಮಾಳ್ಪ ಭಾಗ್ಯ
ಸಂಗಡಿಸಿತು ನಿನಗದು ನಮ್ಮ ಭಾಗ್ಯವೆಂ
ದಿಂಗಿತ ಮಿಗೆ ಕಳುಹಿದರು ೪೬

ದಾಂದೆಗೆದು ಕುಸುಮಾಜಿ ನಿಂದಳು ವೇತ್ರ
ಧಾರಿಣಿಯರು ಪೇಳೆಯರಿದು
ಮಾರನೊಡೆಯ ರತಿದೇವಿಯೊಡತಿಯ ಕ
ಣ್ಣಾರೆ ಚಿತ್ತವಿಸೆಂದರೊಡನೆ ೪೭

ನುಡಿಯ ಚೆಲ್ವಿಕೆಯಿಂದ ಗಗನದೊಳಗೆ ಹೋಹ
ಮಡದಿಯ ತಿರುಗಿಸಿ ತನ್ನ
ನುಡಿವಕ್ಕಿಯೊಳಗಡಗಿಸಿ ನುಡಿಸಿದ ಸವಿ
ನುಡಿಯ ಲತಾಂಗಿಯ ನೋಡು ೪೮

ಸ್ವರಮಾತ್ರದಿಂದ ಗಿಳಿಯ ವೃಯೊಳಡಗಿರ್ದ
ಸುರಸುದತಿಯ ನೆಲೆಯರಿದು
ದರಹಾಸದಿಂದ ಕಾಣಿಸಿಕೊಂಡ ಜಾಣೆವೆಂ
ಡಿರ ತಲೆವಣಿಯ ಚಿತ್ರೈಸು ೪೯

ಪೆಣ್ಣ ಕಳುಹು ಶೃಂಗಾರವೃಕ್ಷದ ತನಿ
ವಣ್ಣ ಕಳುಹು ಮುಂದೆ ಮನೆಗೆ
ಹೆಣ್ಣಿನೆಡೆಗೆ ಹಕ್ಕಿ ಹೋಹಂತೆ ಹೋಗಿ ನೀ
ನುಣ್ಣಾಕೆಯರಮನೆಯಲ್ಲಿ ೫೦

ನೆಲವಿಂದ ಕುಸುಮಾಜಿ ಕೈಮುಗಿದಳು ರಾಯ
ನೊಲುನೋಟದಿಂದ ಬೀಳ್ಕೊಟ್ಟ
ಗೆಲು ಹೆಂಗಳರಸಿಯೆಂದೊಡನೆ ಕಟ್ಟಿಗೆವೆಂಗ
ಳುಲಿವುತಿದ್ದರು ಹೋದಳಾಕೆ ೫೧

ಬಲ್ಲಳು ಪತಿಯ ಪಂಡಿತೆಯ ಹೃದಯತಂತ್ರ
ವೆಲ್ಲವ ಕುಸುಮಾಜಿ ಮಾಜಿ
ಸೊಲ್ಲಿಸದೆದೆಯೊಳು ನಲಿವುತ ಹೋದಳ
ದಲ್ಲವೆ ಕುಲಸತಿಯಂಗ ೫೨

ಮಡದಿಯರೆಲ್ಲರ ಕಳುಹು ಚಿತ್ರೈಸೆಂದ
ಳೊಡನೆ ಪಂಡಿತೆ ರಾಯನದಕೆ
ನುಡಿಯದೆ ನೋಡುತಿದ್ದನು ಹೋಗುತಿದ್ದರು
ಕಡುಸೊಬಗೆಯರು ಕೈಮುಗಿದು ೫೩

ಇವಳನೋಡವಳ ನೋಡಿಂದಿನ ಕಾವ್ಯದ
ಕವಿಗಳಿಬ್ಬರನು ನೋಡೆನಲು
ಅವನೀಶ ನಸುನಕ್ಕನುರಾಜಿ ಸುಮನಾಜಿ
ಯವರು ನಗುತ ತೆರಳಿದರು ೫೪

ನಗೆಯಲ್ಲವೆ ನಿಮಗಿಂದು ರಾಯನ ತೋಳ
ದುಗುಲದ ಮನ್ನಣೆಗೊಂಡು
ನಗುತ ಹೋಗುವಿರೆಂದು ನಗಿಸಿದರೊಡನೆ ಕೈ
ಮುಗಿದು ಕಟ್ಟಿಗೆವೆಂಗಳವಧ ೫೫

ಪಂಡಿತೆ ಕಳುಹಿಸಿಕೊಂಡಳಾಕೆಯ ಬಳಿ
ಗೊಂಡು ಗಾಯಕಿಯರೆಯ್ದಿದರು
ದಂಡಧಾರಿಣಿಯರು ತಾವೊಂದು ಮಡಿಯೊಳ
ಗಂಡುಗೊಂಡರು ವೇಳೆಯರಿದು ೫೬

ಊಳಿಗವೆಂಗಳು ಕಡೆಸಾರ್ದರರಸನಾ
ಜೋಲಿಯೆಲ್ಲವು ನಿಂದಮೇಲೆ
ಕಾಲೋಚಿತದಾತ್ಮಯೋಗವನೆಸಗಿದ
ನಾ ಲೇಸನೇನ ಬಣ್ಣಿಪೆನು ೫೭

ಪಲ್ಯಂಕಾಸನದೊಳಗೆ ಗದ್ದುಗೆಯೊಳು
ಶಲ್ಯವರ್ಜಿತನು ಕುಳ್ಳಿರ್ದು
ಕಲ್ಯಾಣಮೂರ್ತಿ ಕಣ್ಮುಚ್ಚಿ ತನ್ನೊಳಗೆ ಧಾ
ವಲ್ಯಯೋಗವ ಕಂಡನೊಡನೆ ೫೮

ಎತ್ತಹೋದುದೊ ಹೆಂಗಳೊಡನುಬ್ಬಿನಿಂದಿಷ್ಟು
ಹೊತ್ತು ತಾನಾಡಿದ ಲೀಲೆ
ಹತ್ತುಸಾವಿರಕಾಲ ತಪಸು ಮಾಡಿದ ಮುನಿ
ಪ್ರೋತ್ತಮವಂತಿರ್ದನಾಗ ೫೯

ದೊರೆಯಿದ್ದು ಹೋಗೆನೆ ಹೋಗಿ ಬಾರೆಂದರೆ
ಬರುತಿಹ ಸೇವಕರಂತೆ
ಕರಣನಾಲ್ಕಿಂದ್ರಿಯ ವೈದವನುಸಿರಿದಂ
ತಿರುತಿಹವೇನ ಬಣ್ಣಿಪೆನು ೬೦

ಬೇಕಾದರಾಡಿಸಿ ಗಾಳಿಪಟವನರ್ತಿ
ಸಾಕಾಗೆ ಸುರುಳುವನಂತೆ
ನೂಕಿ ಚಿತ್ತವ ಹೊರಗಾಡಿಸುವನು ತನ್ನೊ
ಳೇಕವಾಗಿರಿಸುವನೊಮ್ಮೆ ೬೧

ಉಂಡುಪವಾಸಿ ಬಳಸಿ ಬ್ರಹ್ಮಚಾರಿ ಭೂ
ಮಂಡಲವಿದ್ದು ನಿಸ್ಸಂಗ
ಮಂಡೆ ಬೆಳೆದು ಮನ ಬೋಳಾದ ತಪಸಿಯ
ಕೊಂಡಾಡಲಳವೆ ಚಕ್ರಿಯನು ೬೨

ಜಿನ ಜಿನ ಕಣ್ಮುಚ್ಚಿ ತನ್ನ ಮೈಯೊಳಗೆ ತ
ನ್ನನೆ ತಾನೆ ಕಂಡನಾಕ್ಷಣಾ
ಜಿನ ಜಿನ ಕಂಡನು ಸಿದ್ಧನನಲ್ಲಿಯ
ಅನುಭವಿಸಿದನಾತ್ಮಸುಖವ ೬೩

ಕತ್ತಲೆಯಹುದೊಮ್ಮೆ ಬೆಳಗಹುದದು ಮಾಸಿ
ಮತ್ತೊಂದು ತಂಪಿನ ಸೊಡರ
ಹೊತ್ತಿಸಿದಂತಿಹುದಾ ಭರತೇಶನ
ಚಿತ್ತದೊಳಾತ್ಮಯೋಗದದು ೬೪

ಒಳಗೆ ತನ್ನಾತ್ಮನ ತಾ ನೋಡೆ ಹೊಸತೊಂದು
ಬೆಳಗು ತೋರ್ಪುದು ತೋರಲೊಡನೆ
ಮಳಲಂತೆ ಜರಿವುತಿಹುದು ಕರ್ಮ ನಿಜಸುಖ
ಹೊಳೆಯಂತೆ ಹೊಳೆದೇಳುತಿಹುದು ೬೫

## ಸರಸ ಸಂಧಿ

ಧ್ಯಾನತತ್ಪರನಾಗಿ ಹೊರಗ ಮರೆದು ತನ್ನ
ತಾನೆ ತನ್ನೊಳು ಲೀನನಾಗಿ
ಆ ನರಪತಿಯಿರೆ ಘಳಿಯಾರದೊಳು ಶಂಖ
ಧ್ವಾನ ಘೂರ್ಣಿಸಿತು ಮೊತ್ತರಿದು ೧

ನರನಾಥ ಕೇಳ್ದನಾ ಶಂಖನಿನಾದವ
ಗುರು ಹಂಸನಾಥಗಾಕ್ಷಣವೆ
ಪರಮಭಾವದೊಳಷ್ಟವಿಧದರ್ಚನೆಯ ಮಾಡಿ
ಸ್ಮರಿಸಿ ಬೀಳ್ಕೊಟ್ಟು ಕಣ್ದೆರೆದ ೨

ಮುನಿಭುಕ್ತಿವೇಳೆಯಾದುದು ಸ್ವಾಮಿಯೆಂದು ಮೆ
ಲ್ಲನೆ ಸೇವಕಿಯರು ಬಿನ್ನವಿಸೆ
ಜಿನ ಸಿದ್ಧ ಶರಣು ನಿರಂಜನ ಸಿದ್ಧಯೆಂ
ದೆನುತೆದ್ದನಾ ಸಾರ್ವಭೌಮ ೩

ಉಪ್ಪರಿಗೆಯನಿಳಿದೆಂದಿನಂದದ ಕ್ರಮ
ತಪ್ಪದೆ ನಡೆದು ಯೋಗಿಗಳು
ಬಪ್ಪ ಒಟ್ಟೆಯ ಕಾದು ಕಂಡನಾಗಳೆ ಮುಝು
ವೊಪ್ಪುವಧ್ಯಾತ್ಮಯೋಗಿಗಳ ೪

ಮುನಿಗಳ ನಿಲಿಸಿ ತನ್ನರಮನೆಗೆಯ್ದಿಸಿ
ತನಗೆ ಮಾಡಿದ ಪರಿಕರದ
ಅನುಪಮಾನ್ನವನಿತ್ತು ತಣಿಪಿ ಬೀಳ್ಕೊಟ್ಟರ
ಮನೆಯೊಳಿದ್ದನು ರಾಯನಿರಲು ೫

ಬಂದಳು ಕುಸುಮಾಜಿಯೊಡವುಟ್ಟಿದಳು ಮಕ
ರಂದಾಜಿಯೆಂಬೊರ್ವ ನೀರೆ
ಒಂದರಿವೆರುಷಕೆ ಪ್ರಾಯಕೆ ಯಿಹಳಿವ
ಳೆಂದೆಂಬ ಪಾಟೆಯ ಕನ್ನೆ ೬

ಚಲುವೆಯಹುದು ಜಾಣೆಯಹುದು ಶೃಂಗಾರ ವುಂ
ಗಲಿಯಾಗಿ ಸಖಿಯರುಗೂಡಿ
ಲಲಿತಾಂಗಿ ಬಂದು ಕಂಡಳು ತೂಗುವುಂಚದೊ
ಳೊಲೆದಾಡುತಿರ್ದ ಭಾವನನು ೭

ಕೆಳದಿಯ ಕೈಯ ಹೊಂದಟ್ಟೆಯ ತಾನೊಯ್ದು
ಮಲಯಜವೀಟಿಕಾಕ್ಷತೆಯ
ನಳತೋಳ ನೀಡಿ ಭಾವಗೆ ಕೊಟ್ಟಳರಸನಾ
ಗಳೆ ಕೈಕೊಂಡನರ್ತಿಯೊಳು ೮

ಅನುಕೂಲವಾದುದಾರೋಗಣೆಗಿನ್ನೆಮ್ಮ
ಮನೆಗೇಳು ಭಾವಾಜಿಯೆಂದು
ತನುಮಧ್ಯೆ ನುಡಿದಳದಕೆ ರಾಯ ನಗುತ ನಾ
ದುನಿಯೊಳು ನುಡಿದನಿಂತೆಂದು ೯

ಇಂದಾನು ನಿನ್ನ ಮನೆಗೆ ಬಹುದುಚಿತವೆ
ಒಂದರೆ ವರುಷದ ಮೇಲೆ
ಬಂದು ನೀನೆನ್ನ ಕರೆದರಾನು ಬಹೆನು ಹೋ
ಗೆಂದನು ನೃಪತಿ ನಾದುನಿಯು ೧೦

ಅಕ್ಕಾಜಿಯರಮನೆಗೇಳೆಂದೆ ನೀನಿಂತು
ರಕ್ಕಿನ ಮಾತನಾಡಿದೆಯ
ರಕ್ಕಕಾತಿಯೆ ನಿನ್ನ ಮನೆಗೆಂದೆಯ್ಸೆ ನಿ
ನ್ನಕ್ಕನ ಹೆಸರ ಹೇಳಿದೆಯ ೧೧

ಅಕ್ಕನ ಹೆಸರ ಹೇಳುವರಾಕೆ ಪಡೆದರೆ
ಮಕ್ಕಳು ಪೇಳ್ವವು ಮುಂದೆ
ದಿಕ್ಕಿನೊಳೆನಗೇನು ಸಂಬಂಧ ಸಾಕೇಳು
ಸಿಕ್ಕಿನ ಮಾತನಾಡದಿರು ೧೨

ಸಾಕೇಳು ಸಲಹೇಳು ನೀನೆಂದು ತಾನೆನ್ನ
ನಾಕರುಷಣ ಮಾಡತಹಳೆ
ಈಕೆ ತಾನೇನುಕಾತರೆಯೊ ಯೆಂದನು ರಾಯ
ನಾ ಕಾಂತೆ ತಲೆವಾಗಿ ನಗಲು ೧೩

ಕಾತರ ಗೀತರವನು ನೀವು ನಿಮ್ಮಂಬು
ಜಾತಾಕ್ಷಿಯರು ಬಲ್ಲಿರೈಸೆ
ಆ ತಳ್ಳಿಬಳ್ಳಿಯ ನಾವೇನ ಬಲ್ಲೆವು
ಮಾತು ಸಾಕಿನ್ನೇಳು ಭಾವ ೧೪

ಎನಲತಿ ಸರಸಗಳಾಗದೆಂಬುದ ನೆನೆ
ದನಿತರೊಳೆದ್ದನಾ ರಾಯ
ಮಿಸುಗುವ ಹಾವುಗೆಗಳ ಮೆಟ್ಟಿ ನಡೆದನಂ
ಗನೆಯ ಮನೆಗೆ ನಲ್ಮೆಯಿಂದ ೧೫

ಕುಸುಮವಿದ್ದೆಡೆಗೆ ಮಧುವ್ರತ ಹೋಹಂತೆ
ಕುಸುಮಾಜಿಯರಮನೆಗಾಗಿ
ಕುಸುಮಾಯುಧಜಿತಲಾವಣ್ಯ ನಡೆದನು
ಲ್ಲಸದಿಂದ ನಾದುನಿಯೊಡನ ೧೬

ದೇವನೆಯ್ತರುತಿಪ್ಪನೆಂದು ಹರಿದು ಹೋಗಿ
ಸೇವಕಿಯರು ಹೇಳಲೊಡನೆ
ಭಾವೆ ಬಂದಳು ಕುಸುಮಾಜಿ ತಾನಿದಿರಾಗಿ
ಭಾವಕಿಯರ ಬಳಸಿನೊಳು ೧೭

ಅಳವಟ್ಟ ನೂತನ ಶೃಂಗಾರ ಕರತಲ
ದೊಳು ರತ್ನದಾರತಿ ಸಹಿತ
ಲಲನೆ ಬಂದರಸಗಾರತಿಯೆತ್ತಿದಳು ತಳ
ತಳಿಸುವ ಮುಖಕಾಂತಿಯೆಸೆಯೆ ೧೮

ದುಗುಲ ನಿವಾಳಿಯನಿಟ್ಟಂಘ್ರಿಗೆರಗಲೆಂ
ದೊಗುಮಿಗೆ ತಲೆವಾಗುವಾಗ
ನಗುತ ಹಾ ಹಾ ಯೆಂದು ನಡುವ ಮಂಡೆಯನೆತ್ತಿ
ತೆಗೆದು ಕೈವಿಡಿದನಾ ರಾಯ ೧೯

ಮುಟ್ಟಿ ಮುಂದೇಳೆಂಟು ಮಾರ್ಸೈದೆ ತನ್ನ ಕೈ
ಮುಟ್ಟಿ ತೊಳೆದಳು ಪಾದಗಳ
ಉಟ್ಟ ದುಕೂಲದ ಸೆರಗಿಂದ ಪತಿಗಂಗ
ದಟ್ಟವಿಕ್ಕಿದಳು ಭಕ್ತಿಯೊಳು ೨೦

ಆವಾಸದೊಳಹೊಕ್ಕನಾ ರಾಯನಕ್ಕಕ್ಕ
ಭಾವ ಬಂದನು ನಮ್ಮ ಮನೆಗೆ
ದೇವಿ ಗದ್ದುಗೆಯಿಕ್ಕು ಮನ್ನಿಸೆಂದೊರೆದುದಂ
ಡಾ ವೇಳೆಯೊಳು ರಾಜಕೀರಾ ೨೧

ಇವನೆ ಅಮೃತವಾಚಕನು ಕುಸುಮಾಜಿಯೆಂ
ದವನೀಶ ನುಡಿವುತಾಕೆಯೊಳು
ಭವನದೊಳಿಟ್ಟ ಗದ್ದುಗೆಯಲ್ಲಿ ಕುಳಿತನು
ರವಿ ಪೂರ್ವಗಿರಿಯೇರುವಂತೆ ೨೨

ಬಂದೆಯ ಭಾವ ಬಂದೆಯ ಸುಪ್ರಭಾವ ಅ
ಯ್ಯಂತ್ತಿದೆಯ ಸುಗುಣಸ್ವಭಾವ
ಬಂದುದು ಲೇಸು ಮಹಾನುಭಾವಾಯೆಂದ
ದಂದು ಮುದ್ದಿನ ರಾಜಕೀರ ೨೩

ಕ್ಷೇಮವೆ ಭಾವಾಜಿ ಮತ್ತು ನಿಮಗೆ ಪರಿ
ಣಾಮವೆ ಹೇಳು ಭಾವಾಜಿ
ಈ ಮನೆಯತ್ತಲೇಕಡಿಗಡಿಗೆಯ್ದುರೆ
ಭೂಮಿಶ ಎಂದುದಾ ಪಕ್ಕಿ ೨೪

ಧರೆಯನಾಳಿದನೆಂಬ ಗರ್ವವೊ ನಮ್ಮಕ್ಕ
ನರಮನೆಗಡಿಗಡಿಗೇಕೆ
ಬರಲೊಲ್ಲೆ ಬಂದಿನ್ನು ಪೋಪೆಯ ನಿನ್ನ ಕಾ
ಲ್ಗುರುಲನಿಕ್ಕುವೆನೆಂದುದಾಗ ೨೫

ನಕ್ಕನದಕೆ ರಾಯ ನಗೆಯಲ್ತೆ ನಿನಗೆ ನ
ಮ್ಮಕ್ಕನಸಖುವ ಸೂರಗೊಂಡು
ಪಕ್ಕೆಗೆಯ್ದುದೆ ದೂರದೊಳಿಗಿದ್ದೆ ನೀನಿಂದು
ಸಿಕ್ಕಿದ್ದೈ ಲೇಸಾದುದೆಮಗೆ ೨೬

ಸುಳಿಗುರುಳೆಂಬುರುಲುಂಟು ನಮ್ಮಕ್ಕನ
ನಳಿತೋಳ ಪಾಶಗಳುಂಟು
ಹೊಳೆದಿನ್ನು ಹೋಹ ಭಾವನ ಕಾಣ್ಬೆನೆಂದರ
ಗಿಳಿ ನುಡಿದುದು ಸರಸದೊಳು ೨೭

ಸೋಂಕಿ ನಮ್ಮಕ್ಕನೊತ್ತಿನೊಳಿದ್ದರಿರು ಮಾರಿ
ಘೋಂಕನೆ ಪೋಪೆನೆಂಬಾಗ
ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬೆಳ್ಳಿ
ಸಂಕಲೆಗಳನಿಕ್ಕಿಸುವೆನು ೨೮

ಪಂಜರದೊಳಗಿದ್ದು ನಿನಗಿಷ್ಟೆಯೆನದಿರು
ಮಾಂಜಿ ನೀನಗಲ್ವಾಗ ನಿನ್ನ
ಹೊಂಜಳೆಮೈಯಳ ದಂತಕಾಂತಿಯ ಹೊನ್ನ
ಪಂಜರದೊಳು ಕೂಡಿಸುವೆನು ೨೯

ಇಷ್ಟೇಕೆ ಕೋಪ ನಿಮ್ಮಕ್ಕಗಾನೆಸಗಿದ
ಕಷ್ಟವೇನಮೃತವಾಚಾಂಕ
ಶಿಷ್ಟರೆಂದೆಯ್ತಂದೆವಕಟ ನೀವಿಬ್ಬರು
ದುಷ್ಟರಲ್ಲವೆಯೆಂದನೊಡನೆ ೩೦

ನೋವಾಯ್ತೆ ಭಾವಾಜಿ ನಮ್ಮಕ್ಕನಧರ ಸಂ
ಜೀವನಾಮೃತವ ನೀನುಂಡು
ಜೀವಸಿದ್ಧಿಯ ಪಡೆದಿರು ನಮ್ಮ ಮನಯೊಳಿ
ನ್ನೀ ವಾಕ್ಯ ಲೇಸಲೆ ನಿನಗೆ ೩೧

ನನಗೆ ನೇರಿಲಹಣ್ಣು ವನದೊಳುಂಟಕ್ಕನಾ
ನನದೊಳು ನೇರಿಲಹಣ್ಣು
ನಿನಗುಂಟು ಸುಖಿಸಿಕೊಂಡಿರು ನಾನು ನೀನಿಂತು
ಬಿನದದೊಳಿರುತಿಹೆವಿಲ್ಲಿ ೩೨

ನಡು ತಾನೆ ಸಿಂಗಳದೇಶ ಕುಂತಳದೇಶ
ಮುಡಿ ಕರ್ಣ ಕರ್ಣಾಟದೇಶ
ಕಡುಗಂಪು ಕಾಶ್ಮೀರದೇಶವಕ್ಕನ ಮೈಯ
ಪೊಡವಿಯನಾಳಿತ್ತ ಪೋಪೆ ೩೩

ಅಸಿಯಳ ಯೌವನ ವನವುಂಟು ಲಾವಣ್ಯ
ರಸದ ತಣ್ಬೊಳೆಯುಂಟು ಭಾವ
ಒಸೆದು ವನಕ್ರೀಡೆ ವಾರಿಕ್ರೀಡೆಯನಾಡಿ
ಬಿಸಿಲನಾರಿಸಿಕೊ ಕಾತರದ ೩೪

11

ಈ ನುಡಿಗಳು ನಿನಗುಚಿತಗಳಹುದಿನ್ನು
ಮಾನಿನಿಯಾಸ್ಯದೊಳೊಂದು
ಜೇನೆಯ್ಯ ಕೊಡನುಂಟು ನಿನಗದೆಂತಹುದದು
ಜೈನನಲ್ಲವೆ ಭಾವ ನೀನು ೩೫

ಎನೆ ನಕ್ಕನರಸನೀ ನುಡಿಗಳು ಗಿಳಿಯ ಯೋ
ಚನೆಯಲ್ಲ ಸತಿಯೊರ್ವಳಿದಕೆ
ಬಿನದಕೆ ಕಲಿಸಿದಳಾವಳೆಂದೆಣಿಸಿ ನಾ
ದುನಿ ಕಲಿಸಿದಳೆಂದೆ ತಿಳಿದ ೩೬

ಚಂದದಿ ನುಡಿವುತಿದ್ದುದು ಗಿಳಿಯನು ಮಕ
ರಂದಾಜಿ ಕೊಂಡು ಬಾರೆಂದ
ತಂದು ಗಿಳಿಯ ಕೊಡುವಾಗ ನಾದುನಿಯನಾ
ನಂದದೊಳಮರ್ದಪ್ಪಿಕೊಂಡ ೩೭

ಅತ್ತಿತ್ತ ಮೈಯನೊಲೆದಳಾಕೆ ಮಿಸುಕದಂ
ತೆತ್ತಿ ತಾನಮರ್ದಪ್ಪಿಕೊಂಡ
ಮುತ್ತುಕೊಟ್ಟನು ಕೊರಳಿಗೆ ಕಂಠಮಾಲೆಯ
ಸುತ್ತಿ ಮೆಚ್ಚಿದೆನೆಂದು ಬಿಟ್ಟ ೩೮

ದೇವರವಳಿಗೇನ ಕಂಡು ಮೆಚ್ಚಿದಿರೆಂದು
ಭಾವಕಿ ಕುಸುಮಾಜಿ ನಗುತ
ಭಾವಿಸಿ ಕೇಳಲು ನಿಮ್ಮ ತಂತ್ರವನಿಷ್ಟು
ನಾವು ಬಲ್ಲೆವು ಕಾಣೆಯೆಂದ ೩೯

ಆದುದೆ ತಂಗಿ ನಾನಾಗಳೆ ಬೇಡವೆಂ
ದೋದಿದೆ ನೀನೊಪ್ಪದಾದೆ
ಹೋದ ಗಾಳಿಯ ಹಜ್ಜೆ ಗಾಣ್ಬವರೊಡನೆಂತು
ವಾದಮಾಡುವೆಯೆಂದಳಾಗ ೪೦

ನಾನಾಗ ಮಾಡದಿಂದಿಲ್ಲಿಗೈತರಲಾಗಿ
ಯಾ ನಮ್ಮ ವಾರ್ತೆಯ ಕೇಳ್ದು
ತಾನು ಗಿಳಿಗೆ ಹೊಸ ನುಡಿವೇಳುತಿದ್ದಳಿ
ದೇನ ಹೇಳುವೆ ತಂಗಿಯೆಂದೆ ೪೧

ಅಕ್ಕ ಭಾವಾಜಿಯಿಂದೆಮ್ಮ ಮನೆಗೆ ಬಂದು
ಹೊಕ್ಕಾಗ ಗಿಳಿಯಿಂದ ನಾನು
ಮಿಕ್ಕು ಸರಸವಾಡಿಸುವೆನೀಗ ಜಾಣ್ಮುಡಿ
ಲೆಕ್ಕದೋರುವೆನೆಂದಳದಕೆ ೪೨

ಜಯಿಸಲರಿದು ತಂಗಿ ನಿನ್ನ ಭಾವನು ಬಟ್ಟ
ಬಯಲೊಳು ರೂಪ ಒರೆವನು
ಬಯಲಿಗೆ ಪ್ರಯಾಸಗೊಳಬೇಡವೆಂದೆನ
ನ್ನಯ ಮಾತ ಮೀರಿದಳಾಗ ೪೩

ಬೇಡವೆಂದೆನು ಕೇಳಳರಗಿಳಿಯನು ನಾನು
ಬೇಡಿದೆ ಕೊಂಡೆದ್ದಳದನು
ಕೂಡೆ ಸಖಿಯರ ಬಟ್ಟರೆ ಹಿಡಿಯೆಂದೆನು
ವೋಡಿದಳೆಮ್ಮ ಹಿತ್ತಲಿಗೆ ೪೪

ಇವಳೊಡನಾಟದ ವೇಳೆಯಲ್ಲಂದೆನ್ನ
ಭವನ ಕೃತ್ಯದೊಳಿದ್ದೆ ನಾನು
ಅವಳರಗಿಳಿಯನೋದಿಸಿಕೊಂಡು ಬಂದಳು
ತ್ಸವದಿಂದ ಮತ್ತೆ ಮಂದಿರಕೆ ೪೫

ಮುನ್ನ ನಾನೀ ನುಡಿಗಳ ಕೇಳ್ದೆನಾದರು
ನಿನ್ನ ಮೇಲಾಣೆ ಕೇಳರಸ
ಕನ್ನೆಯಿವಳು ಕೌಟಿಲಕಾತಿಯೆಂದಳು
ಚೆನ್ನರಾಯನೊಳು ತಂಗಿಯನು ೪೬

ಏನ ಮಾಡಿದೆನಕ್ಕ ನಿನಗು ನಿನ್ನರಸಗು
ನಾನಿಲ್ಲಿ ಕುಟಿಲತಂತ್ರವನು
ಮಾನಿನಿ ಗಿಳಿಯು ತಾರೆಂದು ಚೇಷ್ಟೆಯು ಮಾಡು
ವೀ ನಿನ್ನ ಪತಿಯಾಗ ಕುಟಿಲ ೪೭

ಮುಚ್ಚು ಮುಚ್ಚತಿ ಧೂರ್ತೆ ನಿನ್ನ ಬಾಯನು ಸ್ವಾಮಿ
ಮೆಚ್ಚನಿತ್ತರೆ ಚೇಷ್ಟೆಯೆಂಬ
ಮೆಚ್ಚದು ನಿನಗಿರಲಾನೀತನರಸಿಯು
ಬೆಚ್ಚಂತೆ ಬೆಗಿದಪ್ಪುವಾಗ ೪೮

ಅಕ್ಕನ ನೋಡುವೆನೆಂದು ನಿನ್ನಯ ಬೀಡ
ಹೊಕ್ಕರೆ ಫಲತೋರಿತೆನಗೆ
ಚಿಕ್ಕನೆಮ್ಮೂರಿಗೆಯ್ದುವೆನಿನ್ನು ನಿನ್ನೂರ
ದಿಕ್ಕ ನೋಡಿದರಾನು ಹೆಣ್ಣೆ ೪೯

ಮಾನಿಯ ಮುಂದಕೆ ತಂದಂತೆ ನೋಡೆಮ್ಮ
ಮಾನಭಂಗವ ಮಾಳ್ಪನೀತ
ಆನೆಯಂತೊಯ್ದುಮರ್ದಪ್ಪುತಿದ್ದನು ದೊಡ್ಡ
ಭೂನಾಥನೆಂಬ ಹೆಮ್ಮೆಯೊಳು ೫೦

ಅಳುವಂತೆ ಮೊಗವ ಕಿರಿದು ಮಾಡಿಕೊಂಡಾಗ
ತಲೆವಾಗಿ ಕಣ್ಣನೊಸೆವಳು
ಒಳಗೆ ಸಂತಸವುಂಟು ಕಣ್ಣನೀರಿಲ್ಲ ಬಿ
ಕ್ಕಳಿಸುತ ನುಡಿವಳು ಸಟೆಗೆ ೫೧

ನೋಡುವಳೊಡನೋರೆಗಣ್ಣಿಂದ ಭಾವನ
ಕೂಡಡ್ಡಮೋರೆದೆಗೆವಳು
ನೋಡುವಾಗಿಷ್ಟು ಚಿಂತೆಯ ತೋರಿ ಮೊಗವಡ್ಡ
ಮಾಡಿಕೊಂಡುರೆ ನಗುತಿಹಳು ೫೨

ಶಿರದೂಗುವನು ಮುಗುಳ್ನಗುವನು ಕುಸುಮಾಜಿ
ಗರಸ ಕಣ್ಸನ್ನೆದೋರುವನು
ತರಳೆಯ ರಕ್ಕಿನಕ್ಕಯೆಯೆಂದು ನೆನೆವ ತ
ನ್ನರಸಿಯು ಬೆರಗಾಗುತಿಹಳು ೫೩

ಏಕಿಷ್ಟು ವ್ಯಾಕುಲ ಮಕರಂದೆ ನಿನಗೆಂದ
ಳಾಕೆ ಹೋಗಕ್ಕ ನಿನ್ನಿಂದ
ಸಾಕಾದೆ ನಾನೆಂದಳಕ್ಕಟಕ್ಕಟ ತಂಗಿ
ಗೀ ಕೊರತೆಯೆಯೆಂದಳಾಕೆ ೫೪

ಜಾತಿ ಕ್ಷತ್ರಿಯಪುತ್ರಿಯಿಂತಾಡುವಳೆ ವೈಶ್ಯ
ಜಾತಿಯೊ ನೀನು ಶೂದ್ರಿ [1]ಕೆ[1]ಯೊ
ಓತನ್ನರಪ್ಪಲು ಸಾವಲ್ತೆ ಕೊರತೆಯ
ಮಾತಾವುದೆಂದಳಾ ತಂಗಿ ೫೫

---

[1] ತೆ (ಕ) (ಜ) ತಿ (ಖ) (ಘ)

ಕೋವಿದನಿದಿರೊಳು ಕೃತಕ ಸಲ್ಲದು ನಿನ್ನ
ಭಾವಾಜಿ ಭಾವಜ್ಞನರಿಯೆ
ತೀವಿದ ನಿನ್ನ ಕಂಗಳ ನೀರ ಕಂಡೆವೆ
ನೋವುತಿದ್ದನು ಸಾಕು ತಂಗಿ ೫೬

ಎನಲೊಡನರಿದಾಗಳೆ ಕಣ್ಣತಿಕ್ಕುತೊ
ಯ್ಯನೆಯೆವೆ ವೊಂದೆರಳ್ಮರಿಯೆ
ಅನಿತರೊಳಗೆ ಕಣ್ಣ ನೀರೊಕ್ಕುವುದ ಕಂಡು
ಜನನಾಥ ಭಾಪೆಂದ ನಗುತ ೫೭

ನಮ್ಮರಸನ ಮುಂದೆ ದುಃಖದ ಕಣ್ಣೀರು
ಹೆಮ್ಮಕ್ಕಳಿಗೆ ಬಾರವೆಲಗೆ
ಸುಮ್ಮಾನದಿಂದ ಕಣ್ಬನಿಯುಂಟು ನಿನಗೀಗ
ಳುಮ್ಮಿದಶ್ರುಗಳು ಲೇಸಲ್ತೆ ೫೮

ಗಂಡನ ನೀನು ಬಣ್ಣಿಪೆ ನನಗಾತನ
ಕಂಡರೆ ಸೇರುವುದಿಲ್ಲ
ಕಂಡುದಿಲ್ಲವೆ ನಿನ್ನ ಗಂಡನಾಟವ ನಮ್ಮ
ಭಂಡುಮಾಡುವ ಬವಣೆಯನು ೫೯

ಸಾಕು ನಿನ್ನಯ ಚೇಷ್ಟೆ ಮರಸಿದ ಗಿಳಿಯೋದ
ಲೋಕವರಿಕೆಗೆಯ್ದನರಿಯ
ಈ ಕೊಂಕು ನೃಪನೊಳು ಸಲುವುದೆ ತಂಗಿಯೆಂ
ದಾಕೆ ನಾಣ್ಚಿಸಿ ನಗುತಿಹಳು ೬೦

ಮರಸಿದ ಗಿಳಿಯೋದ ಕಂಡಂತೆ ಪೇಳ್ದನೆಂ
ದರಿಪಿದ ನುಡಿ ತಾಗಿತವಳ
ಬರಿಯಳ್ಕೆಯಾಟವ ತೊರೆದಳು ತಲೆವಾಗಿ
ಕಿರುನಗೆ ನಗುತಿದ್ದಳೊಡನೆ ೬೧

ನಿಗರಣೆ ಬೇಡಲೆ ಮಕರಂದೆ ನೃಪನೊಳು
ಪಗರಣೆ ಸಲ್ಲದು ತಂಗಿ
ನಿಗರಣೆ ಪಗರಣೆ ನಟನೆಗಳನ್ಯರೊ
ಳಗೆ ಸಲ್ಲುವಿಲ್ಲಿ ಮೆರೆಯುವು ೬೨

ಏನೊಲಿಸಿದನಕ್ಕ ನಿನ್ನ ನೀ ರಾಜಾಭಿ
ಧಾನವೇಷದ ಮಾಯಕಾರ
ತಾನಲ್ಲದನ್ಯರು ನಿನ್ನೆದೆಯೊಳಗಿಲ್ಲ
ಹಾನಿಯಾದ ನಮ್ಮ ಬಲ್ಪು ೬೩

ವೀಳೆಯದೊಳಗೆ ಮದ್ದುಂಟೊ ನಿನ್ನ ರಸನಾ
ತೋಳೊಳುಂಟೊ ವಶ್ಯಯಂತ್ರ
ಬೇಳುವೆಯುಂಟೊ ತಿಲಕದೊಳಲ್ಲದರಿಂತು
ಬೇಳಾಗಿ ನೀನು ಸಿಕ್ಕುವೆಯ ೬೪

ಕೇಳುತಿದ್ದನು ರಾಯ ಕುಸುಮಾಜಿಯೊಡನಾಕೆ
ಹೇಳುವ ಗಮಕದ ನುಡಿಯ
ಸೋಲವಾದುದು ತನ್ನ ಚಿತ್ತವಾ ತರುಣಿಯ
ಮೇಲೆ ತಾನಿಂತೆಣಿಸಿದನು ೬೫

ಏಳುವ ಮೊಳೆಯೊಳೆ ಕೊಂದು ಕೂಗುವಳಿವ
ಳೇಳೆಲೆವ್ರೋದಮೇಲೆಮ್ಮ
ಬಾಳಲೀವಳೆಯೆಂದು ನೆನೆದನಂದಾ ನರ
ಪಾಲಕ ತನ್ನ ಚಿತ್ತದೊಳು ೬೬

ನೊಂದಳಹುದು ದಿಟ ಕುಸುಮಾಜಿ ಕರೆ ಮಕ
ರಂದಾಜಿಯನು ಮನ್ನಿಸುವೆನು
ಎಂದನದಕೆ ತಂಗಿ ಬಾರೆಂದಳರಸಿ ಹೋ
ಗೆಂದು ಕೋಪಿಸಿದಳಾ ತರುಣಿ ೬೭

ಮುನ್ನೊಮ್ಮೆ ನಿನ್ನ ವಲ್ಲಭನೊತ್ತಿಗಾನೆಯ್ದಿ
ಮನ್ನಣೆವಡೆದೆನು ಸಾಕು
ಇನ್ನರಿಯೆನೆ ಹೋಗು ಹೋಗೆಂದು ಝಂಕಿಸಿ
ಕನ್ನೆ ನುಡಿದಳರಸಿಯನು ೬೮

ಏನು ತಂತ್ರವ ಕಂಡೆಯಯ್ಯಯ್ಯೊ ನೀನೊಬ್ಬ
ಮಾನವಪತಿ ಬಂದೆ ಧರೆಗೆ
ಮಾನಿನಿಯರ ಕಂಡರಪ್ಪಿಕೊಂಬುದೆ ತನ್ನ
ಧ್ಯಾನವೆಂದೊಳೆದು ನುಡಿದಳು ೬೯

ಒಬ್ಬರಿಬ್ಬರೆ ನಿನಗೇನು ಕಡಮೆಯಾಯ್ತು
ಸಬ್ಬಲಗ್ಗೆಯೊಳಿದೆ ಹೆಣ್ಣು
ಹೆಬ್ಬುವ ಬಳ್ಳಿಯಂತಿದಿರ ಹೆಂಗಳ ಕಂಡು
ತಬ್ಬಿಕೊಂಬುವೆ ಹೊತ್ತು ತನಗೆ ೭೦

ಎಲೆಧೂರ್ತೆ ನಿನಗೆ ಮನ್ನಣೆಯಾವೆನೆಂದರೆ
ಹಳಿವುದೇಕೆಮ್ಮ ನೀನೆಂದ
ಬಲುಧೂರ್ತ ಹೋಗು ಮನ್ನಣೆ ನಿನಗಿರಲಿಯೆಂ
ದುಳಿದಳದಕೆ ರಾಯ ನಕ್ಕ ೭೧

ಆಹುದೆ ಆಹುದೆ ನಾನು ಧೂರ್ತ ನೀನೇ ಧೂರ್ತೆ
ಯಹುದಾದರರ್ಥವೇನಾಯ್ತು
ಬಹುಮೊ ನೋಡಿದರದು ಕಡೆಗೆಂದನುರೆ ಗಹೆ
ಗಹಿಸಿದಳವಳೋರೆ ಮೊಗದಿ ೭೨

ಎಲ್ಲಿರಿಸಿದೆ ನಿನ್ನ ಗಂಭೀರ ಗರ್ವ ರಾ
ಜೋಲ್ಲಾಸ ಗಮಕವ ಭಾವ
ಚೆಲ್ಲಾಟಕರ್ತೆಯಾದುದೆಯೆಂದು ಜರೆದಳೆ
ದೆಲ್ಲವು ಸವಿ ರಾಯಗಾಗ ೭೩

ನೊಂದಳೆಂಬುದಕೆ ಮನ್ನಣೆಯಾವೆನೆಂದೆನಿ
ನ್ನೊಂದಾಗಿ ನುಡಿವೆನಲ್ಲೆಂದ
ನಿಂದು ತಾನದಕೆ ನಗುತ ನೋಡು ಮತ್ತು ತ
ನ್ನಂದವ ಬಿಡನೆಂದಳವಳು ೭೪

ಹಿಂದೆ ನೀನಿತ್ತುದು ಭಾರವಾಗಿದೆ ನನ
ಗೆಂದು ಕಾಮಿನಿ ಕಂಠಸರವ
ಮುಂದಿರಿಸುವೆನೆಂದು ತೆಗೆದಳಂತದು ಕೊರ
ಳಿಂದ ಬಾರದು ಚಿತ್ರವಾಗ ೭೫

ತಿಳಿದಳು ಸ್ತಂಭನೆಗೆಯ್ದನು ಭಾವನೆಂ
ದೊಳಗುಬ್ಬಿ ನಕ್ಕಳಂತದಕೆ
ಬಳಿಕ ಭಾವನ ಮೊಗ ನೋಡುತ ವಿಸ್ಮಯ
ಗೊಳುತಿದ್ದಳಂಯಧಂದದೊಳು ೭೬

ಏಕೆ ಬಾರದು ಭಾವ ನಿನ್ನ ಕೊರಳ ಹಾರ
ಬಾಕುಳಿ ತಾನು ನಿನ್ನಂತೆ
ಸಾಕು ಬಿಡೆಂದರು ಬಿಡದಿದೆ ನೋಡೆನು
ತಾಕೆ ನುಡಿದಳು ಚಲ್ಲದೊಳು ೭೭

ಕೊಟ್ಟೊಡವೆಯ ನಾವು ತೆಗೆದುಕೊಂಬುವರಲ್ಲ
ಮುಟ್ಟದಿರೌ ನಿನಗಿರಲಿ
ವೆಟ್ಟಿ ತಟ್ಟಿಯೊಳೆಮ್ಮ ನೀನೆಂದುದಕೆ ತಕ್ಕ
ತಿಟ್ಟವ ಮಾಳ್ಪೆನಾನೆಂದ ೭೮

ಹರುಷವೇರಿದಳಾಗ ಕುಸುಮಾಜಿ ತಂಗಿ ಕೇ
ಳರಸನ ವಾಕ್ಯ ಹುಸಿಯದು
ಕರೆಸುವೆ ನಾಳೆ ನಮ್ಮಪ್ಪಾಜಿಯನು ಹೊಸ
ಸಿರಿ ಮಾಳ್ಪೆ ನಿನಗೆಂದಳೊಸೆದು ೭೯

ಧಾರಿಣೀಶನ ಪಾಣಿಯೊಳು ನಿನ್ನ ಪಾಣಿಯ
ಸೇರಿಸಿ ಪಿತನ ಕೈಯಿಂದ
ಧಾರೆಯೆರಸುವೆನು ನಿಮಗಿಬ್ಬರಿಗೆ ಬಂದ
ಹೋರಾಟ ತೊಳೆದುಹೋಹಂತೆ ೮೦

ಎಲ್ಲಿ ಹೋದುದೊ ಮೊದಲಾದ ನುಡಿ ನೋಟ
ಚೆಲ್ಲಾಟ ನಗೆಯ ಸೊಕ್ಕಿವಳ
ನಲ್ಲನ ನೋಡಲಂಜುತ ಲಜ್ಜೆಗೊಳು ಳೆ
ಹುಲ್ಲೆಯಂತಿದ್ದಳೇನೆಂಬೆ ೮೧

ಪಾದಕೆರಗು ನಡೆಯೆಂಬಳೊತ್ತಿಗೆ ಹೋಗ
ಳಾದರಿಲ್ಲೆರಗೆಂಬಳದಕೆ
ಆದರಿಸುತ ನಿಲ್ವಳೊತ್ತಿ ಬಗ್ಗಿಸಿದಂತೆ
ವೇದಿಸಲೊಡನೆರಗಿದಳು ೮೨

ಮನದೊಳುಲ್ಲಾಸ ಮೈಯೊಳಗೆ ಪರಾಕೆಂದ
ತನಗೆರಗಿದ ಪೆಣ್ಣ ನೋಡಿ
ಮೊನೆಗಾತಿ ಬಲು ಮೋಡಿಗಾತಿ ಮುರುಕಗಾತಿ
ಗೊನೆಹಕಾತಿ ಸಂಭ್ರಮವೊಂದ ೮೪

ಸಾಲದೆ ಇವಳೊಡನಾಟ ಭೋಜನಕಿನ್ನು
ವೇಳೆ ವೇಗ್ಗಳಿಸಿದೆ ದೇವ
ಮೇಲಣ ನೆಲೆಯ ಮಾಳಿಗೆಗೆ ಚಿತ್ತೈಸೆಂದು
ಲೋಲಾಕ್ಷಿ ಬಿನ್ನವಿಸಿದಳು ೮೪

ಸರಸಕಾಂತೆಯು ಹಸ್ತವಿಡಿದನು ಜಿನಸಿದ್ಧ
ಶರಣೆನುತೆದ್ದನಾಕ್ಷಣಕ
ಭರತೇಶ ಮೇಲ್ನೆಲೆಗಡಿಯಿಟ್ಟನಿಲ್ಲಿಗೆ
ಸರಸದ ಸಂಧಿ ಸುಗಂಧಿ ೮೫

# ಸನ್ಮಾನ ಸಂಧಿ

ಸತಿಯ ಕೈವಿಡಿದು ಮೇಲಣ ನೆಲೆಗೆಯ್ದಿ ಭೂ
ಪತಿ ಕಂಡ ಮನೆಯ ಸಿಂಗರವ
ರತಿದೇವಿಯೊಡನೆ ಮನ್ಮಥ ನುಡಿವಂತೆ ಲಾ
ಲಿತ ವಾಕ್ಯದಿಂದಿಂತು ನುಡಿದ ೧

ಭಾಪು ಕುಸುಮೆ ನಿನ್ನ ಪೆಸರಂತೆ ಮನೆ ಕುಸು
ಮೋಪಹಾರದೊಳು ತೋರುತಿದೆ
ಆ ಪೂರ್ಣ ಕುಸುಮಮಾಲೆಗಳ ಮೇಲ್ಕಟ್ಟಿಂದ
ವ್ಯಾಪಿಸಿದಂದ ಲೇಸೆಂದ ೨

ಎಲ್ಲಿಂದ ತರಿಸಿದೆ ಸಿಂಗರಕೀ ನಡು
ಝಲ್ಲಿಯ ಪಟ್ಟೆಸರ್ವತವ
ನಲ್ಲಳೆ ಹೇಳೆಮ್ಮ ಮಾವಾಜಿಯರಮನೆ
ಯಲ್ಲಿಂದ ಬಂದುವೊ ಎಂದ ೩

ಮುತ್ತು ಮಾಣಿಕದ ಲಂಬಣ ಸೊಗಸಾದವಿ
ವೆತ್ತಣಿಂದೆಯ್ತಂದುವೆಮ್ಮ
ಅತ್ತೆಯರೇನು ಕಳುಹಿದರೊ ಅಳಿಯನ
ಚಿತ್ತಕುತ್ಸವವಾಗಲೆಂದು ೪

ಸಾರಣೆ ಚೆನ್ನಾಯ್ತು ಕುಸುಮೆ ಕುಂಕುಮದೊಂದು
ಸಾರಣೆ ಚೆನ್ನಾಯ್ತು ಕುಸುಮೆ
ತೋರಣ ಚೆನ್ನಾಯ್ತು ಕುಸುಮೆ ನಿನ್ನಾಣೆಯೆಂ
ದಾ ರಾಯ ನುಡಿದನಾಕೆಯೊಳು ೫

ಚಳಯಗೊಟ್ಟಿದು ಲೇಸು ಕುಸುಮಾಜಿ ಹೊಸರಂಗ
ವಲಿ ಲೇಸು ಕುಸುಮಾಂಗಿ ನಿನ್ನ
ನಿಳಯದ ಸಿಂಗಾರ ಸೊಗಸಾಯ್ತು ಕುಸುಮಕೋ
ಮಳೆ ಕೇಳು ಜಿನನಾಣೆಯೆಂದ ೬

ಕುಸುಮ ಕುಸುಮಿ ಕುಸುಮರಾಜಿ ಕುಸುಮವೇಣಿಯೆಂಬ
ಕುಸುಮಾಂಗಿ ಕುಸುಮಮಾಲೆಯೆಂಬ
ಕುಸುಮಿತಿ ಕುಸುಮಿನಿಯೆಂದು ನಲ್ಲಳ ಕರೆ
ಲಿಸಿ ಕೇಳ್ವ ರಾಯನೊಮ್ಮೊಮ್ಮೆ ೭

ತವರೂರ ಗಿವರೂರ ಹಂಗನಾನರಿಯೆನ
ಮ್ಮಾವನೀಶನರಮನೆಯಲ್ಲಿ
ನವನಿಧಿಯುಂಟೆನಗಿದು ಗಣ್ಯವಲ್ಲವೆಂ
ದವಳಾಡಿದಳು ಗಂಡನೊಡನೆ ೮

ನನ್ನ ಮೇಲಣ ಲೇಸಿನಿಂದೆನ್ನ ತವರೂರ
ಬಿನ್ನಣಿಸಿದ ರಾಯನೆಂದು
ತನ್ನೆದೆಯೊಳು ಬಲ್ಲಳದಕುಬ್ಬಿದರಸನೊಂ
ದುನ್ನತಿಯನ ಪೇಳ್ದಳಾಗ ೯

ಹೆಡ್ಡ ಹೆಂಗಳೊಳಂತು ದೊರೆ ಸೋತು ನುಡಿದರೆ
ಜಿಡ್ಡುಬ್ಬಿ ಮಂಡೇಗೇರುವರು
ದೊಡ್ಡ ಜಾಣೆಯೊಳಾತ ನುಡಿದರೆ ಸತಿ ಸರಿ
ಯೊಡ್ಡದೆ ಕುಸಿದು ನುಡಿದಳು ೧೦

ಅದರಿಂದ ಜಾಣ ಜಾಣೆಯರಾಟವೆಂಬುದು
ಚದುರಂಗದಾಟದಂತಿಹುದು
ಬದಗರ ಲೀಲೆಯಹುದು ಟೊಳ್ಳಗವಡೆಯ
ಕೆದರ್ವ ಸೋಗಳೆಯಾಟದಂತೆ ೧೧

ಎಲ್ಲರ ಪೊರಮಡಿಸಿದಳು ಬಾಗಿಲ ಬಾಹ್ಯ
ದಲ್ಲಿಯೊರ್ವಳ ಘಂಟೆಗಿರಿಸಿ
ಸಲ್ಲಲಿತಾಂಗಿ ಬಾಗಿಲನಿಕ್ಕಿಕೊಂಡಾಣ್ಮ
ನಲ್ಲಿಗೈದಿದಳೋಜೆಯಿಂದ ೧೨

ಏಕೆ ಬಾಗಿಲನಿಕ್ಕಿದೌ ಕುಸುಮಾಜಿಯೆಂ
ದೇಕಾಂತದೊಳು ಕೇಳ್ದನರಸ
ಸಾಕು ದೇವರು ಮತ್ತೆ ನುಡಿವೆನಂತಿರಲಿಯೆಂ
ದಾ ಉಗುಟ್ಟನೊಳಿರಿಸಿದಳು ೧೩

ಅರಿದನು ಮುನ್ನೊಂದು ಗಿಳಿಗೆ ತಾನೊರೆದುದು
ಹೊರಹೊಮ್ಮಿತೆಂದಂಜಿ ಪರರ
ಪೊರಮಡಿಸಿದಳೀಗ ನಾನೊಂದ ನುಡಿದರು
ಮರೆಸುವ ಬಗೆಯೆಂದು ನೆನೆದ ೧೪

ಬಿನ್ನಾಣಕಾತಿಯರರಸಿ ಬೆಡಂಗಿಂದ
ತನ್ನ ಕೈ ಮುಟ್ಟಿ ವಲ್ಲಭಗೆ
ಅನ್ನಪಾನವ ಶಾಕಪಾಕವನಡೆಮಾಡಿ
ಮನ್ನಿಸಿದಳು ನಿಮಿಷದೊಳು ೧೫

ಸ್ವರ್ಗದೊಳಗೆ ಬಿತ್ತಿ ಬೆಳೆದ ಶಾಲಿಯನಪ
ವರ್ಗಲೋಕದೊಳಟ್ಟಿ ತಂದು
ಭೋಗರೆಪೆಡೆಮಾಳ್ಪ ಪುಣ್ಯಲಕ್ಷ್ಮಿಯೊಯೆಂಬ
ಮಾರ್ಗದೊಳನ್ನವಿಕ್ಕಿದಳು ೧೬

ಎಳೆಮಿಂಚನೆರೆವಂತೆ ತಿಳಿದುಪ್ಪವೆರೆದಳು
ಬೆಳುಮುಗಿಲಂದದ ಮೊಸರ
ಜಲಜದಂತೆಸೆವ ಬಟ್ಟಲುಗಳೊಳೆಡೆಮಾಡಿ
ದಳು ಬಗೆಯರಿದು ಲತಾಂಗಿ ೧೭

ಮೊರೆದುದಾಗಳೆ ಬಾಗಿಲೊಳು ಘಂಟೆ ಭೋರೆಂದು
ಹರಿವಾಣವೊಳು ಹಸ್ತವಿಟ್ಟು
ಪರಮಾತ್ಮಗರ್ಪಿಸಿದನ್ನಪಾನವ ವೈಗೆ
ಧರಣಿಪಾಲಕನಿತ್ತನೊಲಿದು ೧೮

ಕುಸುಮಾಜಿ ತನ್ನ ನೆಳಲು ರಾಯನಗಲಿಗೆ
ಮುಸುಕದಂತೋಜೆಯೊಳ್ನಿಂದು
ಬಿಸಿಯನಾರಿಪಳೊಮ್ಮೆ ಪನ್ನೀರ ವೈಗೆ ಚಿಂ
ವಿಸಿಯಾಲವಟ್ಟವಿಕ್ಕುವಳು ೧೯

ಇನಿಯನಾರೋಗಿಸುತೆಡೆಯಲ್ಲಿ ಪಾನವ
ನನುಮಾನಿಸುತ ಮನದಲ್ಲಿ
ನೆನೆವಷ್ಟರೊಳಗೆ ಗಿಂಡಿಯನೆತ್ತಿಕೊಡುವಳಾ
ಮನವ ಹೊಕ್ಕಿದ್ದಳೆಂಬಂತೆ ೨೦

ಸಿಹಿ ಪಿರಿದಾದಲ್ಲಿ ಹುಳಿಗೊಡುವಳು ಹುಳಿ
ಬಹಳಿಸಲುಪ್ಪುದೋರುವಳು
ಕಹಿಯು ಖಾರವನೊಗರನು ರುಚಿದೋರಿ ಸಂ
ಗ್ರಹಿಸಿ ನೀಡುವಳಾತ್ಮಪತಿಗೆ ೨೧

ಪರಿಪರಿಯನ್ನಪಾನವ ಹೊಸ ಹೊಸತಾಗಿ
ತರತರದೊಳು ನೀಡುತಿಹಳು
ಶಿರಗೊಡಹುವನು ಸಾಕೆಂದು ಕೈಮುಗಿವಳಿ
ನ್ನೆರಡೆ ತುತ್ತಿರಲೆಂಬಳೊಡನೆ ೨೨

ಮಾಡಿದ ವಸ್ತುವ ತಪ್ಪದೆಲ್ಲವ ಸವಿ
ನೋಡಬೇಕರಸಯೆಂದೆನುತ
ಬೇಡಿಕೊಂಡೆಡೆಮಾಡುವಳು ನಸುನಗುತ ಬಾ
ಯ್ದೊಡಿಷ್ಟು ಸವಿದು ಬಿಡುವನು ೨೩

ಆನಯನುಣಿಸುವಂತಾ ಕಾಂತೆ ಬಲುಹಿಂದ
ತಾನುಣಿಸಿದಳಾತ್ಮಪತಿಯು
ಆ ನೃಪ ತೃಪ್ತಿವಡೆದು ಹಸ್ತದೊಳೆದನ್ನ
ಪಾನಾಂತ್ಯಕ್ರಿಯೆಯ ಮಾಡಿದನು ೨೪

ಎದ್ದನು ಜಿನಶರಣೆಂದು ಕೆಲದೊಳಿರಿ
ಸಿದ್ದ ಪಚ್ಚಡವ ಮೇಲ್ಹೊಳುತ
ಮುದ್ದು ಮುಖದ ಕಾಂತೆ ಹೂವಿನುಪ್ಪರಿಗೆಗೆ
ತಿದ್ದಿ ತೋರಿದಳು ದಾರಿಯನು ೨೫

ಆರೋಗಿಸಿದ ಮೇಲ್ನೆಲೆಯಿಂದ ಮೇಲಕೆ
ಸೇರಿದ ಸೋಪಾನವಿಡಿದು
ಆರೋಹಿಸಿದನಾ ಹೂವಿನುಪ್ಪರಿಗೆಗೆ
ನಾರಿಯ ಕೈಲಾಗುವಿಡಿದು ೨೬

ಮಾಡದ ನಡುವಣ ಗೂಢಗೃಹದೊಳೊಪ್ಪ
ಗೂಡಿದ ಶಕುನಿಮಂಚದೊಳು
ಪಾಡರಿದೆಡದ ಮಗ್ಗುಲನೂರಿ ನೃಪತಿ ಮೈ
ನೀಡಿ ಪವಡಿಸಿದನೊಡನೆ ೨೭

ವೀಳೆಯವಿತ್ತು ಪನ್ನೀರ ಚಿಮ್ಮಿಸಿ ಕಂಗ
ಳಾಲಿಗೆ ಕಪ್ಪುರವೆಚ್ಚಿ
ಆಲವಟ್ಟವನಿಕ್ಕಿ ಗಂಧವ ಲೇಪಿಸಿ
ಬಾಲೆ ಮನ್ನಿಸಿದಳು ಪತಿಯ ೨೮

ಪಾದಸೇವೆಗೆ ಕುಳಿತಳು ರಾಯ ಕಂಡು ರೊ
ತ್ತಾದಡದು ಹೋಗನ್ನರಸವ
ಸ್ವಾದಿಸಿ ಮತ್ತೆ ಬಾರೆಂದು ಕಳುಹಲಾಗ
ಹೋದಳು ಪರಮ ಲೀಲೆಯೊಳು ೨೯

ನನ್ನಾತ್ಮ ಬೇರಂಗ ಬೇರೆಂದು ಕಣ್ಮುಚ್ಚಿ
ತನ್ನ ತಾನೊಳಗೆ ನಿಟ್ಟಿಸುತ
ಮನ್ನೆಯರೊಡೆಯನಿರಲು ಕೂಡೆ ಕವಿದುದು
ಅನ್ನಸೊಕ್ಕಿನ ನಸುನಿದ್ರೆ ೩೦

ಗಂಡನುಂಡಗಲ ತೊಳೆಯದದರೊಳಗಿಕ್ಕಿ
ಕೊಂಡು ತಾನನ್ನಪಾನಗಳ
ಉಂಡಳು ತೃಪ್ತಿವಡೆದಳು ಕೈದೊಳೆದಳ
ಖಂಡಿತಾನಂದವೈದಿದಳು ೩೧

ಬಾಗಿಲ ತೆಗೆದಳೊಳಗದ ನಾರಿಯರ್ಬೈದಿ
ತೂಗುತಿರಲು ಮಂಚದಲ್ಲಿ
ಆಗಳಿಪ್ಪನ್ನಸೊಕ್ಕಿನ ನಿದ್ರೆಯನು ತೀರ್ಚಿ
ಬೇಗ ಕಣ್ದೆರೆದೆದ್ದಳವಳು ೩೨

ಉಪ್ಪರಿಗೆಯೊಳು ಗಂಡನನಿರಿಸಿದಳಲ್ಲಿ
ಬಪ್ಪುದೆ ನಿದ್ರೆ ಸಜ್ಜನೆಗೆ
ತಪ್ಪುಗೈದಂತೆಪೆ ದಿಗಿದಿಗಿಲೆನಲೊಡ
ನುಪ್ಪವಡಿಸಿದಳಾ ಜಾಣೆ ೩೩

ಕನ್ನಡಿಯೊಳು ಹೊಳೆಹೊಳೆದು ಮೊಗವ ನೋಡಿ
ಚೆನ್ನಾಗಿ ತಿಲಕವ ತಿದ್ದಿ
ಭಿನ್ನಕುಂತಳವ ಸಾಗಿಸಿಕೊಳುತೊಯ್ಯನೆ
ತನ್ನ ತಾನಕ್ಕಕುಚ್ಚಿನೊಳು ೩೪

ಕಸ್ತೂರಿ ಪುಣುಗು ಜವಾದಿ ಮುಂತಾದ ಸು
ವಸ್ತುವ ತೊಡೆದು ಪೂದುರುಬಿ
ವಿಸ್ತಾರದಿಂದ ಪಾಡಿಸಿಕೊಂಡಳಾಗ ಸ
ಮಸ್ತ ಭೃಂಗಗಳಿಂದ ತನ್ನ ೩೫

ಕೆಂಬಾಯ ವೀಳೆಯ ಬಿಳಿಯೆಲೆ ವಾಮಕ
ರಾಂಬುಜದೊಳಗಳವಡಲು
ತುಂಬು ಜವ್ವನೆ ನಡೆದಳು ನಲ್ಲನೆಡೆಗೆದೆ
ತುಂಬಿ ತುಳುಕುವರ್ತಿಯಿಂದ ೩೬

ಸೋಪಾನವಿಡಿದು ಬರುತ ಗೃಹವಿನ್ನು ಸ
ಮೀಪವೆಂಬೆಡೆಯೊಳು ತನ್ನ
ಚಾಪಲಾಭರಣದ ದನಿಯ ವಂಚಿಸಿ ಮೆಲ್ಲ
ನಾ ಪೆಣ್ಣು ಬಂದಳೋಜೆಯೊಳು ೩೭

ನೃಪಗೀಗ ನಿದ್ರೆಯೊ ಯೆಚ್ಚರಿಕೆಯೊಯೆಂದು
ಜಪಿಸುತ ನಿಲುಕಿ ನಿಟ್ಟಿಸುತ
ಚಪಲಾಕ್ಷಿ ಕಾಲ್ದುಡುಕೆನ್ನದೆ ನಡೆತಂದ
ಳುಪಮಿಸಬಹುದೆ ಭಕ್ತಿಯನು ೩೮

ಇತ್ತಲೀ ಕಾಂತೆಯಿಂತೆಣಿಸುತ ಬರುತಿರ್ದ
ಳತ್ತಲಾ ರಾಯನೊಂದಿನಿಸು
ಹೊತ್ತಿನಮೇಲೆ ತಾನೆಚ್ಚತ್ತು ಶುದ್ಧಾತ್ಮ
ವೃತ್ತಿಯೊಳಿದ್ದನೇನೆಂಬೆ ೩೯

ಅಂಬುಜಲೋಚನೆ ಬಹುದನರಿದು ಚಿ
ದಂಬರ ಪುರುಷಗೆ ನಮಿಸಿ
ಇಂಬುಗೊಳಿಸಿದನು ಯೋಗವ ಹೊಪೆದ ದಿ
ವ್ಯಾಂಬರ ಮುಸುಕೆ ಮೈಮುರಿದ ೪೦

ಆಗಳಿಸುತ ಕಣ್ಣ ತೀಡಿಕೊಳುತ ವೀತ
ರಾಗಾಯನಮ ಎಂದು ಶಶಿಯು
ಮೇಗೆ ಕವಿದ ಬೆಳುಮುಗಿಲನೊತ್ತರಿಸುವಂ
ತಾಗ ನೂಂಕಿದ ತನ್ನ ಮುಸುಕ ೪೧

ಕಂಡನು ಬಾಗಿಲ ಮರೆಗೊಂಡ ಸತಿಯ ಪ್ರ
ಚಂಡೆ ಬಾರೆನುತೆದ್ದು ಕುಳಿತ
ಕೆಂಡವನುಗುಳ್ವ ಕೆಂಪಿನ ನಸುನಗೆ
ಯಿಂಡೆಯಾಡುತ ಬಂದಳವಳು ೪೨

ಸಾರಿದಳಾ ಕುಸುಮಾಜಿ ವಲ್ಲಭಗೆ ಪ
ನ್ನೀರ ಮುಕುಳಿಸಲೆರೆದಳು
ಕೂರುಗುರಿಂದ ಸೀಳ್ದೆಲೆಯ ಮಡಿದು ಕೊಟ್ಟ
ಳಾ ರಾಯಗತಿ ವಿಭವದೊಳು ೪೩

ನಗುತ ನಗುತ ಮಾತನಾಡುತೆಲೆಯ ಘಳಿ
ಗೆಗಳ ಕೈಕೊಳುತಿದ್ದು ನೃಪತಿ
ಮೊಗ ನೋಡಿ ತನ್ನೊಳು ನುಡಿವರಿಷ್ಟಳುಕುವ
ಬಗೆಯ ಕಂಡನು ತನ್ನ ಸತಿಯು ೪೪

ಇವಳೊಡನೊಂದೆರಳ್ಜೂಟಿನ ನುಡಿಯ ಕೇ
ಳುವೆನೆಂದು ನೆನೆದುಕೊಂಡೊಡನೆ
ಪವಡಿಸಿ ಮುಸುಕಿಕ್ಕಿ ಕೈನೀಡಿ ಬೆಳ್ಳಿಲೆ
ಗವಳವ ಕೊಳುತಿಂತು ನುಡಿದ ೪೫

ಕುಸುಮಿ ತಾನೇಕೆ ಬಂದಳು ಕುಸುಮಾಜಿಯೆಂ
ದುಸುರಿದನಾಕೆಯ ಕೂಡೆ
ನಸುನಗುತೇಕೆ ಬಂದಳೊ ದೇವರೇ ಬಲ್ಲ
ರಸಿಯಳಿಚ್ಚೆಯನೆಂದಳವಳು ೪೬

ಮೊಗವ ನೋಳ್ಪಾಗ ನವ್ಮೊಡನಿವಳೆಂದೊಂದು
ಜಗಳಕೆ ಬಂದಳೆಂಬಂತೆ
ಬಗೆಯೋರುತಿದೆ ನೀನು ಕೇಳಿ ಹೇಳೆಂದಾಗ
ವಿಗಡದ ಮಾತನಾಡಿದಳು ೪೭

ಕೇಳ್ದನಾಕೆಯು ದೇವ ಜಗಳಕಲ್ಲೆಂದಳು
ನೀಳ್ದ ಗೂಢಾರ್ಥವೊಂದುಂಟು
ಆಳ್ದನ ಕೂಡೆ ಯೋಚಿಸಬಂದೆನೆಂದೊಲ್ದು
ಪೇಳ್ದಳೆಂದಳು ಪತಿಯೊಡನೆ ೪೮

ಗೂಢಾರ್ಥವೇನು ಪೇಳಲಿ ಕೇಳು, ಕೇಳ್ದಿನು
ಮೂಢರಿಗದ ಹೇಳಬೇಕು
ಪ್ರೌಢರು ಸಾರ್ದಾಗ ಬಲ್ಲರೆಂದಪಳೆಂದು
ಪ್ರೌಢಿಯ ಮಾತನಾಡಿದಳು ೪೯

ಎಲೆಯ ಘಳಿಗೆಯನಿತರೊಳು ಸಾಕಾದುದು
ನಳಿನಾಕ್ಷಿ ಪತಿಯ ಪಾದಗಳ
ನಲಿದೊತ್ತುತಿದ್ದಳು ತಳಿರು ತಾವರೆಯ ಮೇ
ಲೊಲೆದಾಡುವಂತಿದ್ದುದಾಗ ೫೦

ಪಾದವನೊತ್ತುವ ಕುಶಲ ಲೇಸೆಂದಾಗ
ಪಾದದಿಂದಪ್ಪಿದನವಳ
ಆದುದೊಡೆಯ ಮೆಚ್ಚಿ ಕಾಲೊಳೊಪೆದನೆಂಬ
ಗಾದೆಯಿಂದೆನಗೆಂದಳವಳು ೫೧

ನಗುತ ಭೂಪತಿಯೆದ್ದನಲ್ಲಿಂದ ಮುಂದಣು
ಜ್ಜುಗವನನರೆ ಬಲ್ಲರದರ
ಸೊಗಸನಂತಿಂತೆಂದು ನುಡಿದೆನಾದರೆ ಬಲು
ಹಗರಣವಹುದದಂತಿರಲಿ ೫೨

ಚಿನ್ಮಯ ತತ್ವವ ಮುಟ್ಟಿ ವೀಣೆಯೊಳು ಕಿಂ
ಚಿನ್ಮಾತ್ರೆ ಸೊಗಸಿ ಹಾಡುತಿರೆ
ಮನ್ಮಥರೂಪನಾಲಿಸುತಿದ್ದನಿಲ್ಲಿಗೆ
ಸನ್ಮಾನ ಸಂಧಿ ಸುಗಂಧಿ ೫೩

## ವೀಣಾ ಸಂಧ್ಯ

ಏನ ಬಣ್ಣಿಸುವೆನಾ ಕುಸುಮಾಜಿ ಪಾಡುವ
ಗಾನವನಾ ವೀಣೆಗಿವಳು
ತಾನೊಬ್ಬ ಸಖಿಯೊ ಯೆಂಬಂತೆ ಶಾರೀರ ಸ
ಮಾನವಾಗಿರಲು ಪಾಡಿದಳು ೧

ಎಡಗೈಯೊಳಮರಿಸಿ ವೀಣೆಯನಾಂತು ಮೇ
ಗಡೆ ಮೆಟ್ಟಿನೊಳು ಬೆರಳಾಡೆ
ಒಡನೆ ಕೀಳ್ಗಡೆ ತಂತಿಯೊಳು ಬಲಗೈಬೆರ
ಳೊಡರಿಸೆ ಪಾಡಿದಳೊಲಿದು ೨

ತೊಡೆಯಮೇಲಿಟ್ಟು ನಲ್ಲಳನು ನುಂಗೊರಳ ತ
ನ್ನೆಡಗೈಯೊಳಾಂತು ತೆಳ್ವಸಿರ
ತಡಹುವ ನಲ್ಲನ ಮುದ್ದುಲಾಲನೆಯ ಕ
ನ್ನಡಿಸಿತಾ ವೀಣೆಯಾಂತೊಲವು ೩

ಕೆಂಬಾಯ ನಸುದೆರೆದಾಯೆಂದು ರಾಗವ
ನಂಬುಜಾನನೆ ತುಡುಕಿದಳು
ತುಂಬಿಗಳೊಡನೆ ಘುಂಮೆಂದೆಡಬಲಕೆ ತೆ
ರಂಬೊಳೆದುವು ಶ್ರುತಿಗೊಡುತ ೪

ವೀಣೆಯೊಳೊಮ್ಮೆ ತೋರುವಳು ರಾಗವ ತನ್ನ
ಗೋಣೊಳಗೊಮ್ಮೆ ತೋರುವಳು
ವೀಣೆಯನೊಂದ ಬಿಟ್ಟೊಂದ ನುಡಿಸುವಳೀ
ಜಾಣೆಯೆಂಬಂತಿಹುದಾಗ ೫

ವೀಣೆಯ ನುಡಿಸುತ ಪಾಡಿದರಿವಳೀಗ
ವೀಣೆಗಳೆರಡನೊಂದಾಗಿ
ಹೊಣೆ ನುಡಿಸುತಿದ್ದಳೆಂಬೊಲಿಹುದು ಮುರ್ಛು
ರಾಣಿಯು ಧ್ವನಿಯು ಕೇಳ್ವಿಕೆಯು ೬

ವೇಳೆಯರಿದು ಶ್ರುತಿಯರಿದು ಕಟ್ಟಣೆಯರಿ
ದಾಳಾಪದನುಭವವರಿದು
ಕೇಳಿಸಿದಳು ಭರತಾಗಮ ಭರತ ಭೂ
ಪಾಲನ ಸತಿಗೆ ವಿಸ್ಮಯವ ೭

ಆಳಾಪಿಸುತ್ತರಸನ ಮೊಗ ನೋಳ್ಪಳಾ
ವೇಳೆಗೆ ನಗೆ ತೋರಿ ತನಗೆ
ಮೇಲೆ ಕಣ್ಮುಚ್ಚಿ ನಗುತ ಪಾಡುವಳು ಲೀಲೆ
ದಾಳುತಿಹನು ರಾಯ ನೋಡಿ ೮

ಕೂಡೆ ಕಣ್ದೆರೆದು ನೋಡುತ ಪಾಡುವಳು ನಗೆ
ಗೂಡಿ ಪಾಡುವಳು ಮತ್ತೊಮ್ಮೆ
ತೀಡುತ ತಂತಿಯತ್ತೆರಗಿ ದೃಷ್ಟಿಯನಿಟ್ಟು
ಪಾಡುವಳಾ ಗಾಡಿಕಾತಿ ೯

ಒಳಗುಮ್ಮಿದಾನಂದರಸ ತನ್ನ ತನು ತುಂಬಿ
ತುಳುಕಿ ಹೊರಗೆ ಸೂಸುವಂತೆ
ತೆಳುವಸಿರಿಂದ ಬಾಯ್ದೆರೆಯೊಳು ಸುಸ್ವರ
ಹೊಳೆದು ಮೋಹಿಸುತಿದ್ದುದಾಗ ೧೦

ಸುಳಿನಾಭಿಯೊಳು ಪುಟ್ಟಿ ಮೆಲ್ಲೆದೆಯೊಳು ಬೆಳೆ
ದೊಳುಗೊರಳೊಳು ಪ್ರಾಯವಡೆದು
ಎಳೆಯಳ ಬ್ರಹ್ಮರಂಧ್ರವನೇರಿ ಬಾಯ್ದೆರೆ
ಗಿಳಿದು ಮೋಹಿಸಿದುದಾಳಾಪ ೧೧

ಏನ ಕಲ್ತಳೊ ಎಲ್ಲಿ ಕಂಡಳೊ ಮಝು ಪುಂ
ಖಾನು ಪುಂಖದೊಳು ಮೇಲ್ಮೇಲೆ
ತಾನವ ಹೊಸ ಹೊಸತಾಗಿ ತಂದಳು ಜೇನ
ಸೋನೆಯ ಕರೆವಳೆಂಬಂತೆ ೧೨

ಕುಂಟಣಿಗೋಲೆಯ ಬರೆವ ಕಾವನ ಕೈಯ
ಕಂಠದೊಂದುಲುಹೊ ಯೆಂಬಂತೆ
ಕಂಠವನಲುಗಿಸಿ ಹೊಸ ತಾನಗಳ ಕಳ
ಕಂಠನಿನಾದ ತೋರಿದಳು ೧೩

ಉಂಚದಿಂದೆತ್ತುವಳಡಕದಿಂದಡಗಿಸಿ
ಮಿಂಚಿನಂತೊಡನೇಳಿಸುವಳು
ಅಂಚೆಯ ನಡೆದಾಡಿಸುವಂತೆ ರಾಗದ
ಸಂಚುಗಾಣಿಸಿ ತೋರುತಿಹಳು ೧೪

ಬಂದ ತಾನವ ಬರಲೀಸದೆ ಹೊಸ ಹೊಸ
ತೊಂದೊಂದು ಪರಿಯ ತಾನಗಳ
ತಂದು ತಂದೆದೆಗೊಳಿಸಿದಳು ಗಾನವ ಕರೆ
ತಂದು ತೋರಿಸುವಂತೆ ನೃಪಗೆ ೧೫

ತಾನ ತಾನಕೆ ರಾಯ ಹಿಗ್ಗುತಿಹನು ಗಂಡ
ನಾನಂದಕವಳುಬ್ಬುತಿಹಳು
ಗಾನವೊಪ್ಪಿದುದಾಗ ಗಂಧಗಿರಿಯ ಪವ
ಮಾನ ಕಂಮನೆ ತೀಡಿದಂತೆ ೧೬

ಅಂಬುಧಿ ಸಾಸಿವೆಯೊಳಗಡಗಿತು ಮಣ್ಣೊ
ಳಂಬರ ಹೊಳಿಹೋಯ್ತೆಂದು
ಕಂಬುಕಂಧರೆ ಪರಮಾತ್ಮಕಲೆಯನವ
ಲಂಬಿಸಿ ಹಾಡಿದಳೊಲಿದು ೧೭

ಯೋಗದೊಳಾತ್ಮತತ್ವವೆ ಕಡೆ ದಶವಿಧ
ಭೋಗಕಂಗನೆ ಕಡೆಯೆಂದು
ಯೋಗಶಾಸ್ತ್ರವ ಭೋಗಶಾಸ್ತ್ರವನೆರಡನು
ತೂಗಿ ತೋರ್ಪಡಿಸಿ ಪಾಡಿದಳು ೧೮

ಹೊಳೆಹೊಳೆದರಸನ ಮೊಗವ ನೋಳ್ಪಳು ಮೋರೆ
ಯೊಲೆದೊಮ್ಮೆ ನಗುತ ಪಾಡುವಳು
ನಲಿದಾಡಿ ಕೇಳಿಸುತಿದ್ದಳು ಮೋಹನ
ಜಲಧಿಯೊಳೋಲಾಡುವಂತೆ ೧೯

[1]ಆದುಧೌ[1] ಕುಸುಮಿ ಚೆಲ್ವಾದುದೌ ಕುಸುಮಾಜಿ
ಭೇದಿಸಿ ಹಾಡಿದೌ ಕುಸುಮು
[2]ಓದುದು[2] ಸೊಗಸಾದುದಿನ್ನೊಮ್ಮೆಯೆಂದು ವಿ
ನೋದಿಗಳರಸ ಕೇಳಿದನು ೨೦

---

[1] ಆದುದ (ಕ ಖ ಚ.ಛ.) [2] ಓದೂಧು (ಕ) ಓದೋದು (ಕ,ಛ)

ಆ ನುಡಿಗೇಳ್ದವಳುಬ್ಬಿ ಹಾಡುವಳದ
ಕಾ ನರನಾಥನುಬ್ಬುವನು
ತಾನವಳಿಗೆ ಮೆಚ್ಚುತವಳು ತನಗೆ ಮೆಚ್ಚು
ತಾನಂದಗೋಷ್ಠಿ ಮಾಡಿದರು ೨೧

ಮೆಚ್ಚಿದಿನಿಯಳೊಂದು ಹುಚ್ಚ ನುಡಿದರೆದೆ
ನೊಚ್ಚಗಾಗಿಹುದು ನಲ್ಲರಿಗೆ
ಅಚ್ಚಗಾನವನಾಕೆ ಪಾಡುತಿರಲು ಕೇಳ್ದು
ಮೆಚ್ಚದಿಹನೆ ಚಕ್ರಧರನು ೨೨

ಹೊಸ ಹೊಸ ಬಗೆಯಾಗಿ ಹಾಡುವ್ರೋಪಳ ಗಾನ
ರಸಕೆ ತಾನುಬ್ಬಿ ರಾಜೇಂದ್ರ
ಅಸಿಯಳ ವೀಣೆಯನೊಯ್ಯನೋಸರಿಸಿ ತ
ಕ್ಕಿಸಿ ಬಿಟ್ಟು ಕೂಡೆ ಹಾಡೆಂಬ ೨೩

ಬೆಳಗಿನೊಳೋಲಾಡುವಂತೆ ಸಂಗೀತದ
ಸುಳಿಯೊಳು ತೇಲಾಡುವಂತೆ
ತೆಳುಗಾಳಿಯೇರಿ ವೈಹಾಳಿಯ ಮಾಡುವಂ
ತೆಳೆವೆಂಗಳರಸಿ ಹಾಡಿದಳು ೨೪

ಒಸೆದುಬ್ಬುವನು ಮರ್ಝು ಕುಸುಮಿಯ ರಾಗವೆ
ಕುಸುಮದ ಕಂಪೆಯೆಂದೆಂಬ
ಕುಸುಮವ ಕೆದರಿದಂತಾಯ್ತೆಂಬ ನೊಸಲೊಳು
ನೊಸಲಿಟ್ಟು ಮುಂಡಾಡಿ ಬಿಡುವ ೨೫

ಗಂಡನೆಷ್ಟೆಷ್ಟು ಮನ್ನಿಸಿದನಷ್ಟಷ್ಟು ಕೊ
ಯ್ಜೆಂಡಿನಂತುಬ್ಬಿ ಹಾಡುವಳು
ಮಂಡೆಯೊಲಿದು ಜಿನ ಜಿನಯೆಂದು ಷಟ್ಖಂಡ
ಮಂಡಲೇಶ್ವರ ಕೇಳುತಿಹನು ೨೬

ಗಾನ ಸಾಕತಿವೇಳೆಯಾದುದೋಪಳೆಯೆಂದ
ನಾ ನಾರಿ ಪುರುಜಿನೇಶ್ವರನ
ಸಾನುರಾಗದಿ ಹಾಡಿ ಕೆಲದೊಳಗಿರಿಸಿದ
ಳಾನಂದದಿಂದ ವೀಣೆಯನು ೨೭

ವೀಣೆಯನಿರಿಸಿ ನಗುತ ಭಕ್ತಿರಸದಿಂದ
ಪ್ರಾಣೇಶನಡಿಗೆರಗಿದಳು
ರಾಣಿಯ ತೆಗೆದಪ್ಪಿಕೊಂಡನವಳು ಮುನ್ನ
ವೀಣೆಯನಪ್ಪಿದಂದದೊಳು ೨೮

ಹಂಸತೂಲದ ತಲ್ಪದೊಳು ಕನಸಿನೊಳಾಗ
ಹಂಸಗಾಮಿನಿಗಾಣ್ಮ ತೋರ್ಪ
ಹಂಸನಾಥನಗಾಣ್ಬನಾ ನೃಪನೆದೆಯೊಳ
ದೇಂ ಸೊಬಗಾದುದೊ ಮೂರ್ಛೆ ೨೯

ಸುಖದ ಮಡುವಿನೊಳು ಬಿದ್ದಂತೆ ತಾವಿಷ್ಟು
ಸುಖಮೂರ್ಛೆದಟ್ಟಿ ವಿಶ್ರಮಿಸಿ
ಸುಖವೆ ಕೈವಿಡಿದೆತ್ತಿದಂತೊಡೆನೆದ್ದರಾ
ಸುಖಿಗಳು ಜಿನಸಿದ್ಧಯೆನುತ ೩೦

ತನುವ ತೊಳೆದು ಮಡಿದುಗುಲನ ಮೇಲ್ಕೊಂಡು
ಘನಶೀತಳೋಪಚಾರಗಳ
ಅನುಭವಿಸುತ ಸೂಳುವೀಳೆಯಗೊಳುತ ಮೋ
ಹನಶೀಲರಿದ್ದರೇನೆಂಬೆ ೩೧

ಹೊಸ ಕಾಂತಿ ತನುವಿನೊಳುಕ್ಕಿ ಸೂಸುತ ಮುಖ
ರಸ ತಳತಳಿಸಿ ತೊಟ್ಟಿಡುತ
ಅಸುವಿನೊಳಾನಂದ ತುಂಬಿ ತುಳುಕುತ ರಾ
ಜಿಸುತಿದ್ದರಧಿಕ ಲೀಲೆಯೊಳು ೩೨

ವೇಳೆಯನರಿದಾಗ ಕುಸುಮಾಜಿ ನಗುತ ನ
ಮ್ಮಾಲಯಕಿಂದು ನರ್ತನದ
ಬಾಲೆಯರ್ಬೈತಂದು ಹೋದರರಸಯೆಂದು
ವೀಳೆಯಗೊಡುತ ನುಡಿದಳು ೩೩

ಬಂದುದೇನವರು ಹೋದಂದವೇನಬಲೆ ನಿ
ನ್ನೊಂದಾಗಿಯೇನ ನುಡಿದರು
ಮುಂದಾದ ಹದನ ಹೇಳಳುಕಬೇಡೆಲಗೆ ನೀ
ನೆಂದುದ ಕೇಳ್ವೆನಿಂದೆಂದ ೩೪

ರಾತ್ರಿಗೆ ದೇವರು ನೃತ್ಯವ ನೋಡಿ ಪ
ವಿತ್ರವ ಮಾಡಬೇಕೆಂದು
ಪಾತ್ರದ ಪೆಂಗಳಿನಗೆ ಪೇಳ್ದರೆಂದಬ್ಜ
ನೇತ್ರೆ ನುಡಿದಳು ನಲ್ಲನೊಳು ೩೫

ಆಗಲೆಂದೊಡಬಟ್ಟನೊಡನೆ ನಲ್ಲಳಿಗೆ ಬ
ಹಾಗ ತಾನಿಟ್ಟ ಭೂಷಣವ
ರಾಗರಸದೊಳುರೆ ಕರೆದು ಚೌಕುಳಿ ಹೊರ
ತಾಗಿಯೆಲ್ಲವನೂಲ್ದು ಕೊಟ್ಟ ೩೬

ನಾದುನಿಗುಡುಗೊರೆಯಿತ್ತನೂಳಿಗದ ತ
ಳೋದರಿಯರನು ಮನ್ನಿಸಿದ
ಬಾದಳಗಂಡಿಯೊಳಗೆ ಕಂಡನಸ್ತಾದ್ರಿ
ಗಾದಿತ್ಯಬಿಂಬ ಸಾರ್ದುದನು ೩೭

ಶುಚಿಯಾಗಿ ಮತ್ತೆ ಮೇಲ್ನೆಲೆಗೈದಿ ಜಿನಸಿದ್ಧ
ಗುಚಿತಾರ್ಘ್ಯಪಾದ್ಯವನಿತ್ತು
ಅಚಳಿತಾಸನದೊಳು ಕುಳಿತು ಕಂಗಳ ಮುಚ್ಚಿ
ಪ್ರಚುರಾತ್ಮಯೋಗದೊಳಿದ್ದ ೩೮

ಮರೆದನಾಗಳೆಯಿಷ್ಟು ಹೊತ್ತು ನಲ್ಲಳ ಕೂಡೆ
ಮೆರೆದುದು ಹಳೆಮೆರಹಾಯ್ತು
ಅರಿದನಾಗಳೆ ಕಂಡನಾಗಳೆ ಹಂಸನ
ಕುರುಹನಾ ರಾಜಯೋಗೀಂದ್ರ ೩೯

ಸಂದು ಭೋಗದೊಳಿದ್ದು ಯೋಗಕೆ ಸಲುವಾಗ
ಹಿಂದಣ ವಾಸನೆಯಿಲ್ಲ
ಒಂದ ಬಿಟ್ಟೊಂದು ವಸ್ತ್ರವ ಹೊದೆವಂತಿಹು
ದೆಂದೆಂದು ಭಾವವಾ ನೃಪಗೆ ೪೦

ತನುವೆ ಜಿನಾಲಯ ಮನವೆ ಸಿಂಹಾಸನ
ವನುಪಮಾತ್ಮನೆ ಜಿನನೆಂದು
ತನಗಾಗಿ ತನ್ನಿಂದ ತನ್ನ ತಾ ನೋಡುತಿ
ರ್ದ್ದನು ಸರ್ವ ಚಿಂತೆಯ ನೀಗಿ ೪೧

ಬುದ್ಧಿಯೊಳಾ ರಾಯ ಬೆಳುದಿಂಗಳೊಳಗೊಂದು
ಸಿದ್ಧಬಿಂಬವ ರಚಿಸಿದನು
ಸಿದ್ಧೋಹಮೆಂದಲ್ಲಿ ಸುಖದೊಳಿದ್ದನು ಜಿನ
ಸಿದ್ಧರಿಹಂತೆ ಮುಕ್ತಿಯೊಳು ೪೨

ಮಾಣಿಕಚೆಂಡನಿಟ್ಟಂತರ್ಕ ಹೋದನು
ಹೂಣಿ ದೇಗುಲ ಮರೆಯಾಯ್ತು
ಕಾಣಿಸುತಿದ್ದುವು ನಕ್ಷತ್ರವಿಲ್ಲಿಗೆ
ವೀಣಾ ಸಂಧಿ ಸುಗಂಧಿ ೪೩

# ಪೂರ್ವನಾಟಕ ಸಂಧಿ

ಎಲ್ಲವ ಮರೆದು ತನ್ನಾತ್ಮನನರಿದು ತ
ನ್ನಲ್ಲಿ ತಾ ನಿಂತು ಯೋಗದೊಳು
ತಲ್ಲೀನವಾಗಿ ನಾಲ್ಘಳಿಗೆಯಿದ್ದನು ರಾಯ
ಮೆಲ್ಲನಿರಿಸಿದನಂತದನು ೧

ಕಣ್ದೆರೆದನು ತನ್ನ ಕೆಲದೊಳು ನಿಂದಿರ್ದ
ಪೆಣ್ ದೇವ ಸಮಯವಾಯ್ತೆನಲು
ಜಾಣ್ದೋರಿ ಸಿಂಗರಿಸಿದನೆದ್ದನೊಡನೆ ಶ
ರಣ್ದಿವ್ಯ ಜಿನಸಿದ್ಧಯೆನುತ ೨

ತಾವರೆಯೇರಿದ್ದ ಕಳಹಂಸ ಮತ್ತೊಂದು
ಹೂವಿನ ಬನಕೆ ಹೋಹಂತೆ
ಹೂವಿನುಪ್ಪರಿಗೆಯಿಂದಿಳಿದು ನಾಟಕಶಾಲೆ
ಗಾ ವಿಭು ನಡೆತರುತಿರ್ದ ೩

ತೊಡೆದ ಕಂಪಿನ ಗಾಳಿ ಮೆಯ್ಯ ಕಂಪಿನ ಗಾಳಿ
ಪೊಡವಿಯ ಕಂಮನೆ ಮಾಡೆ
ನಡೆದು ನಾಟಕಶಾಲೆಯೊಳಹೊಕ್ಕು ಕುಳಿತನು
ಗ್ಗಡದ ಸಿಂಹಾಸನದಲ್ಲಿ ೪

ನಾಟಕಶಾಲೆಯಂತಿಂತಿರ್ದುದೆಂದು ಕ
ರ್ಣಾಟಿಸಿ ಪೇಳಲಾನರಿಯೆ
ಕೋಟಿ ರತ್ನಗಳಿಂದ ಸುರರ ವಿಮಾನಕೆ
ಸಾಟಿಯೆಂದಾಡಿ ಬಿಡುವೆನು ೫

ಸಿರಿಗಂಪು ಕುಂಕುಮ ಪನ್ನೀರು ಸಾದು ಕ
ಸ್ತುರಿಯ ಸಾರಣೆ ಚಳೆಯಗಳ
ಪೊರಪಿಂದ ಸ್ವರ್ಗದ ಕಂಪು ತುಂಬಿದ ಹೊನ್ನ
ಕರಡಿಗೆಯಂತೊಪ್ಪುತಿಹುದು ೬

ನೋಡುವ ಮುನಿದಡ್ಡ ಮೋರೆದೆಗೆವ ಕಾಲ್ಗೆ
ಕೊಡೆರಗುವ ತಿಳಿವಂತೆ
ಮಾಡಿದ ಪೆಣ್ಗಂಡುಗಳ ರೂಪು ರಂಜಿಸಿ
ಗೋಡೆಯೊಳಿದ್ದುವೇನೆಂಬೆ ೭

ಗಿಳಿಯನೋದಿಸುವಂತೆ ವೀಣೆಯ ನುಡಿಸುವಂ
ತೊಲೆದು ಪಾತ್ರವನಾಡುವಂತೆ
ಹಳಹಳಚನೆ ಪೆಣ್ಣುರೂಪಿನ ಚೆಲ್ವ ಪು
ತ್ತಳಿಗಳೆಸೆದುವು ಭಿತ್ತಿಯೊಳು ೮

ಸುರರ ಖೇಚರರ ಪೆಣ್ಗಂಡು ರೂಪಲ್ಲಲ್ಲಿ
ಬರೆದಿರ್ದುವಿವು ಬೊಂಬೆಯಲ್ಲ
ಸುರರು ಖೇಚರರು ನಾಟ್ಯವ ನೋಡಿ ಸುಖತಟ್ಟಿ
ಪರವಶರಾದರೆಂಬಂತೆ ೯

ಧರೆಗೆ ವಿಸ್ಮಯವಾದ ನಾಟಕಶಾಲೆಯೊ
ಳರಸನೋಲಗವಾಗಲೊಡನೆ
ಬರುತಿದ್ದರುಚಿತ ಕಲಾವಿದರೆಸೆವ ಸಿಂ
ಗರಗೂಡಿ ಘನ್ಮನುತಾಗ ೧೦

ರಾಜಕುಮಾರರು ರಸಿಕರು ಬುಧರಧಿ
ರಾಜರು ಕವಿ ಗಮಕಿಗಳು
ತೇಜಿಷ್ಠರೈತಂದು ಭರತರಾಜನ ಕಂಡು
ತೇಜದೊಳೊಲ್ದು ಕುಳಿತರು ೧೧

ಗಣಿಕೆಯರೆಕ್ಕಡಿಗರು ನಾಟ್ಯಶಾಸ್ತ್ರ ಲ
ಕ್ಷಣಿಕರು ಭಾವರಂಜಕರು
ಗುಣಿಗಳು ಮಂತ್ರಿಗಳರಸನ ಕಂಡು ತಿಂ
ತಿಣಿಯಾಗಿ ಕುಳಿತರೋಜೆಯೊಳು ೧೨

ವೃದ್ಧನುತ್ತಮನು ವಿವೇಕಿ ತತ್ಪತಿಕಾರ್ಯ
ಸಿದ್ಧನು ಬಂದು ಕೈಮುಗಿದು
ಬುದ್ಧಿಸಾಗರನೆಂಬ ಮುಖ್ಯಪ್ರಧಾನ ವಿ
ಶುದ್ಧ ಕುಳಿತನು ಸಮ್ಮುಖದಿ ೧೩

ತೆರೆಸೇಲೆ ಮರೆಯೊಳಾ ತೆರದ ಗವಾಕ್ಷದೊ
ಳೊರೆದು ನೋಡುತ ಬಾಹ್ಯಜನವ
ಅರಸಿಯರಿದ್ದರು ಭೂಪಾಲನೆಡಬಲ
ದೆರಡು ಪಕ್ಕದೊಳು ಸಾಲಾಗಿ ೧೪

ಒಲೆಯದಿರೊತ್ತದಿರೊಯ್ಯಾರದೊಳು ಕುಳ್ಳಿ
ರುಲಿಯದಿರಲ್ಲಲ್ಲರೆಂದು
ಸುಳಿದು ಕಟ್ಟಿಗೆಕಾರರೆಲ್ಲರ ತರವರಿ
ದೊಳುನುಡಿದೋರಿ ತಿದ್ದಿದರು ೧೫

ಪರಿಮಳದಿಂದು ಚಿತಾಸನದಿಂದ ಕ
ಪ್ಪುರವೀಳೆಯದಿಂದ ಸಭೆಯ
ತರತರವರಿದು ಮನ್ನಿಸಿದರು ಪರಿಚಾರ
ಕರು ರಾಯನನುಮತದಿಂದ ೧೬

ತಾಳಧಾರಿಯು ತಾಳವಿಡಿದಾಗ ನೃತ್ಯದ
ತಾಳತೋರುವವೊಲು ನಿಂದು
ಕೇಳಿಸಿದನು ಹೊಸ ಪರಿಯಾಗಿ ಮುನ್ನೆಂದು
ಕೇಳಿಸಿತಿಲ್ಲಿಂತುಟೆನಿಸಿ ೧೭

ಒಲೆದ ಮಸ್ತಕ ಶ್ರುತಿಗಿಟ್ಟೆಡಗಿವಿ ತೊಡೆ
ಗಳವಟ್ಟ ಮದ್ದಳೆಯಿಂದ
ಹಲವು ಕತ್ತರವ ಕಳಾಸವನರಿದು ಮ
ದ್ದಳೆಗ ಕೇಳಿಸಿ ನಿಂದನೊಡನೆ ೧೮

ನಲ್ಲಳ ನಡುವ ಪಿಡಿವವೊಲಾವುಜವಿಡಿ
ದುಲ್ಲಾಸದಂಕೆ ಝುಂಕೆಗಳ
ಕೊಲ್ಲಣಿಯೊಳಗೆ ಕೇಳಿಸಿದನಾವುಜಕಾರ
ನೆಲ್ಲರ ಚಿತ್ತ ಜುಮ್ಮೆನಲು ೧೯

ಡಕ್ಕೆ ನಾಟ್ಯಾನಕ ಚಂಪೆ ಕಿಂಕಿಣಿ ಡೌಡೆ
ಕುಕ್ಕುರು ತುಡುಮು ರಿಂಚಿಯವ
ತಕ್ಕಿಟ ತೋಕಿಟ ತೋಂಗಿ ತೋಹಂಗಿ ತೋ
ಧಿಕ್ಕಿಟಯೆನೆ ಕೇಳಿಸಿದರು ೨೦

ವಾದ್ಯ ರಂಜನೆಯಾಗಲೊಡನೆ ಮಹಾಗಾನ
ವಿದ್ಯರಾಯೆಂದು ರಾಗಗಳ
ವೇದ್ಯಗಾಣಿಸಿದರು ತಿತ್ತಿದಂಡಿಗೆ ಶ್ರುತಿ
ಹೃದ್ಯವಾಗಿರೆ ಹೊಸತೆನಿಸಿ ೨೧

ಆದಿಜಿನೇಶನ ಸಿದ್ಧರ ಮುನಿಗಳ
ಶ್ರೀದಿವ್ಯಹಂಸನಾಥನನು
ನಾದಪೂಜೆಯೊಳು ಪೂಜಿಸಿ ಭರತೇಶಗಾ
ಮೋದದೋರಿದರು ಗಾಯಕರು ೨೨

ಬಳಿಕ ಗಾನದೊಳನುಗತವಾಗಿ ವಾದ್ಯಸಂ
ಕುಳವ ಮೇಳೈಸಿ ತಾವೆಲ್ಲ
ಒಳಸರಿದೊಯ್ಯನೆ ತೆರಯು ಮರೆಯ ಪಾತ್ರ
ದೊಳು ದನಿಗೈದರೇನೆಂಬೆ ೨೩

ನೃತ್ಯೋಪನಯನವ ತೆರೆಯ ಮರೆಯೊಳು ಸಾಂ
ಗತ್ಯಗಾಣಿಸಿ ನಸುನಿಲಿಸಿ
ನೃತ್ಯವಿದ್ಯಾಧರನೆಂಬ ನಟ್ಟುವ ಒಂದ
ನತ್ಯಂತ ಸುಖಿಯ ಸಮ್ಮುಖಕೆ ೨೪

ಮುಂದಲೆ ಜುಂಗುಡಿ ಸುತ್ತಿದ್ದ ಹಚ್ಚಡ
ಹೊಂದೊಡವಾಂತ ಕೈ ಸೆಳವೆ
ಬಂದು ಭೂವರಗೆ ಸಾಷ್ಟಾಂಗವೆರಗಿ ಯೆದ್ದು
ನಿಂದು ಬಿನ್ನವಿಸಿದನಿಂತು ೨೫

ವಿವಿಧ ವಿದ್ಯಾಂಗ ಪರೀಕ್ಷಕ ಹಂಸಾನು
ಭವ ಸಿದ್ಧ ಸ್ವರ್ಗಪ್ರಸಿದ್ಧ
ಅವನೀಶರೊಡೆಯ ನನ್ನೊಡೆಯ ಬಿನ್ನಹವೊಲಿ
ದವಧರಿಸಾದಿಚಕ್ರೇಶ ೨೬

ಸ್ವರ್ಗದೊಳುಂಟೇನೊ ನಿನ್ನ ಮೆಚ್ಚಿಸುವ ಸು
ಮಾರ್ಗನಾಟಕವದಂತಿರಲಿ
ಮಾರ್ಗವೆಂದೆರಡು ಪಾತ್ರವ ತಿದ್ದಿದೆಸು ಕಣ್ಣ
ಕೊರ್ಗೊನೆಯೊಳೆ ನೋಡು ಸಾಕು ೨೭

ನೇತ್ರಮೋಹಿನಿ ಚಿತ್ತಮೋಹಿನಿಯೆಂದೆಂಬ
ಪಾತ್ರದ ತರುಣಿಯರೆನ್ನ
ಪುತ್ರಿಯರವಧರಿಸೆಂದು ಕೈಮುಗಿದಾಗ
ಪಾತ್ರದೆಡೆಗೆ ಸಾರ್ದನೊಡನೆ ೨೮

ಸಂಜೆಗೆಂಪೊಲೆವಂತೆ ತೆರೆ ತೊಲಗಿತು ಕಣ್ಗೆ
ಕಂಜಾಕ್ಷಿಯರು ಕಾಣಿಸಿದರು
ರಂಜಿತ ನಳಿತೋಳ್ಗಳೆತ್ತಿ ಸುವರ್ಣ ಪು
ಷ್ಪಾಂಜಲಿ ಮಾಡಿದರೊಡನೆ ೨೯

ನಡುವಿನೊಳಿಟ್ಟ ಹಸ್ತಗಳು ಪಸರಿಸಿದ
ತೊಡೆ ಸಾರ್ದ ಮಡಗಳಿಂದಾಗ
ಮಿಡುಕದೆ ನಿಲುವಿನ ರೇಖೆದೋರಿದರು ಮು
ಪ್ಪೊಡವಿಯಂದವ ತೋರುವಂತೆ ೩೦

ತಿಟ್ಟವಿಕ್ಕಲು ತಿದ್ದಲರಿದೆನಿಸುವ ಮೈಯ
ಕಟ್ಟಾಯವೇರುವ ಪ್ರಾಯ
ಕಟ್ಟಾಣಿ ಹೆಂಗಳೆಸೆದರು ನಟ್ಟುವರೊಳು
ಹುಟ್ಟಿತಕ್ಕವರೆಯೆಂಬಂತೆ ೩೧

ತೊಟ್ಟ ಸಿಂಗಾರದ ಕೊಂಕು ಬೆಂಕಣೆ ರಸ
ತೊಟ್ಟಿಡುವಂತೆ ಲಾವಣ್ಯ
ಮುಟ್ಟೆ ಕಂದುವ ಮೈಯ ಪೆಂಗಳಿದ್ದರು ನಿಂದ
ತಿಟ್ಟ ಸೋಲಿಸೆ ರಾಜಸಭೆಯ ೩೨

ನೇತ್ರಮೋಹಿನಿ ಮೆಲ್ಲನೊಲಿದು ರಾಯನ ನೋಡಿ
ನೇತ್ರಸುಖವ ಸೂಚಿಸಿದಳು
ಸೂತ್ರಿಸಿ ಚಿತ್ತಮೋಹಿನಿ ನೋಡಿ ಚಿತ್ತವ
ಸೂತ್ರದಂತಲುಗಾಡಿಸಿದಳು ೩೩

ನೋಟದೊಳಗೆ ಕೊಂದರೊಮ್ಮೆ ನೋಟಕರನು
ನಾಟಿಸಿ ನಸುನಗೆಯಿಂದ
ಲೂಟಿ ಮಾಡಿದರು ಮೈಯೊಲೆದಾಟದಿಂದೆದೆ
ಗೋಟೆಯ ಕೊಂಡರೇನೆಂಬೆ ೩೪

ಒಬ್ಬರೊಬ್ಬರು ಬಲಮುರಿ ಯೆಡಮುರಿಯಾಗಿ
ಸಬ್ಬವದೊಳು ಚಾರಿವರಿದು
ಇಬ್ಬರು ಸುಳಿದಾಡಿ ನಿಂದಳೊಬ್ಬಳು ಹಿಂದೆ
ವೊಬ್ಬಳಾಡಿದಳು ರಂಗದೊಳು ೩೫

ಹೊಂಗಿ ಹೊಳೆದು ನೇತ್ರಮೋಹಿನಿ ತಾಳ ಲ
ಯಂಗಳನರಿದು ನರ್ತಿಸುತ
ರಂಗದೊಳಿದ್ದಳು ನೋಡುವ ಜನದಂತ
ರಂಗದೊಳಿದ್ದಳೇನೆಂಬೆ ೩೬

ತೋಳ ನೀಡಿದಳು ಮನ್ಮಥನೊರೆಯಿಂದುರ್ಚಿ
ಬಾಳ ನೀಡಿದನೊಯೆಂಬಂತೆ
ಚಾಳೆಯದೊಳು ಹೊಳೆದು ರಾಜಸುತರೆದೆ
ಹೋಳಾಗುವಂತೆ ಹೊಮ್ಮಿರಿದು ೩೭

ಎತ್ತ ನೀಡಿತು ಹಸ್ತವತ್ತ ದೃಷ್ಟಿಗಳಲ್ಲಿ
ಚಿತ್ತವೆಲ್ಲವು ಭಾವ ರಸವು
ತತ್ತತ ತಿತ್ತಿತಿ ಯಾರೆಯಾರೆಯೆನ
ಲತ್ತಿತ್ತಲೊಲೆದು ಹರೆದಳು ೩೮

ತಳೆರ್ವಜ್ಜೆ ತಟವುಟನಿಡುವಾಗ ವಿಟರೆದೆ
ತಳಹೊಳಗೊಳುತಿಹುದೊಡನೆ
ಒಲೆದು ಕಾಲ್ನೀಡೆ ಮುನಿದು ತಮ್ಮನೊದೆದ ನ
ಲ್ಲಳ ನೆನೆದರು ರಾಜಸುತರು ೩೯

ಭಾವ ವಿಭಾವಾನುಭವ ಮುಂತಾದ ಕ
ಲಾವಿರಚನೆ ರೇಖೆದೋರಿ
ಭಾವಕರೆಲ್ಲರ ಚಿತ್ತರಂಜಿಸಲಾಡಿ
ಭಾವೆ ಹಿಂಗಡೆಗೆ ಸಾರಿದಳು ೪೦

ಚಿತ್ರಮೋಹಿನಿ ಕೂಡೆ ಬಂದು ನಿಂದಳು ಮರ್ಝು
ಚಿತ್ತವೆಲ್ಲವೆ ಚಿಗುರಿಸುತ
ವೃತ್ತಕುಚದ ಬಲುಭಾರವ ಬಡನಡು
ಹೊತ್ತುನಿಂದುದು ಚಿತ್ರವೆನಿಸಿ ೪೧

ದಿಗಿದಿಗಿನೊಡನಿದಿರಾಗಿ ಬಹಳು ನಸು
ನಗುತ ರಾಯನನಪ್ಪುವಂತೆ
ಭುಗಿಲನೆ ತಿರುಗುವಳರಸನೊಳ್ಮನಿವಷ್ಟ
ಮೊಗವಿಕ್ಕಿ ಹೋಹಳೆಂಬಂತೆ ೪೨

ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ
ಜಲಧಿಯ ಸುಳಿಯೊಯೆಂಬಂತೆ
ಬಲಕೆಡಕೊಲೆದು ಹರಿವಳೆಳೆವಿಸಿಲಲ್ಲಿ
ಯೆಳೆನಾಗ ಹರಿವಂತೆ ಮುರಿದು ೪೩

ಮೋರೆಯೊಲಿದು ನೋಡಿ ನೃಪಸುತರಿಗೆ ಹುಬ್ಬು
ಹಾರಿಸುವಳು ನಸುನಗುತ
ಹಾರುವುದೊಡನವರೆದೆ ತನ್ನ ತೋಳೆತ್ತಿ
ನೀರೆ ಕೊಲ್ಲಣಿಸಿ ಸುತ್ತುವಳು ೪೪

ಮಾರನ ಮದದಾನೆ ಚಾರಿವರಿದು ನಾಟ್ಯ
ಧಾರಿಣಿಯೊಳಗಾಡಿದಂದೆ
ಆರಭಟಿಯೊಳು ನೃತ್ಯವಾಡಿ ಹಿಂದಕೆ
ಸಾರಿದಳಾ ಬೆಲೆವೆಣ್ಣು ೪೫

ಸಂಗೀತಕಾರರು ತಾಳ ಮೇಳವನು ಸು
ಸಂಗಿಸಿಕೊಂಡು ಜೋಕೆಯೊಳು
ಭೃಂಗಾಳಿಯಂತೆ ತಂಗಾಳಿಯಂತೊಡನೆ ಭಾ
ಷಾಂಗ ಕೇಳಿಯ ಕೇಳಿಸಿದರು ೪೬

ಶ್ರೀಭರತೇಶನ ಮನವೆಂಬ ನಭದಲ್ಲಿ
ಶೋಭಿಸುವಮೃತ ಭಾಸ್ಕರನೆ
ಶ್ರೀಭರ್ತೃ ಕರ್ತೃ ಚಿದಂಬರಪುರುಷ ಸು
ಲಾಭ ತೋರೆಂದು ಹಾಡಿದರು ೪೭

ಬಾಳು ಬಟ್ಟಲ ಪಿಡಿದೊಮ್ಮೆಮ್ಮೆ ಪೊನ್ನ ಪೂ
ಗೋಲು ಪೊಂಬರಿಗೆಯಾಂತೊಮ್ಮೆ
ಕಾಲಿಟ್ಟು ಹೊಳೆವುತಿದ್ದರು ಮನಸಿಜನ ಮಾ
ಸಾಳುಗಳಂತೆ ದಿಟ್ಟೆಯರು ೪೮

ಉರೆ ಮೆಚ್ಚಿ ಸಭೆಯೆಲ್ಲ ನೃತ್ಯವ ಹೊಗಳಿತು
ನೆರೆ ಚಾಗಿಗಳ ದೇವನಾಗ
ಹೊರಗಟ್ಟಿ ನಟ್ಟುವಗಾ ಮೇಳದವರಿಗು
ಹೊರುವಷ್ಟು ಕೊಟ್ಟ ಮನ್ನಣೆಯ ೪೯

ನೇತ್ರಮೋಹಿನಿ ಚಿತ್ತಮೋಹಿನಿಯರಿಗಾ ಪ
ವಿತ್ರರತ್ನಾಭರಣಗಳ
ಧಾತ್ರೀಶನಿತ್ತನು ಕಾಸೆಯ ಸೆರಗೊಡ್ಡಿ
ಪಾತ್ರಕಾಂತೆಯರಾಂತರೊಸೆದು ೫೦

ಬುದ್ಧಿಸಾಗರನೊಬ್ಬನಿರಲೆಂದು ಮಿಕ್ಕಸ
ವೃದ್ಧಸಭಾಜನಗಳಿಗೆ
ಪದ್ಧತಿವಿಡಿದುಡುಗೊರೆಯಿತ್ತು ಬೀಳ್ಕೊಟ್ಟ
ನುದ್ಧಾರಶೀಲನಾ ಲೋಲಾ ೫೧

ನೀಟಾದ ತೆರೆಯೊಳು ಸತಿಯರಿದಿರು ಮಂತ್ರಿ
ನಾಟಿ ಗದ್ದುಗೆಯೊಳು ನೃಪತಿ
ನಾಟಕಸತಿಯರ್ರೈತರುತಿದ್ದರಿದು ಪೂರ್ವ
ನಾಟಕಸಂಧಿ ಸುಗಂಧಿ ೫೨

# ಉತ್ತರನಾಟಕ ಸಂಧಿ

ಪೂರ್ವನಾಟಕವಾದುದುತ್ತರ ನಾಟ್ಯದ
ಪೂರ್ವಿಕಾಂಗವ ನೋಳ್ಪೆನೆಂದು
ಪೂರ್ವಚಕ್ರೇಶ್ವರನಿರೆ ಬರುತಿದ್ದರ
ಪೂರ್ವನಾಟ್ಯದ ಸುದತಿಯರು ೧

ಕಂಕಣಧ್ವನಿ ಕಣಕಣಯೆನೆ ಕಟಿಸೂತ್ರ
ಕಿಂಕಿಣಿ ಕಿಣಿಮಿಣಿ ಯೆನಲು
ಪಂಕಜಾಕ್ಷಿಯರೈದುತಿದ್ದರಂದುಗೆಗಳ
ಝೇಂಕಾರ ಝಣಝಣರೆನಲು ೨

ಗದ್ದುಗೆಯೊಳಗೊಂದು ಹೊನ್ನಪುತ್ತಳಿಯನು
ತಿದ್ದಿ ಸಿಂಗರಿಸಲಂತದಕೆ
ಇದ್ದಂತೆ ಪ್ರಾಣ ಬಂದೀಕ್ಷಿಸುವುದೊ ಯೆನ
ಲಿದ್ದನಾ ಚೆಲುವರ ದೇವ ೩

ತೋರುವ ಚಂದ್ರಬಿಂಬದೊಳಡಗಿದ ಹದಿ
ನಾರು ಕಲೆಗಳೊ ಯೆಂಬಂತೆ
ವಾರೊಡ್ಡಿ ಮುತ್ತಿನ ಜವನಿಕೆಯೊಳು ಹದಿ
ನಾರು ಪಾತ್ರಗಳಿದ್ದುವಾಗ ೪

ತೆರೆಯ ಮುಂಗಡೆಯೊಳು ನಿಂದು ಮದ್ದಳೆಗನು
ಭರತ ಚಕ್ರಿಗೆ ಕೈಯ ಮುಗಿದು
ಅರಿಕಟ ತದಿಕಟ ರಿಕ್ಕ ರಿಕ್ಕಟ ದಿಮಿ
ದಿರುದಿಮಿಕೆಂದು ಕೇಳಿಸಿದ ೫

ರೀವಿರೀವಿಳಿ ಜೆಜೆಜೆಂಜೆ ರಿಝಂ ಝಂ ಮಿರುಕು
ಚಾವು ಚಾವುಲು ಜುಂ ಜುಮ್ಮೆಂದು
ಆವುಜಕಾರ ಕೇಳಿಸಿದನು ಪಾತ್ರದ
ಭಾವಕಿಯರ ಪಜ್ಜೆ ನಲಿಯೆ ೬

ಅಂಗೈಯನೆತ್ತಿ ಸನ್ನೆಯೊಳಾಗ ವಾದ್ಯರ
ವಂಗಳ ನಿಲಿಸಿ ಜೋಕೆಯೊಳು
ರಂಗಶೇಖರನೆಂಬ ನಯಕಾರ ಬಂದನಂ
ದಂಗಜರೂಪನಿದಿರಿಗೆ ೭

ಗಡ್ಡ ಕುಂಡಲ ದೋತ್ರ ನಡಸುತ್ತಿದಂಬರ
ದೊಡ್ಡ ಮುಂಡಾಸು ಚಂದನದ
ಅಡ್ಡ ಬೊಟ್ಟಪರಂಜಿ ಸೆಳವೆವಿಡಿದು ಬಂದು
ಅಡ್ಡಬಿದ್ದನು ರಾಯನಡಿಗೆ ೮

ಸಕಲ ಕಲಾಧರ ಸಾರ್ವಭೌಮೋತ್ತಮ
ಸುಕವಿಜನಾಂಭೋಜ ಭಾನು
ಮಕರಾಂಕ ನಿರ್ಜಿತರೂಪ ಷಟ್ಖಂಡ ನಾ
ಯಕನೆ ಚಿನ್ನಹವೆಂದನೊಲಿದು ೯

ಹದಿನಾರು ಮಂದಿ ಮನುಗಳ ಸಂಪದವೆಲ್ಲ
ವುದಿಪೊಂದುಗೂಡಿ ನಿಂದಂತೆ
ಹದಿನಾರು ಪಾತ್ರವಿದ್ದಪುಪವಧರಿಸಿತೆ
ಹದಿನಾರನೆಯ ಮನುಮುಖ್ಯ ೧೦

ನೀನಿಂದ್ರ ನಿನ್ನ ಮಂತ್ರಿಯು ಸುರಗುರು ಪಾತ್ರ
ದಾ ನಾರಿಯರು ದಿವಿಜೆಯರು
ಈ ನಾಟ್ಯವಿಂದು ಮೋಹಿಸುವುದಂತದ ನೋಳ್ಪೆ
ನಾನೆಂದು ಪೋದ ಕೈಮುಗಿದು ೧೧

ರೇಖೆಗಾಣಿಸಿ ಜವನಿಕೆಯಿದಿರೊಳು ರಂಗ
ಶೇಖರ ನಿಂದು ಸೂಚಿಸಲು
ಶಾಖೋಪಶಾಖೆಯೊಳಾಳಾಪ ಚಂದ್ರಮ
ಯೂಖದೋರಿದರು ನೀರೆಯರು ೧೨

ಶಿಖರಿಣಿ ಸಿಂಜಿಸಿಯೆಂದೆಂಬರಿರ್ವರು
ಮುಖರಿಗಾಯಕಿಯರು ನಿಂದು
ಸಖಿತನ ತಪ್ಪದಾಳಾಪಿಸಿದರು ತಿತ್ತಿ
ಮುಖವೀಣೆಗಳ ಶ್ರುತಿಗೂಡಿ ೧೩

ಸರಲ ಸರಲವಾಗಿ ಸಪುರ ಸಪುರವಾಗಿ
ತರಲ ತರಲವಾಗಿ ತೋರಿ
ವಿರಲ ವಿರಲವಾಗಿ ರಾಯಿಗಾಣಿಸಿದರು
ಕೊರಳ ಬೆರಳ ಸರಿತದೊಳು ೧೪

ಮಂಜುಲನೇತ್ರವಟ್ಟಿಯ ಸೀಳಿದಂತಪ
ರಂಜಿಸರಿಗೆದೆಗೆದಂತೆ
ಕಂಜದ ಕಂಪನುಂಡೇಳ್ವ ತುಂಬಿಯ ಗಾನ
ರಂಜನೆಯೆನ ರಾಗಿಸಿದರು ೧೫

ಅಳಿವಂತೆ ರಾಗವ ತುಳಿವಂತೆ ಜಾಡ್ಯವ
ಹಿಳಿವಂತೆ ಮೋಹನರಸವ
ತೊಳಿವಂತೆ ಮನವ ಸಂಜೀವನಾಮೃತವನು
ತಳಿವಂತೆ ರಾಗದೋರಿದರು ೧೬

ಹಬ್ಬಿಸುವಂತೆ ರಾಗವ ಸ್ವರ್ಗಲೋಕಕೆ
ಯೆಬ್ಬಿಸುವಂತೆ ರೋಮಗಳ
ಕಬ್ಬಿನಬಿಲ್ಲು ಜೇವೊಡೆದಂತೆ ಪಾಡಿದ
ರೊಬ್ಬೊಬ್ಬರಿಂಪು ನುಂಪಿನೊಳು ೧೭

ಉಂಚದೊಳಡಕದೊಳೊಡನುಂಚದೊಳು ಸಂಚು
ವಂಚನೆಯೊಳು ಸರಸದೊಳು
ಮಿಂಚು ಮಿಂಚುಗಳು ಪಳಂಚಿದಂತಮೃತವ
ಹಂಚುವಂತೊಲೆದು ಹಾಡಿದರು ೧೮

ಚುಂಚು ಚಂಚಲವಾಗಿ ಚುಮ್ಮು ಚುಮ್ಮನೆ ತಾಗಿ
ಹಿಂಚು ಮುಂಚಿನ ಸವಿ ತೂಗಿ
ಕಂಚುಮಿಂಚಾಗಿ ರಾಗಿಸಿದರು ಮೈಗೆ ರೋ
ಮಾಂಚನ ಜುಮ್ಮನೇಳ್ವಂತೆ ೧೯

ಇಂಚರವತ್ತಿತ್ತ ಜಾರದೆ ರಾಗದ
ಮಿಂಚು ಮಾಸದೆ ಸೊಬಗೆಯರು
ಪಂಚಗುರುಗಳ ಪಾಡಿದರು ಪಾತಕ ಹರಿ
ಹಂಚಾಗಿ ಹರಿದುಹೋಹಂತೆ ೨೦

ಹದಿನಾರು ಪಾತ್ರಗಳೊಂದೆ ಸಾಲಾಗಿಯೊ
ಡ್ಡಿದ ಕಾಂಡಪಟದ ಮರೆಗೊಳು
ಇದೆಯಿದೆಯೀಗಾಗ ನೃಪನ ನೋಡುವೆನೆಂಬ
ಹೃದಯಲೀಲೆಯೊಳಿದ್ದರಾಗ ೨೧

ಎತ್ತಿದ ತೆರೆಯನು ಕೊರಳತನಕ ಮೆಲ್ಲ
ನೊತ್ತಿ ತಗ್ಗಿಸಿ ಕಾಣಿಸಿದರು
ಮತ್ತಕಾಶಿನಿಯರ ಮೊಗಗಳಿದ್ದು ಕಾಂತಿ
ವೆತ್ತ ಕನ್ನಡಿಯ ಸಾಲಂತೆ ೨೨

ನಡುಮುಟ್ಟ ತೆರೆಯಿದ್ದುದಾಗ ತೋಳ್ಗಳನೆತ್ತಿ
ಕಡೆಗಣ್ಣೊಳರಸನ ನೋಡಿ
ಬೆಡಗಿಂದ ಪುಷ್ಪಾಂಜಲಿ ಮಾಡಿದರು ಕಾಮ
ನೊಡನಲರ್ಗಣೆಗಳ ಸೂಸೆ ೨೩

ಕೂಡೆ ತೆರೆಯನೆತ್ತಿದರು ರೂಪು ಮರೆಯಾಯ್ತು
ಪಾಡಿದರುಂಚದೊಳೆತ್ತಿ
ನೀಡಗಲದ ಜವನಿಕೆ ತೊಲಗಿತು ಮತ್ತೆ
ಷೋಡಶಪಾತ್ರತೋರಿದುವು ೨೪

ಮಡ ಮಡಯಿದಿರಾಗಿ ತೊಡೆಕಾಸೆ ಪಸರಿಸೆ
ನಡುವಿನೊಳಿಟ್ಟು ಹಸ್ತಗಳ
ಕಡುಕೊಂಕಿದಂಗವಾಗಿಯು ಕಣ್ಗೆ ಸವಿಯ ಸಾ
ಲಿಡೆ ನಿಲುಕಡೆಯ ತೋರಿದರು ೨೫

ಮುತ್ತಿನ ಬೊಟ್ಟು ಮುತ್ತಿನ ಸರ ತುರುಬಿನ
ಮುತ್ತಿನ ಬಲೆ ಮುತ್ತಿನೋಲೆ
ತತ್ತ ಮೂಗುತಿಯಿಂದ ಮೊಗಗಳಿದ್ದುವು ತಾರೆ
ಮುತ್ತಿದ ಒಹು ಚಂದ್ರರಂತೆ ೨೬

ಜವ್ವನ ಜವ್ವನಕೊಪ್ಪುವಲಂಕಾರ
ಜವ್ವರಿಸುವ ಹಾವ ಭಾವ
ಕೆವ್ವರಿಸುವ ಕಾಂತಿರಸದಿಂದ ನೃಪನ ಕ
ಣ್ಣವ್ವಳಿಸುವವೋಲೆಸೆದರು ೨೭

ಬೇರೆ ಬೇರೊಂದೊಂದು ಪರಿಯ ಸಿಂಗರದಿಂದ
ನೀರೆಯರೆಸೆದರಾ ನೃಪಗೆ
ಆರು ಖಂಡಗಳೇಕೆಯೀ ಪಾತ್ರದ ಹದಿ
ನಾರು ಖಂಡವೆ ಸಾಲ್ವುದೆನಿಸಿ ೨೮

ಕಾಲು ಕದಲಿ ಮೆಲ್ಲನೊಲೆದು ನಡೆದರು ತಂ
ಗಾಳಿಗೊಲೆವ ಲತೆಯಂತೆ
ಸಾಲುಗೊಂಡುದ ಬಿಟ್ಟು ಬಟ್ಟೆಕಾದರು ಕವ್ಮ
ಗೋಲನ ಚಕ್ರದಂದದೊಳು ೨೯

ಸುಳಿಯಳಿದೊಂದು ಸಾಲಾದರು ಮತ್ತೆ ಭೂ
ತಳಪತಿಗಿದಿರಾಗಿ ಕೂಡೆ
ಘಳಿಲನೆ ಹದಿನೈದು ಪಾತ್ರ ಪೋದುವು ಹಿಂದ
ಕುಳಿದುದು ಮುಂದೊಂದು ಪಾತ್ರ ೩೦

ಮಂಗಲವತಿಯೆಂಬ ಪಾತ್ರದಂಗನೆ ನಾಟ್ಯ
ರಂಗದೊಳೊಲೆದಾಡಿ ನೃಪನ
ಕಂಗಳಿಗಿಚ್ಛೆಯಹಂತೆ ನಟಿಸುತಿರ್ದ
ಳಂಗವರಿದು ಭಾವವರಿದು ೩೧

ನಿಲ್ವಳು ಗಾನವ ಕೇಳುತ ಧ್ಯಾನಕೆ
ನಿಲ್ವ ಯೋಗಿಯ ನೆನೆಯಿಸುತ
ಸೆಲ್ವಳು ಚಳಚಳನೆಡಬಲಕಂಗಜ
ನೊಲ್ವ ಖಡ್ಗವ ಜಡಿವಂತೆ ೩೨

ಮಾರನ ಭಾಗ್ಯವೊಂಮಾರೆಂದು ತೋರ್ಪಂತೆ
ನಾರಿ ಭುಜಗಳ ನೀಡುವಳು
ಸಾರಿ ಸುತ್ತುವಳರಸನ ಕಂಡ ಕಣ್ಣೊಳ
ಲೀ ರೀತಿಯೆಂದು ತೋರ್ಪಂತೆ ೩೩

ಉಪ್ಪರಿಸುವಳೂರ್ಧ್ವಲೋಕಕೆ ಹೋಹಂತೆ
ಬಪ್ಪಳು ದಿವಿಜೆ ಬಹಂತೆ
ದೊಪ್ಪು ದೊಪ್ಪನೆ ಹೆಜ್ಜೆಯಿಡುವಳು ದುಗುಡವ
ಸೊಪ್ಪು ಸೊಪ್ಪನೆ ತುಳಿವಂತೆ ೩೪

ಕಿರುನಗೆವೆರಸಿ ರಾಯನ ನೋಡುವಕಟು ಕಣ್ಣ
ಬರನೆಲ್ಲ ಬರತುಹೋಹೆಂತೆ
ಹೊರಚಾರಿ ವೊಳಚಾರಿಯೊಳು ಬಂದಳಾಸರ
ಪೊರಮಡಿಪೊಲು ಮನೆಯಿಂದ ೩೫

ಮೊಗದಲ್ಲಿ ಹಾವ ಮನಸಿನಲ್ಲಿ ಭಾವ ಪು
ರ್ಬುಗಳಲ್ಲಿವಿಭ್ರಮ ಮತ್ತೆ
ಬಗಸೆಗಣ್ಗಳೊಳು ವಿಲಾಸವೆಸೆಯೆ ರಸ
ವೊಗುವಂತೆ ಪಾತ್ರವಾಡಿದಳು ೩೬

ಘುಳಿಘುಳಿಸುವ ತಾಳ ಡೌಡೆಯಾವುಜಕೆ ಮ
ದ್ದಳೆ ಚಿನುಚಂಪೆಯ ಧ್ವನಿಗೆ
ಮೊಳಗಿನ ಧ್ವನಿಗೆ ಕುಣಿವ ಸೋಗೆನವಿಲಂತೆ
ನಲಿದು ನರ್ತಿಸಿದಳಾ ನೀರೆ ೩೭

ಕಿನ್ನರಿ ದಂಡಿಗೆ ತಿತ್ತಿ ಕೊಳಲು ಭಿನ್ನ
ಭಿನ್ನರುಚಿಯ ಗಾನರಸಕೆ
ಚೆನ್ನ ಚೆನ್ನನೆ ನಾಗಸರಕೆ ನರ್ತಿಪ ನಾಗ
ಕನ್ನೆಯಂತಾಡಿದಳವಳು ೩೮

ಜಂಗಮಲತೆಯಂತೆ ಜಾತಿರೀತಿಯೊಳು ನಾ
ಟ್ಯಾಂಗದ ನಟಣೆಗಾಣಿಸುತ
ಮುಂಗಡೆಯೊಳಗಿದ್ದು ಹಿಂಗಡೆಗೊಲೆದಾಗ
ಮಂಗಲವತಿ ಹೋದಳತ್ತ ೩೯

[1]ಒರೋರ್ವ[1]ರಾಗಿ ಒಂದೊಮ್ಮೊಮ್ಮೆ ತಾವೆಲ್ಲ
ರುರ್ವಿಂದ ನಟಿಸಿದರಹುದು
ಒರ್ವಳು ಕೊಂಡುದನೊರ್ವಳು ಬೆರಸದ
ಪೂರ್ವನಾಟಕವ ತೋರಿದರು ೪೦

ಆರಸನ ಲಾವಣ್ಯ ಜಲಧಿಯೊಳಾ ಸತಿ
ಯರ ದಿಟ್ಟಿಮೀಂಗಳಾಡುವುವು
ತರುಣಿಯರಂಗಕಾಂತಿಯ ಹೊಳೆಗಳೊಳು ಭೂ
ವರನ ಕಣ್ಮಚ್ಛವಾಡುವುವು ೪೧

---

1 ಓರೋರ್ವ (ಕ) ಓರ್ವೊರ್ವ (ಖ) ಒರ್ವೊರ್ವ (ಚ ಗ.)

ನೆಯ್ದಿಲಂದದ ಕಂಪು ನೆಯ್ದಿಲುವಣ್ಣ ಕ
ನ್ನೆಯ್ದಿಲುಗಣ್ಣ ಪೆಣ್ಣುಗಳು
ನೆಯ್ದಿಲುಗೊಳನೆದ್ದು ಕುಣಿವಂತೆ ಕೆಲಬರು
ಮೆಯ್ದೋರಿ ನೃತ್ಯವಾಡಿದರು ೪೨

ಮೊಗರಸದಿಂದ ಕಣ್ಬೆಳಗಿನ ಪೊಳೆಯಿಂದ
ನಗೆಯುದೊಂದಮೃತಧಾರೆಯೊಳು
ಮೊಗೆಮೊಗೆದಭಿಷೇಕ ಮಾಡಿದರೊಲ್ದು ರಾ
ಯಗೆ ಜಲದೇವಿಯರಂತೆ ೪೩

ನಯ ನುಂಪು ಮಿಗೆ ಜಲಕನ್ನಿಕಾ ನಾಟ್ಯಾತಿ
ಶಯವನಾ ಷಟ್ಖಂಡಪತಿಯು
ನಯನದಿದಿರೊಳಾಡುತಿದ್ದು ಸತಿಯರಾಗ
ಬಯಲಾದರಮರಿಯರಂತೆ ೪೪

ತಾಳಮೇಳವನನುಗೊಳಿಸಿ ಸಂಗೀತದ
ಬಾಲೆಯರಾಯೆಂದು ಕೂಡೆ
ಆಳಾಪದೆಗೆದರು ಕಾಂಬೋದಿರಾಗವ
ನಾಲಿಸಿ ನೃಪ ತಲೆದೂಗೆ ೪೫

ಪಾತ್ರವಾಡಿದ ಸತಿಯರಿಗೆ ತಂಪಹಂತೆ
ಧಾತ್ರೀಶಗಿಂಪಾಗುವಂತೆ
ಸೂತ್ರನ ತೆಗೆವಂತೆ ರಾಗವನೆತ್ತಿ ಪ
ವಿತ್ರಾತ್ಮಕಲೆಯ ಪಾಡಿದರು ೪೬

ಬೆಳಗಿನ ಬೊಂಬೆ ಬೆಳ್ದಿಂಗಳ ಬೊಂಬೆ ತಿಂ
ಗಳ ಬೊಂಬೆ ಜೊನ್ನದ ಬೊಂಬೆ
ತಿಳಿವಿನ ಬೊಂಬೆ ಬೋಧದ ಬೊಂಬೆಯೆಂದಾತ್ಮ
ಕಲೆಯ ಕನ್ನಡಿಸಿ ಹಾಡಿದರು ೪೭

ಹಂಸಕಲಾಂಭೋಜ ಹಂಸನೆನಿಪ ನೃಪ
ಹಂಸನ ಸಮ್ಮುಖದಲ್ಲಿ
ಹಂಸಮಂಡಳಿಯೆಂಬ ನಾಟ್ಯವ ತೊಡಗಿದ
ರೇಂ ಸೊಬಗಿಹುದೊಯಿನ್ನಲ್ಲಿ ೪೮

ಈರೆಂಟು ಪಾತ್ರಗಳೀರೆಂಟು ದಿಕ್ಕಿನೊ
ಳೋರಣವಿಡಿದಾಗ ನಿಂತು
ಆ ರಂಗವೆಂಬ ಪದ್ಮದ ಹದಿನಾರೆಸ
ಳೋರಗೆಯಾಗಿ ಮೆರೆದರು ೪೯

ಉಳಿಯಲಿನ್ನಾ ಮಾತು ನಾಟ್ಯಮಂಟಪವೆಂಬ
ಕೊಳದೊಳೆಸೆವ ಹದಿನಾರು
ಜಲಜಗಳೊಯೆನೆ ಬಳಸಿ ನಿಂದಿದ್ದರಾ
ಜಲಜಮುಖಿಯರು ಗಾಡಿಯೊಳು ೫೦

ಮಣಿಮಂಟಪವೆ ಕೊಳ ಸತಿಯರೆ ಕಮಲಗ
ಳೆಣಿಸೆ ರಾಯನೆ ರಾಜಹಂಸ
ಪ್ರಣುತ ಸಂಧ್ಯಾವಂದನೆಗೆ ಕುಳಿತೊಬ್ಬ ಬ್ರಾ
ಹ್ಮಣನೆನಲಿದ್ದನಾ ಮಂತ್ರಿ ೫೧

ಪೆಣ್ಣಂಚೆಗಳು ಕೊಳದೊಳು ಸುಳಿವಂತೆಳೆ
ವೆಣ್ಣುಗಳಾ ನೆಲದೊಳಗೆ
ಪಣ್ಣೆಪಣ್ಣೆಯೊಳು ಸುಳಿದು ಭರತೇಶಗೆ
ಕಣ್ಣುಹಬ್ಬವ ಕಾಣಿಸಿದರು ೫೨

ಪಕ್ಕಿ ಪಕ್ಕಿಯ ಬಳಿವಿಡಿದು ಹೋಹಂತೆ ಸಾ
ಲಿಕ್ಕಿ ನಡೆವರೊಮ್ಮೆ ಕೂಡೆ
ದಿಕ್ಕು ದಿಕ್ಕಿಗೆ ಹರಿವಂತಗಲುವರಹೊ
ಚೆಕ್ಕನೊಂದಾಗುವರೊಡನೆ ೫೩

ಪಕ್ಕದಾಟವ ತೋರುವರು ಭುಜದೊಳು ಪಚ್ಚೆ
ಯಿಕ್ಕಿ ಕಾಲ್ನಡೆಯ ತೋರುವರು
ಕೊಕ್ಕಿನಾಟವ ಮುಕುಳಿತಹಸ್ತವನು ಕೊಕ್ಕಿ
ಗಿಕ್ಕಿ ತೋರ್ಪರು ಕುಶಲದೊಳು ೫೪

ನಳಿನದ ಮೇಲಿದ್ದ ಗಂಡುಪಕ್ಕಿಯ ನೀರೊ
ಳೊಲೆದಾಡುವಂಚಿವೆಣ್ಣುಗಳು
ಎಳಸಿ ನಿಟ್ಟಿಸುವಂತೆ ಗದ್ದುಗೆಯೇರಿದ್ದ
ಚೆಲುವನ ನೋಳ್ಪರೋಜೆಯೊಳು ೫೫

ಚಲಿಸದೆ ಪವನಾಭ್ಯಾಸದ ಬಲದಿಂದ
ನೆಲನ ಮುಟ್ಟದೆ ಗಗನದೊಳು
ಲಲನೆಯರೊಪ್ಪುಚ್ಚಿ ಕುಳಿತು ಭೂಮಿಗೆ ನ್ಸೆಲ್ಲಿ
ನಿಳಿವರು ಕೂಡೆ ಜೋಕೆಯೊಳು ೪೬

ಕೊಳದಿಂದ ಕೊಳಗಳಿಗಂಜೆ ಹಾರುವವೊಲು
ಘಳಿಲನೆ ಮೇಲಕೆ ನೆಗೆದು
ಅಲುಗಿಸಿ ತೋಳ ಕಾಲ್ನೀಡಿ ನಾಲ್ಕಾರ ಬಾ
ನೊಳಗೆ ಬಹರು ಪಕ್ಕಿಯಂತೆ ೪೭

ಭೂಕಾಂತ ತಲೆದೂಗೆ ಮಂತ್ರಿ ವಿಸ್ಮಯಸೂಡ
ಲಾಕೆಗಳಿಳಿವಂಚೆಯಂತೆ
ಆಕಾಶದೊಳಗೆ ನಾಲ್ಕೆಂಟು ಮಾರ್ಬೈತಂದು
ಜೋಕೆಯಿಂದಿಳಿವರು ಧರೆಗೆ ೪೮

ಹರುಷವೆದೆಯೊಳುಣ್ಮೆ ನಾಟ್ಯ ಸಾಕೆಂದು ಭೂ
ವರನು ಕೈಸನ್ನೆದೋರಿದನು
ಪುರುನಾಥ ಗೀತದೊಳೆಲ್ಲರು ನಮಿಸಿ ಜೋ
ಪುರೆಯನೆ ನಿಲಿಸಿದರೊಡನೆ ೪೯

ಬಳಿಕ ಮೊಗವ ನೋಡಿ ಬಳಲಿದೈ ಮಂತ್ರಿಯೆಂ
ದೊಳುನುಡಿಯಿಂದ ನುಡಿದನು
ಬಳಲಿಕೆ ಬಯಲಾಯ್ತು ಸ್ವಾಮಿ ನಿನ್ನೋಲಗ
ದೊಳಗೆಂದು ನುಡಿದನಾ ಮಂತ್ರಿ ೫೦

ನೀನೆಂತು ಜಾಣನಹುದು ನಿನ್ನ ಪಾತ್ರದ
ಮೀನಾಕ್ಷಿಯರು ಮಝು ಮಮ್ಮಾ
ಈ ನುಂಪು ನೇವಣೆ ರೂಪು ರೇಖೆಯು ಲಾಗ
ನೇನ ಸಾಧಿಸಿದರೊ ನೃಪತಿ ೫೧

ಮಿಂಚಿನ ಕೂಡೆ ಸಾಧಿಸಿದರೊ ತಂಗಾಳಿ
ಯಂಚಿನೊಳಾಡಿ ಕಲಿತರೊ
ಪಂಚಬಾಣನೊಳತಿ ಸರಿಮಿಗಿಲೆಂದು ಪ
ಳಂಚಿದಭ್ಯಾಸದಿಂದಾಯ್ತೊ ೫೨

ಗಿಳಿ ಬಿಳಿದಾದರೆ ಚೋದ್ಯವೆಂಬರು ಹಂಸೆ
ಬಿಳಿದಾಗೆ ಚೋದ್ಯವೆ ಜಗಕೆ
ಉಳಿದ ರಾಜರಿಗಿವು ಬರೆ ಚೋದ್ಯವಹುದು ನಿ
ನ್ನೊಳಗಿವು ಚೋದ್ಯವಲ್ಲೆಂದ ೬೩

ಏನಿದು ದೊಡ್ಡಿತ್ತೆ ಬುದ್ಧಿಸಾಗರ ಮಝು
ಣೀನಿದನೆತ್ತಿ ಕೀರ್ತಿಸುವ್ವೆ
ಸ್ವಾನುಭವದ ಸುಖದಿಂದಧಿಕವೆ ಪಾತ್ರ
ಗಾನ ಮುಂತಾದ ಸುಖಗಳು ೬೪

ಮುಕ್ತಿಯೆ ಸುಖವದರಂತರದಲ್ಲಿ ವಿ
ರಕ್ತಿಯೆ ಸುಖವದರಲ್ಲಿ
ವ್ಯಕ್ತಾತ್ಮಭಾವನೆ ಸುಖ ಮತ್ತೆ ವಿಷಯಸಂ
ಯುಕ್ತಿಯೇತರ ಸುಖವೆಂದ ೬೫

ಓಸರಿಸವೆ ಪುಣ್ಯ ತಂದಿತ್ತ ಸುಖವನು
ದಾಸೀನದಿಂದುಂಡು ಬಿಡುವ
ಭಾಸುರಾತ್ಮಾನುಭಾವದೊಳಿರುತಿಹೆನೆಂದು
ಭೂಸುದತೀಶ ನುಡಿದನು ೬೬

ನಯಕಾರ ಹೋದನು ಮೇಳಸಹಿತ ಮತ್ತೆ
ಪ್ರಿಯಗಾನಸತಿಯರೈದಿದರು
ನಿಯಮಿಸಿ ರಾತ್ರೆ ಪನ್ನೆರಡು ಘಳಿಗೆ ಸಂದು
ಜಯಘಂಟೆ ಕೊಣ್ಣೆಂದುದಾಗ ೬೭

ಅತ್ತಲನ್ಯರು ಹೋದರಿತ್ತ ತನ್ನವರಿದ್ದ
ರುತ್ತುಂಗನೃಪತಿ ಮನ್ನಣೆಯ
ಇತ್ತು ಪಾತ್ರಗಳ ಮನ್ನಿಪೆನೆಂದು ನೆನೆದನಿ
ದುತ್ತರನಾಟಕ ಸಂಧಿ ೬೮

## ತಾಂಡವ ವಿನಯ ಸಂಧಿ

ತೂರಿದಂತನ್ಯರು ಹೋಗಲೊಡನೆ ಮರೆ
ಗೇರಿದ್ದ ನೀಟಿದ ತೆರೆಯ
ಹಾರನೂಂಕಿದರು ರಾಣಿಯರೆಲ್ಲ ಪ್ರತ್ಯಕ್ಷ
ದೋರಿದರರಸಗೇನೆಂಬೆ ೧

ಬಗೆಬಗೆಯರಿದು ಸಿಂಗರಿಸಿದ ಸಿಂಗಾರ
ಮಗಮಗಿಸುವ ಕಂಪು ಸೊಂಪು
ನಗೆಮೊಗದರಸಿಯರೆಲ್ಲರು ಕುಳಿತಿದ್ದ
ರೊಗುಮಿಗೆ ತಿಂತಿಣಿಯಾಗಿ ೨

ನೃಪನೆಡಬಲಕೆ ಹಿಂಗಡೆಗೆ ಮುರಿದು ನೋಡಿ
ಚಪಲಾಕ್ಷಿಯರಿಗಿಷ್ಟು ಹೊತ್ತು
ಉಪಸರ್ಗವಾಗಿದ್ದುದಲ್ಲ ತೆರೆಯೊಳೆಂದು
ಉಪಚಾರವಾಕ್ಯದೋರಿದನು ೩

ಬಳಲಿದರಾ ಪಾತ್ರಸತಿಯರ ಕರೆದು ಭೂ
ತಳನಾಥ ಮನ್ನಿಸೆಂದೊಸೆದು
ಕಳಕಂಠವಾಣಿಯರುಸುರಿದರದಕೆ ನಿ
ರ್ಮಳಚಿತ್ತ ತಾನೊಡಂಬಟ್ಟ ೪

ಬನ್ನಿರೌ ಪಾತ್ರಕಾಂತೆಯರಿಕಯೆಂದಾಗ
ತನ್ನ ಬಾಯಾರೆ ತಾ ಕರೆದ
ಸನ್ನಿಧಿಗಾನಂದ ಮಿಗೆ ಬಂದು ನಿಂದರು
ಚೆನ್ನೆಯರರಸನ ಮುಂದೆ ೫

ಕಿಡಿಗೆದರುವ ಬಾಯಿ ಮಿಂಚೇಳ್ವ ಕಣ್ಣಾಸು
ಮಿಡಿವಳ್ಳಿ ನಸುಹೆಚ್ಚಿದುಸುರು
ಬಿಡುಪಟ್ಟ ನೊಸಲ ನುಣ್ಗುರುಳ ಸಾಲಿಂದೊಂದು
ಬೆಡಗಾಗಿ ನಿಂದಿರ್ದರಾಗ ೬

ಓಸರಿಸುತ ಮೈಯ ನೃಪನ ಮೊಗವ ನಗೆ
ಸೂಸಿ ನೋಡುತ ನಟಣೆಯೊಳು
ಕಾಸೆಯ ಸೆರಗಿಂದ ಬೆಮರ ತೊಡೆವುತೊಂದು
ದೇಸಿಯೊಳ್ನಿಂದಿದ್ದರಾಗ ೭

ಹೊಳೆಹೊಳೆದರಸನಾ ಸತಿಯರ ಮೊಗದಿಂದ
ತಳಪಾದದೆಡೆಮುಟ್ಟ ನೋಡಿ
ಎಳೆನಗೆ ಮಿನುಗೆ ನುಡಿದನೊಬ್ಬ ಗಂಡುಗೋ
ಗಿಲೆಯ ಬಾಯ್ದೆರೆಯ ಜಕ್ಕುಲಿಸಿ ೮

ಭಾವು ಪ್ರಚಂಡೆಯರಿರ ನೋಡಲಿಂದು ಮ
ಹಾಷಟುವೆನೆ ನಟಿಸಿದಿರಿ
ಶ್ರೀಪುರುಷರಮೇಶನಾಣೆ ಚೆನ್ನಾಯ್ತು ಮ
ಹಾಪರಿಣಾಮವಾಯ್ತೆನಗೆ ೯

ಲೇಸನಾಡಿದಿರಿ ಲೇಸನೆ ನುಡಿದಿರಿ ನಿಮ್ಮ
ಲಾಸಿಕೆಗಾನು ಮೆಚ್ಚಿವೆನು
ಬೇಸರವಿಲ್ಲದೆ ಬೇಡಿ ನಿಮ್ಮಿಚ್ಚೆಯ
ಮಾಸದೆ ಕೊಡುವೆ ನಾನೆಂದ ೧೦

ಇವಳ ಕೇಳವಳ ಕೇಳೀಕೆಗೇನಾಕೆಗೇ
ನವಗತ ಕಾಂಕ್ಷೆಯುಂಟೆನುತ
ತವೆ ಹದಿನಾರು ಪಾತ್ರವ ನೋಡುವಾಗಿಬ್ಬ
ರವರೊಳಗಿಲ್ಲ ವಿಚಿತ್ರ ೧೧

ರೂಪಾಣಿ ಪದ್ಮಿನಿಯೆಂದೆಂಬರಿರ್ವರು
ಭೂಪಾಲನೊಡನಿಷ್ಟು ಮುನಿದು
ಕೋಪದಿಂದೊತ್ತಿಗೆ ಬಾರದೆ ದೂರದೊ
ಳಾ ಪೆಂಗಳಿದ್ದರೇನೆಂಬೆ ೧೨

ತಮ್ಮ ನೃತ್ಯವ ನೋಡುತರಸ ಮೀಳೆಯಕೊಮ್ಮೆ
ಹೆಮ್ಮಕ್ಕಳತ್ತೊಲೆದೊಮ್ಮೆ
ಒಮ್ಮೆಮ್ಮೆ ಮಂತ್ರಿಯತ್ತೊಲೆದು ನೋಡಿದರದ
ಕುಮ್ಮಳವಟ್ಟಗಲಿದರು ೧೩

ನೋಡುತ ತಾವೊಬ್ಬರೊಬ್ಬರು ನಗದೆ ಮಾ
ತಾಡದೆ ಕಂಭವ ನೆಮ್ಮಿ
ಜೋಡುಪುತ್ಥಳಿಯಂತೆ ನಿಂದಿದ್ದ ಚಿಂತೆಯ
ಗಾಢವ ಕಂಡನಾ ರಾಯ ೧೪

ಕರೆ ಕರೆ ತಾವಿಬ್ಬರೇಕತ್ರ ನಿಂದರೆಂ
ದರಸ ಸೇವಕಿಯರ ಕಳುಹೆ
ಬರಲಟ್ಟಿದನು ಸ್ವಾಮಿ ನಿಮ್ಮನೆಂದವರೈದಿ
ಕರೆದರಾ ಪಾತ್ರಕಾಂತೆಯರ ೧೫

ಹೋಗೀರೌ ನಿಮ್ಮ ಸ್ವಾಮಿಯ ದೃಷ್ಟಿಗಳಿಗೆಮ್ಮ
ಲಾಗುನರ್ತನ ಬಂದುದಿಲ್ಲ
ಆಗುಗೆಟ್ಟವರನುಕರೆಯಲೇಕೆಂದು ಭೂ
ಭಾಗೇಂದ್ರ ಕೇಳಿ ನುಡಿದರು ೧೬

ಎಡ್ಡವಲ್ಲಲ್ಲ ನಮ್ಮಾಟ ನಿಮ್ಮೊಡೆಯಗಿಂ
ದಡ್ಡಮೋರೆಯೆ ಪಿರಿದಾಗಿ
ಹೆಡ್ಡವೆಂಗಳ ನೃತ್ಯವೇನೆಂದು ಮಂತ್ರಿಯ
ಗಡ್ಡವೊಂದನೆ ನೋಡುತಿದ್ದ ೧೭

ನಮ್ಮಿಂದ ನೋವಾದುದವರಿಗೆಂದಾಗ ನೃ
ಪೋನ್ನತ ನೆನೆದನೆದೆಯೊಳು
ಇನ್ನಿವರನು ತಿಳಿಪುವ ಬಗೆಯಾವುದೆಂ
ದುನ್ನಿಸಿ ನುಡಿದನು ಮತ್ತೆ ೧೮

ರೂಪಾಣಿ ಬಾರೆಲೆ ಪದ್ಮಿನಿ ಬಾರೌ ಸ
ಮೀಪಕೆ ನಿಮ್ಮ ಮನಸಿನ
ತಾಪವ ಕೆಡಿಸುವೆನೆಂದು ಗದ್ದುಗೆಯೊಳಿ
ದ್ದಾ ಪೂರ್ವಚಕ್ರಿ ಕರೆದನು ೧೯

ಕಣ್ಣಿಚ್ಚೆಯಾದಲ್ಲಿ ಮನಕಿಚ್ಚೆಯಹುದೈಸೆ
ಕಣ್ಣಿಚ್ಚೆಯಲ್ಲದ ನಮ್ಮ
ಬಣ್ಣಗಾರಿಕೆಗೀಗ ಕರೆವುದೇತಕೆಯೆಂದು
ಹೆಣ್ಣುಗಳ್ನೊಂದು ನುಡಿದರು ೨೦

ಕೇಳಿರೌ ನಿಮ್ಮ ನೃತ್ಯವ ನೋಡುವಾಗ ನಾ
ನಾಲಸ್ಯವಡೆದವನಲ್ಲ
ವೀಳಯಗೊಳಲೊಮ್ಮೆ ಮೊಗದಿರುಹಿದರಿಂತು
ತಾಳಬಹುದೆ ನೋವ ನೀವು ೨೧

ನುಡಿಯಿಂದ ನಮ್ಮ ಚಾಳಿಸಬೇಡ ರಾಯ ನಿ
ನ್ನೊಡನಾಡಿದವರ್ಗೈಸೆ ನಾವು
ಬಿಡು ಬಿಡು ರಚನೆಯ ನಮ್ಮ ಪಾತ್ರವ ಮೊದ
ಲೆಡಹಿಒಟ್ಟೀಗ ವರ್ಣಿಪೆಯ ೨೨

ಬೇಡವೌ ನೀವೆನ್ನ ಮೇಲಿಷ್ಟು ಕೋಪವ
ಮಾಡುವುದಕೆ ನಾನು ನಿವಗೆ
ಮಾಡಿದ ದೋಷವಿಲ್ಲಕಟ ಬರಿದೆ ನಮ್ಮ
ಕಾಡುವುದುಚಿತವೆಯೆಂದ ೨೩

ಎಲ್ಲಿ ಕಲಿತೆಯೆದೆಯೊಳಗೆ ಕಠಿಣ ನುಡಿ
ಯಲ್ಲಿ ಮೃದುವ ತೋರ್ಪ ಗವಳ
ಕಲ್ಲ ಕರಗಿಸುವೆ ನುಡಿಯಿಂದ ನೀನದ
ಬಲ್ಲೆವು ಸಾಕು ಸುಮ್ಮನಿರು ೨೪

ನೊಂದಿರಬಹುದು ನೋಯಿಸಿದೆನಹುದಹುದಿನ್ನು
ನೊಂದ ನೋವನು ತೊಲಗಿಪೆನು
ಮುಂದೊತ್ತಿ ಬನ್ನಿ ನೀವೇನ ಬೇಡಿದರೀವೆ
ನೆಂದು ಕರೆದನವನೀಶ ೨೫

ಗುಣವೆ ಭೂಷಣವಭಿಮಾನವೆ ವಸ್ತ್ರವೆಂ
ದೆಣಿಸಿ ಕೈವಿಡಿದಿಹೆವೆಮಗೆ
ಬಣಗುದೊಡಿಗೆಯಾಸೆವೋರಬೇಡೆಂದು ಪೊ
ಕ್ಕಣಿಸಿ ದೂರವೊಳಿದ್ದರವರು ೨೬

ಚಂದನವತಿ ಹೋಗು ಮಂಗಲವತಿ ಹೋಗು
ನೊಂದ ಪೆಂಗಳ ಕರೆತನ್ನಿ
ಇಂದಿನ ನೋವ ಮರೆಯಲಿನ್ನು ಮುಂದೆ ನೀ
ವೆಂದಂತೆ ನಡಿಸುವೆನೆಂದ ೨೭

ತಂಗಿಯರಿರ ಬನ್ನಿ ದೊರೆಯೊಮ್ಮೆ ದೈನ್ಯರ
ಸಂಗಳ ತೋರಿ ಕರೆದರೆ
ಹಿಂಗಿಸಬೇಕು ಕೋಪವನೆಂದು ರಾಜನೃ
ತ್ಯಾಂಗನಾಗುಣವ ಪೇಳಿದರು ೨೮

ಆ ಗುಣ ನಿವಗಹುದಕ್ಕ ನವಗೆ ಕೋಪ
ಹೋಗದು ಹೋಗಿ ನೀವೆಮ್ಮ
ಮೇಗೆ ನೋಯದಿರಿ ಹಿರಿಯರೆಂದು ಕೃಮುಗಿ
ದಾಗಳೆ ಕಳುಹಿದರವರ ೨೯

ಮತ್ತೆ ಚಂದ್ರಾಣಿ ಮಂದ್ರಾಣಿಯರೈತಂದು
ಬಿತ್ತಿಗರೊಡೆಯನನಿನ್ನು
ಒತ್ತಲಾಗದು ಸಾಕು ಬನ್ನಿ ಪೆಂಗಳಿರೆಂದು
ಮೆತ್ತನೆ ನುಡಿದು ಕರೆದರು ೩೦

ಅದಕು ಬಾರರು ಕೂಡೆ ರಾಣಿಯರೆಲ್ಲರು
ಕೆದರಿ ಕೆಕ್ಕಳಿಸಿ ತಮ್ಮೊಳಗೆ
ಮದಮುಖವಿಷ್ಟೇಕೆ ಪಾತ್ರಕಾಂತೆಯರಿಗೆಂ
ದಿದಿರೊಳಾಗಳೆ ಕೋಪಿಸಿದರು ೩೧

ಸ್ವಾಮಿ ವಿನಯದೋರಿ ಕರೆವುದೆತ್ತಕಟ ತಾ
ವೀ ಮುನಿಸನೆ ಮುಂದೆ ಮಾಡಿ
ಕ್ಷೇಮಗೆಡಿಸಿ ಕಾಡುತಿಹುದೆತ್ತ ಸಲುವುದೆ
ಕೋಮಲೆಯರಿಗೆಂದರವರು ೩೨

ಅಷ್ಟರೊಳಂಜಿ ರೂಪಾಣಿಯೆಲ್ಲರ ಕೂಡೆ
ಕಷ್ಟವೇಕೆಂದು ತಾ ತಿಳಿದು
ಇಷ್ಟರ ನುಡಿಗೇಳಬೇಕೆಂದು ಬಂದಳ
ಭೀಷ್ಟಾರ್ಥದರಸನ ಬಳಿಗೆ ೩೩

ಪಾದಕೆರಗಿದ ನಲ್ಲಳ ಪಿಡಿದೆತ್ತಿ ಲೀ
ಲೋದಯನಮರ್ದಪ್ಪಿಕೊಂಡು
ಕಾದಲೆ ನಿನ್ನ ನೋಯಿಸಿದೆನಹುದು ಮರೆ
ಯಾ ದೊಡ್ಡ ನೋವ ನೀನೆಂದ ೩೪

ಏಕೆ ನಿಂದಳು ಮತ್ತೆ ಪದ್ಮಿನಿ ಬಾರದೆ
ಹಾ ಕಷ್ಟಗುಣನ ಕಲಿತಳು
ಸಾಕಿನ್ನು ಬಾರೆಗೆ ಹೆಣ್ಣೆಯೆಂದರಸಿಯ
ರಾಕೆಗೆ ಸನ್ನೆದೋರಿದರು ೩೫

ಪೊಲ್ಲದ ಗುಣದವಳಾಗಿತ್ತಲಿಹೆನು ನೀ
ವಲ್ಲಿರಿ ಸಾಕು ನಿಮ್ಮಾಟ
ಎಲ್ಲರೊಂದಾಗಿ ಕೊಂಡೊಬ್ಬಳ ಜಡಿವಿರಿ
ನಲ್ಲಗೆ ಹಿತವಾಗಿಯಕಟ ೩೬

ಅರಸನುದಾಸೀನಗೈದರೆನ್ನೊತ್ತಿನ
ತರುಣಿಯರೆನ್ನವರೆಂದು
ಹಿರಿದು ನಂಬಿದ್ದೆನು ನೀವು ನಿಮ್ಮರಸನ
ಪರಿಯಾದಿರಕ್ಕ ಚೆನ್ನಾಯ್ತು ೩೭

ಎಳೆಯೆಂಬ ರಾಯಗೆ ತುಳಿಯೆಂಬ ಮಂತ್ರಿಯೆಂ
ದಿಳೆಯೊಳಾಡುವ ಗಾದೆಯಿಂದು
ಫಲಿಸಿದುದಕ್ಕ ಚೆನ್ನಾಯ್ತು ಚೆನ್ನಾಯ್ತೆಂದು
ಒಲೆದೊಲೆದಾಡಿ ನುಡಿದಳು ೩೮

ಕಡಲನೊತ್ತದೆ ಕಡಲುದಕವ ತುಂಬುವ
ಕೊಡನನೊತ್ತುವರಂತೆ ನೀವು
ಕಡುದೊಡ್ಡ ನೃಪನನೊತ್ತದೆ ನನ್ನನೊತ್ತುವ
ಬೆಡಗು ಲೇಸೆಂದಳಾ ಜಾಣೆ ೩೯

ಇವಳಿಗೆನ್ನೊಡನಿನ್ನು ಪ್ರಣಯಕಲಹ ಮಾ
ಡುವ ರುಚಿಯುಂಟೆಂದು ನೆನೆದು
ಯುವತಿಯರಿರ ನೀವು ನಿಲ್ಲಿ ನಾವವಳ ಶಾಂ
ತವ ಮಾಳ್ಪೆವೆಂದನಾ ರಾಯ ೪೦

ಎಲಗೆ ಪದ್ಮಿನಿ ನೀವಿಬ್ಬರೊಳಗೊಬ್ಬಳು
ಪೊಳಗಾದಪೋಲೆ ನೀನಿನ್ನು
ಛಲವ ಮಾಳ್ಪುದು ಸಲ್ಲ ಬೇಡ ಕಾಣಗೆ ಪಂಥ
ನಿಲಲರಿಯದು ನಿನಗೆಂದ ೪೧

ಅಳ್ಳೆದೆಯವಳು ರೂಪಾಣಿಯೊಬ್ಬಳು ಲಜ್ಜೆ
ಯಿಲ್ಲದೆ ನಿನಗೆರಗೆದಳು
ಡಿಳ್ಳುಹೋಹಳೆ ಭಾವು ಪದ್ಮಿನಿ ನೀ ನೋಡ
ಲಿಲ್ಲವೆಯೆಂದಳಾ ಧೀರೆ ೪೨

ಲೇಸಿಗೆ ಕಾಲಿಗೆರಗಬಹುದರಸ ವು
ದಾಸೀನಕಾರೆರಗುವರು
ಕಾಸೆಯಲ್ಲವೆ ನಾನು ಕಟ್ಟಿದುದೀ ರಾಣಿ
ವಾಸ ನೋಡಲಿ ನೀನು ನೋಡು ೪೩

ಅಷ್ಟುಂಟೆ ನಿನಗೆ ಮನೋಧೈರ್ಯವುಂಟುಂಟು
ದೃಷ್ಟಿಸಿ ನೋಡಿ ಮಾತಾಡು
ಭ್ರಷ್ಟರಂತಡ್ಡ ಮೋರೆಯೊಳೇಕೆ ನುಡಿವೆ[1] ವು[1]
ತ್ಕೃಷ್ಟ ಧೀರೆಯೆಯೆಂದನೊಡನೆ ೪೪

ನೂಡಿದರೇನು ಮೊಗವನೆಂದು ದುಗುಡವ
ಕೂಡಿಕೊಂಡೊಲೆದು ನೋಡಿದಳು
ಒಡಿತು ದುಗುಡ ಮೂಡಿತು ನಗೆ ನಗುತಾಕೆ
ಕೂಡೆ ಬಾಗಿದಳು ಮಸ್ತಕವ ೪೫

ನಿಲ್ಲೆಂದು ಧೈರ್ಯವ ಬಲಿದು ಹಿಡಿವಳದು
ನಿಲ್ಲದೆ ಜರಿದೋಡುತಿಹುದು
ಒಲ್ಲೆ ಹೋಗೆಂದು ಕಾತರವ ನೂಂಕುವಳದು
ಕೊಲ್ಲುತಿಹುದು ಮೈಗೆ ಹಬ್ಬಿ ೪೬

ಇನ್ನು ಪಂಥವೆ ಪದ್ಮಿ ನಿನಗೆಂದನೀತನ
ನಿನ್ನೆಂತು ಜಯಿಸುವೆನೆಂದು
ಚೆನ್ನೆ ಯೋಚಿಸಿ ಬಗೆಗಾಣದೆ ತಲೆಯೆತ್ತಿ
ಚೆನ್ನಾಗಿ ನಗುತ ನುಡಿದಳು ೪೭

ಎಲೆ ಮಾಯಕಾರ ನಿನ್ನಾಸ್ಯವ ಕಂಡರ
ದಳವೇರುತಿದೆ ನಗೆ ನನಗೆ
ತಲೆ ಕುಸಿದರೆ ನಮಿಸಿದಳೆಂಜೆಯಿದನಿನ್ನು
ಗೆಲುವಂದವೆಂತೆಂದಳವಳು ೪೮

---

1 ಯು(ಖ) ಉ (ಕ) ಯೌ (ಚ) ವು (ಛ, ಗ)

ನಿಂದಳು ತಲೆವಾಗಿ ಮೌನವೊಂದಾಕ ಮ
ತ್ತೊಂದು ತಂತ್ರವನು ಚಿಂತಿಸುತ
ನಿಂದೆಯಾದರೆ ಪದ್ಮಿನಿನ್ನಾಣೆ ನಡೆಸು ಬಾ
ರೆಂದನಾ ರಸಿಕರ ದೇವ ೪೯

ಆಣೆಯ ಮೀರದೆ ಹತ್ತು ಹಜ್ಜೆಯ ನಡೆ
ದೇಣಲೋಚನ ನಿಂದಳಲ್ಲಿ
ಚೂಣಿವರಿವ ಕಡೆಗಣ್ಣಿಂದ ನೋಡುತ
ಪ್ರಾಣೇಶನೊಡನೆ ನುಡಿದಳು ೫೦

ಜಾಣಿಂದ ಜಯಿಸಲಾರದೆ ನೋಡು ತಾನು ತ
ನ್ನಾಣೆಯಿಟ್ಟೆನ್ನ ಕರಸನು
ಮಾಣಿನ್ನು ಕರೆಯದಿರೆಂದಲ್ಲಿ ನಿಂದಳು
ಮಾಣಿಕ ಬೊಂಬೆಯಂದದೊಳು ೫೧

ತಾಳ ಮದ್ದಳೆಯಿಲ್ಲ ಕಟಿಸೂತ್ರ ಕಂಕಣ
ಕಾಲಂದುಗೆಗಳ ನಾದದೊಳು
ಚಾಲುಚಾಲನೆ ನಡೆದಾಡಿ ನರ್ತಿಸಿದ ನಿ
ನ್ನೀ ಲಾಸ್ಯ ಸೊಗಾದುದೆಂದ ೫೨

ನಗುವಳು ತಲೆವಾಗುವಳು ನೋಡುವಳು ಮೋರೆ
ದೆಗೆವಳು ಮನದೊಳುಬ್ಬುವಳು
ದುಗುಡಕೋಲಾಹಳ ದುರ್ಗಕೋಲಾಹಳ
ಹಗೆಕೋಲಾಹಳನ ಮುಂದವಳು ೫೩

ರಾಣಿಯರುಗಳ ಸಂಘಾನದೊಳಗೆ ಒಂದು
ಕ್ಷೋಣೀಶನಡಿಗೆರಗಿದಳು
ಕಾಣಲೊಡನೆ ರಾಯ ಮುಸುಕಿಕ್ಕಿಕೊಂಡನು
ಪ್ರಾಣಕಾಂತೆಯರು ಚಪ್ಪರಿಸೆ ೫೪

ಆಣೆಯ ಮೀರಿದಳವಳ ಕಾಣಿಕೆಕೊಂಡ
ರೂಣೆಯಪಹುದೆನಗೆಂದ
ಆಣೆಗೆ ತಡೆಗುಡಿಲ್ಲವಳು ನಡೆದಳೆಂದು
ಕಾಣಿಸಿ ಬಿನ್ನವಿಸಿದರು ೫೫

ಎತ್ತ ನಡೆದಳವಳೆಡಬಲಕೊಲದಳೆ
ನ್ನತ್ತ ಬಂದಂತಾಯ್ತು ನಿಪ್ಪು
ತುತ್ತುಗಾರಿಕೆಯ ಬಲ್ಲೆನು ಸುಮ್ಮನಿರಿಯೆಂದು
ಒತ್ತಿ ನುಡಿದನು ರಾಣಿಯರ ೫೬

ಭೂಧವ ತೆಗೆ ನಿನ್ನ ಮುಸುಕನಿವಳೊಳಪ
ರಾಧವ ತೆರಿಸಿ ಕೂಡುವೆವು
ಈ ಧೂರ್ತೆಗಾಗಿ ಮುಸುಕನಿಕ್ಕಬೇಕಯೆಂ
ದಾ ದೊರೆಯೊಡನೆ ನುಡಿದರು ೫೭

ತಪ್ಪೇನ ಕೊಡಿಸುವಿರೆಂದನವಳ ನಿನ
ಗೊಪ್ಪಿಸುವೆವು ನಿನ್ನ ಮನಕೆ
ಬಪ್ಪಂತೆ ಮಾಡಿಕೊಳ್ಳೆಂದರಾ ನುಡಿಗೆ ನಾ
ನೊಪ್ಪೆನೋಡೆಯೊಳಾಡಿರೆಂದ ೫೮

ಪುರುಷಗೆ ತಪ್ಪುಮಾಡಿದ ಕಾಂತೆ ತಾನು ತ
ನ್ನರಸಿತನದ ಹಮ್ಮು ಬಿಟ್ಟು
ಪರಿವಾರ ಸತಿಯಂತೆ ಕಾಲ್ಗೆರಗಿ ಬಿಡಿದಾಗ
ಪರಿಹಾರವೆಂದು ತಿದ್ದಿದರು ೫೯

ಅಹುದೆಯಾದರೆ ಇಷ್ಟು ಸೈರಿಸಿರೆಂದು ಸಂ
ಗ್ರಹಿಸಿದ ಮುಸುಕಿನೊಳಿದ್ದು
ಅಹಹ ಮತ್ತೊಂದು ವಿಸ್ಮಯವ ತೊಡಗಿದನಾ
ಸಹಸಿಗಳರಸನೇನೆಂಬೆ ೬೦

ಹಲಬರಿಗೊಂದು ರೂಪಿನೊಳಿದ್ದು ಮನ್ನಣೆ
ಗಳ ತಿದ್ದೆ ತಳುವಹುದೆಂದು
ಹಲವು ರೂಪಾಗುವೆನೆಂದು ನೆನೆದನವು
ಸಲುವುದಾತನು ವಿಶ್ರೀಯಾಂಗ ೬೧

ಮೇಲಿಟ್ಟ ಮುಸುಕು ತೊಲಗಲಾಗಿ ಭೂತ ಭೂ
ಪಾಲನೆ ಹಲವು ರೂಪಾಗಿ
ಬಾಲೆ ಬಾಲೆಯರಿಗೆ ತಪ್ಪದೊಪ್ಪಿದನಿಂದ
ಜಾಲವನಾಡಿದಂತಾಯ್ತು ೬೨

ಗದ್ದುಗೆಯೊಳು ಕುಳಿತಿದ್ದನು ಕೆಳಗೆ ಸಿಂ
ದಿದ್ದ ಲತಾಂಗಿಯರೊಡನೆ
ಎದ್ದು ನಿಂದಿದ್ದನೊಬ್ಬೊಬ್ಬಳಿಗೊಬ್ಬೊಬ್ಬ
ಮುದ್ದಿನ ಭರತೇಶನಾಗಿ ೬೩

ತೆಗೆತೆಗೆದುತ್ತುಮಾಭರಣ ವಸ್ತ್ರವ ತನ್ನ
ಮೃಗನೇತ್ರೆಯರಿಗೊಲಿದಿತ್ತು
ಬಿಗಿಬಿಗಿದಪ್ಪಿಕೊಂಡರ್ತಿಮಾಡಿದನೇನ
ಹೊಗಳುವೆನವನ ಲೀಲೆಯನು ೬೪

ಅಸಿತರೊಳಗೆ ಸಮರಾತ್ರಿಯ ಘಂಟೆ ರೊಂ
ಣನೆ ಕೇಳಲಾಯ್ತು ಹೋಯೆಂದು
ಮುನಿಸ ತಿಳುಹುವೆನೆಂದತಿ ವೇಳೆಯಾಯ್ತೆಂದು
ಜನಪನಾಡಿದನು ಪೆಂಗಳೊಳು ೬೫

ಗಂಡರಗಂಡ ತಾಂಡವವ ಕಂಡೊಲ್ದೆಳ
ಪೆಂಡಿರ ಮನ್ನಿಸಿಯವರ
ಹಿಂದೊಡಗೂಡಿಕೊಂಡೆದ್ದನೆಂಬಲ್ಲಿಗೆ
ತಾಂಡವ ವಿನಯದ ಸಂಧಿ ೬೬

## ಶಯ್ಯಾಗೃಹ ಸಂಧಿ

ನಿಷ್ಕುಟಿಲಾಂಗನು ವರ್ಧನಾವತಿಯೆಂಬ
ನಿಷ್ಕನಾಟಕ ಶಾಲೆಯಿಂದ
ಪುಷ್ಕರಾವತಿಯೆಂಬ ಸಜ್ಜೆವನೆಗೆ ಪಾದ
ಪುಷ್ಕರವಿಟ್ಟನೊಲ್ಮೆಯೊಳು ೧

ಬೆಡಗಿಂದ ಕೆಲಬರ ಕೈಲಾಗುವಿಡಿದಡಿ
ಯಿಡುತಿರ್ದ ಮತ್ತೆ ಕೆಲಬರ
ನಡುವನೆಡದ ಕೈಯೊಳಪ್ಪಿ ಮಾತಾಡುತ
ನಡೆವುತಿದ್ದನು ಮೋಡಿಕಾರ ೨

ಕುಟಿಲ ಕುಂತಲೆಯರ ಕೆಲಬರ ಬೆರಳಿನ
ಚಿಟುಕ ತೆಗೆವುತ ನಡೆವನು
ನಟಿ ನಳಿಯೆನೆ ಕೆಲಬರು ತನ್ನ ಬೆರಳ್ಗಳ
ಚಿಟುಕ ತೆಗೆಯಲೊಲ್ದು ನಡೆದ ೩

ಬಾಯ್ದೆರೆವೆಲೆಯ ಘಳಿಗೆಯ ಕೆಲಬರೂಡಿ
ಕೆಯ್ದೆಗೆವರು ಕೆಲರವನ
ಬಾಯ್ದೆರೆಗರ್ಧ ಘಳಿಗೆಯ ಕೊಟ್ಟರ್ಧವ
ನೊಯ್ದುಕೊಂಬರು ತಮ್ಮ ಬಾಯ್ಗೆ ೪

ಕಡುಲೋಭಿಗಳಿರಾ ಘಳಿಗೆಯೊಂದ ಕೊಡುತಿರ್ದು
ಕೊಡದರ್ಧವನು ಕೊಂಡಿರೆಂದ
ಬಡಮನಸಿನ ಹೆಂಗಳರಸ ನಿನ್ನಂತಾವು
ಕಡುಚಾಗಿಗಳೆಯೆಂಬರವರು ೫

ನಲ್ಲ ಕೇಳದಕಲ್ಲ ನಿನ್ನ ಬಾಯ್ದೆರೆ ಸೋಂಕಿ
ನಲ್ಲಿ ಬಂದೆಲೆಯ ಭಾಗವದು
ಬೆಲ್ಲ ಸಕ್ಕರೆಯ ಸೋಲಿಸುತದೆ ಸವಿಯಿಂದ
ಕೆಲ್ಲಿ ಬಂಧುದೊಯ್ಯೆಂಬರವರು ೬

ನೂರು ಘಳಿಗೆಯ ಕೊಡುವೆವಾವು ನೀನೆಮ
ಗಾರು ಘಳಿಗೆ ಕೊಡು ಸಾಕು
ಮಾರಾಟ ನಿನಗಿದು ಲಾಭವಲ್ಲವೆಯೆಂದು
ನೀರೆಯರಿಂಪನಾಡುವರು ೭

ಲಲನೆಯನೊಬ್ಬಳೊಬ್ಬ[1] ಕೈವಿಡಿದಂತೆ
ಹಲವು ಪೆಂಗಳೊಳ್ಪಡುತಿರ್ದ
ಫಲವೇನು ಬಹುದಿನ್ನು ಸವತಿ[2]ಮತ್ಸರ[2]ವೆಂತು
ನೆಲಸುವುದವನ ಪೆಂಡಿರಿಗೆ ೮

ನಿಡುಗೆರೆಯಾಗಿ ನಾಲ್ದೆಸೆಗೆ ಸಾಲಾಗಿ ಚೆ
ಲ್ವಡರಿದ ಸೆಜ್ಜೆವನೆಗಳು
ಇಡಿಕಿರಿದಿದ್ದುವಾ ಮನೆಗಳೆಲ್ಲರ ನಟ್ಟ
ನಡುವಣ ಮನೆ ಗೃಹರಾಜ ೯

ಆಲಯಗಳ ಮುಂದೆ ಮಿರುಮಿರುಗುವ ಪಟ್ಟ
ಶಾಲೆಯ ಮದನ ಕೈಗಳೊಳು
ಜೋಲುವ ದೀಪಸಾಲುಗಳೊಳು ಕೇರಿ ದೀ
ಪಾವಳಿಯ ಹಬ್ಬದಂತಿಹುದು ೧೦

ಶಯನದ ಗೃಹವೆಲ್ಲ ನವರತ್ನಮಯ ಹೇಮ
ಮಯಗಳು ಮತ್ತವನೊಲ್ದು
ಮಯನು ನಿರ್ಮಿಸಿದನೆಂಪಾಡಿ ಒಡುವೆನು ವಿ
ಸ್ಮಯಬಟ್ಟು ಪೊಗಳಲಾನರಿಯೆ ೧೧

ಭಾವ ಬಂದನು ತನ್ನ ಭಾವಕಿಯೆಡೆಗೀಗ
ಭಾವಜಕೇಳಿಗೆ ಬಂದ
ಭಾವಿಸೆ ಬಡಪರಿಯವನಲ್ಲವೆಂದು ಶು
ಕಾವಳಿ ನುಡಿದುವಲ್ಲಲ್ಲಿ ೧೨

ಶಾಖಾದೇಹಳೊಬ್ಬಳೊಬ್ಬಳ ಹಸ್ತ
ಶಾಖೆಯೊಳೊಂದೊಂದು ಮನೆಯ
ಶ್ರೀಖಂಡ ಗಂಧ ಪೊಕ್ಕನು ಕೇರಿ ತುಂಬಿ[3]ರ್ದ[3]
ವಾಖಂಡಲಪುರದಂತೆ ೧೩

---

[1]ನೊಬ್ಬ ಪುರುಷ (ಕ ಖ ಚ ಛ) [2] ಮಚ್ಚರ (ಚ ಛ) [3] ದ (ಕ ಖ ಚ ಛ)

ರಾಜಿಸೆ ನಾಲ್ದೆಸೆಯೊಳು ಕೇರಿ ನಡುವೆ ವಿ
ಭ್ರಾಜಿಸ ಗೃಹರಾಜನೆಂಬ
ರಾಜಗೃಹವ ಮೂಲತನುಗೂಡಿ ಹೊಕ್ಕನಾ
ರಾಜನು ಪದ್ಮಿನಿ ಸಹಿತ ೧೪

ಸಿಂಹವಾಹಿನಿಯೆಂಬ ಮಂಚದನೇರಿದ್ದ
ಸಿಂಹ ವಿಕ್ರಮನ ಕೆಲದೊಳು
ಸಿಂಹಾಯತಮಧ್ಯೆ ಕುಳಿತಳು ಜಾಡ್ಯವ
ಸಂಹರಿಸುವ ಶಕ್ತಿ ಮೆರೆಯೆ ೧೫

ಕಾಲ ತೊಳೆವುತಂಗದಟ್ಟವನಿಕ್ಕುತ
ವೀಳೆಯಗೊಡುತ ಮತ್ತವರ್ಗೆ
ಕಾಲೋಚಿತದ ಸೇವೆಯ ಮಾಡುತ್ತಿದ್ದವು
ಸಾಲಭಂಜಿಕೆಗಳೇನೆಂಬೆ ೧೬

ಹಲವು ಪುತ್ತಳಿಗಳು ಸೇವೆಯ ಮಾಳ್ಪಾಗ
ನಿಲಿಸಿದಳೊಂದು ಪುತ್ತಳಿಯ
ಎಲೆಯ ಘಳಿಗೆಯ ತನ್ನರಸಗೆ ತಾನರ್ತಿ
ಯೊಳು ಕೊಡುತಿರ್ದಳಾ ಜಾಣೆ ೧೭

ಕಡುಪಂಥಗಾರ್ತಿ ನೀನೆಲಗೆ ವೀಳೆಯವೆಲೆ
ಗೊಡದಿರಂಜುವೆವು ನಾವೆಂದ
ನಡೆಯಿತೆ ನಿನ್ನ ಮುಂದೆನ್ನಯ ಪಂಥ ಕೋ
ಪಿಡಿ ಸುಮ್ಮನೆನುತೀಯುತಿಹಳು ೧೮

ಬಿನುಡಿಗಳನೆ ಕಲಿತೆ ಮೃದುವಚನವ
ಮರೆತೆಯೆಲಾ ಪದ್ಮಿಯೆಂದ
ಬಿರಿಸೇನು ನೀವು ತಾವೆಂದು ಛಾಂದಸಿಕೆಯ
ಮೆರೆಯಬೇಕೆಯೆಂದಳವಳು ೧೯

ಆಗಲಾಗಲಿ ದೇವರೆಲೆಯ ಘಳಿಗೆಯ ಲೇ
ಸಾಗಿ ಚಿತ್ತೈಸಿ ಹಸಾದ
ಭಾಗದೆಲೆಯೊಳಿನಗರ್ಥವ ಪಾಲಿಸಿ
ಯೋಗಲಾದುದೆಯೆಂದಳವಳು ೨೦

ಅಕ್ಕಟಕ್ಕಟನೋಡ ಯಿವಳಿಗೆನ್ನೊಡನೆಕ್ಕ
ಸಕ್ಕದುದಾಸೀನದಾಟ
ಲೆಕ್ಕಕೆ ತಾರೆ ನಾನಾರಂತೆ ನಿನ್ನ ನೋ
ಟಕ್ಕೆ ತೋರಿದೆನೊ ಹಾಯೆಂದ ೨೧

ದೇವ ನೀನೆನ್ನ ನೋಟಕೆ ನನ್ನ ಮನಕೆ ಸಂ
ಜೀವನವಾಗಿ ತೋರಿದಪೆ
ಹಾ ವೈಶಿಕದಾಟ ಸಾಕೆಂದು ಮುನಿದು ಕ
ಲಾವಿದ ಮೊಗವಡ್ಡತೆಗೆದ ೨೨

ಹರಣವ ಸೂರೆಗೊಂಡರಸ ನೀನುರೆ ಮೊಗ
ದಿರುಹಿದರಾನು ಬಿಡುವೆನೆ
ತಿರುಗಿತ್ತಲೆಂದು ತನ್ನತ್ತ ತೆಗೆದಳು ನುಂ
ಗುರಳನೆಡದ ತೋಳೊಳಪ್ಪಿ ೨೩

ಪದ್ಮಿಯ ಪ್ರಾಣವೊಡೆಯನೆ ಕಣ್ದೆರೆ ಬೇಗ
ಪದ್ಮಿಯ ಸಿರಿಯೆ ಮಾತಾಡು
ಪದ್ಮಿನಿಗರ್ತಿತೋರೆಂದು ಮುದ್ದಿಸಿ ಮುಖ
ಪದ್ಮವ ತಡವಿ ನೋಡುವಳು ೨೪

ಗಿಳಿಯಂತೆ ನುಡಿವಳು ಲತೆಯಂತೆ ತಬ್ಬುವ
ಳೆಳದು ಹರಿವ ಹೊಳೆಯಂತೆ
ಗರಳವ ತೋರುವಳಪ್ಪಿ ತೂಗಾಡಿ ಕಂ
ಗಳ ತೆರೆಯೆಂದು ಕಾಡುವಳು ೨೫

ಆ ನೀರೆ ಮಾಡುವ ಕಲೆಗೆ ಮೈ ಮಿಸುಕದೆ
ತಾನೊಂದು ಪುತ್ತಳಿಯಂತೆ
ಜ್ಞಾನಾತ್ಮನೊಳಗಿದ್ದನಾ ರಾಯನೇನಲಾತ್ಮ
ಧ್ಯಾನದ ಶಕ್ತಿ ಸದರವೆ ೨೬

ತವಕದೊಳವಳು ಸೈರಿಸಲಾರದವನ ಪಾ
ದವ ಕಟ್ಟಿಕೊಂಡು ನೀನೆನ್ನ
ಸವಿಯೊಳೋಲಾಡಿಸು ಕಣ್ದೆರೆಯೆಂದು ದೈ
ನ್ಯವ ತೋರಿ ನುಡಿದಳರ್ತಿಯೊಳು ೨೭

ಅದಕೂ ಕಣ್ದೆರೆಯನವಳು ಕಂಡಳಾತ್ಮ ಯೋ
ಗದ ಶಕ್ತಿವಿಡಿದಿರ್ದನೆಂದು
ಇದಕೆ ತಂತ್ರವ ಬಲ್ಲೆ ನಾನೆಂದು ನೃಪನ ಚಿ
ತ್ತದ ನೆಲೆಯರಿದು ನುಡಿದಳು ೨೮

ಅರಸ ಕಣ್ದೆರೆ ತೆರೆಯದಿರೆ ಚಿದಂಬರ
ಪುರುಷನ ಮೇಲಾಣೆಯೆನಲು
ದರಹಾಸದಿಂದ ಕಣ್ದೆರೆದು ನೋಡಿದನು ಸ
ದ್ಗುರುವಿನಾಣೆಯ ಮೀರಬಹುದೆ ೨೯

ಕಣ್ದೆರೆದಾಕ್ಷಣ ಬರಸೆಳೆದಾ ತೊಂಡೆ
ವಣ್ದುಟಿಯಬಲೆಯನಪ್ಪಿ
ನಾಣ್ದಾಣ ಜುಮ್ಮೆನೆ ಚುಂಬಿಸಿ ಲಲನೆಗೆ
ಗೇಣ್ದೋರಿದನು ಸ್ವರ್ಗಸುಖವ ೩೦

ಪದ್ಮಿನಿಯೊಡನಿಲ್ಲಿ ಕೂಡಿದಂದದಿ ಮಿಕ್ಕ
ಪದ್ಮವದನೆಯರೆಲ್ಲರೊಳು
ಸದ್ಮ ಸದ್ಮಕೆ ತಪ್ಪದೈದಿ ಕೂಡಿದ್ದನು
ಛದ್ಮವಿಲ್ಲದೆ ರಾಜಮೋಹಿ ೩೧

ಜಿನ ಜಿನ ಯೇನೆಂಬೆ ನೃಪನೆಡೆಯೊಳಗಾಗ
ಕನಸಿನೊಳಾತ್ಮ ತೋರುವನು
ವನಜಗಂಧಿನಿಯರಿಗರಸನೆ ತೋರುವ
ನೆನಲದೇಂ ಪುಣ್ಯಜೀವಿಗಳೊ ೩೨

ತೆಳುನಿದ್ದೆಯಲ್ಲದೆ ಬಲುನಿದ್ದೆಯವರ್ಗಿಲ್ಲ
ಕಲಹಂಸತೂಲತಲ್ಪದೊಳು
ಮಲಗಿ ಕಣ್ಗೆಸೆದರು ಪೆಣ್ಗೂಡಿ ಕಳಹಂಸ
ಬಿಳಿಯ ತಾವರೆಯೊಳಿಪಂತೆ ೩೩

ಕಿರಿದು ಹೊತ್ತಿನೊಳಾತಗೆಚ್ಚರಾದುದು ಮರೆ
ದೊರಗಿರ್ದ ಸತಿಯರೆಲ್ಲರೊಳು
ಒರಗಿರ್ದನಿಲ್ಲಿ ಪದ್ಮಿನಿಯೊತ್ತಿನೊಳು ಕ
ಣ್ದೆರೆದಿದ್ದನಾ ಭಾವಿತಾತ್ಮ ೩೪

ಬ್ರಹ್ಮಿಯೆಂದೆಂಬ ಮುಹೂರ್ತಸನ್ನಿಧಿಯದು
ಬ್ರಹ್ಮಯೋಗಕೆ ತಕ್ಕಕಾಲ
ಬ್ರಹ್ಮಮಾರ್ಗಕೆ ನಡಸಿದನು ವಾಯುವ ಸರ
ಬ್ರಹ್ಮವ ಕಂಡ ತನ್ನೊಳಗೆ ೩೫

ನುಡಿಯಬಾರದ ಶಬ್ದ ನೋಡಬಾರದ ವರ್ಣ
ಪಿಡಿಯಬಾರದ ಶೂನ್ಯರೂಪ
ನುಡಿದನು ನೋಡಿ ಹಿಡಿದನಾ ಚಕ್ರೇಶ
ಬಡವನೆ ಭಾವತಾಪಸನು ೩೬

ಧ್ಯಾನದೊಳಾ ರಾಯನಿದ್ದನಂತಿರಲಿ ಮು
ಕ್ತೇನೆಂಬೆನಾ ಸಮಯದೊಳು
ಭಾನುಮೂಡುವ ವೇಳೆಯರಿದು ಒಂದರು ಮುಝು
ಗಾನಕಾಂತೆಯರು ಮೇಳದೊಳು ೩೭

ಅರುಹನ ನೆನಹಿಂದ ಪಾಪ ತೊಲಗುವಂತೆ
ಧರೆಯಂಧಕಾರ ಜಾರುತಿದೆ
ಗುರುಭಕ್ತಿ ತೋರುವಂತರುಣೋದಯ ತೋರಿ
ತರಸಂಯೆಂದೆತ್ತಿ ಹಾಡಿದರು ೩೮

ಅರುಣೋದಯವಾಗಿ ಕಿರುಣೋದಯವಾಯ್ತು
ತರಣಿ ತೋರದ ಮುನ್ನ ನಿನ್ನ
ಸುರುಚಿರಾಂಗವ ತೋರಿ ಜಗವನುದ್ಧರಿಸೆಲೆ
ಪುರುನಾಥನಗ್ರಕುಮಾರ ೩೯

ಭೋಗಕೆ ಮರುಳಾಗಿ ಧರ್ಮವನುರದಧೋ
ಭೋಗಕೆ ಬೀಳ್ವರ ನಗುತ
ಭೋಗದೊಳಿದ್ದು ಯೋಗಿಗಳಂತೆ ಸುಖಿಯಹ
ಭೋಗಿಗಳೆರಸ ನೀನೇಳು ೪೦

ಎಂದು ಪಾಡುವ ಸುಪ್ರಭಾತಗೀತವ ಕೇಳ್ದು
ಮಂದಿರ ಮಂದಿರಗಳಿಗೆ
ಸಂದ ಹಲವು ರೂಪ ಬಯಲು ಮಾಡಿದನು ವ್ಯೋ
ಮೊಂದರೊಳಗೆ ನಿಂದನಾಗ ೪೧

ಮಂಚಮಂಚದೊಳು ಪೆಣ್ಗಳ ಕಣ್ಗೆತೋಱಿದ
ಮಿಂಚಿನಂತಿರೆ ಬಯಲಾದ
ಅಂಚೆಗಮನೆಯರಚ್ಚರಿವಟ್ಟು ನಿತ್ಯಕೃ
ತ್ಯಾಂಚಿತದೊಳಗಿದ್ದರೆಲ್ಲ ೪೨

ಸುಪ್ರಭಾತವ ಕೇಳುತೊಡನೆದ್ದು ಪದ್ಮಿನಿ
ಸುಪ್ರಭಾವದೊಳಿರೆ ನೋಡಿ
ಸುಪ್ರಿಯೆ ಮತ್ತೆ ಬಾ ನೀನೆಂದು ಜಿನಗೃಹ
ಕಾ ಪ್ರಭುವೆದ್ದನಾಕ್ಷಣವೆ ೪೩

## ಪರ್ವಾಭಿಷೇಕ ಸಂಧಿ

ನುಡಿಯಲಳಿವೆ ಚಕ್ರನಾಥನ ಚಾಣ್ಮೆಯು
ಕಡುಶುಚಿ ದೇಹಿ ತಾನಹುದು
ಮಡದಿಯರೊಡನಿದ್ದನೆಂದು ಪೂಜೆಗೆ ಮುನ್ನ
ನಡೆದನು ಮಜ್ಜನಗೃಹಕೆ ೧

ಬೋಗಮಜ್ಜನ ಯೋಗಮಜ್ಜನವೆಂದೆರ
ಡಾಗಿಹುವವನಿಗೆ ಜಳಕ
ಭೋಗಾರ್ಥಮಾವುದು ಭೋಗಮಜ್ಜನ ಪೂಜೆ
ಗಾಗಿರೆ ಯೋಗಮಜ್ಜನವು ೨

ಉರುಕೇಶವೆಂಬ ರಾಹುವಿನ ವ್ಯೂಮುಸುಕಿದ
ಹೆರೆಯೊ ಕಾಳಿಂದಿಯ ನೊರೆಯೊ
ಪರಮನಾಲಯಕೆ ಬಹರಸನ ಚೀನಾಂ
ಬರವಿದ್ದುದಡ್ಡ ಸುತ್ತಿನೊಳು ೩

ಕಿರಿದಾಗಿ ತಿಲಕವಿಲ್ಲಾಗ ನೊಸಲು ತುಂಬಿ
ಮೆರೆವುತಿದ್ದುದು ಧರ್ಮಚಕ್ರ
ಉರೆಕರ್ಮಕಾಂಡವ ತರಿವ ಚಕ್ರವೊ ಬಟ್ಟೆ
ಮೆರೆಯೊಯೆಂಬಂತೆ ಚೆಲ್ವಿನೊಳು ೪

ಪಲ್ಲ ಕೆಂಪಳಿವಂತೆ ಸುಲಿದಿದ್ದನವು ಮೊಗ್ಗ
ಮಲ್ಲಿಗೆಯೆಂತಿದ್ದುವಾಗ
ಸೆಲ್ಲಗಳೆದನು ವೀಳೆಯವ ಸಂಯಮಿತನ
ಪಲ್ಲವಿಸುತ ಪಜ್ಜೆಯಿಟ್ಟ ೫

ನೆರವಿ ಮೆಟ್ಟಿದ ನೆಲನೆಂದದ ಮೆಟ್ಟದೆ
ನಿರುತ ಶುಚಿಭೂತನಾಗಿ
ಅರಳೆ ಕೀಲಿಸಿದ ಬೆಳ್ಳಿಯ ಪಾವುಗೆಯ ಮೆಟ್ಟಿ
ಬರುತಿದ್ದನಧಿಕ ಶಾಂತದೊಳು ೬

ಹೊಗಳಬಾರದು ತನ್ನ ಕಂಡೊಬ್ಬರಾಗ ಕೈ
ಮುಗಿಯಬಾರದು ಛತ್ರವಿಲ್ಲ
ಸುಗತ ನಿವಾಸಕೆ ನಡೆದನು ಹೆಮ್ಮೆಯ
ತೆಗೆದಿಟ್ಟು ಭಯಭಕ್ತಿವೆರಸಿ ೭

ಇಂದೆಮ್ಮಪತಿಗೆ ಸಂಯಮ ನಾವು ಸಂಯಮ
ದಿಂದೆಯ್ದಬೇಕೆಂದು ತಾವು
ಮಿಂದು ಪುರುಷನಂತೆ ಮೋಕ್ಷ ಶೃಂಗಾರ ತ
ಳ್ತೊಂದಿ ಬಂದರು ರಮಣಿಯರು ೮

ಬಳಸಿನೊಳರಸಿಯರ್ವೆತರೆ ಮಿಂಚುಮಾ
ದಳವ ಹಸ್ತದೊಳಾಂತು ನೃಪತಿ
ಮಲಹರಿ ಲಲಿತೆಯೊಳಧ್ಯಾತ್ಮ ಗಾನಮಂ
ಗಲವ ಕೇಳುತ ನಡೆತಂದ ೯

ಪರಿಪರಿಯರ್ಚನಾದ್ರವ್ಯವ ಧರಿಸಿದ
ಪರಿವಾರ ಸತಿಯರ ಹಿಂದೆ
ಎರಡು ಪಕ್ಕದೆ ಗಾನವೆಸೆಯೆ ಬಂದನು ಶಂಖ
ಮೊರೆಯೆ ಭುಂ ಭುಂ ಎಂದು ಮುಂದೆ ೧೦

ಅರಮನೆಯೊತ್ತಿನ ಸಿರಿವನದೊಳಗಿಹ
ಪುರುಜಿನಾಲಯಕಡಿಯಿಟ್ಟು
ಪರಿವೃತ ಕೋಟೆಯೊತ್ತಿನೊಳು ಪಾವುಗೆಗಳ
ಪರಿಹರಿಸಿದನೊಳಹೊಕ್ಕ ೧೧

ರಾಜಗೃಹವ ರಚಿಸಿದ ಗಡ ಸುರಶಿಲ್ಪಿ
ಶ್ರೀಜಿನಗೃಹವ ನಿರ್ಮಿಸನೆ
ಆ ಜಿನಗೃಹವ ಬಣ್ಣಿಸಲರಿಯೆನು ಕಲ್ಪ
ಭೂಜದಂತಿಹುದೆಂಬೆನೊಮ್ಮೆ ೧೨

ಮುತ್ತಿನ ಕಲಶ ಮಾಣಿಕದ ಕಲಶಗಳು
ಸುತ್ತ ಪ್ರಕಾಶ ಬೀರುತಿರಲು
ಇತ್ತಲೇತಕ ಚಂದ್ರಸೂರ್ಯರ ಕಿರಣಗ
ಳತ್ತಲಿರಲಿಯೆನುತಿಹುವು ೧೩

ಆಕಾಶದಮರರ ಕರೆವಂತೆ ಹಲವು ಪ
ತಾಕೆ ಕೈವೀಸುತೊಪ್ಪಿದುವು
ವ್ಯಾಕುಲದೊಡ್ಡ ಝಂಕಿಸುವಂತೆ ಮಣಿಘಂಟಾ
ನೀಕ ಢಂ ಢಣರೆನುತಿಹುವು ೧೪

ನಗುವಂತೆ ನೋಳ್ಪಂತೆ ನುಡಿವಂತೆ ಪುತ್ಥಳಿ
ಬಗೆಗೊಳಿಸಿದ್ದುವಲ್ಲಲ್ಲಿ
ಧಗಧಗಿಸುತ ಜಿನಸಿದ್ಧ ಮೂರ್ತಿಗಳು ದಿ
ಟ್ಟಿಗೆ ಶಾಂತಿಗರೆವುತೊಪ್ಪಿದುವು ೧೫

ಸಕಲ ಸಂಪದದ ಬೀಡೆನಿಸುವ ಬಸದಿಯ
ತ್ರಿಕರಣಶುದ್ಧಿ ಪೂರ್ವಕದಿ
ಮುಕುಳಿತ ಹಸ್ತಾಬ್ಜ ಮೂರು ಸೂಳ್ಬಲಗೊಂಡ
ನಕಳಂಕಚರಿತೆಯರ್ವೆರಸಿ ೧೬

ಚರಣವ ತೊಳೆದೊಳಹೊಕ್ಕು ಕಟ್ಟಿದಿರೊಳು
ಪುರುಜಿನಬಿಂಬವ ಕಂಡ
ದರುಶನಾಂಜಲಿಯಿಂದು ಹೇಮಪುಷ್ಪವ ಸೂಸಿ
ಕರಗೂಡಿ ನಿಂದು ಕೀರ್ತಿಸಿದ ೧೭

ಕೈವಲ್ಯಬೋಧ ಮಹಾರಾಜ್ಯದೊಡೆಯನ
ದೇವಾಧಿದೇವನ ಜಿನನ
ಪಾವನಬಿಂಬವೆ ಜಯ ಜಯ ಚಿಲ್ವಾದಿ
ದೇವನ ಬಿಂಬವೆಯೆಂದ ೧೮

ಶ್ರೀಮುಕ್ತಿಯೊಡೆಯನ ಸಿದ್ಧಾಂತ ವಾಕ್ಯನ
ಕಾಮಿತ ಸಿದ್ಧಿದಾಯಕನ
ಪ್ರೇಮದ ಪ್ರತಿಮೆಯು ಜಯ ಜಯ ನನ್ನ
ಸ್ವಾಮಿಯ ಪ್ರತಿಮೆಯೆಯೆಂದ ೧೯

ರಾಜಾರ್ಕಕೋಟಿಪ್ರಕಾಶನ ತ್ರಿಭುವನ
ರಾಜರೊಡೆಯನ ಅನ್ವಯನ
ರಾಜಿತ ಪ್ರತಿಮೆ ಜಯ ಜಯ ಭರತನ
ಸ್ವಾಜಿನ ಪ್ರತಿಮೆಯಿದೆಂದ ೨೦

ಎಂದು ಕೀರ್ತಿಸಿ ಮತ್ತೆ ಕೈಲಾಸಗಿರಿಗೊಲ
ವಿಂದ ಚಿತ್ತವ ನೀಡಿ ನೈಯು
ಮಂದಿರದೊಳು ನೀಡಿ ಮೂರು ಸೂಳೆರಗಿದ
ನಂದುದಾದೀಶಗಾ ಭಕ್ತಿ ೨೧

ದರ್ಭಾಸನದಲ್ಲಿ ಕುಳಿತನು ಕೂಡೆ ಸಂ
ದರ್ಭಿಸಿ ನಕಲ ಕ್ರಿಯೆಗಳ
ನಿರ್ಭವಕರನವ ಜೈನದೇವತೆಗೆ ಶು
ಚಿಭೂತನಿತ್ತನರ್ಘ್ಯವನು ೨೨

ಸ್ತೋತ್ರವ ಮಾಡಿದ ಜಪವ ಮಾಡಿದ ಕೂಡೆ
ನೇತ್ರವ ಮುಗುಳ್ದಾತ್ಮನೊಳಗೆ
ಚಿತ್ರಿಸಿದಂತಾದಿ ಜಿನನ ಕಂಡಾ ಜಾತಿ
ಕ್ಷತ್ರಿಯಯೋಗೀಂದ್ರನಿರ್ದ ೨೩

ರಾಣಿಯರೆಲ್ಲರು ಸ್ತುತಿಸುತಿದ್ದರು ಬಹು
ವೀಣೆಯ ಮಿಡಿದರೆಂಬಂತೆ
ಮಾಣಿಕಬಸದಿ ಮಾತಾಡುತಿರ್ದುದು ಕೂಡೆ
ವೀಣೆಗೆ ಪ್ರತಿವೀಣೆಯಂತೆ ೨೪

ದೇವದೇವೋತ್ತಮ ದೇದೀಪ್ಯಮಾನ ದೇ
ಹಾವಲಂಬನ ಜೇಪರತ್ನ
ಮಾವಾಜಿ ಜಯ ಜಯಯೆಂದರಾ ದೇವಾಧಿ
ದೇವನ ಸೊಸೆಯರರ್ತಿಯೊಳು ೨೫

ಸಾವು ಹುಟ್ಟಿಗೆ ಸಿಕ್ಕಿ ಸಂಕಟಬಡುವೆಮ್ಮ
ನೋವನೆಲ್ಲವನು ನುಗ್ಗೊತ್ತಿ
ಕಾವುದೆಮ್ಮನು ಸ್ವಾಮಿಯೆಂದರಾ ತ್ರಿಭುವನ
ದೇವನ ಮಗನ ರಾಣಿಯರು ೨೬

ನಿನ್ನ ಕುಮಾರನಂತೆಮಗೆ ಶುದ್ಧಾತ್ಮಯೋ
ಗೋನ್ನತಿ ಬಾರದು ಸ್ವಾಮಿ
ನಿನ್ನ ನಂಬಿಹೆವೆಂದು ಸಮ್ಯಕ್ತ್ವಶೀಲ ಸಂ
ಪನ್ನೆಯರತಿ ನುತಿಸಿದರು ೨೭

ಆನಿತರೊಳಗೆ ರಾಯ ಕಣ್ದೆರೆದೆದ್ದನಂ
ಗನೆಯರು ನಡೆದರು ಕೂಡೆ
ಮುನಿವಾಸಕಡಿಯಿಟ್ಟು ಮುನಿಗಳಿಗೆಲ್ಲ ವಂ
ದನೆಗೆಯ್ದನಬಲೆಯರ್ವೆರಸಿ ೨೮

ದಿನವ್ರತ ದಿಗ್ವ್ರತ ಮಿತಪರಿಗ್ರಹವ ಮು
ತ್ತನಶನವ್ರತವ ಕೈಕೊಂಡು
ವನಜಮುಖಿಯರು ಕೈಕೊಂಡರು ವ್ರತಗಳ
ಜಿನಮುನಿಗಳ ಸಮಕ್ಷದೊಳು ೨೯

ನೋಡ ಚಿತ್ತೈಸಿ ಪೂಜೆಯನೆಂದು ಮುನಿಗಳ
ಬೇಡಿಕೊಂಡಸು ಕೂಡೆ ಮಗುಳ್ದ
ಆಡಲಳವೆ ತನ್ನ ಕೈನುಟ್ಟಿದಭಿಷೇಕ
ಮಾಡತೊಡಗಿದನಾ ಚಕ್ರಿ ೩೦

ಪೆರ್ಚುವೆತ್ತಪರಂಜಿಗಳಶವನಷ್ಟವಿ
ಧಾರ್ಚನೆಯಿಂದ ಸತ್ಕರಿಸಿ
ಬಾರ್ಚಿ ಕೈವಿಡಿದನು ಮಾಂದಳಿರಿಗೆ ಪಣ್ಣ
ಸಾರ್ಚಿದಂತೊಪ್ಪಿತಾ ಭಾವ ೩೧

ಜಿನಬಿಂಬವೈನೂರು ಮಾರುದ್ದವದು ಸುಖಾ
ಸನದೊಳಗಡಕವಾಗಿಹುದು
ಜನಪನ ಸತಿಯರೈನೂರು ಮಾರುದ್ದವಾ
ಘನತೆಯದೆಂತೊ ಪೂಜೆಯೊಳು ೩೨

ಪಿರಿದುದ್ದವಾಗಿ ಬೇತಾಳರೂಪಲ್ಲವಾ
ಪಿರಿದುದ್ದಕೊಪ್ಪುವ ತೋರ
ಕರಚರಣಾಂಗವ ಶೋಭೆಗಳವಟ್ಟು
ಪುರುಷ ಪ್ರಮಾಣದಂತಿಹುದು ೩೩

ಪ್ರಚ್ಛಾದವೊಡೆದು ಮುಗಿಲ್ಗಳು ಕನಕಾದ್ರಿ
ಗಚ್ಛಂಬುಗಳ ಕರವಂತೆ
ಸ್ವಚ್ಛಜಲಾಭಿಷೇಕವ ಮಾಡಿದನು ಜಿನ
ಕಿಚ್ಛೆಪಟ್ಟಖಿಳ ಕುಂಭದೊಳು ೩೪

ಇಂಗಡಲೊಳು ತೇಲ್ವ ನೊರೆಯೆಲ್ಲ ತೆರಗಟ್ಟಿ
ಅಂಗ್ಗೈಗೆ ಸಾರ್ದು ಜಾರ್ವಂತೆ
ತೆಂಗಿನಕಾಯ[1]ತೂರೆ[1]ಗಳನಾ ಭೂಪ ದೇ
ವಂಗಭಿಷೇಕವ ಗೈದ ೩೫

ತಾಳೆಯ ಹೂವಿನೆಸಳೊಯೆನೆ ಸುಲಿದಿಂಪು
ವಾಳೆಯ ಹಣ್ಣನಾ ರಾಯ
ಲಾಲಿತ ಪ್ರತಿಮೆಯ ಭುಜಮುಟ್ಟೆ ಮೆದೆಗಟ್ಟೆ
ಢಾಳಿಪಂತಭಿಷೇಕ ಗೈದ ೩೬

ತಿಳಿದುಪ್ಪವೆರೆದಾಗ ಚಿನ್ನದ ರಸದೊಂದು
ಹೊಳೆ ಹರಿವಂತೆ ಶೋಭಿಸಿತು
ಬಲು ಹರೆದುಪ್ಪ ಬಹಾಗ ಪಾಲ್ಗಡಲ ನು
ಣ್ಮಕಲಿಳಿವಂತೆ ರಂಜಿಸಿತು ೩೭

ಕಡುದೊಡ್ಡ ಕುಂಭವ ನಿಡುಪೋಳ್ಗಳಿಂದೆತ್ತಿ
ಬಿಡಲಾಗಿ ಪಾಲಧಾರೆಗಳು
ಬುಡು ಬುಡು ಭೋಭೋರ್ರು ಝಲ್ಲು ಝಲ್ಲೆನುತ ಧಿಂ
ಕಿಡುತಿಳಿದುದು ತೊರೆಯಾಗಿ ೩೮

ದಿಟ್ಟಿಗೆ ಬೆಳ್ಪು ಕೋರೈಸುತ ತೆಂಗಿನ
ಬಟ್ಟೆಳೆಗಾಯಂತೆ ಮೆರೆವ
ಘಟ್ಟಿ ಮೊಸರೊಳಭಿಷೇಕವ ತನ್ನ ಕೈ
ಮುಟ್ಟೆ ಮಾಡಿದನಕ್ಕರಿಂದ ೩೯

ಪಣ್ಣ ತೆಗೆವರು ಪಾಲ್ಮೊಸರ ತೆಗೆವರು ಹೊಂ
ಬಣ್ಣದ ಘೃತವ ತೆಗೆವರು
ಕಣ್ಣೆವೆ ಹಳಚುವಷ್ಟರೊಳವನೂಳಿಗ
ವೆಣ್ಣುಗಳೊಳ್ಪುಮಾಡುವರು ೪೦

ಚಂಡಾಡಿದಂತೆ ಕುಂಭವನೆತ್ತಿ ಗಜಗಳ
ಸುಂಡಿಲ ನಗುವ ಚೆಲ್ವಿಕೆಯ
ದುಂಡುದೋಳೆತ್ತಿ ಸ್ವಾಮಿಯಮೇಲೆ ಸುರಿವನ
ಖಂಡಿತದಮೃತಧಾರೆಗಳ ೪೧

---

[1] ತುರಿ (ಕ ಖ ಛ) ತೂರೆ (ಚ ಗ)

ಹಾಲಸಮುದ್ರವೊಂದನೆ ತಂದು ಜನಗೆಂದು
ಶೈಲದೊಳಮರರೆರೆದರು
ಹಾಲಿಕ್ಷುರಸ ಘೃತ ದಧಿಯ ಸಾಲ್ಕಸ್ಪಿಯು
ಮೇಲಿನಿಂದಿಳುಹಿದಸಿವನು ೪೨

ಲಾಜಾಂಗಚೂರ್ಣವ ಕುಂಕುಮಚೂರ್ಣವ
ಗಾಜುಗೋಜಾಗಿ ಸೂಸಿದನು
ಶ್ರೀಜಿನಸಿದ್ಧನಮೃತಸತಿಯಿಟ್ಟ ನೀ
ರೇಜ ಧೂಳಿಯೋಲಿದ್ದಿದಂತೆ ೪೩

ಪೂರ್ಣಕುಂಭವನೆತ್ತಿ ಲೋಕದ ಸಂತಾಪ
ನಿರ್ನಾಶವಾಗುವಂದದೊಳು
ವರ್ಣಶುದ್ಧದೊಳೋದಿ ಶಾಂತಿಮಂತ್ರವನು ಸು
ವರ್ಣಾಂಗನಭಿಷೇಕಗೈದ ೪೪

ಹಲವು ವರ್ಣದ ಪುಷ್ಪ ತುಂಬಿದ ನೂರೆಂಟು
ಗಳಿಗೆಯನೆತ್ತಿ ಸೂಸಿದನು
ಪಳಪಳನಿಳಿವ ಹೂಮಳೆಯ ಕಂಡೆಲ್ಲರಂ
ದುಲಿದರು ಜಯ ಜಯವೆಂದು ೪೫

ಬಳಿಕ ಪ್ರತಿಮೆಗಷ್ಟವಿಧದರ್ಚನೆಯ ಮಾಡಿ
ಅಲರ್ದ ನೂರೆಂಟು ತಾವರೆಯ
ಸಲೆ ಮಂತ್ರ ಪುಷ್ಪವನಿಕ್ಕಿ ಕೈಮುಗಿದನಾ
ಗಳೆ ವಾದ್ಯತತಿ ಸುಮ್ಮನಾಯ್ತು ೪೬

ಪರಮಾತ್ಮಸಿದ್ಧಿರಸ್ತೆಂದನಾಚಾರ್ಯರ್ ಮಿ
ಕ್ಕರು ಧರ್ಮವೃದ್ಧಿರಸ್ತೆನಲು
ಹರಕೆಯನಾಂತು ಕೊಡೊಲೆದು ನೋಡಿದನಲ್ಲಿ
ನೆರದಿರ್ದ ಜನವನಾ ರಾಯ ೪೭

ಅರಮನೆಯೊತ್ತಿನ ಬಸದಿ ಮತ್ತನ್ಯರು
ಬರಬಾರದೇಕಾಂತ ಪೂಜೆ
ಪರಿಸೆ ಬಹಳವಿಲ್ಲ ಕರೆದು ಕೊಡಿದುದು ಪ
ನ್ನೆರಡು ಲಕ್ಷದೊಳಿದ್ದುದಾಗ ೪೮

ನಡುವಗಲಿನ ಸನ್ನೆಯಾದುದು ವಾದಕ
ರೆಡಬಲಕೊಲೆದು ಸಾಗಿದರು
ಬಿಡುಗೆಗೊಂಡರು ವೃದ್ಧ ಪ್ರತಿಕರು ಭರತೇಶ
ನಡಿಗಳಿಗೆರಗಿ ಭಕ್ತಿಯೊಳು ೪೯

ಧರಣೀಶನಿಂದು ನಾರಿಯರುಗೂಡಿಲ್ಲಿ ಜಾ
ಗರವಿಹನೆಂದು ಯೋಗಿಗಳು
ಪುರದ ಮಧ್ಯದ ಜಿನವಾಸಕೆದ್ದರು ಸುಖ
ವಿರು ಭವ್ಯಯೊಂದೊಲ್ದು ಹರಸಿ ೫೦

ಲೋಕಾಂತ ಹೋದುದೇಕಾಂತವಾದುದು ಧರ್ಮ
ವಾಕಿಂದ ವ್ರತಸತಿಯರೊಳು
ಭೂಕಾಂತನಿದ್ದನೆಂಬಲ್ಲಿಗೆ ಪರ್ವಾಭಿ
ಷೇಕದ ಸಂಧಿ ಸುಗಂಧಿ ೫೧

# ಪಾರಣಾ ಸಂಧಿ

ಎಂತಿರ್ದುದಾ ಭರತೇಶನಾ ಯೋಗವಿಂ
ತೆಂತಿರ್ದುದೆಂದಾಡಲರಿಯೆ
ಶಾಂತಿಯಾಗಿರ್ದುದು ಕಾಂತಿಯಾಗಿರ್ದುದೇ
ಕಾಂತವಾಗಿರ್ದುದಾತ್ಮದೊಳು ೧

ಕೋಗಿಲೆ ದನಿಯಂತೆ ವೀಣಾರವದಂತೆ
ರಾಗದೋರುವುದೊಮ್ಮೆ ನಾದ
ಸಾರಘೋಷ ತೋರುವುದು ಕರ್ಣದೊಳದು
ಲಾಗು ಯೋಗಬ್ರಹ್ಮಶಕ್ತಿ ೨

ನಿಂದೆಳೆ ಮುತ್ತಿನಂತೊಪ್ಪುವ ನಿರ್ಮಲ
ಬಿಂದುವ ಕಾಣ್ಬನೊಮ್ಮೊಮ್ಮೆ
ನಿಂದಲ್ಲಿ ನಿಲ್ಲದುಳ್ಕಿನವೊಲು ಚಲಿಸುವಾ
ನಂದಕಲೆಯ ಕಾಣ್ಬನೊಮ್ಮೆ ೩

ಒಳಗೆ ತನ್ಮಾತ್ರರ ಬೆಳಗಿನೊಳಿರ್ದನು
ನಿಳಯ ತಾನದು ಮಣಿವೆಳಗು
ಬೆಳಗಿಗೆ ಬೆಳಗಿದಿರ್ವಪ್ಪಂತೆ ತೋರಿತು
ಬೆಳಗಿನ ಚಿಹ್ನವಷ್ಟರೊಳು ೪

ತಂಗಾಳಿ ತೀಡಿತು ತಾರೆಗೆ ಮಸುಳ್ದುವು
ಹಿಂಗಿತು ಜಗದಂಧಕಾರ
ಮುಂಗಾರ ಮೊಳಗಿನಂದದಿ ಮೊಳಗಿದವು ವಾ
ದ್ಯಂಗಳು ಜಿನಗೃಹದೊಳಗೆ ೫

ನೋಡುವೆನಾತ್ಮಯೋಗಿಯನು ಪಾರಣೆಯನು
ಮಾಡಿಪೆನೆಂದು ರಥವನು
ಓಡಿಸಿಕೊಂಡು ಬಂದನೊಯೆನೆ ರವಿ ಬಂದು
ಮೂಡಣಗಿರಿಯನೇರಿದನು ೬

ಎಳೆವಿಸಿಲಡರ್ವೆರ್ರೆ ಜಿನನಿಲಯದ ರತ್ನ
ಕಳಶದೊಳ್ಮಾತಾಡೆ ಕಂಡು
ಬೆಳಗಾಯ್ತು ದೇವ ಕಣ್ದೆರೆಯೆಂದು ವನಿತೆಯ
ರೆಳಸಿ ಬಿನ್ನವಿಸಿದರಾಗ ೭

ಶಾಂತಿ ಭಕ್ತಿಯನಂತರಂಗದೊಳೆಸಗಿ ನಿ
ಶ್ಚಿಂತಾತ್ಮ ಗುರುವ ಬೀಳ್ಕೊಂಡು
ಶಾಂತದೃಷ್ಟಿಯೊಳು ಕಣ್ದೆರೆದನು ಲೋಕದ
ಸಂತೋಷ ಕಣ್ದೆರೆನಂತೆ ೮

ಪಾದಕೆರಗಿದರಬಲೆಯರವರನೊಲಿ
ದಾದರಿಸುತ ಘಮ್ಮನೆದ್ದ
ಆ ದೇವಿಯರುಗೂಡಿ ವದನವುಜ್ಜನಗ್ಗೆದು
ಹೋದನಾಗಳೆ ಜಿನಾಲಯಕೆ ೯

ಕ್ಷತ್ರಿಯಕರ್ಮದ ದೇವತಾರ್ಘ್ಯವನಿತ್ತು
ಸ್ತೋತ್ರ ಜಪವನೊಲ್ದುಮಾಡಿ
ಸುತ್ರಾಮನಂತೆ ಪೂಜಿಸಿದನು ಜಿನನ ಚಾ
ರಿತ್ರಶುದ್ಧಾಂಗಿಯರ್ವೆರಸಿ ೧೦

ಸಲಿಲ ಗಂಧಾಕ್ಷತ ಪುಷ್ಪ ನೈವೇದ್ಯ ಪ್ರ
ಜ್ವಲದೀಪ ಧೂಪ ಸತ್ಫಲವ
ಕಲಿಲಾರಿಗರ್ಚಿಸಿದನು ಭಕ್ತಿ ಮಿಗೆ ಹೊರ
ಗುಲಿವ ಮಂಗಲವಾದ್ಯವೆಸೆಯೆ ೧೧

ಸುರುಚಿರಾರ್ಘ್ಯವನೆತ್ತಿ ಶಾಂತಿಧಾರೆಯ ಮಾಡಿ
ಬಿರಿಮುಗುಳ್ಮಳೆಯ ಮೇಲ್ಗರೆದು
ಬೆರಕೆವರಲ ರತ್ನವೃಷ್ಟಿಯ ಮಾಡಿದ
ನಿರದೆಲ್ಲ ಜಯ ಜಯವೆನಲು ೧೨

ಸೌಂದರಿಯರುಗೂಡಿ ಸಿದ್ಧಸೇಸೆಯನಾಂತ
ನಿಂದುದಾಗಳೆ ವಾದ್ಯನಿನದ
ಸಂದುದು ನಿನ್ನಿನ ವ್ರತವೆಂದು ದೇವನ
ಮುಂದಿರಿಸಿದನು ಕಂಕಣವ ೧೩

ಜೆನ್ನೆಯೊರ್ವಳ ಕೈಯೊಳೆಲ್ಲರ್ಗೆ[1]ಸಲ[1]ವಾಗಿ
ನಿನ್ನೆ ಕಟ್ಟಿರ್ದ ಕಂಕಣವ
ಮನ್ನಿಸಿ ಸಡಿಲಿಸಿದನು ಮತ್ತೆ ನೋಡಿದ
ತನ್ನ ರಾಣಿಯರನೆಲ್ಲವನು ೧೪

ಹಲಬರ ಮೊಗ ತಳತಳಿಸುತೊಪ್ಪಿದುವಲ್ಲಿ
ಕೆಲಬರ ವದನ ಬಾಡಿದುವು
ಎಲೆಲೆಯಿವರು ಪ್ರಥಮೋಪವಾಸದ ಪಂಗ
ಳಲಸಿದರೆಂದಿಷ್ಟು ನೊಂದ ೧೫

ಮತ್ತೆ ಬಾಯ್ದೆರೆದೆಲೆ ವನಿತೆಯರಿರ ಹೋಗಿ
ಹೊತ್ತಾಯ್ತು ಪಾರಣೆಗೆಂದ
ಅತ್ತಿಗೆರಗಿ ಮುನ್ನ ಪಾರಣೆಗೈಸನು
ವೃತ್ತಿಗುಜ್ಜುಗಿಸಿದರವರು ೧೬

ಧೈರ್ಯವಂತೆಯರು ನೀವಹುದು ಮೇಲ್ತಾಗಿನ
ಕಾರ್ಯ ಕಾಣಿಸದಿನ್ನು ನಿಮಗೆ
ಸೂರ್ಯನ ಬಿಸಿಲುಬ್ಬಿ ಪಿತ್ತ ಕೆರಳದೆ ಚಾ
ತುರ್ಯದನ್ನವ ಕೊಳ್ಳಿರೆಂದ ೧೭

ಸರ್ವದಿವಸ ಕಾಣ್ಬುದಿಲ್ಲವತ್ತ್ಯಮ್ಮನ
ಪರ್ವದಿ ಕಾಣದಂತಿಹೆವು
ಸರ್ವದಿವಸ ಹೋಗಿ ಕಾಣಿರಿಂದಿಗೆ ಬೇಡ
ಸರ್ವಜ್ಞಮತಪೋಷೆಯಿಂದ ೧೮

ಎಂದಿನಂತಾವೈದದಿದ್ದರತ್ತ್ಯಮ್ಮಾಜಿ
ಗಿಂದು ನೋವಾಗದೆ ದೇವ
ಎಂದ ಮಾತನು ಕೇಳದಿರೌಲು[2] ನಿಮ್ಮತ್ತೆಯ
ಕಂದ ನೋಯನೆ ಹೋಗಿರೆಂದ ೧೯

ನಗುತ ಮತ್ತವರು ಯಶಸ್ವತಿದೇವಿಯ
ರಿಗೆ ದೂರವಾದೆವಿಂದೆನಲು
ಮಗನ ಮಾತನು ಕೇಳ್ದರಾ ಯಶಸ್ವತಿದೇವಿ
ಮಿಗೆ ಮೆಚ್ಚುವಳು ಹೋಗಿರೆಂದ ೨೦

---

[1] ಶಲ (ಖ), ಸಲ (ಗ,ಘ) ಸಲ [?] ಪಲ (ಕ) [2] ನಂ (ಖ), ಲು (ಕ, ಘ, ಗ)

ಹೊಸವ್ರತಿಕೆಯರೊಡಗೂಡಿ ಕೆಲಬರು ಭೋ
ಜಿಸಪೋಗಿ ಕೆಲರಮ್ಮನೆಡೆಗೆ
ಒಸೆದೆಯ್ದಿರೆಮ್ಮ ಮನೆಯೊಳಮ್ಮಸಿಂದು ಭೋ
ಜಿಸುವಂತೆ ಮಾಳ್ಪೆ ನಾನೆಂದ ೨೧

ಅದಕೆಲ್ಲರೊಡಬಟ್ಟು ಕೆಲಬರು ಪಾರಣೆ
ಗೊದವಿ ಪಯಣವ ಮಾಡಿದರು
ಅದನರಿದವರ ತನ್ನೊತ್ತಿಗೆ ಕರೆದು ಭೂ
ಸುದತೀಶ ಬುದ್ಧಿವೇಳಿದನು ೨೨

ಕೇಳಿರೌ ಮೊದಲುಪವಾಸವೆಂಬುದು ಮಹಾ
ಜ್ವಾಲೆದೋರುವುದು ಸುಡುವುದು
ತಾಳಿದ ಮೇಲದು ಸದರವಹುದು ಕರ್ಮ
ಧೂಳಿಯೆಲ್ಲವು ಭಸ್ಮವಹುದು ೨೩

ಒಂದೊಂದು ದಿನದುಪವಾಸವೆಂಬರೆ ಇದು
ಕೊಂದು ಕೂಗುವುದು ಕರ್ಮಗಳ
ಮುಂದೆ ಕೈವಲ್ಯವಹುದು ಸಾವು ಹುಟ್ಟಿನ
ದಂದುಗವಳಿದಿರಬಹುದು ೨೪

ಮುನಿಭುಕ್ತಿಯಾದಮೇಲಾನು ಬಂದಮ್ಮಾಜಿ
ಯನು ಬಿಜಯಂಗೈಸಿ ತಹೆನು
ಅನಿತು ಕಾಲಂಬರ ನೀವಲ್ಲಿ ಹೋಗಿರಿ
ಯೆನುತ ಕಳುಹಿದನು ಕೆಲರ ೨೫

ಮಿಕ್ಕ ನಾರಿಯರ ಕರೆದು ನೀವು ನಮ್ಮ ಗೃ
ಹಕ್ಕೆ ಹೋಗಿರಿ ಮುನಿಗಳನು
ಚಿಕ್ಕನೆ ನಿಲಿಸಿ ತಂದಪೆನು ನಾನೆಂದು ಮ
ತ್ತಕ್ಕರುಮಿಗೆ ಕಳುಹಿದನು ೨೬

ಜಿನಬಿಂಬಕೆರಗಿ ಮುನೀಂದ್ರರ ತರಲೆಂದು
ಜನನಾಥ ನಡೆದನೋಜೆಯೊಳು
ಅನುರಾಗದಿಂದ ಹೆಣ್ಣುಗಳು ತಮ್ಮತ್ತೆಯ
ಮನೆಗೈದುವಾಗಳೇನೆಂಬೆ ೨೭

ಕಂಡಳು ದೂರದೊಳಗೆ ಬಹ ಸೊಸೆಯರ
ತಂಡವನಾ ಸಮಯದೊಳು
ಕಂಡರಾ ಸೊಸೆಯರತ್ತೆಯ ರೂಪ ಕಂಡಾಗ
ಛುಂಡುಂತೆ ತಣಿದರೇನೆಂಬೆ ೨೮

ಮುಟ್ಟಲೊತ್ತಿಗೆ ಬಂದು ಜಿನಪಾದಪುಷ್ಪದ
ಬಟ್ಟಲ ನೀಡಿದರೊಸೆದು
ಬೊಟ್ಟನಿಂದಾ ದೇವಿ ತೆಗೆದುಕೊಂಡಳು ಮುಡಿ
ಗಿಟ್ಟುಕೊಂಡಳು ಸುಭಕ್ತಿಯೊಳು ೨೯

ನಾವು ಕಂಡಭಿಷೇಕ ಪೂಜೆತ್ತ್ಯಮ್ಮಾಜಿ
ನೀವೊಡಂಬಡಿಯೆಂದರೊಡನೆ
ಆ ವಚನಕೆ ನಗುತಿಚ್ಛಾಮಿಯೆಂದಳಾ
ದೇವಿ ತನ್ನಯ ಸೊಸೆಯರೊಳು ೩೦

ಒಸೆದು ತಮ್ಮತ್ತೆಯ ಪಜ್ಜೆಗಳೊಳು ಪೆರ
ನೊಸಲನಿಟ್ಟಿರಗಿದರೆಲ್ಲ
ಸುಸುಖ ಸುಶೀಲ ತಪ್ಪದೆ ಬಾಳಿರೆಂದಾಗ
ಸೊಸೆಯರ ಹರಸಿದಳೊಲಿದು ೩೧

ಯುವತಿಯರರೆಬರು ಕಾರ್ಯಾರ್ಥವಾಗಿ ನಿ
ಮ್ಮವ್ನತಿಗಿಂದೆಯ್ದಿತಿಲ್ಲ[1]
ಆವರು ಮಾಡುವ ಪರ್ವಭಕ್ತಿಯಿದೆಂದೆಲ್ಲ
ತವತವಗೊಡನೆರಗಿದರು ೩೨

ಕುಳಿತರೆಲ್ಲರು ಸುತ್ತಿ ಮುತ್ತಿಕೊಂಡತ್ತೆಯ
ಬಳಸಿನೊಳಾ ಮನೆ ತುಂಬಿ
ಹಳಹಳಚನೆ ನುಡಿದಾಡಿದರೊಪ್ಪಚ್ಚಿ
ವಿಳಸಿತ ಧರ್ಮಚಿಂತನೆಯ ೩೩

ಸೊಸೆಯರೊಳಗೆ ನೋಳ್ಪೆನೆಂದು ಯಶಸ್ವತಿ
ನಸುನಗೆಯಿಂದ ಬಾಯ್ದೆರೆದು
ಹೊಸಹರೆಯದೊಳೀಕೆ ನೀವಿಂತು ತನುವ ದಂ
ಡಿಸುವಿರೌ ಹಾಯೆಂದಳೊಡನೆ ೩೪

---

1 ತ್ರ್ಥಿಗಂದೆಯ್ದ್ದುರಲ್ಲಾ (ಖ) ನತಿಗಿಂದೆಯ್ದ್ದುತಲ್ಲಾ (ಕ)

ನಿವಗೆ ಕೆಲಸವಿಲ್ಲ ನಿಮ್ಮಾಣ್ಮಗಾದರೆ
ಸುವಿವೇಕ ಯೆಳ್ಳನಿತಿಲ್ಲ
ಅವನಿಯನಾಳುತ ಮುನಿಯಂತೆ ನಡೆವುದಿ
ದವಿವೇಕಿಗಳ ನಡೆಯಲ್ತೆ ೩೫

ತನಗೆ ಭೋಗದೊಳಿಚ್ಛೆಯಿಲ್ಲದಿರಲಿ ನಾ
ನಿನಿಯರ ಹಸಿಯಿಸಿ ತಾನು
ಇನಿತು ಪ್ರಯಾಸವ ಮಾಡುವುದುಚಿತವೆ
ಜಿನಜಿನಯೆಂದಳಾ ದೇವಿ ೩೬

ನಮಗೇನು ಪ್ರಯಾಸ ಅತ್ತ್ಯವ್ಮ್ಮವೊಂದೊಂದು
ದಿವಸ ನಿರ್ಭುಕ್ತಿ ತಿಂಗಳಿಗೆ
ನವಪ್ರಾಯಶಕ್ತಿಯೊಳಾತ್ಮಾರ್ಥವಾಗಿ ಮಾ
ಡುವುದೊಳ್ಳಿತಲ್ತೆ ಸುವ್ರತಪ ೩೭

ಸುವಿವೇಕಿಯಲ್ಲೆಂದು ನೀವಾಡಬಹುದಾತ್ಮ
ಭವನಾದ ಕಾರಣ ನೃಪನ
ದಿವಿಜರು ಪೊಗಳದಿರ್ಪವರಾರು ನಿಮ್ಮಯ
ಕುವರ ಮಹಾಪ್ರೌಢನೆಂದು ೩೮

ಒಳ್ಳಿದಾದುದು ಹೆಣ್ಣುಗಳಿರ ನಿಮ್ಮರಸನ
ಗೆಲ್ಲಕೆ ನೀವು ಬೀಗುವಿರಿ
ಸಲ್ಲೀಲೆಯೊಳು ವ್ರತದೊಳು ಸುಖವಿರಿಯೆಂದ
ಳೆಲ್ಲರಿಗದು ತಾನು ಹರಕೆ ೩೯

ಇಂದು ಭೂಪತಿ ನಿಮ್ಮ ಪಂತಿಯೊಳಗೆ ತನ್ನ
ಮಂದಿರದಲ್ಲಿ ಪಾರಣೆಯ
ಚಂದದಿ ಮಾಳ್ಪೆನೆಂದನು ತಾನು ಬಹನಿಲ್ಲಿ
ಗೆಂದು ಬಿನ್ನವಿಸಿದರಾಗ ೪೦

ಎಂದರೆ ಮಗನುಪವಾಸದೊಳಿಲ್ಲಿಗೆ
ಬಂದಪನೆಂದಿನ್ನು ನಡೆದು
ನೊಂದಪನೆಂದು ತಾಯಲ್ಲವೆ ಸುತಮೋಹ
ದಿಂಧ ತಾನೆದ್ದಳಾ ಕ್ಷಣವೆ ೪೧

ಭರತಣ್ಣನೆಮ್ಮ ಮನೆಯೊಳುಣ್ಣನಾದರೆ
ಬರಬೇಕು ತನ್ನಿಕ್ಕಗೆನ್ನ
ಕರೆಯಲೇತಕೆ ಬನ್ನಿರೆಂದಾಗ ಸೊಸೆಯರ
ಕರೆದುಕೊಂಡೆದ್ದಳಾ ಮಾತೆ ೪೨

ಅಡಿಗಡಿಗೊಬ್ಬೊಬ್ಬ ಸೊಸೆಯರ ಕೈಲಾಗು
ವಿಡಿವುತ ಹಲವು ಸೊಸೆಯರ
ನಡುವೆ ಮೆಲ್ಲನೆ ನಡೆತಂದಳಾ ಷಟ್ಖಂಡ
ಡೊಳೆಯನ ತಾಯಿ ಜೋಕೆಯೊಳು ೪೩

ಜನನಿಯೆಯ್ತರುತಿರ್ದಳಿತ್ತಲಾ ಸ್ತ್ರೀಜನತ್ತ
ಮುನಿಭುಕ್ತಿಗೈಸಿ ಬೀಳ್ಕೊಟ್ಟು
ವನಿತೆಯರೊಡಗೂಡಿ ಬರುತಿದ್ದ ನಮ್ಮನ
ಮನೆಗಾಗ ಕಂಡನಿದಿರೊಳು ೪೪

ಜಿನ ಜಿನ ನೋಡು ನೋಡಮ್ಮಾಜಿ ತಾವಿಂದು
ನನಗಿದಿರ್ಬೈತಹ ಪರಿಯ
ಮನೆಮುಟ್ಟ ಬಂದೆನು ಬಿಜಯಂಗೈಸಿ ತ
ಪ್ಪೆನು ಮೋಸವಾಯ್ತು ಹೋಯೆಂದ ೪೫

ನಾಂ ತಡೆಯದೆ ಬಪ್ಪೆ ನೀಂ ಹೋಗಿರಿಯೆಂದು
ನಿಂತು ಕಳಹೆ ಹೋದರವರು
ಕಾಂತೆಯರೊ ಕಡು ಭ್ರಾಂತೆಯರೊಯೆಂದು
ಕಂತುಸನ್ನಿಭ ನೊಂದು ನುಡಿದ ೪೬

ಬಿನ್ನವಿಸಿದೆವವರ್ತಮ್ಮ ಪುತ್ರಗೆ ಬಿಸಿ
ಲಿನ್ನ ಹುದೆಂದೆದ್ದರೊಡನೆ
ಮುನ್ನೀರು ಚಂದ್ರನತ್ತೇಳ್ವಾಗ ತಡೆವ ಸಂ
ಪನ್ನರಾರೆಂದುಸುರಿದರು ೪೭

ನೊಂದುಕೊಳ್ಳದಿರಣ್ಣ ನನ್ನ ಮನಸಿಗಿಚ್ಚೆ
ಬಂದಾಗ ಬಂದೆ ನಾನಿದಕೆ
ಕುಂದೇನು ನಿನ್ನ ನಾರಿಯರು ಬಂದಾಗ ನೀ
ಬಂದುದಲ್ಲವೆಯೆಂದಳಾಕೆ ೪೮

ಸಾರಲ್ಪಿತೆಂದು ನಿವಾಳಿಯಿಟ್ಟನು ಪದ
ವಾರಿಜಕೆರಗುವೆನೆಂದು
ಭೂರಮಣ ತಲೆವಾಗಲೆಡೆಯೊಳೆತ್ರಿ
ಸಾರಾಂಗಿ ತಕ್ಕೈಸಿದಳು ೪೯

ಇಂದ್ರೋ ಭವ ಪುನರಿಂದ್ರಪೂಜ್ಯೋ ಭವ
ಸಾಂದ್ರಸುಖೀ ಭವಯೆಂದು
ಮಂದ್ರವಾಕ್ಯದೊಳು ಮಗನ ಹರಸಿದಳಾ ಜಿ
ತೇಂದ್ರಿಯಚರಿತೆಯ ಜನನಿ ೫೦

ಕೂಡಿದಿರ್ಬಂದ ಸೊಸೆಯರೆಲ್ಲರೆರಗಲು
ನೋಡುತೊಲಿದು ಹರಸಿದಳು
ನೀಡಿದ ಮಗನ ಕೈಲಾಗುವಿಡಿದು ಮಾತ
ನಾಡುತ ನಡೆದಳಾ ಮಾತೆ ೫೧

ನಿನಗದು ಸದರವಾದರೆ ನೀನು ಧರಿಸು ಯಿ
ನ್ನನುಜರಾತ್ಮಜೆಯರ ನೀನು
ಅನಶನಗೈಸಿ ನೋಯಿಸಲೇತಕಿಂದಿಷ್ಟು
ಬಿನದಪ ನುಡಿದಳಾ ಜನನಿ ೫೨

ಮಿನುಗಿ ನಕ್ಕನು ರಾಯನದಕೆ ಕೇಳಮ್ಮ ನಿ
ನ್ನನುಜರ ಸುತೆಯರು ನಿನ್ನ
ತನುಜನಿಂದಧಿಕವೆ ನೋಡೊಂದು ಸೊಕ್ಕಸೆಂ
ದನು ವಿನೋದಾರ್ಥಕೋವಿದನು ೫೩

ಸುಮ್ಮನೆ ನಾನುಪವಾಸಗೆಯ್ದೆನು ನಿಮ್ಮ
ತಮ್ಮಗಿಮ್ಮದಿರ ಪುತ್ರಿಯರ
ಒಮ್ಮೆ ನಾನೊಂದು ವ್ರತವ ತಾಳಿರೆನ್ನೆನು
ತಮ್ಮ ತಾವೆಸಗುವರಮ್ಮ ೫೪

ತಿಂಗಳಿಗೊಂದುಪವಾಸವ ಮಾಳ್ಪರೀ
ಹೆಂಗಳಿಗೇನಾದುದಮ್ಮ
ಅಂಗಭೋಗಕೆ ಬಹುಕಾಲ ಸಲ್ವಾಗ ಧ
ರ್ಮಾಂಗವೊಮ್ಮೊ ವಿರಬೇಡ ೫೫

ತನುಭೋಗದೊಳಗತಿ ಮಗ್ನರಾದರೆ ಪಾಪ
ಜನಿಸುವುದದರಿಂದ ನರಕ
ಜಿನವ್ರತಕಾಗಿಷ್ಟು ಬಳಲಬೇಕಮ್ಮಾಜಿ
ಘನಮುಕ್ತಿಯಹುದವರ್ಗೆಂದ ೫೬

ಭರತಣ್ಣ ನಿನ್ನಾಣೆ ನಿನ್ನ ರಾಜ್ಯವನು ನಿ
ನ್ನರಸಿಯರನು ನಿನ್ನ ವ್ರತವ
ಪರಿಕಿಸಲೊಮ್ಮೊಮ್ಮೆ ಚಿಂತೆತೋರ್ಪುದು ಪರಿ
ಹರಿಸಿದುದಿಂದೆನ್ನ ಕಂದ ೫೭

ಒಳ್ಳಿತಮ್ಮಾಜಿ ನೀವಂತು ಚಿಂತಿಸಲಾಗಿ
ಯೆಳ್ಳಷ್ಟು ಭಯವಿಲ್ಲ ನನಗೆ
ಅಲ್ಲದಿದ್ದರ ಯೆನಗೀ ಸಿರಿಯುಂಟೆ ಯಿ
ದೆಲ್ಲವು ನಿಮ್ಮ ಪ್ರಸಾದ ೫೮

ಇಂತು ನುಡಿವುತ ಬಂದರು ಬಾಗಿಲೆಡೆಯೊಳೋ
ರಂತೆ ತಾಯಡಿಗಳ ತೊಳೆದ
ಕಾಂತೆಯರೊಡನೆ ಕಾಲ್ದೊಳೆಯೆ ತಾಯೊಡನೆ ಗೃ
ಹಾಂತರಾಳವ ಪೊಕ್ಕನಾಗ ೫೦

ತನ್ನಿರಶಾ ಪೂಜೆಗೆ ವಸ್ತುವನೆನ್ನದ
ಮುನ್ನ ತನ್ನರಸಿಯರೆಲ್ಲ
ತನ್ನಂತೆ ನಲಿದು ವಸ್ತುವ ನೀಡಿ ಕೊಡಲು ಸಂ
ಪನ್ನ ಪೂಜಿಸಿದನಂಬಿಕೆಯ ೬೦

ಸಂದಣಿಗೊಂಡು ಸೊಸೆಯರೆಲ್ಲ ನವರತ್ನ
ವೃಂದದಾರತಿಗಳನೆತ್ತಿ
ತಂದು ನಿವಾಳಿಯನಿಟ್ಟೆರಗಿದರಾಗ
ಸಂದುದು ನೃಪನ ಕಣ್ಣರ್ತಿ ೬೧

ಕಡೆಯೊಳು ನೃಪನೆರಗಿದನು ತನ್ನಮ್ಮಾಜಿ
ಯೆಡದ ಭಾಗವ ಸಾರ್ದು ಕುಳಿತ
ನಿಡುಗುಪ್ಪೆಯಾದ ಪೂಜಾದ್ರವ್ಯ ಬಯಲಾದು
ದೆಡೆನೋಡಲನುವಾದಗೊಡನೆ ೬೨

ಕರೆದು ಯಶಸ್ವತಿದೇವಿ ಸೊಸೆಯರ ಕು
ಳ್ಳಿರಿಸಿಕೊಂಡಳು ಮನೆ ತುಂಬಿ
ಹಿರಿಯ ಹಬ್ಬವನೇನ ಪೇಳ್ವೆನೆಲ್ಲರು ನಲ್ಮೆ
ವೆರಸಿ ಪಾರಣೆಯ ಮಾಡಿದರು ೬೩

ಭರತೇಶ ತಾಯ ಪಂತಿಯೊಳು ಸೌಂದರಿಯರು
ವೆರಸಿ ಪಾರಣೆಯ ಮಾಳ್ಪಾಗ
ಸುರಪನ ಭೋಗ ತಾನಾವ ಪಾಸಟಿಯೆಂಬ
ಪರಿಯೊಳಿರ್ದುದು ಜಿನ ಬಲ್ಲ ೬೪

ಪಾರಣಾಶ್ರಮವೆಂದು ನೃಪತಿ ಮಾತೆಯ ತನ್ನ
ತೋರಗೈಲಾಗಿನಿಂ ನಡಸಿ
ಸಾರತಲ್ಪದೊಳಿಷ್ಟು ಪವಡಿಸಬೇಕೆಂದ
ನಾ ರಾಜಮಾತೆಯೊಪ್ಪಿದಳು ೬೫

ತೂಗುಮಂಚದೊಳೊರಗಿದ ತಾಯ ಭರತೇಶ
ತೂಗಿದನಂದು ತೊಟ್ಟಿಲೊಳು
ರಾಗದೊಳಿಟ್ಟಾಕೆ ತೂಗಿದ ಸಾಲವ
ತೂಗಿ ತಿದ್ದುವನೊಯೆಂಬಂತೆ ೬೬

ಜಿನಸಿದ್ಧಭಾವನೆವಿಡಿದಿಷ್ಟು ಪವಡಿಸಿ
ತನಯ ವಿಶ್ರಮಿಸುತಿಲ್ಲೆಂದು
ನೆನೆದುಕೊಂಡಳು ಕೂಡೆ ಜಿನಶರಣೆಂದೆದ್ದು
ಜನಪನ ಜನನಿ ಕುಳಿತಳು ೬೭

ಅಣ್ಣ ನನಗೆ ನನ್ನ ಮನೆಗೆಯ್ದಿದಲ್ಲದೆ
ಕಣ್ಣಿಗೆ ನಿದ್ರೆ ಮುದ್ರಿಸದು
ತಣ್ಣನೆ ನೀನಿಲ್ಲಿರೆಂದೆದ್ದಳೊಡನೆ ಹೊಂ
ಬಣ್ಣಮೈಯಣುಗ ಕೈಗೊಡಲು ೬೮

ಅಂಬಿಕೆ ಮನೆಗೈದಿ ಬರಿದೆ ತೆರಳಬಾರ
ದೆಂಬುಪಚಾರ ಮಂಗಲಕೆ
ತುಂಬಿ ನೂರಾರು ಪೆಟ್ಟಿಗ ದುಗುಲವ ಮುಂದೆ
ಕಂಬಿಗಟ್ಟಿಸಿ ಕಳುಹಿದನು ೬೯

ಬಂದುದಷ್ಟರೊಳಿದಿರಾಗಿ ಪಲ್ಲಕ್ಕಿ ಜೀ
ಯೆಂದೆನಲೇರಿದಳೊಸೆದು
ವಂದಿಸಿದಣುಗನ ಹರಸಿ ನಿಲ್ಲಿಸಿ ತನ್ನ
ಮಂದಿರದತ್ತ ಸಾಗಿದಳು ೭೦

ರಾಯರದೇವನ ತಾಯಿ ಹೊಕ್ಕಳು ತನ್ನ
ಶ್ರೀಯುತ ರಾಜಮಂದಿರವ
ತಾಯ ಬೀಳ್ಕೊಂಡು ತನ್ನರಮನೆಯ ಮಹಾ
ರಾಯ ಹೊಕ್ಕನು ಲೀಲೆಯಿಂದ ೭೧

ಸಾರಭವ್ಯನು ಸಾರಭವ್ಯಕಾಂತೆಯರು ಮ
ತ್ತಾ ರಾಜರತ್ನನ ಜನನಿ
ಪಾರಣೆಗೈದು ಸುಖದೊಳಿರ್ದರಿಂತಿದು
ಪಾರಣಾಸಂಧಿ ಸುಗಂಧಿ ೭೨

## ನವರಾತ್ರಿ ಸಂಧಿ

ಕೃತಯುಗದಾದಿಯೊಳಾದಿವಸ್ತುವಿನಾದಿ
ಸುತನಾದಿ ಚಕ್ರನಾಯಕನು
ಕ್ಷಿತಿಯ ಪಾಲಿಸುತಿರ್ದನೇನೆಂಬೆ ಜಿನ ಜಿನ
ಸತತ ಜೋಗುಳವಾಡಿತವನಿ ೧

ಭೂಮಿಭಾರವ ತಾಳ್ದ ಚಿಂತೆಯಲ್ಲೊಂದರ
ಕಾಮವಿಲ್ಲಾಲಸ್ಯವಿಲ್ಲ
ಕ್ಷೇಮದೊಳಾಳುತಿರ್ದನು ದೀರ್ಘಧರೆಯ ಸು
ತ್ರಾಮು ಸ್ವರ್ಗವನಾಳುವಂತೆ ೨

ಲೀಲೆಯೊಳಿಂತು ರಾಜ್ಯವನಾಳುತಿರ್ದ ಭೂ
ಪಾಲನೊತ್ತಿಗೆ ಮಂತ್ರಿ ಬಂದು
ಆಲೋಚನೆಗೆಯ್ದ ನರಸನ ಲೀಲೆ ವಿ
ಶಾಲವಪ್ಪಂತೇನನೆಂಬೆ ೩

ಮಳೆಗಾಲ ಹೋದುದು ಬೆಳುಗಾಲ ಬಂದುದು
ದಳ ನಡೆವುದಕಿನ್ನು ಚೆನ್ನು
ಅಲಸಿಕೆ ಪರಿಹಾರವಾಗಿ ದಿಗ್ವಿಜಯಕಿ
ನ್ನೆಳಸುವುದೊಳ್ಳಿತು ನೃಪತಿ ೪

ಬಾಲಾರ್ಕನಂತುದಯಿಸಿ ಚಕ್ರರತ್ನ ಶ
ಸ್ತ್ರಾಲಯದೊಳಗಿರುತಿರ್ದು
ಆಲಸ್ಯವೇತಕೆ ಧರೆಯ ಸಾಧಿಸುವರಿ
ನ್ನೇಳರಿ ತಿಮಿರ ಮಾರ್ತಾಂಡ ೫

ದ್ವೀಪ ದ್ವೀಪದೊಳುಕ್ಕಿ ಸೊಕ್ಕಿದ್ದ ದಿಂಡೆಯ
ಭೂಪತಿಗಳ ಹಿಂಡ ನಿನ್ನ
ಶ್ರೀಪಾದಕೆರಗಿಸಿಕೊಳಲಡಿಯಿಡು ಜಂಬೂ
ದ್ವೀಪ ದಕ್ಷಿಣಲೋಕಸೂರ್ಯ ೬

ಗಿರಿದುರ್ಗ ಜಲದುರ್ಗ ವನದುರ್ಗದೊಳಗಿರ್ದ
ನರಪತಿಗಳ ಸೊಕ್ಕ ಮುರಿದು
ಭರತ ಷಟ್ಖಂಡದ ಧರೆಯ ಸಾಧಿಸಿ ತೋರು
ಭರತೇಶನೆಂಬ ಬೀರನನು ೭

ಆರು ಖಂಡದ ಪ್ರಜೆಗಳಿಗೆ ಸಿನ್ನಯ ರೂಪ
ತೋರಿ ಕೃತಾರ್ಥರ ಮಾಡಿ
ಮೂರು ಜೋಟಿಂದಾರು ಖಂಡವ ಕಂಡು ಬ
ಲ್ಲಾರಿಕೆಯೊಳು ಬಹವೇಳು ೮

ವನದೊಳು ಚರಿಸಿ ವಸಂತನಾ ವನವ ಭೋಂ
ಕನೆ ಚಿಗುರೇರಿಸುವಂತೆ
ವನಧಿಮಧ್ಯದ ಧರಣಿಯ ನಿನ್ನ ಸುಳುಹಿಂದ
ನನೆಕೂನೆವೋಗಿಸು ನೃಪತಿ ೯

ಎಂದು ನುಡಿದ ಬುದ್ಧಿಸಾಗರ ಮಂತ್ರಿಗಾ
ನಂದದಿಂದುಡುಗೊರೆಯಿತ್ತು
ಮುಂದಿಗೆ ಹೇಳಿ ಸುಪಯಣಕುಜ್ಜುಗಿಸು ಹೋ
ಗೆಂದು ಬೀಳ್ಕೊಟ್ಟನಾ ರಾಯ ೧೦

ನವರಾತ್ರಿ ಜಿನಮಹಿಮೆಯ ಮಾಡಿ ದಶಮಿಯ
ದಿನದೊಳು ಪಯಣವಪ್ಪುದಕ
ಹವಣಿಸಿ ಜೋಕೆಮಾಡುವೆನೆಂದು ಮಂತ್ರಿ ಬಿ
ನ್ನವಿಸಿ ಬೀಳ್ಕೊಂಡು ನಡೆದನು ೧೧

ಕಟ್ಟಿದುವಾಗಳೆ ಗುಡಿತೋರಣಂಗಳು
ಪಟ್ಟಣವೊಳಗಲ್ಲಿಗಲ್ಲಿ
ಬೆಟ್ಟದಂದದ ತೇರು ಸಿಂಗರಿಸಿದುವಹೊ
ಹುಟ್ಟಿತು ದಂಡಿನ ಸುದ್ದಿ ೧೨

ಗುಡಿಸಿ ಪಿಂಚಿಕ್ಕಲು ಬೀದಿಯಿದ್ದುವು ಪೋಪ
ರಡಿಗಳ ಜುಮ್ಮುದಟ್ಟೆಸುತ
ಜಿಡೆ ಕೆದರಿದ ಪುಷ್ಪದಿಂದ ಕಂಪಿನದೊಂದು
ಕಡಲಂತೆ ಮೆರೆದುದಾ ನಗರ ೧೩

ನಿತ್ಯ ಪ್ರಭಾವನೆ ನಿತ್ಯ ರಥೋತ್ಸವ
ನಿತ್ಯಾಭಿಷೇಕ ಪೂಜೆಗಳು
ನಿತ್ಯ ಚತುಸ್ಸಂಗ ತೃಪ್ತಿಗಳೆಸೆದುವ
ಮಾತ್ಯನ ಪ್ರೇರಣೆಯಿಂದ ೧೪

ಜಿನಪೂಜಾಪೂರ್ವಕವಾಗಿ ಕೊಂಡೊಂಬತ್ತು
ದಿನ ನಡೆದುದು ಚಕ್ರಪೂಜೆ
ಅನುಚರರೆಲ್ಲರು ತಂತಮ್ಮ ಖಡ್ಗವ
ನನುರಾಗ ಮಿಗೆ ಪೂಜಿಸಿದರು ೧೫

ನಗರ ಮಧ್ಯದ ಜಿನವಾಸಕಾ ರಾಜೇಂದ್ರ
ಹಗಲೆಯ್ದಿ ಪೂಜೆಯ ನೋಡಿ
ಮಗುಳ್ದರಮನೆಗೆಯ್ದಿ ಮತ್ತೆ ರಾತ್ರಿಯೊಳೋ
ಲಗವಾದನೇನ ಬಣ್ಣಿಪೆನು ೧೬

ಕಾರಿರುಳನು ತನ್ನ ರತ್ನಕಿರೀಟ ಕ
ಣ್ಣಾರೆ ಹಗಲು ಮಾಡುವಂತೆ
ವಾರಣವೈರಿಪೀಠವನೇರಿ ಕಡೆಯ ಹ
ಜಾರದೊಳೋಲಗವಾದ ೧೭

ದಿಟ್ಟಿಸಲ್ವಷ್ಟಕೆ ಮುಂದೆ[1] ಭರಾಭರಿ[1]
ಗೊಟ್ಟಿರ್ದುದುರೆ ಪರಿವಾರ
ತೆಟ್ಟಿತೆಟ್ಟಿಯೊಳು ನಿಂದಿರ್ದುದು ಬಹುಪ್ರಜೆ
ನಿಟ್ಟಿಸುತಾ ಚಕ್ರಧರನ ೧೮

ಇಂದ್ರಜಾಲಿಗರು ಗೋವಿಂದಗತಿಗಳು ಮ
ಹೇಂದ್ರಜಾಲಿಗರು ವಿಸ್ಮಯರು
ಖೇಂದ್ರನಾಟಕರಿದ್ದರನುವಾಗಿ ಭರತ ರಾ
ಜೇಂದ್ರಗಾಟವ ತೋರ್ಪೆವೆಂದು ೧೯

ಭಾವಿಸಿ ಭಾಸ್ಕರ ನಡೆದತ್ತ ಮುಗಿದಿರ್ದ
ತಾವರೆ ಮಿಡಿದಲರ್ವಂತೆ
ಆವ ಕಡೆಗೆ ರಾಯ ಮೊಗವಿತ್ತನತ್ತ ನಾ
ನಾ ವಿದ್ಯೆಗಳ ತೋರುತಿಹರು ೨೦

---
1 ಬಖಬರಿ (2) ಬರಾಬರಿ (ಕ, ಚ, ಥ)

ಸೂತ್ರಪ ಮಿಡಿದರೆ ಬೊಂಬೆಗಳೆಲ್ಲ ತ
ನ್ಮಾತ್ರದಿ ಕುಣಿವಂತೆ ನೃಪನ
ನೇತ್ರಗಳೊಲೆದತ್ತ ತವತಪಗಾಗಳೆ
ಪಾತ್ರದ ಪೆಂಗಳಾಡುವರು ೨೧

ಅಂಬರ ತುಡುಕೆ ಗಳೆಯನೇರಿ ನೃಪನ ಮು
ಖಾಂಬುಜನನೆ ನೋಡುತಿರ್ದು
ಕಂಬೆಳಗೊಲೆಯಲೊಡನೆ ತಟಪುಟನುಬ್ಬಿ
ಡೊಂಬರು ಲಾಗುದೋರುವರು ೨೨

ಜಟ್ಟಿಗಳುಬ್ಬಿ ಕೋಯೆಂದಾಲ್ದು ಭುಜಗಳ
ತಟ್ಟಿಕೊಂಡೊಡೆಯ ಜೀಯೆಂದು
ಥಟ್ಟ ಪಟ್ಟನೆ ತಿವಿದೊಬ್ಬರೊಬ್ಬರ ತೆಗೆ
ದಿಟ್ಟಾಡಿ ಕೆಡೆದರತ್ತಿತ್ತ ೨೩

ಅವರವರಂಗವನರಿದು ವಿದ್ಯಾಧಿಕ
ನಿವಹಕೆ ಸೂರೆ ಜಾಗವನು
ನವನಿಧಿಯಾಗಿ ಕೊಟ್ಟನು ಕೊಡುವಾಗ ಮ
ತ್ತವನ ಕೈಗೆಡೆತಡೆಯುಂಟೆ ೨೪

ನಿಂದುದು ಪುಷ್ಪಕ ನೃಪನಿದಿರೊಳು ಕೂಡೆ
ನಿಂದುವು ತೇಜಿಗಳ್ಬಳಸಿ
ನಿಂದಲ್ಲಿ ನಿಲ್ಲದೆ ಕುಣಿವುತಿದ್ದವು ಮಝು
ಚಂದ ಚಂದದ ವಾದ್ಯಗತಿಗೆ ೨೫

ಮಂಜು ಮುಸುಕಿದಂತೆ ಝಲ್ಲಿ ಕಡೆಯ ರತ್ನ
ಪುಂಜದ ಬಾಸಿಗದಂತೆ
ರಂಜಿಸುತಿದ್ದುದು ರಾಯನೇರುವ ಪವ
ನಂಜಯವೆಂಬಶ್ವರತ್ನ ೨೬

ವಿಜಯಪರ್ವತವೆಂಬ ಪಟ್ಟದಾನೆಯ ಮೇಲೆ
ರಜತಾದ್ರಿಯೊಡೆಯನ ಪ್ರತಿಮೆ
ಬಿಜಯಂಗೈಸಿರೆ ಕಾಣಲೊಡನೆ ರಾಯ
ನಿಜಭಕ್ತಿಯಿಂದೆದ್ದು ನಿಂದ ೨೭

ತಾರಗೆ ಮುಸುಕಿದ ನಾಲ್ಕು ಮೇರುಗಳು ಸಂ
ಚಾರಮೋರ್ಪಂತೆ ನಾಲ್ದೆಸೆಗೆ
ಭೂರಿ ದೀಪಗಳಿಡಿಕಿರಿದಿರ್ದ ನಾಲ್ಕು ಹೊಂ
ದೇರು ನಾಲ್ದೆಸೆಗೆ ಹರಿದುವು ೨೮

ಪಲ್ಲವ ಸತ್ತಿಗೆ ಸುತ್ತ ತೂಗುವ ನಿಡು
ಝಲ್ಲಿ ಮಾಣಿಕ್ಯದ ಕಲಶ
ಅಲ್ಲಾಡಿ ದನಿವಾಳ್ಪ ಘಂಟೆ ಪತಾಕೆಯ
ಗೆಲ್ಲದಿ ನಡೆದುವಾ ತೇರು ೨೯

ಹರಿದುವು ಮೂರು ದಿಕ್ಕಿಗೆ ಮೂರು ತೇರುಗ
ಳರರೆ ಮತ್ತೊಂದು ತೇರಾಗ
ಅರಮನೆಯತ್ತ ಹರಿದುದವನೀಶನ
ಹರಸಲರುಹನೆಯ್ದುವಂತೆ ೩೦

ವಾರನಾರಿಯರ ಪಾತ್ರಗಳಿಂದ ಪಾಡಿಂದ
ಭೇರಿ ಶಂಖದ ಘೋಷದಿಂದ
ತೇರು ತೆರಳಿ ಬಂದು ನಿಂದುದು ಕಡೆಯ ಹ
ಜಾರದ ಮುಂದೆ ಬಿಂಕದೊಳು ೩೧

ಮೇಲೆ ಮೆರೆವ ಪಳುಕಿನ ಸಿದ್ಧಬಿಂಬಕೆ
ಭೂಲಲನೇಶ ಕೈಮುಗಿದ
ಮೇಲು[1]ಮೆಚ್ಚಿನೊಳು ಯಶಸ್ವತಿ ದೇವಿಯಿ
ದಾರ್ಲಿಸಿ ಭಕ್ತಿ ಮಾಡಿದಳು ೩೨

ಸೊಸೆಯರು ರಚಿಸಿದ ರತ್ನದಾರತಿಗಳ
ಹಸನಾದುವೆಂದೊಲ್ದು ನೋಡಿ
ಒಸೆದು ಕಳುಹಿದಳು ತೇರಮೇಲಣ ದೇವ
ಗೆಸಗಿದರುಚಿತದರ್ಚನೆಯ ೩೩

ತಿರುಗಿತು ತೇರು ಜಿನಾಯಲದತ್ತ ಕೇ
ಸರಿಪೀಠದೊಳು ರಾಯ ಕುಳಿತ
ಪೊರ್ದಿಯಿಟ್ಟಿದೊಂದು ರಾತ್ರಿಯ ಜಿನಮಹಿಮೆಯಿಾ
ಪರಿ ನಡೆಯಿತು ನವರಾತ್ರಿ ೩೪

1 ಮ (ಖ ಛ ಕ)

ಪಾಡ್ಯದ ದಿನ ಮೊದಲಾಗಿ ನವಮಿಮುಟ್ಟ
ಕುಡ್ಯಲಂಘನದಶ್ವಮೆರೆದು
ತಾಡ್ಯಮಾನದ ವಾದ್ಯರವಮುಣ್ಮೆ ನಡೆದುದು
ಜಾಡ್ಯವಳಿದು ನವರಾತ್ರಿ ೩೫

ನವಮಿಯ ರಾತ್ರಿಯೊಳೋಲಗ ಹರಿವುದೆಂ
ಬವಸರಕೊಂದಿಷ್ಟು ಮುಂಚೆ
ಯುವರಾಜನಾಪ್ತ ಕಂಡನು ಬಂದು ಸಾಷ್ಟಾಂಗ
ದವನತಿಯೊಳು ಕಾಣ್ಕೆಯಿಕ್ಕಿ ೩೬

ಕಾಮದೇವನ ಮಂತ್ರಿ ಪ್ರಣಯಚಂದ್ರಮನೆಂಬ
ನಾಮಕೊಪ್ಪುವನು ವಿವೇಕಿ
ಭೂಮೀಶನನುಮತದಿಂದ ಕುಳಿತನು ರಾ
ಜಾಮಾತ್ಯನೊತ್ತಿನೊಳಾಗ ೩೭

ಕಿರಿದು ಪ್ರಸಂಗವನತ್ತಿತ್ತ ನುಡಿದಾಡಿ
ಕಿರಿದು ವೇಳೆಯ ನೂಂಕಿ ತನ್ನ
ಕಿರಿಯನ ಸ್ಥಿತಿಯ ಕೇಳುವೆನೆಂದು ರಾಯ ಮು
ತ್ತುರೆ ಮಂತ್ರಿಯತ್ತ ನೋಡಿದನು ೩೮

ಏನೈ ಪ್ರಣಯಚಂದ್ರಮ ಬಾಹುಬಲಿ ನಿಚ್ಚ
ಲೇನು ಲೀಲೆಯೊಳಿರುತಿಹನು
ಈ ನಮ್ಮ ಪಯಣವ ಕೇಳ್ದೇನ ನುಡಿದನೆಂ
ದಾ ನರಪತಿ ಕೇಳ್ದನವನ ೩೯

ದೇವರ ಕೃಪೆಯಿಂದ ದೇವರ ಸೋದರ
ಗಾವ ಚಿಂತೆಯು ತೊಡಕಿಲ್ಲ
ಆವಾಗ ಸುಖದೊಳೋಲಾಡುತಿಹನು ಪುರು
ದೇವನಾತ್ಮಜನಲ್ತೆಯೆಂದ ೪೦

ದೇವರೊಳಪ್ಪಾಜಿಗರಸರೊಳಣ್ಣಾಜಿ
ಗಾವನ ಸರಿಗಾಣಬಹುದು
ಸಾವೆಲ್ಲರವರ ನೆನೆದು ಬಾಳ್ವವೆಂಬನು
ದೇವ ನಿನ್ನನುಜನೆಮ್ಮೊಡನೆ ೪೧

ಬಂದು ದೇವರ ಕಂಡು ಬುದ್ಧಿಗಲಿಸಿಕೊಂಬೆ
ನೆಂದೆನ್ನ ನೃಪನೊಮ್ಮೆ ಬಗೆದ
ಒಂದು ಶಾಸ್ತ್ರವ ಕೇಳತೊಡಗಿದ್ದ ಮೊದಲದ
ರಿಂದೆನ್ನ ನಿಲ್ಲಿಗಟ್ಟಿದನು ೪೨

ಹೇಳುವರಾತ್ಮ ಪ್ರವಾದವ ಮುನಿಗಳು
ಕೇಳುವನಮ್ಮವನೀಶ
ನಾಳೆ ನಾಡಿದಿನೊಳು ಮುಗಿವುದಾ ಗ್ರಂಥ ಭೂ
ಪಾಲವಂಶಾಂಬರಭಾನು ೪೩

ಇನ್ನೊಂದು ಗೂಢಾರ್ಥವುಂಟೆಂದು ನೃಪತಿಗೆ
ಸನ್ನೆಗಾಣಿಸಿದನಾ ಮಂತ್ರಿ
ಚಿನ್ನಾಯ್ತು ಸಾಕಿನ್ನು ಕುಳಿತುಸುರೆಂದು ರಾ
ಜೋನ್ನತ ಪೇಳೆ ಕುಳಿತನು ೪೪

ಗೂಡಾರ್ಥವುಂಟೆಂದು ಮಂತ್ರಿ ಕುಳ್ಳಿರಲಲ್ಲಿ
ಪ್ರೌಡರಿಹರು ಮೂಢರಿಹರೆ
ಪ್ರೌಢಚಕ್ರಿಗೆ ಕೈಮುಗಿದರೆಲ್ಲರು ತಮ್ಮ
ಪ್ರೌಢಿಗಾಣಿಸಿ ತೊಲಗಿದರು ೪೫

ಮಾತೇನು ಪೆರತಲ್ಲ ಸ್ವಾಮಿ ಸ್ವಾಮಿಯ ನಿಜ
ಮಾತೆಯು ಲೋಕಮಾತೆಯನು
ತಾತನರ್ಧಾಂಗಿಯ ತಾ ತನ್ನ ಪುರಕಂಗ
ಜಾತನೆಯ್ತಂದೊಯ್ವೆನೆಂದ ೪೬

ಮಗನ ಮನೆಗೆ ತಾಯಿ ಹೋಹರೆ ತಾಯನಾ
ಮಗ ತಾನೆ ಕರೆದೊಯ್ವರಿದಕೆ
ತೆಗೆಬಿಗಿಯೇನೆಮ್ಮನೇನ ಕೇಳ್ವುದು ತಾನು
ಮಗ ನಾನು ಮಗನಮ್ಮಗಲ್ತೆ ೪೭

ಮೊದಲೆ ದೇವರ ತಮ್ಮ ದೇವರಂತಾಡಿದ
ನಿದಕಾರ ಕೇಳಬೇಕೆಂದು
ಅದು ಮತವಲ್ಲ ಸೂಚಿಸಬೇಕು ವಿಭುವಿಗೆಂ
ದಿದ ಕೂರ್ತು ಬಂದೆ ನಾನೆಂದ ೪೮

ಉತ್ತಮನ್ನೈ ಸೇನು ಬಿಡದೆಮ್ಮ ಭುಜಬಲಿ
ಯೊತ್ತಿನೊಳಿರು ಮಂತ್ರಿಯೆಂದು
ಉತ್ತಮದುಡುಗೊರೆಯಿತ್ತು ಬೀಳ್ಕೊಡಲು ಕೈ
ಯೆತ್ತಿ ಮುಗಿದು ಹೋದನವನು ೪೯

ಅವನತ್ತ ಸಾಗಿದನಾ ರಾಯನೊಡನಿತ್ತ
ಯುವರಾಜನಂತರಂಗವನು
ತವೆ ತನ್ನ ಮನದೊಳಾಲೋಚಿಸಿ ನಸುನಗೆ
ಚವಚವಿಸುತ ಮತ್ತೆ ನುಡಿದ ೫೦

ಬುದ್ಧಿಸಾಗರ ಮಂತ್ರಿ ಕಂಡೆಯ ಭುಜಬಲಿ
ಯುದ್ಧತಿಕೆಯನೆಮ್ಮ ಬಳಿಗೆ
ಶುದ್ಧ ಚಿತ್ತದೊಳೆಯ್ದಲೊಲ್ಲದೆ ಶಾಸ್ತ್ರದ
ಶುದ್ಧಿಗಾಣಿಸಿ ಬಿಟ್ಟನೆಂದ ೫೧

ದರ್ಪವ್ವೆ ಭುಜಬಲಿಗದರ ಮೇಲಿಷ್ಟು ಕಂ
ದರ್ಪನೆಂಬುದು ಹೆಮ್ಮೆ ತನಗೆ
ಆರ್ಪಾಟೆ ತನಗೆಂಬ ಪರಿಯಿದು ಹುಂಡಾವ
ಸರ್ಪಣಿಯಲ್ತೆ ಈ ಕಾಲ ೫೨

ಅಮ್ಮಾಜಿಯರೊಳಗಪ್ಪಾಜಿಯರೊಳೆಮ್ಮ
ತಮ್ಮಂದಿರಿಗೆ ಮಹಾಭಕ್ತಿ
ನಮ್ಮ ಕಂಡರೆ ತಮಗರಸ ವಿರಸ ಪರ
ಬೊಮ್ಮಸುತರ್ಗಿದು ನಡೆಯೆ ೫೩

ನಾನಿವರೊಳಗೆ ವಿನಯವ ನೆನೆವನು ತಾ
ವೇನೊ ನನ್ನೊಳು ಪೆರತಿಹರು
ಏನಮಾಡಿದೆನು ನಾನಿವರ್ಗಿಷ್ಟು ನೋವಾಗ
ನೀನರಿಯೆಯ ಹೇಳು ಮಂತ್ರಿ ೫೪

ಜಿನನಾಣೆ ಗಡ ನಿನ್ನೊಳಿಂದು ನುಡಿದೆನ್ನೈಸೆ
ಇನಿಬರ ಚೇಷ್ಟೆಯನೆನ್ನ
ಜನನಿಯರಿದಿರೆ ನೊಂದಹಳೆಂದು ಮಾಜಿಕೊಂ
ಡನುಜರೊಳ್ಳಿದರೆನುತಿಹೆನು ೫೫

ಕಿರಿಯರವರು ಸ್ವಾಮಿ ಸ್ಮರಿಸ. ನಿನಗಾದ
ಕೊರತೆಯೇನಿದರಿಂದ ಚಕ್ರಿ
ಅರಿಯ[illegible]ರು ದೇವ ನಿನ್ನೊಳು ಪುದುವಾಳ್ದು
ಮೆರೆವವರ್ಗತಿ ಪುಣ್ಯ ಬೇಕು ೫೬

ನಿನ್ನನುಡಿಯೆ ಸಾಕು ಜಗವೆಲ್ಲ ಭಾಸ್ಕರ
ನುನ್ನತಿಗರ್ತಿ ಮಾಡುವುದು
ಕನ್ನೈದಿಲಡ್ಡಮೋರೆಯೊಳಿರುವುದರಿಂದ
ಬನ್ನವುಂಟೆ ಪ್ರಭಾಕರಗೆ ೫೭

ತೊಡಹಗಾರಿಕೆಯೊಳಾ ಮಂತ್ರಿಯಾಡಿದ ಮಾತಿ
ಗೊಡನಹುದಹುದೆಂದ ನಗುತ
ಒಡಕುಹುಟ್ಟಿಸದ ಬಾಂಧವ ತಂತ್ರಿಯೆಂದದ
ನುಡಿಯದೆ ಮೆಚ್ಚಿದನೊಳಗೆ ೫೮

ಅರೆಯಿರುಳಿನ ಸನ್ನೆಯಾಯ್ತಾಗ ಜಿನಸಿದ್ಧ
ಶರಣೆನುತವನೀಶನೆದ್ದ
ವರಮಂತ್ರಿ ಸೇವಕರೊಡಗೂಡಿ ಶಸ್ತ್ರಮಂ
ದಿರಕೆ ಬಂದನು ಗಮಕದೊಳು ೫೯

ಬಲುತೆರಪಿನ ಶಸ್ತ್ರಶಾಲೆಯೊಳೊರೆಯುಚ್ಚಿ
ದಲಗುಗಳೆಲ್ಲ ಸಾಲಾಗಿ
ಬಲಿಪುಷ್ಪ ಗಂಧ ಮುಂತಾದ ಪೂಜೆಯೊಳು ವೆ
ಗ್ಗಳಿಸುತಿದ್ದವು ವೀರರಸವ ೬೦

ರಕ್ತ ಚಂದನದಲ್ಲಿ ಸಾರಣೆ ಕಾರಣೆ
ರಕ್ತ ಚಂದ್ರಿಕೆಯ ಮೇಲ್ಕಟ್ಟು
ರಕ್ತವರ್ಣದ ಪುಷ್ಪಮಾಲೆಯಿಂದಾ ಶಾಲೆ
ಯುಕ್ತಿಗೊಪ್ಪಿತು ಸಂಜೆಯಾಯ್ತು ೬೧

ಹೊಗೆಯೇಳ್ವ ಧೂಪ ಹೊಂಗಿಡಿಗೆದರುವ ದೀಪ
ಬಗೆಬಗೆವಣ್ಣದ ಪುಷ್ಪ
ಚಿಗುರೆಲೆ ಕೆಂಗೂಳು ಪಣ್ಕಾಯ ಮೆದೆಯಿಂದ
ದಿಗುಬಲಿಗೊಟ್ಟಿರ್ದುದಲ್ಲಿ ೬೨

ಭಲ್ಲೆಯ ಕತ್ತಿ ಕರಾರಿ ಮುಪ್ಪಿಡಿ ವಂಕಿ
ಸಲ್ಲಿಹ ಗದೆ ಲೌಡಿ ಸಬಳ
ಬಿಲ್ಲಂಬು ಜವದಾಡೆ ಕಿರಿಸೆಗಳಾ ಗೃಹ
ದಲ್ಲಿದ್ದವುರಿಮಾರಿಯಂತೆ ೬೩

ಎಂದಿಗೀ ಜೊತೆ ದಂಡು ನಡೆವನೊ ರಿಪುಗಳ
ತಿಂದು ತೇಗುವೆನೆಂದು ಮೃತ್ಯು
ಇಂದೆ ನಾಲಗೆ ನೀಡಿದಂತಿರ್ದುದಲ್ಲಿ ನಾ
ನಂದಕವೆಂಬಸಿರತ್ನ ೬೪

ಕಾಲನ ದಾಡೆಗಳಂತೆ ಕರಾಳ ಖ
ಡ್ಗಾಳಿಗಳಿರೆ ಮತ್ತೆ ನಡುವೆ
ಜ್ವಾಲಾರ್ಕನಂತೆಸೆದುದು ಚಕ್ರರತ್ನ ಭೂ
ಪಾಲ ನೋಡಿದನದ ನಿಂದು ೬೫

ಚಕ್ರಿ ಬಿನ್ನಹವಿಂದು ಮುಟ್ಟಿಸಂಭ್ರಮದಲ್ಲಿ
ಚಕ್ರರತ್ನದ ಪೂಜೆಯಾಯ್ತು
ವಿಕ್ರಾಂತ ಲಗ್ನದೊಳಗೆ ನಾಳೆ ಪಯಣ ಯ
ಥಾಕ್ರಮವೆಂದನಾ ಮಂತ್ರಿ ೬೬

ಆ ನುಡಿಗೇಳುತ ನೃಪತಿ ಚಕ್ರದ ಮೇಲೆ
ತಾನೊಂದು ಕಮಲವನಿಟ್ಟ
ಭಾನುವಿಗಬ್ಜ ಸಾದುದು ದೇವ ನಿನಗಿದು
ತಾನೆ ಲೇಸಿಹ ಚಿಹ್ನವೆಂದ ೬೭

ಧಾತ್ರೀಶನಲ್ಲಿಂದ ಮಗುಳ್ದನಾ ಮಂತ್ರಿಯ
ನೇತ್ರಲೀಲೆಯೊಳು ಬೀಳ್ಕೊಟ್ಟ
ಸೂತ್ರಿಸಿ ತನ್ನರಮನೆವೊಕ್ಕನಿದು ನವ
ರಾತ್ರಿಯ ಸಂಧಿ ಸುಗಂಧಿ ೬೮

## ಪಟ್ಟಣಪಯಣದ ಸಂಧಿ

ಉತ್ತಮ ಲಗ್ನದೊಳಗೆ ದಶಮಿಯೊಳು ರಾ
ಜೋತ್ತಮ ಶೃಂಗಾರರಾಗಿ
ಉತ್ತುಂಗ ದಿಗ್ವಿಜಯಕೆ ಪೊರಮಟ್ಟ ಸಂ
ಪತ್ತನವೇನ ಬಣ್ಣಿಪೆನು ೧

ರಾಯವಿಭಾಡ ರಾಜಾದಿತ್ಯ ಮಲೆವರಿ
ರಾಯದಲ್ಲಣ ರಿಪುಮಥನ
ಪಾಯವಧಾರು ಜತನ ಜಯಯೆನೆ ತನ್ನ
ತಾಯರಮನೆಗೆ ನಡೆದನು ೨

ಬರುತಿಹ ಮಗನ ಸೌಭಾಗ್ಯವ ತಾಯಿ ತ
ನ್ನೆರಡು ಕಣ್ದಣಿವಂತೆ ನೋಡಿ
ಹರುಷವೇರಿದಳು ಸಂಪೂರ್ಣಚಂದ್ರನ ಕಂಡು
ಶರನಿಧಿ ಹೆಚ್ಚುವಂದದೊಳು ೩

ಸಕಲ ವಿಲಾಸಿನಿಯರ ನಟ್ಟನಡುವೆ ಮಾ
ಣಿಕದ ದೇವತೆಯಂತೆ ಮೆರೆವ
ಅಕಳಂಕಚರಿತಗಂಬಿಕೆಗೆ ಷಟ್ಖಂಡನಾ
ಯಕನೆರಗಿದ ಕಾಣ್ಕೆಯಿಕ್ಕಿ ೪

ಘನದ ಸಮುದ್ರಾಂತ ಧರೆಯ ಲೀಲಾಮಾತ್ರ
ದನುವಿಂದ ಜಯಿಸೆನ್ನ ಕಂದ
ಜಿನಭಕ್ತಿಯಲ್ಲಿ ಭೋಗದೊಳಿಂದ್ರನಾಗೆಂದು
ಜನನಿ ಹರಸಿದಳು ಮಗನ ೫

ತಕ್ಕೈಸಿಕೊಂಡು ತೂಪಿರಿದಳು ಹರಸಿದ
ಳಕ್ಕರಿಂ ಮೊಗವ ನೋಡಿದಳು
ನಕ್ಕಳು ಮಗನೆ ತಾಮಸಮಾಡಬೇಡ ನ
ನ್ನಿಕ್ಕೆಗೆಯ್ದೆಂದಳು ಬೇಗ ೬

ಆನೆ ಕುದುರೆಯ ಕಾಲಿಗೆ ಮುಳ್ಳು ತಾಗದೆ
ಮಾನವೇಂದ್ರರ ನಿನ್ನ ಕಾಲ್ಗೆ
ಆನತಗೈಸಿಕೊಂಡೆನ್ನೊರ್ಗೆ ಬಾರೆಂದು
ಸೂನುವ ಬೀಳ್ಕೊಟ್ಟಳೊಡನೆ ೭

ಜನನಿಯ ಹರಕೆಯ ಕೈಕೊಂಡು ಜಿನ ಸಿದ್ಧ
ಎನುತ ರಾಜೇಂದ್ರ ನಡೆದನು
ಅನಿತರೊಳಗೆ ಸೊಸೆಯರು ಬಂದರತ್ತೆಗೆ
ವಿನಮಿಸಿ ಬೀಳ್ಕೊಂಬೆವೆಂದು ೮

ಬನ್ನವೆಂಬುದು ನಿಮ್ಮ ಕನಸಿನೊಳಗೆ ಕಾಣ
ದೆನ್ನನುಜನ ಸುತೆಯರಿರ
ನನ್ನ ಣುಗನ ಕೂಡೆ ಲೀಲೆಯೊಳೋಲಾಡಿ
ಬನ್ನಿರೆಂದುರೆ ಹರಸಿದಳು ೯

ನಿಮ್ಮರಸನ ಜಾಣ್ಮೆತೊಳೆದು ಲೋಕದ ಜಿಡ್ಡ
ಕಮ್ಮನೆ ಮಾಡುತಿದ್ದಪುದು
ನಮ್ಮನಿನ್ನೇನ ಕೇಳ್ವುದು ನಿಮ್ಮ ಪತಿವೇಳ್ದ
ಸೊಮ್ಮಿನೊಳಿಹುದವೆ ಬುದ್ಧಿ ೧೦

ಅತ್ತ್ಯಮ್ಮನಡಿಗಳ ಕಾಣ್ಬತನಕ ವ್ರತ
ಕೃತ್ಯವೊಂದೊಂದು ಬೇಕೆಂದು
ಸತ್ಯಕಾಂತೆಯರೆಲ್ಲ ತಮ್ಮೊಳಾಲೋಚಿಸಿ
ಪೃತ್ಯನುಮತದಿ ಮಾಡಿದರು ೧೧

ಉಂಬ ರಸಗಳಲ್ಲಿ ಮುಡಿವ ಪುಷ್ಪಗಳಲ್ಲಿ
ತಂಬುಲ ದುಗುಲಗಳಲ್ಲಿ
ಇಂಬರಿದೊಬ್ಬೊಬ್ಬರೊಂದೊಂದ ತೊರೆದರೇ
ನೆಂಬೆನವರ ಭಕ್ತಿರಸವ ೧೨

ಪರರಾಜ್ಯಕೆಯ್ದುತಿದ್ದಪಿರಿ ಪೆಂಗಳಿರ ಸಂ
ಚರವ್ರತ ಬೇಡೆಂದಳತ್ತೆ
ಭರತೋರ್ವಿ ನಮ್ಮದು ಪರರಾಜ್ಯಕೆಯ್ದೆವೆಂ
ದೊರೆದೆಲ್ಲ ವ್ರತವ ತಾಳಿದರು ೧೩

ಬಗೆಮೆಚ್ಚಿ ಪುತ್ರಿ ತಮ್ಮ ತ್ತಿಗೆರಗಿಯಾಕೆ
ತೆಗೆದಿಟ್ಟ ಸೇಸೆಯನಾಂತು
ಮುಗುಡದಿ ಬಾಳ್ವ ಗೃಹಸ್ಥರ ಬಾಳ್ಕೆಯ
ನಗುವಂತೆ ನಗುತ ನಡೆದರು ೧೪

ಇಟ್ಟಣಿಸಿದ ಸತಿಯರ ಬಳಿಸಿನೊಳಳ
ವಟ್ಟೊಂದು ಹೊನ್ನರಥದೊಳು
ಕಟ್ಟುಮೆಚ್ಚಿನೊಳರ್ಕಕೀರ್ತಿ ಕುಮಾರನ
ತೊಟ್ಟಲೈತರುತಿರ್ದುದಾಗ ೧೫

ಕೂಪ ನಂಬುಗೆವಂದರೆನಲಣ್ಣಗಳ ನಾಮು
ಕಾಪುಗೊಂಡವರು ರಾಣಿಯರ
ಆ ಪುರದ್ವಾರದತ್ತೆಯ್ದಿ ಸುತಿರಲಿತ್ತ
ಭೂಪ ನಡೆದ ಜಿನಗೃಹಕೆ ೧೬

ಕೆಳೆಯರು ತೋರುವ ಶುಭಶಕುನವ ನೋಡು
ತೊಳನಗೆ ನಗುತ ತನ್ನೊಳಗೆ
ಗೆಲವಿಂದ ಹಂಸನಾಥನ ಸ್ಮರಿಸುತ ಬಂದ
ಪೊಳಲ ಮಧ್ಯದ ಜಿನಗೃಹಕೆ ೧೭

ಹೊರಗಣ ಪೌಳಿಗಾಣುತ ಪಾವುಗೆಯ ಮಾಣ್ದು
ಸೆರಗುಡೆ ಸುತ್ತಿ ನಡೆದನು
ಮಿರುಪ್ಪೈದು ಹೊನ್ನಕೋಟೆಯ ದಾಟಿ ಕಂಡನು
ಮೆರೆವಾದಿಜಿನನ ಬಿಂಬವನು ೧೮

ಭದ್ರಮಂಟಪದಲ್ಲಿ ನಿಂದು ಕಾಣಿಕೆಯಿಕ್ಕಿ
ಭದ್ರಭಾವದೊಳೆರಗಿದನು
ಚಿದ್ರೂಪಭಾವನೆಯುಳ್ಳ ಯೋಗಿಗಳ ಸ
ಮುದ್ರವಿದ್ದುದು ನಮಿಸಿದನು ೧೯

ಸಿದ್ಧ ದಿಗ್ವಿಜಯಕಾರ್ಯೋ ಭವ ಭೂಪ ಸ
ಮೃದ್ಧ ಸುಖೀ ಭವಯೆಂದು
ಸಿದ್ಧಾಂತಘೋಷದೊರೆದರು ನಿರಂಜನ
ಸಿದ್ಧಭಾವನೆಯ ಯೋಗಿಗಳು ೨೦

ಧರಿಸಿಲ್ಲಿ ಸ್ವಾಮಿ ಕಿರೀಟವನೆಂದನಾ
ದರದಿಂದ ಪುತ್ರ ಮತ್ತದಕೆ
ದರಹಸಿತಾನನನಾ ರಾಯನೊಡಬಟ್ಟು
ಧರಿಸಿದನುತ್ತಮಾಂಗದೊಳು ೨೧

ಜಿನಗೆ ಕೈಮುಗಿದನು ಸ್ವಾಮಿ ಪುನರ್ದ
ರ್ಶನವಾಗಲೆಂದು ಕಿರೀಟಿ
ಮುನಿಗಳ್ಗೆ ನಮಿಸಿದ ಜಯಜಯವೆಂಬ ಘೋ
ಷಣೆಯೊಳು ಮಗುಳ್ದನಲ್ಲಿಂದ ೨೨

ಸರ್ವ ಸಂಭ್ರಮದಿಂದ ಪಂಚಕೋಟಿಯ ದಾಟಿ
ಸಾರ್ವಭೌಮನು ನಡೆತಂದು
ಪರ್ವತದಂತಿದ್ದ ಪಟ್ಟದಾನೆಯನೇರಿ
ಸರ್ವಜ್ಞ ಶರಣೆನುತಡರ್ದ ೨೩

ಎತ್ತಿತು ಮುತ್ತಿನ ಸತ್ತಿಗೆ ಚಾಮರ
ಪತ್ತಿತ್ತ ಚಿಮ್ಮಿದುವಾಗ
ಸುತ್ತ ಪತಾಕೆಯೆದ್ದುವು ವಾದ್ಯಕೋಟಿ ದಿ
ಗ್ಭಿತ್ತಿ ಬಿರಿಯೆ ಮೊಳಗಿದುವು ೨೪

ಇಟ್ಟ ಕಿರೀಟ ಮೂಡುವ ಸೂರ್ಯನಂತೆ ಮೈ
ಗಟ್ಟ ಹೊಂಬೊಂಬೆಯಂತೆಸೆಯೆ
ಬೆಟ್ಟವ ನಡೆಸುವಂತಾ ರಾಯ ಮುಂದಕೆ
ಪಟ್ಟದಾನೆಯ ನಡೆಸಿದನು ೨೫

ಪುರುಷೋತ್ತಮನಿಂದು ಪುರದಿಂದ ಮುಂದಕೆ
ತೆರಳುತಿದ್ದಪನೆಂಬುದರಿದು
ಪುರದೊಳಗಿದ್ದ ಪೆಣ್ಗಂಡೆಲ್ಲರೊಲವಿಂದ
ನೆರೆದು ನಿಟ್ಟಿಸಿದರೇನೆಂಬೆ ೨೬

ಆಡಲಳವೆ ಚಕ್ರನಾಥನ ಸೊಬಗನು
ನೋಡಿದ ಪೆಣ್ಗಳಲ್ಲಲ್ಲಿ
ನೋಡುತ ಸೈವೆರಗಾಗಿದ್ದರುಸುರದ
ಲ್ಲಾಡದ ಪುತ್ತಳಿಯಂತೆ ೨೭

ಮಾನಿನಿಯರು ತನ್ನ ನೋಡುತಿರ್ದರು ರಾಯ
ತಾನವರನು ನೋಡುತಿಲ್ಲ
ಆನೆಯ ಕುಂಭದತ್ತೀಕ್ಷಿಸುತೆಯ್ತಂದ
ಯೇನ ಕಲಿತನೊ ಗೌರವವ ೨೮

ಸಿರಿಬನದೊಳಗೆ ಮನ್ಮಥರಾಜ ಬಪ್ಪಂತೆ
ಪುರದ ಬೀದಿಯೊಳಂತು ಬಂದು
ಸಿರಿ ನೆಲಸಿಪ್ಪ ಹೊತ್ತಿನೊಳು ವಿನೀತಾ
ಪುರದ ಕೋಟೆಯನು ದಾಟಿದನು ೨೯

ಪಟ್ಟಣವನು ದಾಟಿ ಪೌಜನೋಡುವ ಒಲು
ಬಟ್ಟಬಯಲಿಗಾಗಿ ನೃಪತಿ
ಪಟ್ಟದಾನೆಯನೇರಿ ಬರುತಿರ್ದನಿಲ್ಲಿಗೆ
ಪಟ್ಟಣಪಯಣದ ಸಂಧಿ ೩೦

## ದಶಮಿಪ್ರಸ್ಥಾನ ಸಂಧಿ

ಇಭವನಡರಿ ಭರತೇಶ ನಾನಾವಾದ್ಯ
ರಭಸದೊಳೆಯ್ತರುವಾಗ
ಅಭಿಮುಖದೊಳು ಮುಂದೆ ಬನ್ನಿಯ ಮರದಲ್ಲಿ
ಪ್ರಭೆದೋರಿದುದು ಚಕ್ರರತ್ನ ೧

ಉನ್ನತಪಳೆಗೊನೆಗಳು ಗಾಳಿಯಿಂದ ಕೈ
ಸನ್ನೆಗೈವಂದದಿ ಕೂಗಿ
ಬನ್ನಿಯೆಂದೆಲ್ಲರನೊತ್ತಿಗೆ ಕರೆವಂತೆ
ಬನ್ನಿಯ ಮರ ವಿರಾಜಿಸಿತು ೨

ಅಂಕೆಗೊಟ್ಟಾನೆಯ ನಿಲಿಸಿ ಮೇಲೂರಿದೊಂ
ದಂಕುಶದೊಳು ಹಸ್ತವಿಟ್ಟ
ಬಿಂಕದೊಳೊಲೆದು ನೋಡಿದನು ಶೃಂಗಾರದ
ಸೋಂಕಿನೊಳೆಸೆವ ಪಾಯ್ದಳವ ೩

ಕಣ್ಣಿಟ್ಟುವಷ್ಟರೊಳೆತ್ತ ನೋಡಿದರತ್ತ
ಹಣ್ಣಿದಾನೆಗಳು ತೇಜಿಗಳು
ಬಣ್ಣಬಗೆಯ ರಥ ವೀರಭಟರ ಮೊತ್ತ
ಪಣ್ಣೆಪಣ್ಣೆಯೊಳಿರ್ದುದಾಗ ೪

ಮಧ್ಯಾಹ್ನ ತಿರುಗಿ ಮೂರನೆಯ ಜಾವದೊಳಗ
ಯೋಧ್ಯನ ಕೈಸನ್ನೆಯರಿದು
ಅಧ್ಯಕ್ಷರಾಜರು ಸಾರ್ತಂದು ಕಂಡರ
ಯೋಧ್ಯಾಧಿಪತಿಯನೇನೆಂಬೆ ೫

ಆರು ಖಂಡದೊಳೈದು ಖಂಡದ ನೃಪರಲ್ಲಿ
ತೋರುತಿಲ್ಲೊಂದು ಖಂಡಮೊಳು
ತೋರುವ ನೃಪರೆಲ್ಲ ಬಂದು ಕಂಡರು ಪಂಥ
ಕಾರನನಾ ಚಕ್ರಧರನ ೬

ಆರ್ಯಾಖಂಡದ ನೃಪರೆಲ್ಲ ಕಂಡರು
ಶೌರ್ಯದಿಂದೈದು ಮ್ಲೇಚ್ಛರೊಳು
ಕಾರ್ಯಕೆ ಬಾರದ ನೃಪರ ಕೈವಶಮಾಳ್ಪ
ಕಾರ್ಯಕೀ ಬಲವ ಕೂಡಿದನು ೭

ಪಡೆಯನೆಲ್ಲವ ಕೂಡಿ ಭರತರಾಜೇಂದ್ರನು
ತೊಡೆಸನ್ನೆಯಿಂದ ಹಸ್ತಿಯನು
ನಡೆಸಿದನೆಲ್ಲರು ಜಯ ಜಯ ಜಾಂಗೆಂದು
ಕಡಲಂತೆ ಕೂಗಿ ಬೊಬ್ಬಿರಿಯೆ ೮

ಛಟಿಫಟಿ ಸುರುಬುರು ಬುಸ್ಸು ಬುಸ್ಸೆಂದು ಚೀ
ರ್ಚಿಟಿ ರೊಪ್ಪು ರೊಪ್ಪು ಡಪ್ಪೆಂದು
ಪೆಟಲು ಕೋಟಾಕೋಟಿ ಸುಟ್ಟವು ವೀರರಾ
ಭರ್ಟಿಸಿದರೊಂದೆ ಲಗ್ಗೆಯೊಳು ೯

ಭೇರಿ ನಿಸ್ಸಾಳ ಪಟಹ ಶಂಖ ಹೆಗ್ಗಾಳೆ
ವೀರತಂಬಟೆ ತುಡುಮುಗಳ
ಭೋರನೊಂದೇ ಬಾರಿ ಸದೆದರು ಪ್ರಳಯದ
ಭೈರವಾರ್ಭಟೆ ತೋರಿತೆನಿಸಿ ೧೦

ವಿಜಯವೃಕ್ಷವ ಬಲಕಿಕ್ಕಿ ನಡೆಸಿದನು
ವಿಜಯಪರ್ವತವನಾ ಚಕ್ರಿ
ಧ್ವಜದೊಗ್ಗಿನೊಳು ಹೊಳೆವುತ ತೆರಳಿದುದು ಸಾ
ಮಜದ ಮುಂಗಡೆಯೊಳು ಚಕ್ರ ೧೧

ಎಡ ಬಲ ಹಿಂದು ಮುಂದೆಲ್ಲಿಯು ತುಂಬಿ ಪೆ
ರ್ವಡೆ ನಡೆದುದು ಕಡಲಂತೆ
ನಡುವೆ ಮಂದರದಂತೆ ರಾಜೇಂದ್ರ ಮುತ್ತಿನ
ಕೊಡೆಯ ನೆಳಲೊಳೆಯ್ದುತಿರ್ದ ೧೨

ದೊರೆ ದೊರೆಗಳು ತಮ್ಮ ಪೌಜಿನೊಳೊದುವ
ಬಿರುದಿನ ಕಹಳೆ ವಾದ್ಯದೊಳು
ಬರುತಿದ್ದರೋಲೈಸಿ ಭರತರಾಜೇಂದ್ರನ
ಸಿರಿಗೆಣೆಯಹ ಸಿರಿಯುಂಟೆ ೧೩

ಜಯಘೋಷದೊಳು ಪುರಕತಿದೂರವಾಗದೋ
ಜೆಯೊಳು ಕಿರಿದು ದೂರ ಗಮಿಸಿ
ಮಯ ರಚಿಸಿದ ಬೀಡುದಾಣದ ಕೆಲದೊಳಾ
ನೆಯ ನಿಲಿಸಿದನವನೀಶ ೧೪

ತೇರಮೇಲಾನೆಯಮೇಲೆ ತೇಜಿಯಮೇಲೆ
ಸಾರೆನಿಂದಖಿಲ ಭೂಮಿಪರ
ತೋರಹಸ್ತದ ಸನ್ನೆ ಕಣ್ಸನ್ನೆಯಿಂದ ಬೀ
ಡಾರಕೆ ಬೀಳ್ಕೊಟ್ಟನೊಡನೆ ೧೫

ಬುದ್ಧಿಸಾಗರನ ಸೇನಾಧಿಪತಿಯ ಗಣ
ಬದ್ಧರ ಕೆಳೆಯರ ಕಳುಹಿ
ಶುದ್ಧಾಂತರಂಗ ಪೊಕ್ಕನು ಭದ್ರಮುಖನೆಂಬ
ವಿದ್ಧಿ ಮಾಡಿದ ಶಿಬಿರವನು ೧೬

ಒಳಗೊಂದು ಮದುವೆಯ ಜಗಲಿ ಸಿಂಗರಿಸಿರ
ಲೊಲೆದು ರಾಜೇಂದ್ರ ನೋಡುತಿರೆ
ಕೆಲದಲ್ಲಿ ಕುಸುಮಾಜಿ ನುಡಿದಳು ಮುಂದೆ ಮಂ
ಗಲದ ಸೂಚನೆ ನಿವಗೆಂದು ೧೭

ಇದು ತನ್ನ ತಂಗಿಯ ಮದುವೆಗೆಂದವಳೆಸ
ಗಿದ ತಿಟ್ಟವೆಂದದನರಿದ
ಸುದತಿಯ ಕಾರ್ಯವ ಪುರದೊಳಿದ್ದಾಗ ಸಂ
ಪದಿಪುವುದೇನಾದುದೆಂದ ೧೮

ಕಳುಹಿದೆನಹುದಿಲ್ಲಿಗಪ್ಪಾಜಿ ಬಹುದಿಷ್ಟು
ತಳುವಾದುದದರಿಂದ ಮುಂದೆ
ತಳರ್ದಾಗ ವೇಳೆ ಸಂಘಟಿಸದಿಂದಿಲ್ಲಿ ಸಂ
ಗಳಿಸಿದೆನೆಂದಳಾ ಕುಶಲೆ ೧೯

ಇರುಳಿಗೆ ಲಗ್ನ ಲೇಸೆಂದೆಮ್ಮ ಜನಕ ನಿ
ರ್ಧರಿಸಿ ಬಂದಿದ್ದನೆನ್ನನುಜೆ
ಪರಿಪೂರ್ಣ ಶೃಂಗಾರವಡೆದಿರ್ದಳೆನುತಾಕೆ
ಪುರುಷನೊಳ್ನುಡಿವುತೆಯ್ದಿದಳು ೨೦

ಒಂದು ಪಂತಿಯೊಳಂತರಾಯವಿಲ್ಲವೆ ಪೆಂಡಿ
ರೊಂದಾಗಿ ಭೋಜಿಸಿ ನೃಪತಿ
ಮುಂದಹ ಜಯದ ಸೂಚನೆಯಿದು ನವಗೆಂದು
ಸೌಂದರಿಯರ ಕೂಡೆ ನುಡಿದ ೨೧

ಅರ್ಕನಸ್ತಮಿಸೆ ಸಂಧ್ಯಾಚರಣೆಯ ಮಾಡಿ
ಅರ್ಕಕೀರ್ತಿಯನು ಮುದ್ದಾಡಿ
ತೋರ್ಕೆಯೊಳೊಡನೆ ಸಿಂಗರಿಸಿ ಕಾಂತೆಯರ ಸಂ
ಪರ್ಕದೊಳಿರ್ದನಿಸ್ಪಾರ್ಗ ೨೨

ಮುಟ್ಟಲಾದುದು ಲಗ್ನವೆನೆ ರಾಯ ನಡೆತಂದು
ಮೆಟ್ಟಕ್ಕಿಗಳ ಮೆಟ್ಟಿ ನಿಂದು
ನಿಟ್ಟಿಸಿ ಮಾವನೊತ್ತಿನೊಳಿದ್ದ ಮೈದುನ
ಗಟ್ಟಹಾಸದೊಳಿಂತು ನುಡಿದ ೨೩

ಕುಸುಮಾಜಿಯಂತಲ್ಲ ಕಮಲಾಂಕ ಕೇಳು ಕೋ
ಪಿಸಿ ನನ್ನ ಜರೆದಿರ್ದಳವಳು
ಅಸಮಾನದವಳ ನೀನೆನಗೀವೆನೆಂಬುದು
ರಸಿಕರ ಮಾರ್ಗವೆಯೆಂದ ೨೪

ವಸುಧೆಯೊಳ್ನಿನಗೆ ಸಮಾನವಿಲ್ಲಾಗಿ ನೀ
ನಸಮಾನದವನದರಿಂದ
ಅಸಮಾನದವನೀಶಗಸಮಾನದಬಲೆಯ
ರಸಿಕರೀಯರೆ ಯೆಂದನವನು ೨೫

ಪಯಣದ ವೇಳೆಯಾದುದು ಬಹುವಾಕ್ಯಕಾ
ಶ್ರಯವಿಲ್ಲ ಸೈರಿಸೆಂದೊರೆದು
ನಿಯತ ಶೋಭನ ಮಂಗಳಾಷ್ಟಕಗೇಳುತೋ
ಜೆಯೊಳಿರ್ದನಾ ಮೋಡಿಕಾರ ೨೬

ನಿಕಟದ ತೆರೆ ಜಾರೆ ವಾದ್ಯ ಘೋಷಿಸೆ ಗಜಾ
ನಕರಾಜನು ಧಾರೆಯೆರೆಯೆ
ಮಕರಂದಾಜಿಯನಾ ರಾಯ ಹೋಮನಾ
ಕ್ಷಿಕದಲ್ಲಿ ಹಸ್ತವಿಡಿದನು ೨೭

ರಾಜೇಂದ್ರನರಮನೆಗವನೊಯ್ದನು ಕುಸು
ಮಾಜಿ ಬೀಳ್ಕೊಟ್ಟಳಯ್ಯನಸು
ಸೌಜನ್ಯಕಾಂತೆಯರೆಲ್ಲರೊಳಾ ಮಹಾ
ರಾಜನಿದ್ದನು ಸುಖಾಂಗದೊಳು ೨೮

ವಶವಹುದೀತಗುರ್ವರೆ ನಾಳೆ ಯೀಕಾ
ದಶಿ ಮುಂದೆ ನಡೆವವೆಂದೆನುತ
ಕುಶಲವೃತ್ತಿಯೊಳು ಪಾಯ್ದಳವಿದ್ದುದಿಲ್ಲಿಗೆ
ದಶಮಪ್ರಸ್ಥಾನದ ಸಂಧಿ ೨೯

## ಪೂರ್ವಸಾಗರದರ್ಶನ ಸಂಧಿ

ಏಕಾದಶಿಯುದಯದೊಳಿದು ಭರತೇಶ
        ಸಾಕೇತಪುರದ ರಕ್ಷಣೆಗೆ
ಮಾಕಾಳನೆಂಬನ ಬೀಳ್ಕೊಟ್ಟು ಮುಂದೆಸ
        ವಾ ಕೋಟಿ ನಡೆಯ ಹೇಳಿದನು ೧

ಬೆಟ್ಟವ ತೋಡಿ ತೊಗಲ ಕಟ್ಟಿದಂತಳ
        ವಟ್ಟ ಪನ್ನೆರಡು ಭೇರಿಗಳ
ಕುಟ್ಟಿದರಾಗಳೆ ಜಗವೆಲ್ಲ ಮೊಳಗಿನ
        ವೊಟ್ಟೆಯ ಕಟ್ಟಿದಂತಾಯ್ತು ೨

ಟೆಕ್ಕೆಯ ನೇಜಯವೆದ್ದುವು ತಿಳಿನೆಳ
        ಗುಕ್ಕುತ ತೆರಳಿತು ಚಕ್ರ
ಕಿಕ್ಕಿರಿದನುಪಮ ರತ್ನಮಯದ ಪ
        ಲ್ಲಕ್ಕಿಯೊಳಿರ್ದನಾ ರಾಯ ೩

ಬಿಳಿಯ ತಾವರೆಯಂತೆ ನೆಗೆದ ಸತ್ತಿಗೆ ಹಂಸೆ
        ಸುಳಿಹಂತೆ ಬೀಸುವ ಚವರ
ಕೆಳೆಯರು ಮಧುವಿಂಡು ಮರುತನಂತೆಯ್ತರೆ
        ತಳರ್ದನಾ ರಾಜಮನೋಜ ೪

ಸಯ್ಯರಿದುತ್ತಮರೂದಿ ಕೊಳಲು ತಪ್ಪ
        ಕೈಯ್ಯೊಳುದಯರಾಗದೊಡನ
ಮೆಯ್ಯೊಳಿದ್ದಾತ್ಮಕಲೆಯ ಹಾಡುತಿರೆ ಕೇಳು
        ತೊಯ್ಯನೈದಿದನಾತ್ಮರಸಿಕ ೫

ದಂಡಿಗೆಕುದುರೆಯೊಳೊಳಿಗಪೆಂಗಳು
        ಪೆಂಡಿರು ಪಲ್ಲಕ್ಕಿಗಳೊಳು
ಮುಂಡಿತ ರಥದೊಳು ಕುವರನ ತೊಟ್ಟಿಲು
        ದಂಡಿಗೆಯ್ತರುತಿರ್ದರಾಗ ೬

ಸಾರ್ತಂದ ಪೌಜು ತನ್ನದು ಪೆಣ್ಣ ಪೌಜರ್ಕ
ಕೀರ್ತಿಯ ಪೌಜೆಂದು ಜಗಕೆ
ವಾರ್ತೆಯ ಪುಟ್ಟಿಸಿ ನಡೆತಂದನಾ ಚಕ್ರ
ವರ್ತಿ ಮುಂದಧಿಕ ಲೀಲೆಯೊಳು ೭

ತರಳನ ಪೌಜಿನ ಹಿಂದಿಷ್ಟು ದೂರವಾ
ಗಿರ ಕೋಟಿ ಭಟರೊಡಗೂಡಿ
ಭರತ ಪಾದುಕರಂಬ ಗೊಲ್ಲನಾಯಕರಿಬ್ಬ
ರರಿವಿಜಯರು ಬರುತಿಹರು ೮

ಪೂರ್ವಾಹ್ಣಕಾಲದೊಳಗೆ ಪುರುಜಿನಪುತ್ರ
ಪೂರ್ವಯುಗದ ಚಕ್ರವರ್ತಿ
ಪೂರ್ವಾಭಿಮುಖನಾಗೆ ದಂಡು ನಡೆದುದೊಂದ
ಪೂರ್ವ ಸಂಭ್ರಮವನೇನೆಂಬೆ ೯

ಆನಗಳ್ಗೆಗಳು ಮತ್ತಾ ರಥ ಪಡಗು ನ
ವೀನ ತುರಂಗ ತರಂಗ
ಆ ನೆಲದಗಲದೊಳಾದಿಚಕ್ರೇಶನ
ಸೇನೆ ನಡೆದುದಬ್ಧಿಯಂತೆ ೧೦

ಘುಡಿಘುಡಿಸುವ ವಾದ್ಯ ಗುಡುಗು ಚೀರ್ಚಿಟಿಲೆಂದು
ಸಿಡಿವ ಪೆಟ್ಟಲು ತಾನೆ ಸಿಡಿಲು
ಕುಡುಮಿಂಚಿನಂತೆ ಕೂರಲಗು ಪೊಳೆಯೆ ಷಡೆ
ನಡೆದುದು ಕಾರ್ಗಾಲದಂತೆ ೧೧

ಕುದುರೆಕಾರರು ಕುದುರೆಯ ನೂಂಕಿ ಭರತೇಶ
ನಿದಿರಿಗೆಯ್ತಂದು ಕೈಮುಗಿದು
ಸದೆವ ವಾದ್ಯದ ಗತಿಯೊಳು ತಮ್ಮ ಕುದುರೆಯ
ಚದುರಿಂದ ಕುಣಿಸುತೆಯ್ದುವರು ೧೨

ಮಾವತಿಗರು ಮದದಾನೆಯ ನೂಂಕಿ ಕ
ಲಾವಿದನಿದಿರಿಗೆ ಬಂದು
ದೇವಗೆ ಪೊಡವಡೆಂದಾನೆಯನೆರಗಿಸಿ
ತಾವು ಕೈಮುಗಿದರುಬ್ಬಿನೊಳು ೧೩

ಸೊಂಡಿಲನೆತ್ತಿ ಬಾಲವ ನೀಡಿ ಕಿವಿಗಳ
ಮಂಡಿಸಿ ಬಲ್ದನಿದೋರಿ
ಚಂಡೇಭ ಸುಳಿದುವು ಗಿರಿಯಿಂದ ಕಡುದೊಡ್ಡ
ಗುಂಡುಗಳುರುಳುವಂದದೊಳು ೧೪

ಸ್ಯಂದನ ಗಜ ಹಯ ಭಟರ ಮೊತ್ತದೊಳು ಪೊ
ನ್ನಂದಣಗಳನೇರಿ ನೃಪರು
ಇಂದುವನೋಲೈಪ ನಕ್ಷತ್ರಗಣದಂತೆ
ಬಂದರೋಲೈಸಿ ಚಕ್ರಿಯನು ೧೫

ದೆಸೆತುಂಬಿ ನಡೆವ ಪಾಯ್ದಳಗೂಡಿ ತನ್ನ ಭಾ
ವಿಸುತೊಂದು ಪಯಣವ ಸಾಗಿ
ಬಿಸಿಲು ಬಲಿಯದ ಮೊದಲೆ ಬೀಡ ಬಿಡಿಸಿದ
ನೊಸೆದೊಂದು ತೆರಪಿನೆಡೆಯೊಳು ೧೬

ಉಚಿತದಿಂದೆಲ್ಲರ ಬೀಳ್ಕೊಟ್ಟು ಸುರಶಿಲ್ಪಿ
ರಚಿಸಿದ ಶಿಬಿರವ ಹೊಕ್ಕ
ಪ್ರಚುರಾರ್ಕಕೀರ್ತಿಯ ಪೌಜು ಬಂದುದು ರಾಯ
ನಚಲಿತ ಲೀಲೆಯೊಳಿರ್ದ ೧೭

ಬರಸಿಡಿಲಂತೆ ಭಾರಿಯ ಭೇರಿ ಸೂಳೈಸೆ
ಮರುದಿನವೆದ್ದನಲ್ಲಿಂದ
ತೊರೆಯುಕ್ಕಿ ಹರಿವಂತೆ ಹರಿವುತಿದ್ದುದು ರಾಯ
ರೆರೆಯನ ಸೇನೆ ಲೀಲೆಯೊಳು ೧೮

ದಿಗ್ಗಜದಂದದ ಗಜಘಟೆ ನಡೆವಾಗ
ಲಗ್ಗಿಯ ರಥ ಹರಿವಾಗ
ತಗ್ಗುತಿದ್ದುದು ಭೂಮಿ ಕಿರುಬೆಟ್ಟ ಬಡಬೆಟ್ಟ
ನುಗ್ಗಾಗಿ ನೆಲಸಮವಾಯ್ತು ೧೯

ಬಡಿವ ವಾದ್ಯದ ರಭಸಕೆ ದೂರದೊಳು ನಿಂದ
ನಿಡುಬೆಟ್ಟಗಳ ಕಟ್ಟು ಸಡಲಿ
ಗುಡುಗುಟ್ಟಿ ಗುಂಡುಗಳುರುಳ್ದುವುಂಡಲಿಗೆಯ
ಮಡಕೆಯನೊಡೆಯ್ವುಹೊಯ್ವಂತೆ ೨೦

ಎಡೆಕೊರೆಗಳ ಮುಂದೆ ನಡೆವವರ್ಕೂಡಿದರು
ನಡುವೆ ಪ್ರೋಪರಿಗರಿಲಾಯ್ತು
ಕಡೆಯೊಳೆಯ್ದುವರ ಕಾಲೊಳು ಹುಡಿ ಹಾರಿತು
ನಡೆದುದು ಚಕ್ರಿಯ ಕಟಕ ೨೧

ಜಯರಾಜ ಬಿನ್ನವಿಸಿದವೊಲು ಕುರು ಕುರು
ಪಯಣದೊಳಲ್ಲಲ್ಲಿ ಬಿಟ್ಟು
ದ್ವಯ ತ್ರಯ ದಿನವಿರುತೆಯ್ತಂದು ನೃಪತಿ ಗಂ
ಗೆಯ ತಡಿಯೊಳು ಬೀಡುಬಿಟ್ಟ ೨೨

ದೇವಗಂಗೆಗೆ ತೆಂಕಲಿಹುದುಸಲವಣಾಬ್ಧಿ
ಚೂಪರಸದ ಬಲಕಿಕ್ಕಿ
ದೇವಗಂಗೆಯ ತಡಿವಿಡಿದು ನಡೆದನು ಪೂ
ರ್ವಾವಲಂಬನದ ವಾರಿಧಿಗೆ ೨೩

ಈ ಕಡಲೊಳು ಮಾಗಧಾಮರನಿಹನು ಮ
ಹಾಕೋಪಿಯಾತನ ಜಯಿಸಿ
ಬೇಕಾದ ಕಾರ್ಯವ ಮುಂದೆ ಯೋಚಿಪವೆಂದ
ನಾ ಕಿರೀಟಿಯಕೂಡೆ ಮಂತ್ರಿ ೨೪

ಕೋಪವೆ ಮಾಗಧನವನ ಕೋಪಾಗ್ನಿಯ
ಲೋಪಿಸಿ ಬೂದಿಮಾಡುವೆನು
ಈ ಪಯೋಧಿಯೊಳಿದ್ದನೆಂಬ ಸೊಕ್ಕೈಸೆ ಸಾ
ಕಾ ಪೇತಿನಾಟವೇನೆಂದ ೨೫

ಓಲೆಮಾತ್ರವನೆಚ್ಚು ನೋಡುವೆನೋದಿಸಿ
ಕೇಳಲೊಡನೆ ಬಾರದಾಗ
ಮೇಲೆ ಹೇಳುವೆನವನಿಗೆ ತಕ್ಕ ಹರುವ ವಾ
ಗ್ಜಾಲವೇಕೀಗ ಸಾಕೆಂದ ೨೬

ಬಂದುದಷ್ಟರೊಳರ್ಕಕೀರ್ತಿಯ ಪೌಜೊಲ
ವಿಂದರಮನೆಯೊಳಗಾಯ್ತು
ಮಂದರಧೀರನು ಪಲ್ಲಕ್ಕಿಯಿಳಿದೋಜೆ
ಯಿಂದ ನಡೆದನರಮನೆಗೆ ೨೭

ನಾಳೆ ಯೋಚನೆಯುಂಟು ಮಂತ್ರಿ ಹೋಗೆಂದು ನೃ
ಪಾಲಕನಾತನ ಕಳುಹಿ
ಆಲಯದೊಳು ಹೊಕ್ಕು ನವಭದ್ರಶಾಲೆಯೊ
ಳೋಲಗಗೊಟ್ಟನರ್ತಿಯೊಳು ೨೮

ಸುತನ ತರಿಸಿಕೊಂಡು ನೋಡಿ ಮುದ್ದಾಡಿ ಸ
ಮ್ಮತದ ದಾದಿಯ ಕೈಗೆ ಕೊಟ್ಟು
ಸತಿಯರೆಲ್ಲರು ಬಂದು ಕಂಡರವರ ಮಂದ
ಸ್ಮಿತಮುಖದಿಂದ ನೋಡಿದನು ೨೯

ತೆಳ್ಳುಸುರೊಪ್ಪ ಚಚ್ಚಿ ಹೆಚ್ಚಿ ಮೈಬಾಡಿದ್ದು
ದಲ್ಲಲ್ಲಿ ಮೊಗ ಬೆಮರಿದುದು
ಪಲ್ಲವ ಬಿಸಿಲು ತಾಗಿದವೊಲು ತನ್ನಿದಿ
ರಲ್ಲಿ ನಿಂದವರೊಳು ನುಡಿದ ೩೦

ಕುಳ್ಳಿರಿರೌ ಬಳಲ್ದಿರಿಯೆಂದನವರದ
ಕೆಲ್ಲರು ನಗುತ ಕುಳಿತರು
ಪಲ್ಲಕ್ಕಿಗಳ ಭರದಲ್ಲಿ ತಂದರೆ ದೇಹ
ವಲ್ಲಾಡಿ ನೊಂದುನೆಯೊಂದ ೩೧

ನಸುಕಂದಿ ಮುಖ ತೋರುತಿದೆ ನಿನಗಿಂದಿಷ್ಟು
ಬಿಸಿಲು ತಾಗಿದುದಹುಕಟೆ
ಪಿಸುಣರು ದಟ್ಟದ ಪನ್ನಂಗಗಳನಿವ
ಗೆಸಗಿತಿಲ್ಲಹುದೆಂದು ನೊಂದ ೩೨

ನೀವೊಮ್ಮೆ ಸುಮ್ಮನೆಯಿದ್ದರೆ ನಿಮ್ಮೊತ್ತಿನ
ಸೇವಕಿಯರಿಗು ಪರಾಕೆ
ಜೀವವಳಿ[1]ದರೆ[1] ನಂಬುಗೆವಂತರೆಂದನು
ನೋವಿಂದ ತನ್ನ ಪೆಂಡಿರೊಳು ೩೩

ಇಂದು ಸಮುದ್ರ ಸಮೀಪವೆಂದರೆ ನೋಳ್ಪೆ
ವೆಂದು ಬೇಗದಿ ಸಾಗಿರೆನಲು
ತಂದರವರು ನಾವು ಪೇಳ್ದಂತೆ ಬೆಸದವ
ರಿಂದ ತಪ್ಪಿಲ್ಲೆಂದರವರು ೩೪

---

1 ಪರೋ (ಖ ಚ) ವರೊ (ಕ)

ಈ ಪಯಣದೊಳೊತ್ತಿ ಬಂದೆವಲ್ಲದೆ ಹಿಂದ
ಣಾ ಪಯಣದೊಳೊದಗಿದೆವೆ
ತಾಪವಾಗಳೆ ನಿಮ್ಮ ಕಾಣುತ ಹೋದುದೆಂ
ದೋಸನೊಳಾಡಿದರೊಸೆದು ೩೫

ಎಂದರುಪ್ಪರಿಗೆಯನೇರಿ ಹಿಂಬೊತ್ತಿಗಾ
ನಂದದಿಂದಬ್ಧಿಯ ನೋಳ್ಪ
ಮಿಂದು ದೇವಾರ್ಚನಗೈದು ಭೋಜಿಪನೇಳಿ
ರೆಂದೆದ್ದ ನಿಜಿಲೆಯನೇರಿಸಿ ೩೬

ದೇವತಂತ್ರದೊಳೆಲ್ಲ ನಿಂಗುಟ್ಟು ತೊಟ್ಟು ಜಿ
ನಾನಾಸಕಡಿಯಿಟ್ಟರೊಸೆದು
ದೇವಪೂಜೆಯ ಮಾಡಿ ದಿವ್ಯಾನ್ನಪಾನವ
ಸೇವಿಸಿದರು ಲೀಲೆಯಿಂದ ೩೭

ಪರಿಮಳ ತಂಬುಲಗಳ ಕೊಂಡು ಶಯನಮಂ
ದಿರಕೆಯ್ದಿ ಸುಖನಿದ್ರೆಗೆಯ್ದು
ಸರಸ ವಿನೋದದಿ ಮಧ್ಯಾಹ್ನದಾಸರ
ಪರಿಹರಿಸಿದರು ಭೋಗಿಗಳು ೩೮

ಬಳಿಕ ಮೂರನೆಯ ಜಾವದೊಳವನೀಶನಾ
ನಳಿನಾಕ್ಷಿಯರು ಸಹವಾಗಿ
ನೆಲೆಮಾಡವೇರಿ ಮೇಲ್ಮನೆಯೊಳು ಕುಳಿತು ಪೆಂ
ಗಳಿಗಂಬುನಿಧಿಯ ತೋರಿದನು ೩೯

ಕಡಲ ಮುನ್ನರಿಯದ ಪೆಂಗಳಚ್ಚರಿವಟ್ಟು
ನಿಡುಬೆರಳಿಟ್ಟು ನಾಸಿಕಕ
ಮುಡಿಯೊಲೆದೊಲೆದು ನೋಡಿದರದರೊಂದು ಬ
ಲ್ಗಡಣೆಗೆ ಬಗೆಯೊಳು ಮೆಚ್ಚಿ ೪೦

ದಿಟ್ಟಿಗೆ ಮಿಗೆ ಹಾಯ್ದು ತೋರ್ಪ ಸಮುದ್ರದ
ಕಟ್ಟಳಲಿಗೆ ಚೋದ್ಯವಟ್ಟು
ಅಟ್ಟಹಾಸವ ಮಾಡುತೊಬ್ಬರೊಬ್ಬರ ಮೈಯ
ತಟ್ಟುತ ತೋರಿ ನುಡಿದರು ೪೧

ಅಟ್ಟುವ ತೆರೆಯು ಮುಂದೋಡುವ ತೆರೆಯು ಪೆ
ರ್ಚಿಟ್ಟದಂತೇಳ್ವ ತೆರೆಗಳ
ತೊಟ್ಟನೆ ಬಯಲಹ ತೆರೆಗಳನವರು ಕ
ಣ್ಣಿಟ್ಟು ನೋಡಿದರರ್ತಿವಡುತ ೪೨

ಎಡೆಗುತ್ತಿಗಳನಲ್ಲಿಗಲ್ಲಿ ನಿಂದದ್ರಿಯು
ನಿಡುಗಲ್ಲುಗಳನದರೊಳಗೆ
ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ
ಹಡಗುಗಳಿರವ ನೋಡಿದರು ೪೩

ತುಂತುರು ತೆರೆ ನೊರೆ ಸುಳಿ ಘುಳುಘುಳುರವ
ತೂಂತಿಟ್ಟು ಹೊಳೆವ ವಾರಿಧಿಯ
ಕಾಂತೆಯರೆಲ್ಲರೀಕ್ಷಿಸುತಿರೆ ಭೂಪಾಲ
ನಿಂತೆಂದು ನುಡಿದನವರೊಳು ೪೪

ಇಂದು ಮೊದಲುಗೊಂಡು ನಿಚ್ಚಲು ನೀವು ಪೆಂ
ಪೊಂದಿದಬ್ಧಿಯ ನೋಡಬಹುದು
ಇಂದಿಗೆ ಸಾಕೆಂದು ಕರೆದುಕೊಂಡರಸಿಯು
ರೊಂದಾಗಿ ಮಾಡದಿಂದಿಳಿದ ೪೫

ರಾಗದಿಂದಾ ದಿನ ಮತ್ತೆ ಕಾಲೋಚಿತ
ಭೋಗದೊಳಾ ರಾಯನಿರ್ದ
ಸಾಗರ ತಟದೊಳು ಪಡೆಯಿದ್ದುದಿದು ಪೂರ್ವ
ಸಾಗರದರ್ಶನ ಸಂಧಿ ೪೬

## ರಾಯಸೂಯಾರಂಭ ಸಂಧಿ

ಅಂದಿನ ಮರುದಿನ ದಳಪತಿ ಸಚಿವರ
ಮಂದಿರಕಾ ಚಕ್ರಿ ಕರೆಸಿ
ಮುಂದಣ ಕಾರ್ಯವ ಯೋಚಿಸಿ ನುಡಿದನ
ದೊಂದು ಲೀಲಾಮಾತ್ರವಾಗಿ ೧

ಬಿಡು ಮಾಗಧನ ಗೆಲ್ವುದಾವ ಗಹನವೆಲೆ
ಪಡೆವಳ್ಳ ಕೇಳ್ಮಂತ್ರಿ ಕೇಳು
ಕಡಲತಡಿಯೊಳೆನಗೊಮ್ಮೆ ಯೋಗದೊಳಿರ
ಲಡರುತಿರ್ದಪುದರ್ತಿಯೊಂದ ೨

ಪುರದಿಂದ ತಳರ್ದುದು ಮೊದಲಾಗಿ ಪಥದಲ್ಲಿ
ಪಿರಿದು ಯೋಗವ ಮಾಡಿತಿಲ್ಲ
ಶರಧಿಯೊತ್ತಿನೊಳೊಮ್ಮೆ ಯೋಗದೊಳಿರ್ದದ
ಪರಿಕಿಸಬೇಕು ನಾನೆಂದ ೩

ಬಿನ್ನಹ ದೇವ ಧ್ಯಾನವ ಮಾಳ್ಪೊಡಬ್ಧಿಯ
ಸನ್ನಿಧಿ ಲೇಸಹುದದಕೆ
ಚೆನ್ನಾಗಿ ಪಗೆಯ ಜಯಿಸಿ ಮತ್ತೆ ಮಾಳ್ಪುದು
ಮುನ್ನಲಿಂತಹುದೆಂದರವರು ೪

ಮಾಗಧ ನನಗೊಬ್ಬ ಪಗೆಯೆ ಸೂರ್ಯಗೆ ದೊಡ್ಡ
ಗೂಗೆಯ ಯೋಚನೆಯೇಕೆ
ಯೋಗದೊಳಿರಲೆನಗೆವೆಹಾರಲವಬಂದು
ತಾಗಲಾಪನೆ ನನ್ನ ಪಡೆಯು ೫

ತೃಣವ ಪರ್ವತವ ಮಾಳ್ಪಂತೆ ನೀವವನನೊ
ಕ್ಕಣಿಸುತಿಹಿರಿ ತೋರಮಾಡಿ
ಗಣಬದ್ಧರಿಗೆ ಬೆಸನಿತ್ತೊಂದು ಕ್ಷಣದೊಳಾ
ಬಣಗನ ತಂಗಳೆ ಹಿಡಿದು ೬

ಅದು ಬೇಡ ವಜ್ರಖಂಡಾಖ್ಯ ಚಾಪಕೆ ಕಿಡಿ
ಗೆದರುವ ಬಾಣವ ತೊಟ್ಟು
ಬುದಿಬುದಿನವನೂರ ನಡುವೆ ಕೆಂಡವ ಸೂಸಿ
ಗದಕಾಪುಗೊಳಿಸಲೆ ಪುರವ ೭

ಚಕ್ರಬೇಡವನಗೆ ಚಾಪಾಸ್ತ್ರ ಬೇಡೆನ್ನ
ವಿಕ್ರಮುದವಸು ಮಕ್ಕಳೊಳು
ಆಕ್ರಮಿಸಿಲ್ಲಿಗೆ ತರಿಸಿಕೊಂಡೆನಗೆ ಪಾ
ದಾಕ್ರಾಂತಗೆಯ್ಸಿ ನೂಂಕಿಸಲೆ ೮

ಅಹಹ ನೋಡವನಿಂದು ಬಿರಿಸಾಗೆ ಮುಂದಿನ್ನು
ಗುಹೆಯೊಳಗೆರಡು ಪೆರ್ಮೊರೆಯು
ವಹಿಸಿ ದಾಂಟುವ ಪರಿಯೆಂತೆಂದು ನುಡಿದನು
ಗಹಗಹಿಸುತ ಚಕ್ರಧರನು ೯

ಅದರಿಂದ ನನಗಿದು ತೋರವಲ್ಲಿದಕೆ ನೀ
ವೆದೆಹಾರಗೊಳ್ಳದೊಪ್ಪಿಹುದು
ಉದಧಿಯೊತ್ತಿನೊಳೊಮ್ಮೆ ಪರಮಾತ್ಮಯೋಗ ಸಂ
ಪದವ ನೋಡುವೆನು ನಾನೆಂದ ೧೦

ಒಂದಂಬನೆಚ್ಚವನೊಳಗ ನೋಡುವೆನುಗು
ರಿಂದ ಹೋಹದಕೇಕೆ ಕೊಡಲಿ
ಬಂದರೊಂದೊಳ್ಳಿತು ಬಾರದರೆರಡೊಳ್ಳಿ
ತೆಂದು ತೋರುವೆನೆನ್ನ ಪರಿಯ ೧೧

ಕರ್ಮಾಳಿಗಳ ಗೆಲ್ವರೆನಗೆ ಯೋಚನೆಯೈಪೆ
ಪೆರ್ಮಡುವಿನ ಮಧ್ಯದಲ್ಲಿ
ಕೂರ್ಮನಂತಿರ್ದನ ಗೆಲ್ವರೊಂದೆಣಿಕೆಯೆ
ಮರ್ಮಜ್ಞರಲ್ಲವೆ ನೀವು ೧೨

ಧ್ಯಾನದೊಳಗೆ ಮೂರು ದಿನವಿದ್ದು ಮರುದಿನ
ನಾನವಗೊಂದಂಬನೆಚ್ಚು
ಈ ನಿಳಯಕೆ ಬಹೆನಿದು ರಾಜಯೋಗಾಂಗ
ಸೇನೆ ಜತನ ಹೋಗಿರೆಂದ ೧೩

ಉಡುಗೊರೆಯಿತ್ತವರಿಬ್ಬರ ಬೀಳ್ಕೊಟ್ಟ
ನೊಡನೆ ಸಾಗರದೊತ್ತಿಗೆದ್ದ
ಬಡಗಿಯೊಡ್ಡಿದ ಗೃಹದೊಳು ಮೂರು ದಿನ ಯೋಗ
ವಿಡಿದಿದ್ದನಾ ರಾಜಯೋಗಿ ೧೪

ನೇಮಿಸಿ ಯಮ ನಿಯಮಾಸನ ಪ್ರಾಣಾ
ಯಾಮ ಪ್ರತ್ಯಾಹಾರ ಧ್ಯಾನ
ಕೋಮಲ ಧಾರಣೆ ಸುಸಮಾಧಿಯೆಂಬ ಯೋ
ಗಾಮೃತಾಷ್ಟಾಂಗವ ಬಗೆದ ೧೫

ಮೂರು ದಿವಸ ಮೂರು ಗಳಿಗೆಯಾಗಿದ್ದುದು
ತೋರಿತಿಲ್ಲದರಾಗ್ನಿ ನೃಪಗೆ
ಮೂರು ಲೋಕದ ಸಾರವೆನಿಪಾತ್ಮಸುಖದೊಳಾ
ನೀರನೋಲಾಡಿ ತಣಿದನು ೧೬

ತೀರಕೆ ಬೋನಗುಡಿಕೆ ಬರೆ ಮರುದಿನ
ಪಾರಣೆಗೈದು ವಿಶ್ರಮಿಸಿ
ಧೀರರ ದೇವ ಮೂರನೆಯ ಜಾವದೊಳು ಪೊಂ
ದೇರೇರಿ ನಡೆದನಬ್ಧಿಯೊಳು ೧೭

ಧ್ವಜ ಘಂಟೆ ಕಲಶ ಪೂಮಾಲೆಯ ಶೃಂಗಾರ
ದಜಿತಂಜಯವೆಂಬ ರಥವ
ಅಜಡ ಸಾಂಬ್ರಾಣಿಗಳೀರೈದು ತೆಗೆಯೆ ಭೂ
ಭುಜ ಗಮಿಸಿದನೋಜೆಯಿಂದ ೧೮

ಕೆಲದೊಳು ಗಣಬದ್ಧನೊರ್ವ ಸಾರಥಿಯಾಗಿ
ಸೆಳೆದೆತ್ತಿ ಹಾಯೆಂದು ನಡಸೆ
ನೆಲದ ಮೇಲೊಯ್ವಂತೆ ಜಲದಮೇಲೊಯ್ದುವಾ
ಜಲಗಾಮಿ ವಾಜಿಗಳೊಸೆದು ೧೯

ಮುಂಗಡೆಯೊಳು ಬಂದು ತಾಗುವ ಹಲವು ತ
ರಂಗಮಾಲೆಗೆ ಮೊಗವೆತ್ತಿ
ಮುಂಗಾಲ ಮಡಿದು ಹಿಂಗಾಲ್ನೀಡಿ ರಥವ ತು
ರಂಗಮಾಲೆಗಳು ತೆಗೆದುವು ೨೦

ಚೆಂಗಚೆಂಗನೆ ತೇಜಿ ತೆಗೆಯೆ ದ್ವಾದಶಯೋಜ
ನಾಂಗಣಪರ್ಯಂತ ಹರಿದು
ನಂಗಲ್ಲನಿಳುಹಿದ ಹಡಗು ನಿಲ್ವಂತೆ ರ
ಥಾಂಗ ನಿಂದುದು ತೊಟ್ಟನಲ್ಲಿ ೨೧

ಹಿಂದೆಯವನು ನಿನ್ನ ಕಂಡರೋಡುವನಿನ್ನು
ಮುಂದೆಯ್ದಬೇಡವೆಂದಬ್ಧಿ
ಬಂದು ಕಾಲ್ವಿಡಿದು ನಿಲ್ಲಿಸಿದಂತೆ ನಿಂದುದಾ
ಹೊಂದೇರು ಹರಿಯದೆ ಮುಂದೆ ೨೨

ನಿಡುಬಿಲ್ಲ ರಥದಮೇಲೂರಿ ದಕ್ಷಿಣದೊಂದು
ತೊಡೆಸೋಂಕಿ ಬಾಗಿಸಿ ಹೆದೆಯ
ಎಡಗೈಯೊಳೇರಿಸಿ ನೀವಿ ಜೇವಡೆದನು
ಸಿಡಿಲ ವೀಣೆಯ ಮುಟ್ಟಿದಂತೆ ೨೩

ಆಕರ್ಣಪರ್ಯಂತ ಬಾಣವ ತೆಗೆದುಬ್ಬಿ
ಭೂಕಾಂತ ಸರಿತಗೊಟ್ಟೆಚ್ಚ
ಆಕಾಶದೊಳು ಬಾಣ ಚುಮ್ಮ್ರ ಭೋರ್ಘಯ್ಯೆಂದು
ಭೀಕರಿಸುತ ಹೋದುದತ್ತ ೨೪

ಹೂಂಕರಿಸಿದ ರಾಯನಾರ್ಭಟೆಗಾ ಬಿಲ್ಲ
ಟಂಕಾರದಾರ್ಭಟೆಗಬ್ಧಿ
ಧಿಂಕಿಟ್ಟು ಗಗನಕೆದ್ದುದು ಕೊಳವಿಯೊಳೊಡೆ
ಬೆಂಕಿ ನಾಲಗೆ ನೀಡುವಂತೆ ೨೫

ಕಟಕದೊಳಿದ್ದಾನೆ ಕುದುರಿ ಬೆದರಿ ಲಟ
ಲಟಿಸುತತ್ತಿತ್ತಲೋಡಿದುವು
ತಟವನುಚ್ಚಳಿಸಿತು ಕಡಲು ಮಂತಿಟ್ಟರೆ
ಘಟದ ಮೊಸರು ಚೆಲ್ಲುವಂತೆ ೨೬

ಚಿರುಗುಟ್ಟುತಾ ಬಾಣ ಪೋಗಿ ಮಾಗಧನಿದ್ದ
ಹೊರಗಣೋಲಗದ ಶಾಲೆಯೊಳು
ನಿರಿಸಿದ ಕಂಭಕೆ ತೊಟ್ಟನೆ ನೆಟ್ಟಿತು
ಬರಸಿಡಿಲಂತಿರಾರ್ಭಟಿಸಿ ೨೭

ಝಲ್ಲನೆ ಸಭೆ ಕೆದರಿತು ಹುಲಿ ಬರೆ ಕಂಡ
ಹುಲ್ಲೆಯ ಹಿಂಡಿನಂದದೊಳು
ಬಲ್ಲಿದನಲ್ಲವೆ ಮಾಗಧಾಮರನಿದ್ದ
ನಲ್ಲಿ ತನ್ನಯ ಗದ್ದುಗೆಯೊಳು ೨೮

ಉಳುಕುಬಿಟ್ಟೋಡನೆಲ್ಲರೊತ್ತಿಗೆ ಬಂದರು
ಹಿಳುಕಿನೋಲೆಯ ತನ್ನಿರೆಂದ
ಆಳುಕುತಳುಕುತೊಬ್ಬನದರೊತ್ತಿಗೆಯ್ತಂದ
ನೆಳಸಿ ಕೊಟ್ಟನು ಕರಣಿಕಗೆ ೨೯

ಕರಣಿಕನೋದಿದೊಡನೆ ಶ್ರೀಮನ್ಮಹಾ
ಪುರುಜಿನೇಂದ್ರನ ಸುಕುಮಾರ
ಗುರುಹಂಸನಾಥಭಾವಕೆ ಸೊಕ್ಕಿದರಿರಾಯ
ಗಿರಿವಜ್ರದಂಡ ಪ್ರಚಂಡ ೩೦

ಮಾರ್ಮಲೆವರಿರಾಯಮೇಘರ್ಝಂಝಾನಿಲ
ದುರ್ಮುಖರಾಯಜಜ್ಝಾರ
ಕರ್ಮಕೋಳಾಹಳ ಮೃತ್ಯುಕೋಳಾಹಳ
ಧರ್ಮಪಾಲಕ ಪ್ರಜಾಪಾಲ ೩೧

ಭರತಚಕ್ರೇಶ್ವರನೊಲವಿಂದ ನಮ್ಮ ಕಿಂ
ಕರ ಮಾಗಧನಿಗೆ ನಿರೂಪ
ಸರಿತದೊಳಗೆ ನಾಳೆ ಬಂದೆಮ್ಮ ಕಾಣ್ಬುದು
ಪರಮಶಾಸನವೆಂದು ಮುಗಿದ ೩೨

ಕೇಳುತ ಕಿಡಿಕಿಡಿಯಾಗಿ ಮಾಗಧನು ಮೈ
ತೂಳವೆದ್ದಾಡುಗಚ್ಚಿದನು
ಸೀಳು ಸೀಳೋಲೆಯ ಸುಡು ಸುಡೆಂದನು ತನ್ನ
ಬಾಳು ಸೀಳ್ಸಿಡು ಸುಡೆಂಬಂತೆ ೩೩

ಹಲ್ಲ ಕಡಿದು ಕಣ್ಣ ಕೆಂಪೇರಿ ತುಂಬುರ
ಗೊಳ್ಳಿಯಂತುರಿ ಛಿಟಿಛಿಟಿಸಿ
ಅಲ್ಲಾಡಿ ಮೀಸೆ ಸೆರೆಸು ನೋಡಿ ನುಡಿದನು
ಕೊಲ್ಲುವಂತದನೋದಿದವನ ೩೪

ಎಲ್ಲಿಯ ಭರತಗಿರತನಿವನೆನ್ಮ ಬ್ಧಿ
ಯಲ್ಲಿಯ ಭರತವಿಳಿತವೊ
ಚಲ್ಲಬಡಿವೆ ತನ್ನ ಸೇನೆಯ ಕರೆಯೊ ನ
ಮ್ಮೆಲ್ಲ ವ್ಯಂತರಿಗರನಿಂದ ೩೫

ಕಿಂಕರನೆ ನಾನು ತನಗೆ ತನ್ನೋಲೆಯೊಂ
ದಂಕೆನಿರೂಪವೆ ನನಗೆ
ಬಂಕದ ಕಡಲೊಳಿಪ್ಪವರೊಕು ಪ್ರೊಡವಿಯ
ಡೊಂಕರಿಂತುಸುರ್ವುದು ಸೊಕ್ಕು ೩೬

ಕೂಪರು ಸಚಿವರಾ ಸಮಯದೊಳವನ ಸ
ಮೀಪದೊಳಿರ್ದವರವನ
ಕೋಪ ಶಂಪಹಂತೆ ನುಡಿದರು ತಂತ್ರಕ
ಲಾಪವರಿದು ಕಾರ್ಯವರಿದು ೩೭

ಓಲಗ ಹರಿಯಲಿ ನವಗೆ ಬೆಸನ ಕೊಡು
ಮೇಲೆಮ್ಮ ನೋಡೆಂದರದನು
ಲಾಲಿಸಿ ಕುಳಿತನು ಹರಿದುದೋಲಗ ತನ್ನೊ
ಳಾಲೋಚನೆಯ ಮಾಡಿದರು ೩೮

ಮುನಿಸ ಬಿಸುಡು ನಮ್ಮ ನುಡಿಗೇಳು ನೀನರ
ಮನಯೊಳಗಿರು ನಾವು ಮಾಳ್ಪ
ಘನತೆಯ ನೋಡು ಭೂತಳವೆಲ್ಲ ಮೆಚ್ಚಿ ನಿ
ನ್ನನೆ ಕೀರ್ತಿಪಂತೆ ಮಾಡುವೆವು ೩೯

ಎನೆ ನಸುನಕ್ಕಿನ್ನು ಮುನಿಸಿಲ್ಲ ಪೇಳಿ ನಿ
ಮ್ಮನುವಾನವೇನೆಂದು ಕೇಳ್ದ
ಮನಸು ತಂಪಾದುದನರಿದು ಮತ್ತ್ರರು ಮೆ
ಲ್ಲನೆ ನುಡಿದರು ಕಾರ್ಯದನುವ ೪೦

ಭರತಚಕ್ರೇಶ್ವರ ಸಾಮಾನ್ಯನಲ್ಲ ದೇ
ವರದೇವನಾತ್ಮಜನವನ
ಪರಿಯ ಮಹಾಪ್ರಭು ನೀನೆ ತಿಳಿಯಬೇಕು
ಮರುಳು ವ್ಯಂತರರರಿದಪರೆ ೪೧

ಜಾಣನಲ್ಲವೆ ನೀನು ನೋಡವನೆಚ್ಚೊಂದು
ಬಾಣ ನೆಟ್ಟಿದೆ ಕಂಭದಲ್ಲಿ
ಕಾಣೆಯೊಳಗ ಮುನ್ನಲಿಂತಾವನೆಚ್ಚನು
ಕಾಣಬಹುದಕೆ ಕನ್ನಡಿಯೆ ೪೨

ಅಲ್ಲಿದ್ದು ಕಂಭವ ತಾಗೆಂದು ಬಿಡೆ ಕಂಭ
ದಲ್ಲಿ ನೆಟ್ಟಿತು ಬಾಣ ಬಂದು
ಕೊಲ್ಲಿಸಿ ಮತ್ತೊಬ್ಬ ವಗೆಯ ತಾಗೆಂದೆಚ್ಚ
ರೊಲ್ಲದೊಲೆವುವೆ ಮಂತ್ರಾಸ್ತ್ರ ೪೩

ಓಲೆಯ ಕಟ್ಟಿ ಬಾಣವನೆಸೆವವನುರಿ
ಮಾಲೆಯ ಬಾಣವನಿಸನೆ
ಜ್ವಾಲೆಯನುಗುಳುವ ಚಕ್ರದಿಂದಿಡನೆ ಸ
ಮಾಲೋಚಿಸಿದೆಯೊಳು ನೃಪತಿ ೪೪

ತುಡುಕಬೇಕಹುದು ಕಾಳಗವನು ತನಗೆ ತ
ಕ್ಕೆಡೆಯೊಳಗಧಿಕನೊಳ್ಸೆಣಸಿ
ಬಡವ ಸೆರತು ನೋಡಿ ತಿವಿಯಿಸಿಕೊಂಡ ನಾ
ಣ್ನುಡಿಗೆಡೆಯಾಗಲುಬಹುದೆ ೪೫

ಕುಲವೃದ್ಧರಾಡಿದ ನುಡಿಯ ಲಾಲಿಸಿ ಚಕ್ರಿ
ಬಲುಶಕ್ತಿವಂತನೆಂದರಿದು
ಕಲಹ ಜಯಿಸದೆಂದು ಕಂಡೆದೆಯೊಳು ಸೋರಿ
ತಲೆಗುಸಿದನು ಮತ್ತೆ ನುಡಿದ ೪೬

ಎಂದರಿನ್ನೇನ ಮಾಡುವವೆಂದನಿದಕೊಲ
ವಿಂದ್ಯೆದಿ ಚಕ್ರೇಶನಡಿಗೆ
ವಂದನೆಮಾಡುವೆವೆಂದರಾದೀಶನ
ಕಂದನಲ್ಲವೆಯೆಂದರೊಡನೆ ೪೭

ಒಡಬಟ್ಟನದಕೆ ಮಂತ್ರಿಗಳಾಪ್ತರವನೊಡಂ
ಒಡಿಕೆಗೆ ಬಂದುದಕೊಲಿದು
ಪೊಡವಟ್ಟು ಕೊಂಡಾಡಿದರು ನೀತಿಗೇಶ್ವನಾ
ಡೊಡೆಯನ ಪೊಗಳದರಾರು ೪೮

ಇತ್ತ ಚಕ್ರೇಶ್ವರ ಬಾಣವನೆಚ್ಚಪೋ
ಲೊತ್ತಿನ ಸಾರಥಿ ರಥವ
ಒತ್ತಿ ತಿರುಹಿ ಕಟಕಕೆ ಮುಖಮಾಡಿ ಸಂ
ಪತ್ತು ಕ್ಷೆಮಗೆ ನಡೆಸಿದನು ೪೯

ಕಟಕವೆಲ್ಲವು ಜಯಜಯಯೆನುತಾ ವಾರ್ಧಿ
ತಟದಲ್ಲಿ ನಿಂದು ನೋಡುತಿರೆ
ನಟನವನಾಡಿದಂತೆತ್ತಂದು ರಥದಿಂದ
ಸ್ಫುಟದಿ ಲಂಘಿಸಿದನಾ ಚಕ್ರಿ ೫೦

ಕವಿಗಳು ಕೀರ್ತಿಸೆ ಪಾಠಕರೋದೆ ಹ
ಸ್ತವನೆತ್ತಿ ಭಟ್ಟರುಗ್ಗಡಿಸೆ
ಅವಧಾನ ಪಾದ ಪರಾಕೆಂಬ ವೇತ್ರಾಂಕ
ರವದೊಳೊಯ್ಯನೆ ಪಜ್ಜೆಯಿಟ್ಟ ೫೧

ಅಲ್ಲಲ್ಲಿ ಕೆಲಬರ ಕೈಸನ್ನೆ ಕಣ್ಸನ್ನೆ
ಮೆಲ್ಲುಸುರಿಂದ ಬೀಳ್ಕೊಡುತ
ಮೆಲ್ಲಮೆಲ್ಲನೆ ನಡೆದೆಲ್ಲರ ಕಳುಹಿ ಭೂ
ವಲ್ಲಭ ಹೊಕ್ಕನು ಗೃಹವ ೫೨

ರಾಣಿಯರೆಲ್ಲ ನಿವಾಳಿಯನಿಟ್ಟೆಚ್ಚ
ಮಾಣಿಕದಾರತಿಯೆತ್ತಿ
ಪ್ರಾಣೇಶನಡಿಗೆರಗಿದರೊಂದು ಪರಮಕ
ಲ್ಯಾಣವನೇನೆಂಬೆನಾಗಿ ೫೩

ತೋಯಧಿಯೊಳು ಹೋಗಿ ಬಂದ ಕಾರ್ಯವನು ತ
ನ್ನಾಯತಾಕ್ಷಿಯರೊಳು ನುಡಿದು
ರಾಯ ಮತ್ತು ಚಿತಲೀಲೆಯೊಳಿರ್ದನಿಲ್ಲಿಗೆ
ರಾಯಸದಂಬೆಚ್ಚ ಸಂಧಿ ೫೪

# ಆದಿರಾಜೋದಯ ಸಂಧಿ

ಉದಯದೊಳೆದ್ದು ಜಿನೇಂದ್ರಪೂಜೆಯ ಮಾಡಿ
ತ್ರಿದಶೇಂದ್ರನಂತೆ ಸಿಂಗರಿಸಿ
ಮದವದರಾತಿದಲ್ಲಣನು ಹಜಾರವ
ಟ್ಟದೊಳು ಎಂದೋಲಗವಾದ ೧

ಇದರಲ್ಲಿ ಕವಿ ಗಮಕಿಗಳು ವಾರಕರು ಚಿ
ತ್ರಪದಗದ್ಯಪದ್ಯವನೋದೆ
ಕದರುವ ಚಮರಗಳೊಗ್ಗಿನೊಳಾ ರಾಜ
ಮದನನಿದ್ದನು ವಿಲಾಸದೊಳು ೨

ಪಾಡುವ ಪ್ರಾತಃಕಾಲದ ರಾಗವ
ಪಾಡುಗಾರಿಕೆಯೊಳಾಲಿಸುತ
ಸೀಡುವೆಲೆಯ ಘಳಿಗೆಯ ಕೊಳುತೊರಗುವ
ಮೂಡೆಯನೊರಗಿ ಮೋಹಿಸಿದ ೩

ಒಂದೊಂದು ರಾಗಕೆ ಮೆಚ್ಚುತ ಪರಮಾತ್ಮ
ಸಂಪವ ಬಗೆವುತಿರ್ಪಾಗ
ಮಂದಾಕಿನಿಯೆಂಬ ದಾದಿ ಕುಮಾರನ
ತಂದುಕೊಟ್ಟಳು ಚಕ್ರಧರಗೆ ೪

ಚಂಡಿಮಾಡಿದನು ಸಣ್ಣರಸು ದೇವರ ಸಭಾ
ಮಂಡಲಕೆಯ್ದಿಸೆಂದೆನ್ನ
ದಂಡಿಸಿದರೆ ತಂದೆನೆಂದಿಂತು ದಾದಿ ವೈ
ಗೊಂಡು ನಿಂದಳು ಹೊರಸಾರಿ ೫

ಗಲಭೆಯೆಲ್ಲವು ನಿಂದಿತೆಲ್ಲರಾ ಕುವರನ
ಚೆಲುವನೀಕ್ಷಿಸುತಿದ್ದರಾಗ
ಒಲದ ತೊಡೆಯಮೇಲೆ ಮಗನ ಕುಳ್ಳಿರಿಸಿಕೊಂ
ಡೊಲಿದು ಮುದ್ದಾಡಿಸುತಿರ್ದ ೬

ತಂದೆಯ ಚೆಲ್ವೆ ತಂದೆಯ ರೂಪೆ ತಂದೆಯೊಂ
ದಂದವೆ ತಂದೆಯ ನೋಟ
ತಂದೆಯಚ್ಚಿನೊಳೊತ್ತಿದಂತಿರ್ದನಾ ರಾಜ
ನಂದನ ತಂದೆಯಂಕದೊಳು ೭

ಅರಳೆಲೆ ಮಾಗಾಯಿ ಕುಂಡಲ ಹಸ್ತದ
ಮುರಿ ಮಣಿಮಯದುಡಿದಾರ
ಬೆರಳುಂಗುರ ಗೆಜ್ಜೆಯಂದುಗೆ ಮೆರೆದುವಾ
ಭರತರಾಜೇಂದ್ರನಾತ್ಮಜಗೆ ೮

ತೊಡೆಯಮೇಲಿಟ್ಟು ಮಗನ ನೋಡಿ ಮಂಡೆಯ
ತಡಹುತ ಮುತ್ತ ಕೊಡುವನು
ಒಡನೆತ್ತಿಕೊಂಡೆದೆ ತುಂಬಲಪ್ಪುವನು ಬೊ
ಟ್ಟಿಡುವನು ಪಣೆಯೊಳಾ ನೃಪತಿ ೯

ಮೈಯ್ಯೆಲ್ಲ ಗುಡಿಗಟ್ಟಿ ತಕ್ಕಿಸಿಕೊಂಡು ಚೆ
ಲ್ವಯ್ಯ ಚೆನ್ನಾನೆಯೆಂದೆಂಬ
ಕೆಯ್ಯಕನ್ನಡಿಯಂತೆ ತೊಡೆಯಮೇಲಿಟ್ಟು ಮ
ತ್ತೊಯ್ಯನೆ ನೋಡಿ ನಗುವನು ೧೦

ತಂದೆಯ ಕೊರಳನೆದ್ದಪ್ಪುವ ಕಿರುಮೆರ
ಳಿಂದ ಕೊರಳ ಮಣಿಗಳನು
ಒಂದೆಂಟು ಹತ್ತೆರಡೆಂದು ತಪ್ಪೆಣಿಸುವ
ನಂದನಗರಸುಬ್ಬಿ ನಗುವ ೧೧

ಆದಿತೀರ್ಥಂಕರ ಎನ್ನರ್ಕಕೀರ್ತಿಯೆಂ
ದೋದಿಸುವನು ತನ್ನ ಮಗಗೆ
ಆದಿಂಕರನೆಂಬನಾ ಬಾಲನದಕೆ ವಿ
ನೋದದಿ ನಗುವನಾ ರಾಯ ೧೨

ಅಣ್ಣ ಚಿದಂಬರಪುರುಷ ಎನ್ನೆಂದಾಗ
ಬಣ್ಣಿಸಿ ಕಲಿಸಿಕೊಡುವನು
ಚಿಣ್ಣ ಚಿಂಬರಪೂಸಯೆಂಬನದಕೆ ಹೊಟ್ಟೆ
ಹುಣ್ಣಾಗೆ ನಗುವನಾ ಚಕ್ರಿ ೧೩

ನೋಡಣ್ಣ ಮುಂದಿದ್ದರಾರೆಂದು ದೊರೆಗಳ
ಕಡೆ ತೋರುವನು ಬಾಲಕಗೆ
ನೋಡುತ ಶಿಶು ಹಸ್ತದೊಳು ತೋರಡೆತಗಾಲ
ನೀಡಿ ತೋರುವುದು ಭೂಭುಜರ ೧೪

ಪಾದದೂಳಿಗದವರೆಂದು ನಮ್ಮೆಲ್ಲರ
ಪಾದಪದ್ಮದಿ ಸೂಚಿಸಿದನು
ಆದಿಚಕ್ರಿಯ ಸುತಗದು ಜಾತಿಸಹಜವೆಂ
ದಾ ದೊಡ್ಡ ದೊರೆಗಳಾಡುವರು ೧೫

ಜಾಣರಲ್ಲವೆ ರಾಜರೆಲ್ಲರಾಲೋಚಿಸಿ
ಕ್ಷೋಣೀಶನೊತ್ತಿಗೆ ಬಂದು
ಕಾಣಿಕೆಯಿಕ್ಕಿದರಾ ಶಿಶುವಿಗೆ ತಮ್ಮ
ಪ್ರಾಣರಕ್ಷಕನೀತನೆಂದು ೧೬

ತರಳಗೆ ಕೈಕಾಣ್ಕೆ ಬೇಡವೆಂದನು ಚಕ್ರಿ
ಧರಣಿಪಾಲರು ಬೇಡಿಕೊಂಡು
ಇರಬೇಕು ಸ್ವಾಮಿ ನಮ್ಮಯ ಸೇವೆಯಿಷ್ಟೆಂದು
ಹರುಷದಿ ಕಾಣ್ಕೆಯಿಕ್ಕಿದರು ೧೭

ಕಳುಹಣ್ಣ ನಿನಗೆ ಕಾಣಿಕೆಯಿಕ್ಕಿ ಕೈಮುಗಿ
ದೆಳಸಿ ನಿಂದಿರ್ದರನೆಂದ
ತಲೆಯೊಲೆದೊಲೆದು ಕೈಯಾಡಿಸಿ ಕಳುಹಿತಾ
ಯೆಳೆಗೂಸಿಗದು ಜಾತಿಸಹಜ ೧೮

ಅಂತಲ್ಲವಣ್ಣ ವೀಳೆಯವ ಕೊಟ್ಟೆಲ್ಲರ
ಸಂತೋಷದೊಳು ಕಳುಹೆಂದ
ತಾಂ ತೆಗೆದವರ ಮೇಲೆಲೆಯ ಚೆಲ್ಲಿತು ಶಿಶು
ಮುಂತೆಲ್ಲ ಕುಳಿತರರ್ತಿಯೊಳು ೧೯

ಈ ರಾಶಿ ಹೊನ್ನ ನಿನ್ನಾಗಿರ್ದವಣ್ಣಯೆಂ
ದಾರಯ್ದನಾ ಪುತ್ರನೊಳಗ
ಸಾರನಿಂದಿರ್ದ ಸೇವಕರ ತೋರಿತು ಶಿಶು
ಭೂರಾಮ ವಿಸ್ಮಯಬಟ್ಟ ೨೦

ಬೀಜಕೆ ಬಿಡುವುದ ಹೀಚಿನೊಳರಿಯೆಂಬು
ದೀ ಜಗದೊಳಗುಳ್ಳ ಗಾದೆ
ರಾಜ ನಿನ್ನ ಮಗನೊಳ್ತೋರಿತೀತನೆ ಜಾಗ
ರಾಜಾಗ್ರಣಿಯೆಂದರೊಸೆದು ೨೧

ಬುಧರಿಂಗೆ ಸೇವಕರಿಗೆ ಹೊನ್ನ ಕೊಡಿಸಿ ವಾ
ಜ್ಞಧುರಗೋಷ್ಠಿಯೊಳೊಪ್ಪುವಾಗ
ಒದರಿತಾ ದಿಕ್ತಟವೆನೆ ವಾದ್ಯರವದಿ ಮಾ
ಗಧನ ಬರವು ತೋರಿತೊಡನೆ ೨೨

ಮಂದಾಕಿನಿಯ ಕರೆದು ಕುವತನ ಕೊಟ್ಟು
ಮಂದಿರಕವಳ ಬೀಳ್ಕೊಟ್ಟು
ಮಂದರದಂತೆ ತಾನೋಲಗವಾದನು
ಮಂದಿಯಿದ್ದುದು ಗವುಕದೊಳು ೨೩

ರಾಹುಮುಖನು ಘೊಡ್ಡ ಕಂಗಳವನು ದೀರ್ಘ
ದೇಹಿ ಡೊಳ್ಳೊಡಲ ಕರಿಕನು
ಸಾಹಸಿ ಮಾಗಧ ಮಣಿಮುತ್ತಾಭರಣದ
ಮೋಹರದೊಳು ಬರುತಿರ್ದ ೨೪

ಅಲ್ಲಲ್ಲಿ ನಿಲ್ಲುತ ಮೈಯೋಸರಿಸಿ ಕುಗ್ಗಿ
ತೊಲ್ಲಗೊತ್ತಿಗೆ ಬರುತಿಹನ
ದಳ್ಳಿಸುತಿಹ ಕೋಪದಿಂದ ಭೂಪತಿ ನೋಡಿ
ಸೊಲ್ಲಿಸಿದನು ಕರಿಣಮ್ಮೊಳು ೨೫

ಇವನೊ ಮಾಗಧನೆಂದು ಸಂಧಿ ವಿಗ್ರಹಿಗಳ
ನವನೀಶನೊಲಿದು ಕೇಳಿದನು
ಇವನೀಗ ಸ್ವಾಮಿ ಮಾಗಧನು ದೊಡ್ಡವನು ನೀ
ನವಧರಿಸೆಂದರಾಗವರು ೨೬

ಎಲವೊ ಮಾಗಧ ನಿನ್ನ ಹಿರಿದಾಗಿ ಪಂಥವ
ಕೆಲದೆ ಕೊಂಡಹುದೊ ಗುಲಾಮ
ಜಲಧಿಯೊಳಿದ್ದೆಷ್ಟು ಸೊಕ್ಕೆ ವಿನಯದಿಂದು
ಯೆಳೆನಾಸೆ ತಿದ್ದುತ ನುಡಿದ ೨೭

ಗಡಗಡನಾಗಳೆ ನಡುಗಿದುದಕೆ ಬಲ
ಯೆಡದಕೈಯೊಳು ತನ್ನ ಬಾಯ
ಬಡಿದುಕೊಂಡನು ತಪ್ಪು ತಪ್ಪೆನ್ನ ರಕ್ಷಿಸೆ
ನ್ನೊಡೆಯಯೆಂದೆನುತಡ್ಡಗೆಡೆದ ೨೮

ನಕ್ಕನು ಚಕ್ರಿಯೇಳೇಳಂಜಬೇಡೆಂದ
ದಿಕ್ಕನೆದ್ದಿವ ಮುಂದೆ ನಿಂದು
ಮುಕ್ಕೊಡೆಯೊಡೆಯನಾತ್ಮಜ ನಿನ್ನ ಕಡಾರ
ಸೊಕ್ಕುಡುಗದು ಸ್ವಾಮಿಯೆಂದ ೨೯

ಭಾವಿಯೊಳಗೆ ಕಪ್ಪೆ ಬಾಳ್ವಂತೆ ನಾವೊಂದು
ದೀವಿಯೊಳಿದ್ದವರ್ಸಿನೆ
ದೇವ ನಿನ್ನಯ ತೇಜದೇಳ್ಗೆಯ ಬಲ್ಲೆವೆ
ಗಾವಿಲರೆಂದರೇನಾಯ್ತು ೩೦

ಭೋಗ ಯೋಗದೊಳಿದ್ದು ಮುಕ್ತನಾಗುವ ಮೋಕ್ಷ
ಭಾಗಿಗಾರೆಣೆ ನಿನಗೆಂದು
ಮಾಗಧೇಂದ್ರನು ನಿಂದು ಚಕ್ರವರ್ತಿಯ ಭಟ್ಟ
ಮಾಗಧರಂತೆ ಕೀರ್ತಿಸಿದ ೩೧

ಭೂಮಿಪಾಲರು ರಾಜಪುತ್ರರದಕೆ ಮೆಚ್ಚಿ
ಸ್ವಾಮಿಗುಳ್ಳುದನು ಕೀರ್ತಿಸಿದೆ
ಸ್ವಾಮಿಹಿತವನು ನೀನೆಂದು ಪ್ರೇಮದಿ ಮಾಗ
ಧಾಮರೇಂದ್ರನ ಪೊಗಳಿದರು ೩೨

ಅಷ್ಟರಮೇಲೆ ಚಕ್ರೇಶ್ವರನವನಿಗ
ಭೀಷ್ಟದೊಳಾಸನಗೊಡಿಸಿ
ಕಷ್ಟನೆಲ್ಲಿ,ತ್ತಮನ್ನೆ ನೀನು ಕುಳ್ಳಿರೆಂ
ದಿಷ್ಟು ವಾಕ್ಯವನೊಲ್ದು ನುಡಿದ ೩೩

ಬದುಕಿದೆ ಸ್ವಾಮಿಯೆಂದದಕೆ ಸಂತಸಬಡು
ತೊದಗಿ ನಿವಾಳಿಯನಿಟ್ಟ
ಇದು ಕಾಣ್ಕೆಯೆಂದು ಜಾಳಿಗೆಯನೊಡೆದು ಹೊನ್ನ
ಬುದಿಬುದಿನಡಿಗಳ್ಗೆ ಸುರಿದ ೩೪

ಬಾರ್ಪೆ ಮಾಗಧಯೆಂದು ಸನ್ನಿಧಿಗೆ ಗಂ
ಭೀರವಾಕ್ಯದೊಳೊಲ್ದು ಕರೆದು
ಧಾರಿಣಿಗುತ್ಕೃಷ್ಟವೆನಿಪ ಭೂಷಣಗಳ
ನಾ ರಾಯನುಡುಗೊರೆಯಿತ್ತ ೩೫

ಅಡಿಗೆರಗಿಸಿಕೊಂಬ ತೇಜವೊಂದಲ್ಲದೆ
ಒಡವೆಯಾಸೆಯೆ ಚಕ್ರಧರಗೆ
ಒಡನಿದ್ದ ನೃಪರೆಲ್ಲ ತಲೆದೂಗುವಂತವ
ಗುಡುಗೊರೆಯಿತ್ತು ಮನ್ನಿಸಿದ ೩೬

ಭವನವ ಹೊಕ್ಕಾನು ಬಪ್ಪೆನನ್ನಹನಾಳಿ
ನವನಿರಲೆಂದು ಮಾಗಧನು
ಧ್ರುವಗತಿಯೆಂಬನ ಕರೆಸಿ ಕಾಲ್ಗೆರಗಿಸಿ
ಅವನೀಶಗೊಪ್ಪಿಸಿಕೊಟ್ಟ ೩೭

ಪಾದಕೆರಗಿ ಮಂತ್ರಿಸಹಿತ ಮಾಗಧನತ್ತ
ಹೋದನು ಗೆದ್ದೆ ಹೋಯೆನಲು
ಆದುದು ಸಭೆಗೆಲ್ಲ ಪರಮಸಂತೋಷ ಭಾ
ಗ್ಯೋದಯನಿದ್ದನುಬ್ಬಿನೊಳು ೩೮

ಜಿನಜಿನ ಏನೆಂಬೆನಷ್ಟರೊಳೊಬ್ಬ ಮಾ
ನಿನಿ ರಾಯನರಮನೆಯಿಂದ
ಘನಕುಚ ಕುಣಿವುತ ನಗುತೋಡಿಬಂದು ರಾ
ಯನಿಗೆ ಕೈಮುಗಿದಳುಬ್ಬಿನೊಳು ೩೯

ಚಿತ್ತೈಸು ದೇವ ದೊಡ್ಡೊಸಗೆ ಕುಮಾರನು
ತ್ಪತ್ತಿಯಾದನು ನಿವಗಿಂದು
ಉತ್ತಮೋತ್ತಮನೆಂದರವಳಿಗಾಗಳೆ ಮೆಚ್ಚಿ
ಮುತ್ತಿನ ಹಾರವ ಕೊಟ್ಟ ೪೦

ಒಸೆದು ಮತ್ತವಳನೊತ್ತಿಗೆ ಕರೆದಾವಳು
ಬೆಸಲಾದಳೆಂದು ಕೇಳಿದನು
ಕುಸುಮಾಜಿಯರು ಸುಕುಮಾರನ ಪಡೆದರೆಂ
ದುಸುರಿದಳವಳು ಕರ್ಣದೊಳು ೪೧

ತೋರಣಗಟ್ಟಿತು ಗುಡಿಯೆದ್ದು ಕಟಕದಿ
ಭೋರೆಂದು ವಾದ್ಯ ಮೊಳಗಿತು
ಧಾರಿಣಿ ಮುಟ್ಟಿತಾಗಳೆ ಚಕ್ರಿಗಿಂದು ಕು
ಮಾರನೊಗೆದನೆಂಬ ವಾರ್ತೆ ೪೨

ಇದ್ದವರೆಲ್ಲರನುಚಿತದಿ ಬೀಳ್ಕೊಡು
ತೆದ್ದನು ಜಿನ ಶರಣೆನುತ
ಹೊದ್ದಿದನೊಲವಿಂದ ಹೆರುಗೆಯ ಮನೆಯನು
ಮುದ್ದಿನ ಮಗನ ನೋಡಿದನು ೪೩

ನಸುನಾಣ್ಚುತೀಕ್ಷಿಸಿ ತಲೆವಾಗಿ ಕುಳಿತಿರ್ದ
ಕುಸುಮಾಜಿಯೊತ್ತಿ ನೊಳೆಸೆವ
ಹಸುಳೆಯ ನೋಡಿ ಸಿದ್ಧೋ ರಕ್ಷತೆಂದು ಸಂ
ತಸದಿಂದ ಮಗುಳ್ದನಲ್ಲಿಂದ ೪೪

ಅರಸಿಯರೆಲ್ಲರು ನಲಿದಾಡುತೆಯ್ತಂದು
ಪುರುಷನಂ ಪ್ರಿಯಮೇಲೆ ಬಿದ್ದು
ವರಸುತನಾದನೆಂದುಲಿವುತೊಪ್ಪಿದರೊಂದು
ಪರಮ ಸಂಭ್ರಮವನೇನೆಂಬೆ ೪೫

ದಾನಾಭಿಷೇಕ ಪೂಜೆಗಳ ನಾಡೊಳಗೆ
ಪ್ರಧಾನ ಸೂಚಿಸಿ ನಡೆಸಿದನು
ಸೇನೆಯೊಳಗೆ ಸೇನಾಪತಿಯು ನಡೆಸಿದನೇ
ನಾ ನೃಪನೈಸಿರಿ ಬಡೆವೆ ೪೬

ಆ ದಿನದೊಳು ಜಾತಕರ್ಮವ ಮಾಡಿಸಿ
ದ್ವಾದಶದಿನದೊಳು ನೃಪತಿ
ಆದಿಜಿನನ ಪೆಸರವನಾದಿರಾಜನೆಂ
ದಾದರ ಮಿಗೆ ನಾಮವಿಟ್ಟ ೪೭

ನಾಮಕರ್ಮದ ದಿನದೊಳು ಮಾಗಧನು ತನ್ನ
ಸೀಮೆಯ ಸಂಪತ್ತುಗೂಡಿ
ಸ್ತೋಮದುಲುಪೆಗೊಡ ಸಂಭ್ರಮದೂಳು ಬಂದು
ಭೂಮಿಪತಿಯ ಕಂಡನೊಸೆದು ೪೮

ಮುಂದಣ ಪಯಣಕೆ ಬಹೆನೆಂದು ಹೋಗಿ ನೋ
ಡಿಂದಿಲ್ಲಿಗಿವನೊದಗಿದನು
ಎಂದೆಂದಿಗೆಮಗೆ ಮಾಗಧನೆ ಮಹಾ ಹಿತ
ನೆಂದು ನುಡಿದನಾ ಚಕ್ರೇಶ ೪೯

ಕಳುಹಿಸಿಕೊಂಡಾನು ಕಡಲೊಳ್ತಿಸೊಳು-ಕ್ಕೇಳ್ದೆ
ಸಲೆಕುಮಾರೋದಯೋತ್ಸವವ
ಉಲುಪೆಸಹಿತ ಬಹೆನೆಂಘೂರ್ಗೆ ಕ್ಕೋದೆನಾ
ಗಳೆ[1]ಮಗುಳ್ದನೆ[1] ಯೆಂದನ್ನವನು ೫೦

ಹೋಗು ನಿನ್ನಯ್ಯ ನ್ನಾಳಿನಪ್ಪ-ಕ್ಷಿತಿಪಕ್ಕೊಂಡು
ಸಾಗರದೊಳಗೆ ತೆಪ್ಪಗಿಪ್ಪು
ಆಗಲೆ ಸಂದಿತೆನ್ನೋಲಗಾತೆಂಕ್ಷನಾ
ಮಾಗಧೇಂದ್ರಗೆ ರಾಯ್ನಮೆಚ್ಚಿ ೫೧

ಸುಡು ಸುಡು ನಾಡಿನೊಳೇನುಂಟು ಸಿರಿ ನಿನ್ನ
ಪಡೆಯೊಪ್ಪುದೆ ಭಾಗ್ಯವೆನಗೆ
ಬಿಡೆನಿನ್ನು ನಿನ್ನಡಿಗಳನೆಂದನವನಾರೂ
ಬಿಡುವರಾ ಸೊಬಗನ ಕ್ಷಣಕೆ ೫೨

ಹುಟ್ಟಿದ ಶಿಶುವಿಷ್ಟು ಬಲಿಯಬೇಕೆಂದು- ಸಂ
ಘಟ್ಟಿಸಿ ದಂಡು ತೆರಳದೆ
ಬಿಟ್ಟ ಬೀಡಿನೊಳಾರು ತಿಂಗಳಿದ್ದನು ಹೊಸ
ಪಟ್ಟಣದೊಳಗಿಪ್ಪ ತೆರದಿ ೫೩

1. ಮಗುಳ್ದನೆ (ಖ) [ಮುಗುಳ್ದನು] ಮಾಗಧನ (ಕ,ಘ)

# ವರತನುಸಾಧ್ಯ ಸಂಧಿ

ಆರು ತಿಂಗಳಮೇಲೆ ದಂಡೆದ್ದುದಲ್ಲಿಂದ
ಚೀರಿಟ್ಟು ಭೇರಿ ಸೂಳೈಸೆ
ತೋರಲೆತ್ತಿದುವು ಪತಾಕೆ ಟೆಕ್ಕೆಯು ಬಾನ
ಕೇರಿತು ಪಡೆಯ ಕಾಲ್ದೂಳು ೧

ಮುಖರ ಮಾಗಧನ ಮೂಡಣ ವಾರ್ಧಿಯೊಳು ಗೆಲ್ದು
ನಿಖಿಳಸೇನೆಯ ಕೂಡಿಕೊಂಡು
ಸುಖಿಗಳೊಡೆಯ ಕಡಲೊತ್ತುವಿಡಿಯ ತೆಂಕ
ಮುಖವಾಗಿ ದಂಡೆತ್ತಿ ನಡೆದ ೨

ಒಂದು ರಥದೊಳು ಕಿರಿಯ ಕುವರನ ತೊಟ್ಟೆ
ಲೊಂದು ರಥದೊಳು ದೊಡ್ಡಣುಗ
ಮಂದಾಕಿನಿಯ ತೊಡೆಮೇಲೇರಿ ಬರೆ ಬಂದು
ದಂದರ್ಕಕೀರ್ತಿಯ ಪೌಜು ೩

ಮಾಗಿಯ ಬೇಸಗೆಯನು ಮಳೆಗಾಲವ
ನೀಗುತಲ್ಲಲ್ಲಿ ವಿಶ್ರಮಿಸಿ
ಸಾಗಿ ಹಲವು ಪಯಣದಮೇಲೆ ತೆಂಕಣ
ಸಾಗರವನು ಬಂದು ಕಂಡ ೪

ಪಾಳೆಯ ಬಿಟ್ಟಿತು ಕಡಲೊತ್ತಿನೊಳು ಮುನ್ನ
ಪೇಳಿದಷ್ಟಗಲದುದ್ದದೊಳು
ಸಾಲುಮಾತೇನು ಮುನ್ನಿನ ತೆರದೊಳು ಗೃಹ
ಜಾಲ ನಿರ್ಮಿಸಿತು ಸರ್ವರಿಗೆ ೫

ಕರೆಯೊಳು ನಿಂದು ರಾಜೇಂದ್ರ ಮಾಗಧನೆಲ್ಲಿ
ಕರೆಯೊಯೆನ್ನದ ಮೊದಲ್ಬಂದು
ಕರವ ಮುಗಿದು ಮುಂದೆ ಮಾಗಧ ನಿಂದನು
ಭರತೇಶ ನುಡಿದನಿಂತೆಂದು ೬

ಏನ್ನೈ ಮಾಗಧ ವರತನು ವ್ಯಂತರ
ನೀ ನೀರ ನಡುಕುರುವದೊಳು
ತಾನು ಕುರುಬನಂತೆ ಬೆರೆತುಕೊಂಡಿಹನಲ್ಲೈ
ನೀನವನೊಳಗ ಬಲ್ಲೆಯಲ್ಲೈ ೭

ನುನ್ನುನೆ ಬಂದೆಮ್ಮ ಕಾಣ್ಬನೊ ಬಾರದೆ
ಹೆಮ್ಮೆಯೊಳಿಪ್ಪನೊ ಅವನ
ನೊಮ್ಮೇನು ಹೇಳೆಂದರವನು ಚಕ್ರೇಶನ
ಸಮ್ಮುಖದೊಳಗಿಂತು ನುಡಿದ ೮

ದೇವ ನಿನಗೆ ಬೇರೆ ವೆಗ್ಗಳವಿಕೆಯೊಳಿ
ಲ್ಲಾ ವರತನು ತಾನು ಸುಮುಖ
ಸೇವೆಗೆ ನಾಳೆ ನಾನೊಡಗೊಂಡು ಬಪ್ಪೆನಿ
ದಾವ ಗಹನ ಸ್ವಾಮಿಯೆಂದ ೯

ಆದರೊಳ್ಳಿತು ಪೋಗು ನಾಳೆ ಬಾರೆಂದು ನಿ
ವೇದಿಸಿ ಬೀಳ್ಕೊಟ್ಟನವನ
ಆದರದಿಂದುಳಿದವರ ಬೀಳ್ಕೊಟ್ಟು ಪ್ರ
ಮೋದಿ ಹೊಕ್ಕನು ರಾಜಗೃಹವ ೧೦

ಸ್ನಾನ ದೇವಾರ್ಚನ ಭೋಜನ ಶಯನ ಲೀ
ಲಾನುವರ್ತನದೊಳಾ ದಿನವ
ಮೀನಲೋಚನೆಯರ ಮೇಳದೊಳರಸನ
ನೂನವೆಂದೆನೆ ನೂಂಕಿ ಕಳೆದ ೧೧

ಬೆಳಗಾಗೆ ನಿತ್ಯಕರ್ಮವ ತೀರ್ಚಿ ಬಂದು ಸ
ಲ್ಲಲಿತದೊಳೋಲಗವಾದ
ಇಳೆಯರಸುಗಳು ಕಾಣ್ಕೆಯನಿಕ್ಕಿ ಕಂಡು ಮುಂ
ದೆಳಸಿ ಕುಳ್ಳಿರ್ದರೊಪ್ಪದೊಳು ೧೨

ದೊಡ್ಡ ಭೂಭುಜರನೀಕ್ಷಿಸುತ ಗಾಯಕಶತಿ
ಗೆಡ್ಡವಾಗಿರೆ ಮೆಚ್ಚುಗೊಡುತ
ಒಡ್ಡೋಲಗಗೊಟ್ಟು ಕಡೆಯ ಹಜಾರದೊ
ಳೊಡ್ಡುದೋರಿರ್ದನಾ ನೃಪತಿ ೧೩

ಆದಿಜಿನನ ನೆನೆಯುತ ಹಂಸನಾಥನ
ಭೇದಿಸಿ ಬಗೆವುತಿರ್ಪಾಗ
ಆದಿರಾಜನನೊಬ್ಬ ಗಂಧಮಾಧವಿಯೆಂಬ
ದಾದಿ ತಂದಿತ್ತಳಾ ನೃಪಗೆ ೧೪

ಕೊಡೆಯ ಮೇಲಾದಿರಾಜನನಿಟ್ಟುಕೊಂಡು ಮೈ
ವಡಹುತ ನೃಪತಿ ನೋಡುತಿರೆ
ಸಡಗರದಿಂದರ್ಕಕೀರ್ತಿ ಸಿಂಗರಿಸಿ ಕಾ
ಲ್ನಡೆಯೊಳೆಯ್ತರುತಿರ್ದನಾಗ ೧೫

ಕಾಸೆ ಚಲ್ಲಣ ನಡುವಿನ ಸಣ್ಣ ಜನದಾಡೆ
ಮಾಸಾಳು ಕುಲ್ಲಾಯಿ-ತಿಲಕ
ಪೂಸಿದ ಗಂಧ ತಾವುಜ ಕುಡುಕಿನೊಳು ಕೋ
ಲ್ಬೀಸುತ ಬರುತಿರ್ದನಾಗ ೧೬

ಕಾಣುತ ರಾಯನರಿದನಿದು ಬಿಸದಕೆ
ರಾಣಿಯುರಿಟ್ಟಂದವೆಂದು
ಹೊಣಿಸಿ ತಾನೆಮ್ಮನೋಲೈಸಲೆಂಬ ಬಿ
ನ್ನಾಣವೆಂದೀಕ್ಷಿಸುತಿರ್ದ ೧೭

ಅಣ್ಣಾಜಿ ಬಹಾಗ ಕುಳಿತಿರಲಾಗದೇ
ಳಣ್ಣಾಯೆಂದನು ಚಿಕ್ಕಮಗನ
ಪೊಣ್ಣನಾ ಮಗನೆದ್ದನೊಡನೆ ಕೈಮುಗಿಯೆಂದು
ಬಣ್ಣಿಸಿಕೊಡಲು ಕೈಮುಗಿದ ೧೮

ಕಿರಿಯ ಕೈಮುಗಿಯೆ ಕೈಸನ್ನೆಯೊಳ್ನಲಿಸುತ
ಮೆರೆವ ಸಿಂಹಾಸನವೇರಿ
ಕಿರುರತ್ನವೊಂದ ಕಾಣ್ಕೆಯನಿಕ್ಕಿ ಕೈಮುಗಿ
ದುರೆ ತಂದೆಯೊತ್ತಿನೊಳ್ನಿಂದ ೧೯

ಅರ್ಕಕೀರ್ತಿಯ ಕಾಣುತಾದಿರಾಜನು ಕೂಡೆ
ಮಾರ್ಕೊಂಡು ಸೇವೆಗೆಚ್ಚೈಸಿ
ಬೇರ್ಕೆಗೈದೊಡನೆ ಕುಪ್ಪಸ ಚೀಸಾಡಿ ಸ
ಮರ್ಕೆಯೊಳಾಯತವಳೆದ ೨೦

ತೊನೆದಣ್ಣನಿಟ್ಟ ಕುಲ್ಲಾಯಿ ಚಲ್ಲಣ ಕಾಸೆ
ಯನು ಜವದಾಡೆಯ ನೋಡಿ
ತನಗಂತು ಬೇಕೆಂದು ನೆಡುವ ಮುಂಡೆಯ ಮುಟ್ಟಿ
ಜನಕಗೆ ತೋರಿ ಕಾಡಿದನು ೨೧

ಏನರ್ಕಕೀರ್ತಿಯಲ್ಲವೆಯವನೋಲೈಸೆ
ನೀನೊಡಂಬಡಬಹುದಣ್ಣ
ನೀನಾದಿರಾಜ ನನ್ನಪ್ಪಾಜಿಯಲ್ಲವೆ
ನಾನಂಜುವೆನು ಕುಳ್ಳಿರೆಂದ ೨೨

ಅದನವ ಕೇಳನಳುವನು ಚಂಡಿಯ ಮಾಳ್ಪ
ನದಕೊಬ್ಬ ಗಣಬದ್ಧಗರಸು
ಪದೆದು ಸೂಚಿಸಲವ ಸಿಂಗರಿಸಿದನು ಬೇ
ಗದೊಳರ್ಕಕೀರ್ತಿಯಂದದೊಳು ೨೩

ಬಲದ ದಿಕ್ಕಿನೊಳು ತಾನಣ್ಣನಂದದೊಳು ನಿಂ
ದೊಲವಿಂದ ಪಿತನನೀಕ್ಷಿಸುತ
ಒಲೆಯದುಲಿಯದೆ ಗಂಭೀರದೊಳಿರೆ ನೋಡಿ
ತಲೆತೂಗಿದರು ಸರ್ವನೃಪರು ೨೪

ಕುಳ್ಳಿರ್ದೈ ಬಾಲಕರಿವರೆದ್ದರೇಕೆ ನೀ
ವೆಲ್ಲರೆದ್ದಿರಿಯೆಂದು ನೃಪರ್ಗೆ
ಸಲ್ಲಾಪದೋರಿದನೀ ಮಹಾಭಾಗ್ಯವ
ನೆಲ್ಲಿ ಕಂಡಪೆವೆಂದರವರು ೨೫

ಒಂದು ಘಳಿಗೆ ನಿಂದು ನಮ್ಮನೋಲೈಸಿದ
ರಿಂದಿವರ್ಗೇನು ಸಂಬಳವೈ
ಅಂದವರಿದು ದಳಪತಿ ಪೇಳು ಮಂತ್ರಿ ಪೇ
ಳೆಂದು ರಾಜೇಂದ್ರ ಕೇಳಿದನು ೨೬

ಘಳಿಗೆಗೆ ಕೋಟಿ ವಿತ್ತವ ಹಿರಿಯರೆಸಿಗೆ
ಸಲಿಸಬೇಕೆಂದನಾ ಮಂತ್ರಿ
ಒಲಿದರೆ ಕೋಟಿಯು ಚಿಕ್ಕರಸಿಗೆ ಕೂಡ
ಸಲುವುದೆಂದನು ದಂಡನಾಥ ೨೭

ಆಗಲಿ ಘಳಿಗೆಗೊಂದೂನರೆ ಕೋಟಿಯು-
ನೀಗ ನೀವಿವರಿಗೆ ಸಲಿಸಿ
ಈ ಗಣಿತದೊಳೆ ಮುಂದೋಲೈಸಿದಾಗ ಲೇ
ಸಾಗೀವುದೆಂದು ನೇಮಿಸಿದ ೨೮

ಸಾಕಿನ್ನು ಬನ್ನಿರೈ ಜಾತಿವೀರರಿರಯೆಂ
ದಾ ಕುಮಾರಕರನಿಬ್ಬರನು
ಭೂಕಾಂತನೆರಡು ತೋಳಿಂದಪ್ಪಿಕೊಂಡರ್ತಿ
ಯೋಕುಳಿಯಾಡಿದನೊಡನೆ ೨೯

ಕರೆದಾದಿರಾಜನ ಗಂಧಮಾಧವಿಯ ಕೈ
ಗರಸನಿತ್ತೊಡನೆ ಬೀಳ್ಕೊಟ್ಟ
ಹಿರಿಯ ಕುವರನ ಮಂದಾಕಿನಿಗೊಪ್ಪಿಸು
ತರಮನೆಯತ್ತ ಬೀಳ್ಕೊಟ್ಟ ೩೦

ಜಲನಿಧಿಯೊತ್ತಿಗೆ ಬಂದು ವಿಮಾನದಿಂ
ದಿಳಿದು ಮಾಗಧನಂತೆ ತಾನು
ತಳೆ ಚವರವ ಮಾಣ್ದು ವರತನು ಕಾಲ್ನಡೆ
ಯೊಳು ಬರುತಿದ್ದನೋಜೆಯೊಳು ೩೧

ಇತ್ತರವಿಡಿದ ರಾಜರ ನಡುವವನೀಶ
ನೊತ್ತಿಗೊಯ್ಯಾರದೊಳೆಯ್ದಿ
ಚಿತ್ತೈಸು ವರತನುವಿವನೀಗ ಸ್ವಾಮಿಯೆಂ
ದೆತ್ತಿ ಕೈಮುಗಿದ ಮಾಗಧನು ೩೨

ಭಕ್ತಿಯೊಳ್ವರತನು ಪೊಸನಿವಾಳಿಯನಿಟ್ಟು
ವರೌಕ್ತಿಕಂಗಳ ಹಸ್ತತುಂಬಿ
ಶಕ್ರರಾಜೇಂದ್ರನ ಪಾದಪದ್ಮಗಳಿಗೆ
ಯುಕ್ತಿಯೊಳಭಿಷೇಕಗೈದ ೩೩

ಚಕ್ರೇಶನರಿದನೀ ವರತನು ಸುಮುಖನು
ವಕ್ರಿಯಲ್ಲೆಂದು ಮೆಚ್ಚಿದನು
ಸುಕ್ರಮವಾಯ್ತು ನೀ ಬಂದುದೇಕೇಳೆಂದು
ಪಕ್ರಮವಾಕ್ಯದೋರಿದನು [illegible]

ಇತ್ತ ಬರುತ್ತೈ ವರತನುನಾಮುಯೆಂದು ತ
ನ್ನೊತ್ತಿಗೆ ರಾಜೇಂದ್ರ ಕರೆದು
ಇತ್ತನಾಭರಣ ದಿವ್ಯಾಂಬರಗಳ ನೋಳ್ಪ
ಮೊತ್ತದ ನೃಪರತಿಮಾಡೆ ೩೫

ನಿಂದಮಾತ್ರವೆ ನಿನ್ನೆ ಮಾಗಧಾಂಕಿತನ ಹೋ
ಗೆಂದಟ್ಟಿದೆವು ಹೋದನಹುದು
ಚೆಂದಗಾಣಿಸಿದನು ಕಾರ್ಯವ ಬಳಲಿದ
ನೆಂದೊಳ್ಪ ನುಡಿದನಾ ನೃಪತಿ ೩೬

ವ್ಯಂತರ ಮುಖ್ಯರಿನ್ನಾರು ಬಂದರು ನಿನ್ನ
ಪಿಂತಣೋಲಗ ಸಲ್ವುದವರ್ಗೆ
ಮುಂತಣ ತೇಜ ಮನ್ನಣೆ ನಿನ್ನದೆಂದು ಭೂ
ಕಾಂತ ನುಡಿದನೆಲ್ಲರೊಸೆಯೆ ೩೭

ಆ ನೃಪ ತಾನಿಟ್ಟ ಹಾರವ ಕೊಟ್ಟನ
ನೂನ ಭೂಷಣವ ಬೇರಿತ್ತ
ಏನ ಕೊಡನು ಚಕ್ರಿ ವ್ಯಂತರಾಗ್ರಣಿಯೆಂದು
ಪೀನಬೀರುದ ಕೊಟ್ಟನೊಡನೆ ೩೮

ಬೀಡಿಗೆ ಹೋಗು ವಿಶ್ರಮಿಸೆಂದು ವಿನಯವ
ನಾಡಿದನೊಡನೆ ಮಾಗಧಗೆ
ಕೂಡೆ ಪಾದಕೆ ಮಣಿದನು ಪುರೆಯಿಡೆ ನಲಿ
ದಾಡುತೆಯ್ದಿದನವನತ್ತ ೩೯

ಮತ್ತುಳಿದೆಲ್ಲರನುಚಿತದಿ ಬೀಳ್ಕೊಟ್ಟು
ಚಿತ್ತದೊಳರುಹನ ನೆನೆದು
ಮುತ್ತಿನ ಗದ್ದುಗೆಯಿಂದೆದ್ದು ಹೊಕ್ಕನಾ
ಚಿತ್ತಜೋಪಮನು ಮಂದಿರವ ೪೦

ಅಂತಃಪುರದ ಪೆಂಗಳುಗೂಡಿ ತನ್ನಯ
ಸಂತಾನಗೂಡಿ ಭೋಗಿಸುತ
ಚಿಂತೆಯಿಲ್ಲದೆ ಕೆಲದಿವಸವಲ್ಲಿದ್ದನೋ
ರಂತಾತ್ಮಭಾವನೆವೆರಸಿ ೪೧

ಬೆಳೆದುದನಂದರ್ಕಕೀರ್ತಿ ರಾಜಗೆ ರಾಜ
ಕುಲವೆಚ್ಚಲೊಂದು ದಿನದೊಳು
ಸುಲಲಿತ ಯಜ್ಞೋಪವೀತ ಕಲ್ಯಾಣವ
ನಿಳೆ ಪೊರೆಯಿಡಲೆಸಗಿದನು ೪೨

ಹಿಂದರ್ಕಕೀರ್ತಿಯ ಪೌಜೆಂಬ ನುಡಿಯಿದ್ದು
ದಿಂದದು ಮಾಣ್ಣುದು ಕೂಡೆ
ಮುಂದಾದಿರಾಜನ ಪೌಜೆಂದು ಸತಿಯರ
ಸಂದೋಹಕಾಯ್ತೊಂದು ವಾರ್ತೆ ೪೩

ಪುರುಹೂತ ದಿಕ್ಕಿನ ದಕ್ಷಿಣ ದಿಕ್ಕಿನ
ಶರಧಿಪಾಲರ ಗೆಲ್ದು ನೃಪತಿ
ವರುಣ ದಿಕ್ಕಿಗೆ ಹೋಗಲೆಳಸಿದ್ದನಿಲ್ಲಿಗೆ
ವರತನುಸಾಧ್ಯದ ಸಂಧಿ ೪೪

# ಪ್ರಭಾಸಾಮರಚಿಹ್ನ ಸಂಧಿ

ಪೊಡವಿಯಾಗಸ ನಾದಮಯವಾಗುವಂತೆತ್ತಿ
ಬಡಿದು ಬಲ್ಭೇರಿ ಸೂಳೈಸಿ
ಪಡುವಣ ದಿಕ್ಕಿಗೆ ಮುಖವಾಗಿ ದಂಡೆತ್ತಿ
ನಡೆದನಾ ರಾಜಮಾರ್ತಾಂಡ ೧

ತಾವರಿದಲ್ಲಲ್ಲಿ ಬಿಡುತೆಯ್ದುವಾಗೊಂದು
ಪಾವನವಪ್ಪ ತಾಣದೊಳು
ಭೂವರಾಗ್ರಣಿಯ ಪೆಂಡಿರೊಳೊರ್ವ ಚಂದ್ರಿಕಾ
ದೇವಿ ಪೆತ್ತಳು ವರಸುತನ ೨

ಎಸಗಿತಾಗಳೆ ಗುಡಿತೋರಣವಲ್ಲಲ್ಲಿ
ಮಸಗಿತು ವಾದ್ಯನಿನಾದ
ದೆಸೆತುಂಬಿ ಬಿಟ್ಟ ಸೇನೆಯೊಳು ಕುಮಾರನಾ
ದೊಸಗೆ ಹಬ್ಬಿತು ಚಕ್ರಧರನ ೩

ಭೂಮೀಶ ಜಾತಕರ್ಮವನೆಸಗಿಸಿ ಮತ್ತೆ
ನಾಮಕರ್ಮದ ದಿವಸದೊಳು
ಪ್ರೇಮದಿ ಪೆಸರಿಟ್ಟನಿವನು ವೃಷಭಸೇನ
ನಾಮ ವೃಷಭರಾಜನೆಂದು ೪

ಅರುದಿಂಗಳಿನ ಮೇಲೆ ದಂಡೆದ್ದುದಲ್ಲಿಂದ
ಬಿರುಬಿದ್ದು ಭೇರಿ ಸೂಳೈಸಿ
ಹೆರೆದೆಗೆಯದೆ ನೂಂಕಿ ನಡೆದುದು ಕಟಕ ಬ
ಲ್ತೆರಪಿನೊಳಗೆ ಜಾತ್ರೆಯಂತೆ ೫

ಬಿಡುತಲ್ಲಿಗಲ್ಲಿ ದಂಡೆತ್ತಿ ನಡೆವುತ ಪೆ
ರ್ವಡೆಗೂಡಿ ಕ್ರಮದೊಳು ಗಮಿಸಿ
ಕಡೆನೂಂಕಿ ಹಲವು ಪಯಣದೊಳೊಯ್ಯನೆ ಬಂದು
ಪಡುವಣ ವಾರ್ಧಿಯ ಕಂಡ ೬

ಮಾಗಧಾಂಕನ ಕರೆ ವರತನು ಬರಲೆಂದ
ನಾಗಪರ್ಬಂದು ಕೈಮುಗಿಯೆ
ಸಾಗರತೀರದೊಳ್ನಿಂದರಿರ್ವರ್ಗೊಂ
ದಾಗಿ ಭೂಪತಿಯಿಂತು ನುಡಿದ ೭

ಈ ಸಮುದ್ರದ ಕುರುವದೊಳು ಬಾಳ್ವನಲ್ಲೈ ಪ್ರ
ಭಾಸನೆಂದೆನಿಪ ವ್ಯಂತರನು
ಮಾಸದೆಯ್ತಂದೆಮ್ಮ ಕಾಣ್ಬನೊ ಕಡೆಯೊಳು
ಮಾಸಿ ಬಪ್ಪನೊ ಹೇಳಿರೆಂದ ೮

ಉತ್ತಮನನನು ಪ್ರಭಾಸದೇವನು ನಿನ್ನ
ಚಿತ್ತವನೊಲಿಸತಕ್ಕವನು
ಸುತ್ತಿನ ನುಡಿ[1]ಯೇ[1]ನು ನಾವಿಬ್ಬರೆಯ್ದಿ ನಿ
ನ್ನೊತ್ತಿಗೆ ತಹೆವೆಂದರವರು ೯

ನೀವೆಯ್ದಬೇಡ ನಿಮ್ಮಯ ನಾಳಿನವರೊಂದು
ಸೇವೆಯ ಮಾಡಲಿ ನನಗೆ
ನಾವವರನು ನೋಡಬೇಡವೆಯೆಂದು
ಸದ್ಭಾವದಿ ನುಡಿದನಾ ಚಕ್ರಿ ೧೦

ಧ್ರುವಗತಿ ಬಾಸುರಕೀರ್ತಿ ಬಾ ಹೋಗಿ ನೀ
ವವನನಿಲ್ಲಿಗೆ ತಹುದೆಂದು
ಸುವಿನಯದಿಂದ ಬೀಳ್ಕೊಟ್ಟನಾ ಸೇವೆಗು
ತ್ಸವಿಸುತ್ತೆಯ್ದಿದರವರತ್ತ ೧೧

ಎಲ್ಲರ ಬೀಳ್ಕೊಟ್ಟು ಕುವರರಿಬ್ಬರ ಮುತ್ತು
ಲಲ್ಲಿಯೊಳ್ಬೀಡಿಗೆ ಕಳುಹಿ
ಪಲ್ಲಕ್ಕಿಯಿಳಿದರಮನೆಯ ಹೊಕ್ಕನು ಕಬ್ಬು
ವಿಲ್ಲನರೂಪನುಬ್ಬಿನೊಳು ೧೨

ಎಳೆವೆಂಗಳೊಡಗೂಡಿ ಚಳಕ ಮುಂತಾದ ನಿ
ರ್ಮಲ ಭೋಗ ಯೋಗ ಲೀಲೆಯೊಳು
ಕಳೆದನಾ ಹಗಲಿರುಳನು ಮರುದಿವಸದ
ಬೆಳಗಿನೊಳೋಲಗವಾದ ೧೩

1 ಯು (ಚ) ಯೆ (ಕ) ಯೊ (ರ)

ಚರ್ಮದೃಷ್ಟಿಯೊಳು ಲೋಕವ ನೋಡುತಿದ್ದನಂ
ಶರ್ಮಹಾಜ್ಞಾನದೃಷ್ಟಿಯೊಳು
ನಿರ್ಮಲಾತ್ಮನ ನೋಡುತಿರ್ದನವನ ಮನೋ
ಧರ್ಮವ ಬಲ್ಲವರಾರು ೧೪

ಕೆಸರೊಳಿರ್ದಬ್ಜಕೆ ರವಿಯಮೇಲಲ್ಲದಾ
ಕೆಸರಿನ ಮೇಲಾಸೆಯಹುದೆ
ಅಸಮಭೋಗದೊಳಿರ್ದೊಡಾತ್ಮನಮೇಲಲ್ಲ
ದೆಸೆವುದೆ ಮಮತೆ ಭವ್ಯರಿಗೆ ೧೫

# ವಿಜಯಾರ್ಧದರ್ಶನ ಸಂಧಿ

ಒಲಗೂಡಿ ಬಂದು ಸಮುದ್ರದೊತ್ತಿನೊಳಾಪ್ತ
ಒಲವ ನಿಲ್ಲಿಸಿ ವ್ಯಂತರೇಂದ್ರ
ಲಲಿತ ವಿಮಾನದಿಂದಿಳಿದು ಚಕ್ರೇಶನ
ಬಳಿಗೈದುತಿರ್ದನರ್ತಿಯೊಳು ೧

ಪ್ರತಿಭಾಸನೆಂಬ ತನ್ನಯ ನಾಳಿನವನು ತ
ನ್ನತುಳ ಮಂತ್ರಿಯು ತನ್ನ ಹಿಂದೆ
ಹಿತಗೆಯ್ದು ಸುರಕೀರ್ತಿ ಧ್ರುವಗತಿಗಳು ಮುಂದೆ
ಗತಿಗೆಯ್ಯೆ ಗಮಿಸಿದನವನು ೨

ಸಂತದೊಳೊತ್ತಿಗೆ ಸಾರ್ದಿವನೀಗವ
ಧಂಸು ಪ್ರಭಾಸೇಂದ್ರನೆಂದು
ಸುರಕೀರ್ತಿ ಧ್ರುವಗತಿಗಳು ಚಕ್ರಧರಗೆತ್ತಿ
ಕರವ ಮುಗಿದು ಕಾಣಿಸಿದರು ೩

ಕರುಣದಿ ನೋಡಿ ಚಕ್ರೇಶನೇಳೇಳೆಂದ
ನಿರದೆದ್ದನಿರ್ವರುಸಹಿತ
ಹಂಪೀರದೊಳಗೆಸೆವರಸನಿದಿರೊಳು ನಿಂ
ದರರೆ ಕೀರ್ತಿಸಿದನೇನೆಂಬೆ ೪

ಸುಮುಖನ್ನೆ ಬಳಲಿದ್ಯೆ ಕುಳ್ಳಿರೆಂದವನ ಭೂ
ರಮಣ ಕುಳ್ಳಿರಗೊಡಿಸಿದನು
ಸಮತೆಯೊಳವ ಮಂತ್ರಿ ಪ್ರತಿಭಾಸರೊಡಗೂಡಿ
ಗಮಕದೊಳೊಲ್ದು ಕುಳಿತನು ೫

ಮನೆಗೆ ಹೋಗಲಿ ಪ್ರಭಾಸಾಮರನಿಂದು ಮೆ
ಲ್ಲನೆ ನಾವು ಮುಂದೆ ಬಿಟ್ಟೆಡೆಗೆ
ಅನುಗಮಿಸಲಿ ದೇವ ಕಳುಹ ಚಿತ್ತೈಸೆಂದು
ವಿನಯದೊಳೊರೆದನಾ ಸಚಿವ ೬

ಕರೆದು ಪ್ರಭಾಸದೇವಗೆ ಪ್ರತಿಭಾಸಾಂಕ
ಗೆರವಿಲ್ಲದವರ ಸಚಿವರಿಗೆ
ಹಿರಿದುಡುಗೊರೆಯಿತ್ತನೋಲಗದೊಳಗಿರ್ದ
ದೊರೆಗಳೆಲ್ಲರ್ಗಿಮಾಳ್ಪಂತೆ ೭

ಅವರ್ಗೆ ಮನ್ನಣೆಯಿತ್ತು ಸುರಕೀರ್ತಿ ಬಾರೆಲೆ
ಧ್ರುವಗತಿ ಬಾರೆಂದು ಕರೆದು
ನವರತ್ನಭೂಷಣವಿತ್ತು ನೀವೆನಗೆ ತ
ಕ್ಕವಸರದಾಳ್ಗಳ್ಳೈಯೆಂದ ೮

ಅಡಿಗೆರಗಿದ ಧ್ರುವಗತಿ ಸುರಕೀರ್ತಿಯೊ
ಳೊಡನೆ ಕುಳ್ಳಿರಿಯೆಂದು ನುಡಿದು
ನಡೆ ಪ್ರಭಾಸಾಂಕ ನಿನ್ನೂರಿಗೆಂದವನ ಬೀ
ಳ್ಕೊಡುವಷ್ಟರೊಳಗೊಂದು ಚೋದ್ಯ ೯

ಒಸಗೆ ಒಸಗೆಯೆಂಬ ಗಲಭೆ ಹುಟ್ಟಿದುದು ತಾ
ಮಸಮಾಡಿ ಪೋಪೆ ನಾನೆಂದು
ವಸುಧಾಧಿಪತಿಯ ಮುಂದವನೊಲ್ದು ಕುಳಿತನಿ
ನ್ನೊಸಗೆಯೇನೆಂಬೆನಚ್ಚರಿಯ ೧೦

ಸಂಚಯಸಭೆಯಲ್ಲಿ ನೃಪನಿತ್ತಲಿರಲತ್ತ
ಮಿಂಚುವೆತ್ತರಮನೆಯೊಳಗೆ
ಪಂಚಕಾಂತೆಯರು ಪೆತ್ತರು ಪಂಚಪುತ್ರರ
ಪಂಚರತ್ನವ ಪಡೆದಂತೆ ೧೧

ಪರಿವಿಡಿಯಿಂದೊಬ್ಬರೊಬ್ಬರಿಗೊಂದೊಂದು
ಸರವ ಸಮಾನದೊಳೀಯೆ
ಭರತಚಕ್ರೇಶ ನಿಕ್ಕಿರ್ದಕೊರಳ ಪಂಚ
ಸರ ಸರಿಯಾದುದೈವರಿಗೆ ೧೨

ಪಂಚಕುಮಾರರೊಸಗೆಯ ಪೇಳ್ದವರಿಗೆ
ಪಂಚಸರವನೊಸೆದಿತ್ತು
ಪಂಚಮುಖಾಸನನೊಳು ಲೀಲೆಯಿಂದಿರ್ದ
ಪಂಚಾಸ್ತ್ರನಿರ್ಜಿತರೂಪ ೧೩

ಅರಸನಾನಂದವನಂತಿಂತುಟೆಂಬುದಂ
ತಿರಲಿ ಮಹಾಸ್ಥಾನದಲ್ಲಿ
ನೆರೆದಿದ್ದರೆಲ್ಲರು ತವಗೆ ಚಕ್ರೇಶನ
ಸಿರಿ ಸಾರಿದಂತೆ ಹೆಚ್ಚಿದರು ೧೪

ಈ ವಿಶ್ವತೋತ್ಸಾಹವನು ನೋಡದೆಯ್ದಿ ನ
ನ್ನಾವಾಸದೊಳು ಕಾಣ್ಬುದೇನು
ದೇವ ನಾಸಿಲ್ಲಿಪ್ಪೆನೆಂದು ಪ್ರಭಾಸಾಂಕ
ನಾ ವೇಳೆಯೊಳು ಪೂಣ್ದು ನುಡಿದ ೧೫

ಪರಿವೃತರೆಲ್ಲರನುಚಿತದಿ ಬೀಳ್ಕೊಟ್ಟು
ಗುರುನಿರಂಜನಸಿದ್ಧ ಯೆಂದು
ಧರಣೀಶನಾಸ್ಥಾನದಿಂದೆದ್ದು ರಾಜಮಂ
ದಿರವ ಹೊಕ್ಕನು ವಿಳಾಸದೊಳು ೧೬

ವಿತತ ಸುವಸ್ತುಗಳುಲುಪೆವೆರಸಿ ಬಂದು
ಸುತ ನಾಮಕರಣದಿನದೊಳು
ಪ್ರತಿಭಾಸದೇವನು ಚಕ್ರಿಯ ಕಂಡವ
ನತನಾಗಿ ಸಲುಗೆವಡೆದನು ೧೭

ಷಣ್ಮಾಸ ತಡೆದನಲ್ಲಿಂದ ದಂಡೇಳದೆ
ಷಣ್ಮಾಸ ತುಂಬಿದಮೇಲೆ
ಪೊಣ್ಮೆ ಮಹಾಭೇರಿ ಸೂಳೈಸಲಲ್ಲಿಂದ
ಜಾಣ್ಮೆಯೊಳೆದ್ದನಾ ಚಕ್ರಿ ೧೮

ಹಿಮಗಿರಿಯೊಳು ಪುಟ್ಟಿ ಗಂಗೆವೊಲ್ತೆಂಕಲಾ
ಕ್ರಮಿಸಿ ಮತ್ತಪರಸಾಗರವ
ನಿಮಿರಿ ಕೂಡಿತು ಸಿಂಧುವೆಂಬ ಮಹಾನದಿ
ಗಮಿಸಿದ (ರದರೊತ್ತ)ವಿಡಿದು ೧೯

ಪಡುವಣವಾರ್ಧಿಯ ತಡಿಯಿಂದ ದಂಡೆತ್ತಿ
ಗಡಣಿಸಿ ಮೂಡ ಮುಂತಾಗಿ
ನಡೆದುದು ಕಟಕವಾ ಸಿಂಧುನದಿಯ ತೆಂಕ
ವಿಡಿದು ಮಹಾಲೀಲೆಯಿಂದ ೨೦

ಪಯಣದೊಳಲ್ಲಲ್ಲಿ ಪಡೆದ ಮಕ್ಕಳಿಗುಪ
ನಯನ ಮುಂತಾದ ಕ್ಷತ್ರಿಯರ
ಕ್ರಿಯೆಗಳ ಮಾಡಿಸುತೆಯ್ತರುತಿರ್ದನ
ರ್ತಿಯೊಳಗಣಿತಪುಣ್ಯಭಾಗಿ ೨೧

ಬಿಟ್ಟಲ್ಲಿ ಬಿಡದೆ ದಂಡೆತ್ತಿ ನಡೆದು ರಿಪು
ರಟ್ಟಡಿಕಾರನೆಯ್ತಂದು
ದಿಟ್ಟಿಗಳಿಗೆ ರಮ್ಯವೆನಿಸುವ ಬೆಳ್ಳಿಯ
ಬೆಟ್ಟವ ಕಂಡನಿದಿರೊಳು ೨೨

ನಾಡಾಡಿ ಗಿರಿಯಲ್ಲ ವಿಜಯಾರ್ಧಗಿರಿಯದು
ನೀಡಿ ಮೇಘನ ಮುಟ್ಟುತಿಹುದು
ಮೂಡಣ ಪಡುವಣಬ್ಧಿಯ ಮುಟ್ಟಿ ಬೆಳ್ಳಿಯ
ಗೋಡೆಯಂತೆಸೆವುದೇನೆಂಬೆ ೨೩

ಬಿಳಿಯಾನೆಗಳವಟ್ಟ ರಂಜಿಕೆಯಂತೆಡ
ಬಲದೊಳಾ ಗಿರಿಯ ತಪ್ಪಲೊಳು
ಸಲೆ ನೂರಹತ್ತು ಪಟ್ಟಣವೆಸೆದಿಹುವದ
ರೊಳಗೆ ವಿದ್ಯಾಧರರಿಹರು ೨೪

ಪುರಗಳೊಳ್ ಗಗನವಲ್ಲಭಪುರ ರಥನೂ
ಪುರಚಕ್ರವಾಳವೆಂಬೆರಡು
ಪುರಗಳಗ್ಗಳವಲ್ಲಿ ನಮಿರಾಜ ವಿನಮಿರಾ
ಜರು ಬಾಳುತಿಹರು ಸೋದರರು ೨೫

ಅವರು ಭೂಭುಜನ ಸೋದರದ ಮಾವಂದಿರೆ
ಕುವರರು ಖಚರರೆಲ್ಲರನು
ಅವನತಿಗೆಯ್ಸಿಕೊಂಡುರೆ ತಮ್ಮೊಳಧಿರಾಜ
ಯುವರಾಜ ಪದವಿಯೊಳಿಹರು ೨೬

ಗಿರಿಯೆರಳ್ಬದಿಯವೋಲೆಸೆವ ತಪ್ಪಲೊಳು ಖೇ
ಚರರಿಹರದರ ತುದಿಯೊಳು
ವರವಿಜಯಾರ್ಧಕುಮಾರನೆಂಬರಸು ಕಿ
ನ್ನರ ಸಿದ್ಧಯಕ್ಷಾದ್ಯರಿಹರು ೨೭

ಆ ಗಿರಿಗುತ್ತರ ದಿಕ್ಕಿನೊಳದಕೆ ಮೀ
ಟಾಗಿ ಪೂರ್ವಾಪರಾಬ್ಧಿಗಳ
ತಾಗಿ ಮತ್ತೊಂದಡ್ಡಗೋಡೆಯೆಂಬಂತೆ ಪೆಂ
ಪಾಗಿರುತಿಹುದು ಹೇಮಾದ್ರಿ ೨೮

ಎರಡು ಬೆಟ್ಟಗಳ ನಡುವೆ ಮೂಡ ಪಡುವ ನೀ
ಳ್ದಿರೆ ಮೂರು ಖಂಡ ರಾಜಿಪುವು
ಭರತ ಷಟ್ಖಂಡವನಾಳುತಲಿರುವನಾ
ಭರತಚಕ್ರೇಶನೇನೆಂಬೆ ೨೯

ಕೋಟೆಯಂದದ ವಿಜಯಾರ್ಧಕೆ ವಜ್ರಕ
ವಾಟ ಮುಟ್ಟಿಹುದದನೊಡೆದು
ದಾಟಿಸಬೇಕಾಚೆಗಖಿಳ ಸೇನೆಯನದ
ರಾಟವ ಮುಂದೆ ಹೇಳುವೆನು ೩೦

ಯೋಚಿಸಿ ಮುಂದಣ ಕಾರ್ಯವ ನೃಪತಿ ಸೇ
ನಾಚಕ್ರಮುಖ್ಯನ ಕರೆದು
ಖೇಚರಗಿರಿಗೀಚೆ ರವಿಯೋಜನದೊಳು ಸಂ
ಕೋಚದಗಳ ತೆಗೆಸೆಂದ ೩೧

ಇಂದು ಬೀಡಿನೊಳಿರು ನಾಳೆ ನಿನ್ನನುಜರ
ಮಂದಿರ ರಕ್ಷಣೆಗಿರಿಸಿ
ವೃಂದ ವ್ಯಂತರಸೇನೆಗೂಡಿ ತೆರಳಿ ದಂಡ
ದಿಂದ ಖಾತಿಯ ತೆಗೆಸೆಂದ ೩೨

ಮುಚ್ಚಿದ ಪಡಿಯ ಮುಂಮೊಡೆವಾಗಲೊಳಗಿರ್ದ
ಕಿಚ್ಚು ಪನ್ನೆರಡು ಗಾವುದಕೆ
ಉಚ್ಚಳಿಸುವುದದು ಮುಂದೊತ್ತಿ ಬಾರದಂ
ತೆಚ್ಚತ್ತುಗೈಸಬೇಕೆಂದ ೩೩

ಕಾಲುವೆ ತೆಗೆಯದಿದ್ದರೆ ಕಿಚ್ಚು ಮುಂದೊತ್ತಿ
ಜ್ವಾಲೆಯ ಕೆದರುತ ಬಹುದು
ಪಾಳೆಯವೆದ್ದೋಡಬೇಕಹುದದನರಿ
ದೀ ಲೆಕ್ಕದೋರಿದೆನೆಂದ ೩೪

ವ್ಯಂತರಾಗ್ರಣಿಯ ಪ್ರಭಾಸಾಂಕ ವರತನು
ಮುಂತಾದವರನಾಗ ಕರೆಸಿ
ಎಂತೀತ ಪೇಳ್ದನಂತೆಸಗುವುದೆಂದು ನಿ
ಶ್ಚಿಂತ ನೇಮಿಸಿಬಿಟ್ಟನವರ ೩೫

ಆಗಲದೊಳಗೆ ಸೇನೆ ಬಿಟ್ಟಿತು ಮನೆಗಳು
ನೆಗೆದುವೆಲ್ಲರಿಗೆ ತಕ್ಕಂತೆ
ಜಗದ ಜಂಜಡದ ರಾಜ್ಯಾಂಗವೆ ಹೊಸತೊಂದು
ನಗರಿಯಾಯ್ತಾಕ್ಷಣದಲ್ಲಿ ೩೬

ಸುಜನೋಕ್ತಿಯಿಂದ ಸರ್ವರ ತರವರಿದೊಲ್ದು
ನಿಜನಿಜನಿಳಯಕೆ ಕಳುಹಿ
ಭುಜಬಲಾಗ್ರಣಿ ರಾಜಗೃಹ ಹೊಕ್ಕನಿಲ್ಲಿಗೆ
ವಿಜಯಾರ್ಧದರ್ಶನ ಸಂಧಿ ೩೭

# ಕವಾಟವಿಸ್ಫೋಟನ ಸಂಧಿ

ಅಗಳ ತೆಗೆದು ನೀರ ತುಂಬಿಯೊಂಟೆಸೆಯ ರಾ
ತ್ರಿಗೆ ಬಂದು ಸ್ವಾಮಿಯ ಕಾರ್ಯ
ಮುಗಿದುದೆಂದೊಡೆಯಗೆ ಜಯರಾಜ ಕರವೆತ್ತಿ
ಮುಗಿದನು ವ್ಯಂತರರ್ವೆರಸಿ ೧

ದಳಪತಿ ಸಚಿವರ ಮರುದಿನ ತನ್ನಯ
ನಿಳಯಕೆ ಕರೆಸಿ ರಾಜೇಂದ್ರ
ಗಳಧೌತಗಿರಿಯ ಕವಾಟವನೊಡೆಹೊಯ್ವ
ಕಳೆಯ ನುಡಿದ ನಲ್ವಮಾಡಿ ೨

ಕೇಳೆಲೆ ಮಂತ್ರಿ ಕೇಳ್ಪಡೆವಳ್ಳ ವಿಜಯಾರ್ಧ
ಶೈಲದೊಳಿಕ್ಕಿದ ಪಡಿಯ
ನಾಳೆ ಹೋಳ್ಮಾಡಿಬಿಡುವೆನೊಣಗಿದ ಬರ
ಹಾಳೆಯನೊಡೆಯುಹೊಯ್ವಂತೆ ೩

ಹಂಸನಾಥನ ನೋಡಿ ಕರ್ಮವನೊಡೆವುದು
ಪ್ರಾಂಶುವಜ್ರದ ಕವಾಟವನು
ಧ್ವಂಸಗೈವುದು ನಿನಗಹುದುಳಿದರ್ಗ
ದೇಂ ಸದರವೆಯೆಂದರವರು ೪

ಎನೆವರಿರ್ವರ್ಗಂಗುಡುಗೊರೆಯಿತ್ತು ಮೇ
ದಿನಿಪತಿ ಬೀಡಿಗೆ ಕಳುಹಿ
ಜಿನಪೂಜೆಗೈದು ಹತ್ತನೆಯ ದಿನದ ಬೆಳ
ಗಿನ ಹೊತ್ತಿನೊಳು ಪೊರಮಟ್ಟ ೫

ಗೋಣ ಸಂಕೋಚಿಸಿ ಯೆಡಬಲಕೊಲೆವಾಗ
ಗೋಣ ನಿಮಿರಿ ಹರಿವಾಗ
ಮೇಣದ ಕುದುರೆಯೊಯೆಂಬಂತೆ ನೃಪನ ಸಾಂ
ಬ್ರಾಣಿ ಕಂಗೆಸೆದುದೇನೆಂಬೆ ೬

ಏಳು ವೈಹಾಳಿಯ ಸೂಚಿಸಿ ಬಿಸಿಲುರಿ
ಯೇಳದ ಮುನ್ನ ರಾಜೇಂದ್ರ
ತೋಕ ಸನ್ನೆಯೊಳು ಪಾಳೆಯವ ನಿಲಿಸಿ ಕೂಡಿ
ಶೈಲಕೆ ದಾರಿದೆಗೆದನು ೭

ಪಡೆವಳ್ಳನೊಡನೆ ನಿಂದಿತು ಸೇನೆ ಗಣಬದ್ಧ
ರೊಡಗೂಡಿ ನೃಪತಿ ಹೋಗುತಿರೆ
ಕಡುಗಿ ಬಂದರು ಮಾಗಧಾದಿ ವ್ಯಂತರಿಗರಾ
ಳ್ದೊಡೆಯನ ಬಿಟ್ಟು ನಿಲ್ಲುವರೆ ೮

ಸೋಪಾನವಿಡಿದಲ್ಪ ದೂರವ ಪತ್ತಿ ಮ
ತ್ತಾ ಪರ್ವತದ ಗರ್ಭದಲ್ಲಿ
ಆಪತ್ತಿನಂತಿರ್ದ ವಜ್ರಕವಾಟವ
ಭೂಪತಿ ತೊಟ್ಟಗೆ ಕಂಡ ೯

ಭೇರಿಯಿಕ್ಕಡೆಯ ಮುಚ್ಚಿದ ಚರ್ಮದಂತೆ ಗಂ
ಭೀರಗುಹೆಯ ತೆಂಕ ಬಡಗ
ಸೇರಿಹುವೆರಡು ಕವಾಟಗಳವರೊಳಾ
ಧೀರ ಕಂಡನು ತೆಂಕಣದನು ೧೦

ಹಲ್ಲ ಕೀಲಿಸಿದಂತೆ ಕೀಲದಿ ತುಟಿಗಳಂ
ತಿಲ್ಲಿ ಮುಚ್ಚಿವೆಕೊ ದ್ವಾರಗಳು
ಹಲ್ಲ ಮುರಿದು ಬಾಯ ಬಿಡಿಸುವೆ ಗುಹೆಯನೆಂ
ದುಲ್ಲಾಸದೊಳು ನಕ್ಕು ನುಡಿದ ೧೧

ಕಡೆಸಾರಿ ನೀವಿನ್ನು ಬೇಗದೊಳಗಳ ಮುಂ
ಗಡೆಗೆಯ್ದಿರೆಂದು ಕೈವೀಸಿ
ಕಡುಪಿನ ದಂಡರತ್ನಾಯುಧಕರಸ ಕೈ
ದುಡುಕಿದನಧಿಕ ವೀರಪೊಳು ೧೨

ಹಿಂಚಾರಿಯೊಳು ತೂಗಿ ತಿವಿದನಾ ಹುಡಿ ಕೂಡೆ
ಹಿಂಚಿದಂತೆರಡು ಹೋಳಾಯ್ತು
ಕಂಚಿನಬೆಟ್ಟ ಹೋಳಾದಂತೆ ದನಿಯಾಯ್ತು
ಮಿಂಚಿನಂತಶ್ವ ಲಂಘಿಸಿತು ೧೩

ಜಡಿದ ಭರಕೆ ರಾಯ ಪೊಡೆದ ಭರಕೆ ಕದ
ಪೊಡೆದ ಭರಕೆ ವಿಜಯಾರ್ಧ
ನಡುಗಿತು ನೆಲಪದಿರಿತು ಕಡಲುಗಳುಕ್ಕಿ
ಬಡದೋಣಿಯಂತೆ ತುಳ್ಕಿದುವು ೧೪

ಬರಸಿಡಿಲೆರಗೆ ಪಾಸರೆ ಬಿರಿವಂತೆ ಪೊ
ಚ್ಚರಿಸಿ ಸೀಳಾಯ್ತು ಮತ್ತೊಡನೆ
ನೊರೆಯಿಡುವಂತೆ ಘಿರ್‍ರೆಂದು ಘೀಳಿಡುತಾಗ
ತೆರೆದುದಾ ವಜ್ರಕವಾಟ ೧೫

ತೊಂಬ ಕಿತ್ತರೆ ನೀರು ನೆಗೆವಂತೆ ಗುಹೆಯಲ್ಲಿ
ತುಂಬಿದ್ದ ಬೆಂಕಿ ಭೂಪತಿಯ
ಬೆಂಬಳಿಯೊಳಗೆ ನಾಲಗೆ ನೀಡಿತಶ್ವ ಕ
ದುಂಬಿ ಹಾರಿತು ಮೂರು ಹಾರ ೧೬

ಛಿಳಿಛಿಳಿ ಛಿಟಿಛಿಟಿ ದಿಮಿದಿವಿ ದಿಮಿದಿವಿ
ಘುಳುಘುಳು ಬರುಬರು ಪಲೆರು
ದಳದಳ ದಗಿದಗಿಲೆಂದುರಿ ನೆಗೆದುದು
ಪ್ರಳಯಕಾಲದ ಕಿಚ್ಚಿನಂತೆ ೧೭

ದಳ್ಳುರಿಯೆದ್ದುದ ಕಂಡು ವಿದ್ಯಾಧರ
ರಳಿವೊಯ್ದರು ಮ್ಲೇಚ್ಛನೃಪರು
ತಳ್ಳಂಕಗೊಂಡರು ವಿಜಯಾರ್ಧದೇವನು
ಡಿಳ್ಳೈಸಿ ಮಂಡೆದೂಗಿದನು ೧೮

ಮಾಗಧೇಂದ್ರಾದಿಗಳಚ್ಚರಿವಟ್ಟರು
ಕೂಗಿ ಬೊಬ್ಬಿರಿದುದು ಕಟಕ
ತೂಗಿ ವಾಹನರತ್ನ ಕುಣಿಯೆ ಕಂದನ ತಟ್ಟಿ
ತಾಗ ಭೂಪತಿ ನೋಡುತಿರ್ದ ೧೯

ವಿಜಯಾರ್ಧದೇವನಾಗಳೆ ತನ್ನ ದೇವತಾ
ವ್ರಜಗೂಡಿ ಬಂದು ಬಾನದೊಳು
ಜಯಲಕ್ಷ್ಮಿಯ ನಲ್ಲ ಜಯಜಯಯೆಂದು ಭೂ
ಭುಜಗೆ ಹೂಮಳೆಯ ಸೂಸಿದನು ೨೦

ಇಟ್ಟು ನಿವಾಳಿಯ ಕೊಟ್ಟು ಕಾಣಿಕೆಯ ಬಾಂ
ಬಟ್ಟೆಯೊಳ್ಕುಣಿದೆದ್ದು ನಿಂದ
ದಿಟ್ಟರ ದೇವ ಚೆಲ್ವರ ದೇವ ನಮ್ಮಯ
ದಿಟ್ಟಿ ಸಫಲವಾದುದೆಂದ ೨೧

ಸೋಂಕಿಗೆ ಕರೆದು ತಾನಿಕ್ಕಿದನರ್ಘ್ಯದ
ಕಂಕಣಗಳ ಕೊಟ್ಟನವಗೆ
ಅಂಕಿತಾಳಾಪದಿ ಬೀಳ್ಕೊಡೆ ಬಲಗೂಡಿ
ಭೋಂಕನೆ ಹೋದನಾ ದೇವ ೨೨

ತೇಜಿಯ ಮನ್ನಿಸವೇಳುತ ಗಣಬದ್ಧ
ರಾಜಿ ಮುಂತಾದ ವ್ಯಂತರರ
ಪೌಜಿಗೊಲ್ದುಡುಗೊರೆಯಿತ್ತು ಬೀಳ್ಕೊಟ್ಟನಾ
ರಾಜ ಹೊಕ್ಕನು ರಾಜಗೃಹವ ೨೩

# ಖೇಚರಿಯರ ವೈವಾಹ ಸಂಧಿ

ಮಿಗೆ ರಥನೂಪುರ ಚಕ್ರವಾಳಾಖ್ಯದ
ನಗರಿಯ ವಿನಮಿರಾಜೇಂದ್ರ
ನೆಗೆದುರಿಗಂಡು ಸಂತಸದಲಿ ಹೋದನು
ಗಗನವಲ್ಲಭವೆಂಬ ಪುರಕೆ ೧

ಬಳಿಯಟ್ಟಿ ಮಂತ್ರಿಯ ಬರವ ಹಾರುತ ತನ್ನ
ನಿಳಯದೊಳಗೆ ಮೋನದಲ್ಲಿ
ಕುಳಿತಿರ್ದ ನಮಿರಾಜನೆಡೆಗೆಯ್ದಿ ವಿನಮಿ ಕೈ
ಗಳ ಮುಗಿದುಬ್ಬಿನೊಳ್ನುಡಿದ ೨

ಕೇಳ್ದರೆ ವಜ್ರಕವಾಟನ ಭಾವಾಜಿ
ಪ್ರೋಳ್ದುಬಿಟ್ಟನು ನಿಮಿಷಮೊಳು
ನೀಳ್ದುದಾಕಾಶಕೆ ದಳ್ಳುರಿಯೊಂದರ್ತಿ
ದಾಳ್ದು ನುಡಿದನಣ್ಣನೊಡನೆ ೩

ಕುಟ್ಟಿದ ರಭಸಕೆ ಬೆಟ್ಟವದಿರಲೆಮ್ಮ
ಪಟ್ಟಣವರಸುಗಳೆಲ್ಲ
ತೊಟ್ಟಿಲ ಮಕ್ಕಳಂತಿಳೆಗೆ ಬಿದ್ದರು ಹೆಮ್ಮ
ವಟ್ಟಿರ್ದ ಗದ್ದುಗೆಯಿಂದ ೪

ಪರಿವ ಬೆಳ್ಮುಗಿಲು ಕಿಚ್ಚಿನ ನಾಲಗೆಗೆ ಸಿಕ್ಕಿ
ದರಳೆಯಂತುರಿದು ಹೋಗುತದೆ
ತಿರುಗಲಮ್ಮರು ಮೇಲೆ ಸುರರು ಭಾವಾಜಿಗೆ
ಸರಿಯುಂಟೆ ಅಣ್ಣಾಜಿಯೆಂದ ೫

ಮಕ್ಕಳಾಟಿಕೆಯಲಾ ನಿನಗೆ ರಾಜಾಂಗದ
ದಿಕ್ಕಿನ್ನು ತೋರಿತಿಲ್ಲನುಜ
ಮಿಕ್ಕು ನುಡಿಯದಿರೀ ನುಡಿಗಳ ಹೊರಗೆಂದು
ಚಿಕ್ಕವಗೋಜೆವೇಳಿದನು ೬

ಭಾವಾಜಿಯೊಂದು ಪೌರುಷಕೆ ಬೀಗಿದೆ ನಿನ್ನ
ಭಾವಾಜಿ ಷಟ್ಖಂಡದೆರೆಯ
ಭೂವರಾವಳಿ ತನ್ನನೋಲೈಸಬೇಕೆಂಬ
ನಾವು ಸೇವಕರಾದೆವಿನ್ನು ೭

ಒಂದಾಗಿ ಕುಳಿತೊಮ್ಮೆ ಸರಸದಿ ನೀನು ತಾ
ನೆಂದೆಂಬ ನುಡಿ ಹೋದುದೆನುಗೆ
ನಿಂದು ಕಾಣ್ಕೆಯನಿಕ್ಕಿ ಕಂಡಯ್ಯ ಜೀಯ ಲೇ
ಸೆಂದೆಂಬ ನುಡಿ ಬಂದಿತೆಂದ ೮

ಸರಿಸಿರಿಯಾದಾಗ ಬೀಯಗರೆಂಬರು
ಸಿರಿ ಹೆಚ್ಚಿದವರು ಬೀಯಗರ
ಕರೆವರು ತೊಂಡರ ಕರೆವಂತೆ ಕ್ಷತ್ರಿಯ
ರಿದವಿನ್ನು ನಿನಗೆ ಕಾಣಿಸದು ೯

ಧಾರಿ ಕೋರೆಯ ನೋಡೆ ರಾಜತೇಜವ ನೋಡೆ
ಯಾರಿಣೆ ಭಾವಾಜಿಗೆಂದು
ಹೊರಿಗೆಯೆಂದರೆ ಗಬಕೆಂಬ ಗಾದೆಯಂ
ತಾರಿಂತು ನುಡಿವರ್ಕೆಯೆಂದ ೧೦

ಆತನೆಮ್ಮಪ್ಪಾಜಿಯೊಡಹುಟ್ಟಿದಳ ತನು
ಜಾತ ನಾವವನ ಸೋದರದ
ಮಾತುಳರಾತ್ಮಜರಿದರೊಳಗೆಡೆಗಟ್ಟೆ
ದೇಶರದಣ್ಣಾಜಿಯೆಂದ ೧೧

ಹೆಣ್ಣ ಕೊಟ್ಟವರು ಕೈಮುಗಿಯೆ ಕೈಮುಗಿಯನು
ಬಣ್ಣಕೆ ನೀವು ತಾವೆಂಬ
ಹೆಣ್ಣುಗಳೊಡಹುಟ್ಟಿದವರ್ಗದುವಿಲ್ಲ ಹು
ಚ್ಚಣ್ಣರೊಪ್ಪುವರದನೆಂದ ೧೨

ಅದಕಾತನಿಷ್ಟು ಯೋಚಿಸತೊಡಗಿದನು ತ
ನ್ನಿದಿರ ಮಂತ್ರಿಯ ಮತ್ತೆ ನೋಡಿ
ಇದಕೇನು ತಂತ್ರವೈ ಮಂತ್ರಿ ನಾವಾತನ
ಚದುರಿಂದ ಜಯಿಸಬೇಕೆಂದ ೧೩

ಅನುಜೆ ಸುಭದ್ರಾದೇವಿಯ ಭರತರಾ
ಜನಿಗಿತ್ತರೊಳ್ಳಿತೆಂದೆಂದು
ನನಗೆ ನೀನಾಡಿಸ್ದೆಯಲ್ತೆಯಿನ್ನು ಮಾತ
ನೆನೆಯದಿರ್ಪರೆ ಮರೆಯೆಂದ ೧೪

ದಕ್ಷಿಣ ಭಾಗೆಯ ಖಚರ ಪುತ್ರಿಯರೊಳು
ಲಕ್ಷಣ ರೂಪವತಿಯರ
ದಾಕ್ಷಿಣ್ಯ ವಿನಯದೊಳೊಯ್ದು ನೀವಾತನ
ಪೇಕ್ಷೆ ತಣಿಯೆ ಧಾರೆಯೆರೆಸಿ ೧೫

ಉತ್ತರಕಾತ ಬಂದಾಗ ಯೋಚಿಸಿಕೊಂಬ
ಮೆತ್ತಗಿಂದಿಗೆ ಹೋಗಿರೆಂದ
ಉತ್ತರಗೊಡವೆದ್ದು ವಿನಮಿ ಮಂತ್ರಿಯು ರಾಯ
ನೊತ್ತಿಂದ ಬೀಳ್ಕೊಂಡರೊಡನೆ ೧೬

ಸುಮತಿಸಾಗರಮಂತ್ರಿವೆರಸಿ ಖೇಚರಭೂಪ
ರಮಲಕುಮಾರಿಯರ್ಗೂಡಿ
ರಮರಮವೆಂಬ ವಾದ್ಯದೊಳು ವಿನಮಿರಾಜ
ಗಮಕದೊಳೆಯ್ತರುತಿರ್ದ ೧೭

ಕೇಳುತ ಮೈದುನ ಬಂದ ಬರವನುರ್ವಿ
ಪಾಲಕ ಗೂಢಗೋಷ್ಠಿಯೊಳು
ಓಲಗವಾದನು ಬುದ್ಧಿಸಾಗರನು ಸ
ಲ್ಲೀಲೆಯ ಕೆಳೆಯರು ಸಹಿತ ೧೮

ನೆರೆದ ಖೇಚರರು ಮತ್ತೆಯ್ದಲಿ ಮೊದಲೊನ್ಮೆ
ಬರಹೇಳು ತನ್ನನೆಂದೊಡನೆ
ತರುವಕ್ಕಳನು ರಾಯ ಕಳುಹಲಾಕ್ಷಣ ಮಂತ್ರಿ
ವೆರಸಿ ವಿನಮಿರಾಜ ಬಂದ ೧೯

ಉಡೆಸುತ್ತಲಿಲ್ಲ ಸಾಷ್ಟಾಂಗವೆರಗಲಿಲ್ಲ
ನಡೆದು ಬಂದೊಂದು ರತ್ನವನು
ಬಿಡಗಿಂದ ಭಾವಗೆ ಕಾಣ್ಕೆಯನಿತ್ತರ್ತಿ
ವಡುತ ಕೈಮುಗಿದನಾ ಸುರಸ ೨೦

ವಿನಮಿ ನಿನಗೆ ಪರಿಣಾಮವೆ ನಮಿನಾಮ
ಗನುಪಮ ಕ್ಷೇಮವೆ ಮತ್ತೆ
ಮನೆಯೊಳಿದ್ದವರೆಲ್ಲ ಪದುಳವೆಯೆಂದು ಮೇ
ದಿನಿಪತಿ ಕೇಳ್ದ ಮೈದುನನ ೨೧

ದೇವರ ಪೆಂಪಿಂದ ನನಗೊಳ್ಪು ನಮಿರಾಜ
ಗಾವಾಗ ಪರಮಸಂತೋಷ
ಆವಾಸದೊಳಗಿರ್ದರೆಲ್ಲರ್ಗೆ ಸುಖವೆಂದು
ಭಾವನೊಳುಸುರಿದನವನು ೨೨

ಪುರುನಾಥನುದರದೊಳಗೆ ದೇವರುದಯಿಸಿ
ಭರತೋರ್ವಿಯೆಲ್ಲವನಾಳಿ
ವರ ಬಂಧುಜನವೆಂಬ ವನಕೆ ವಸಂತನ
ಪರಿಯಾದೆ ಭಾವಾಜಿಯೆಂದ ೨೩

ನಮಿರಾಜ ಒಹನಹುದಿಲ್ಲಿಗೆ ದೇವರು
ಗಮಿಸುವಂದಿಗೆ ಮೊದಲೊಂದು
ಭ್ರಮರಿವಿದ್ಯೆಯ ಸಾಧಿಸುವೆನೆಂದು ತೊಡಗಿದ್ದ
ಸ್ತ್ರಿಮಿತವಾಯ್ತದರಿಂದ ಪಯಣ ೨೪
ಮಂತ್ರಯೋಗದೊಳಿದ್ದ ನಮಿರಾಜಗರುಹಿ ತ
ನ್ಮಂತ್ರಿ ಸಹಿತ ಬಂದೆನೆಂದು
ತಂತ್ರದಿ ವಿನಮಿ ನುಡಿದನಹುದರಸನಾ
ತಂತ್ರವರಿದು ಸುಮ್ಮನಿರ್ದ ೨೫

ಬಂದು ಚಕ್ರಿಗೆ ಕಾಣ್ಕೆಯಿಕ್ಕಿ ಖೇಚರರು ಪೆಂ
ಪಿಂದ ಕೈಮುಗಿಯಲಾ ಕ್ಷಣವೆ
ತಂದು ಕುಳ್ಳಿರಲಿತ್ತಲರಸನ ಕಣ್ಸನ್ನೆ
ಯಿಂದೆಲ್ಲರೊಲ್ದು ಕುಳಿತರು ೨೬

ಪಡೆಯಬೇಡವೆ ಪ್ರಾಯದೊಳಗಿಂತು ಚೆಲ್ವನೀ
ಬೆಡಗನೀ ಸಿರಿಯ ಗೌರವವ
ಜಡರೆಲ್ಲ ದೊರೆಗಳೆ ಸುಡು ಸುಡೆಂದೆಲ್ಲರು
ನುಡಿಯದೆ ನೆನೆದರಿಬೆಯೊಳು ೨೭

ಸೌಂದರಾಂಗಿಯರಾದ ಮುನ್ನೂರು ಪೆಂಗಳ
ತಂದಿದ್ದ ರೆಪ್ಪುರಸುಗಳು
ಚಂದದಿ ಮದುವೆ ನಿಲ್ಲೆಂದು ಖೇಚರಮಂತ್ರಿ
ನಿಂದು ಬಿನ್ನಹವ ಮಾಡಿದನು ೨೮

ಮಣಿಮಯದುಡುಗೊರೆಗಳ ಖಚರರಿಗಿತ್ತು
ಗುಣವಚನದೊಳು ಬೀಳ್ಕೊಟ್ಟ
ಮಣಿದವರೆಲ್ಲರು ಬೀಡಾರಕೊಡನೆ ಸಂ
ದಣಿಗೊಂಡು ಸಾಗಿದರತ್ತ ೨೯

ಮರುದಿನ ಸಾರಣೆ ತೋರಣ ಗುಡಿ ಕೇತು
ನೆರೆ ರಂಗವಲಿ ಪುಷ್ಪವಲಿಯ
ಮೆರಹಿಂದ ಕಟಕ ಸಿಂಗರವಾಯ್ತು ಮಂಗಲ
ವರೆಕೋಟೆ ಮೊಳಗಿತಲ್ಲಲ್ಲಿ ೩೦

ಸೊನ್ನಾರದಲ್ಲಿ ಸೊಬಗಿನಲ್ಲಿ ರನ್ನದಿ
ಚಿನ್ನದಿಂದೊಂದು ಸಾಲಾಗಿ
ಮುನ್ನೂರು ಮದುವೆಯ ಮಂಟಪವಾದುವು
ಸನ್ನದ್ಧ ಮಯನ ತಂತ್ರದೊಳು ೩೧

ಖಚರಭೂಪರು ತಮ್ಮ ಸುತೆಯರ ನವರತ್ನ
ಖಚಿತ ಭೂಷಣತತಿಯಿಂದ
ರಚನೆಯಪ್ಪಂತು ಸಿಂಗಾರ ಮಾಡಿಸಿದರು
ಶುಚಿವೆತ್ತ ದಾದಿಯರಿಂದ ೩೨

ಅಲತಿಗೆಯೂಡಿ ಮಿಂಚಿಟ್ಟುಗುರಿಂದ ಜ
ಕ್ಕುಲಿಸುವಂದುಗೆಯಿಂದ ಮತ್ತೆ
ಗಳಬಳಿಸುವ ಬಳೆಯಿಂದ ಕಂಕಣದಿಂದ
ನಳನಳಿಸಿದರು ವೀರೆಯರು ೩೩

ಭೂಚರಾಂಗನೆಯರು ಚಕ್ರಿಯ ಚಿತ್ತವಿ
ಲೋಚನಗಳನೊಲಿಸಿದುದ
ಖೇಚರಿಯರು ನೀವು ಮರೆಸಬೇಕೆಂದಾಗ
ಸೂಚಿಸಿದರು ಕೆಳದಿಯರು ೩೪

ಪರಿಪೂರ್ಣವಾಗೆ ಶೃಂಗಾರ ನೀರಾಜನ
ವಿರಚನಗೈದು ಪಾದಿಯರು
ಭರತರಾಜೇಂದ್ರನ ಮನವ ಸೋಲಿಸಿಯೆಂದು
ಹರಸಿ ಸೇಸೆಗಳನಿಕ್ಕಿದರು ೩೫

ಇರುಳು ಮುಂಜಾವದೊಳುತ್ತಮ ಲಗ್ನ ಹ
ತ್ತಿರೆ ತೋರಿತೆಂಬ ವೇಳೆಯೊಳು
ಅರಸನೊಳಿಗದವರೆಯ್ತಂದು ಪೇಳೆ ಖೇ
ಚರರೆದ್ದರೊಂದೆ ಲಗ್ಗೆಯೊಳು ೩೬

ಮಾಣಿಕ್ಯದೀಪದ ಸಾಲು ರಂಜಿಸುವ ಕ
ಲ್ಯಾಣಮಂಟಪದೊಳಹೊಕ್ಕು
ಶ್ರೇಣಿವೆತ್ತೊಂದು ದಿಕ್ಕಿನ ಪಡಲಿಗೆಯೇರಿ
ಜಾಣವೆಂಗಳು ನಿಂದರೊಸೆದು ೩೭

ಜಿನವಾಸಕೆಯ್ದಿ ಜಿನೇಂದ್ರವಂದನೆಗೈದು
ಘನಗುರು ಹಂಸನಾಥನನು
ಮನಮುಟ್ಟಿ ಜಾನಿಸಿ ಬಂದರಮನೆಯೊಳಾ
ಜನಪನಿರ್ದನು ಪೆಂಡಿರೊಡನೆ ೩೮

ವನಜಗಂಧಿನಿಯರು ಸಿಂಗರಿಸಿದ ಮದ
ವನಿಗನ ಪೊರೆಯೊಳಿದ್ದಲ್ಲಿ
ಮನದಲ್ಲಿ ನೊವಿಲ್ಲದರ್ಕಿಗೊಬ್ಬಿಬ್ಬರು
ಬಿನದವ ನುಡಿದರೇನೆಂಬೆ ೩೯

ದೇವ ಬಿನ್ನಹವೊಂದು ಹಂಸಕೆ ಪೆಣ್ಬಕ್ಕಿ
ಸಾವಿರವುಂಟು ಮತ್ತದಕೆ
ತೀವಿ ಕೆಲವು ಪಕ್ಕಿ ಬಂದವು ಮೊದಲವು
ನೋವವೆಯೆಂದಳೊರ್ವಬಲೆ ೪೦

ಒಂದು ಹಂಸವೆ ಬಹು ರೂಪವಾಗಿ ಹಲವರೊ
ಳೊಂದುವುದಬಲೆ ಮತ್ತವಕೆ
ನೊಂದುಕೊಂಬುದಕೆ ಕಾರಣವೇನು ಹೇಳು ನೀ
ನೆಂದನಾಕೆಯೊಳೊಲ್ದು ನಗುತ ೪೧

ಕುಸುಮದಂಗಡಿಯೊಳು ತುಂಬಿಯಿದ್ದುದು ಮತ್ತೆ
ಹೊಸ ಹೂವ ತಂದರಂಗಡಿಗೆ
ಮಸೆದರ್ತಿ ಯಾವ ಪುಷ್ಪದೊಳದಕಿಹುದೆಂದು
ನಸುನಗುತೊರ್ವಳಾಡಿದಳು ೪೨

ಧಾರೆಗೆ ಸಮಯವಾಯ್ತೆಂದಷ್ಟರೊಳಗೆ ಸಂ
ಚಾರಕಾಂತೆಯರು ಪೇಳಿದರು
ಆ ರಮಣಿಯರಸಲ್ಲಿಯೆ ನಿಲಿಸಿದನೆದ್ದ
ನೋರಂತೆ ಮದುವೆಯ ಗೃಹಕೆ ೪೩

ನಡೆದೊಂದು ರೂಪಿನೊಳೆಯ್ದಂದು ಮೊದಲೊಂದು
ಪಡಲಿಗಯೊಳು ರಾಯ ನಿಂದು
ಒಡನೆ ಮುನ್ನೂರು ರೂಪಾಗಿ ಮುನ್ನೂರು ಪೊಂ
ಬಡಲಿಗೆಯೊಳು ತುಂಬಿ ನಿಂದ ೪೪

ಮಂಗಲಧವಳ ಶೋಭನಗಳ ಸತಿಯರು
ಭೃಂಗಾಳಿಯಂತೆ ಪಾಡುತಿರೆ
ಮಂಗಳಾಷ್ಟಕ ಪೂರ್ಣವಾಗೆ ಮಧ್ಯದ ತೆರೆ
ಪಿಂಗಿತು ಜಯ ಜಯಯೆನಲು ೪೫

ಒಂದೊಂದು ಪೆಣ್ಣ ಕೈವಿಡಿದು ಪೆಂಗಳ ಪೆತ್ತ
ತಂದೆಗಳಂದು ಭೂವರನ
ಒಂದೊಂದು ರೂಪಿನ ಬಲಗೈಗೆ ಬಲಗೈಯ
ನೊಂದಿಸಿ ಕೊಟ್ಟರರ್ತಿಯೊಳು ೪೬

ಎಳೆಲತೆಗಳ ಕಲ್ಪವೃಕ್ಷಕ್ಕೆ ಹಬ್ಬಿಸಿ
ಬೆಳೆಯೆಂದು ನೀರೆರೆವಂತೆ
ಹೊಳೆವ ಗಿಂಡಿಯನೆತ್ತಿ ಧಾರೆಯನೆರೆದರು
ನಲವಿಂದ ಖಚರನಾಯಕರು ೪೭

ಸೊಕ್ಕಾನೆ ತೆಗೆಯೆ ಪೆಣ್ಣಾನೆ ಪೋಪಂತೆ ಪೆ
ಣ್ಮಕ್ಕಳು ನೃಪನೊಡನೆಯ್ದೆ
ಮಕ್ಕಳ ಕೊಟ್ಟು ವಿದ್ಯಾಧರನೃಪರೆವೆ
ಯಿಕ್ಕದೆ ನೋಡಿ ಹಿಗ್ಗಿದರು ೪೮

ಹೆಣ್ಣ ಕೊಟ್ಟವರ ಕಣ್ಸನ್ನೆಯೊಳ್ಕಳುಹುತ
ಕಣ್ಣೊಳೆ ಮಂತ್ರಿಯ ಕಳುಹಿ
ಹೆಣ್ಣ ಕೊಂಡರಗಿಳಿ ಹೋಹಂತೆ ಹೋದನು
ಹೆಣ್ಣುಗಳ್ವೆರಸಿ ಮಂದಿರಕೆ ೪೯

ಕಣ್ಚಲ್ಲದಿಂದ ರಾಯನ ನೋಡಿ ತಲೆವಾಗಿ
ನಾಣ್ಚುತಿಪ್ಪಳುಕುತಿದ್ದವರ
ನಾಣ್ಚಿಕೆ ಬಯುವನೊಯ್ಯನೆ ಕಳೆದನು ಮುಟ್ಟಿ
ನುಣ್ಚರದೋರಿ ಮಾತಾಡಿ ೫೦

ಬೆಳಗ್ಗೈದು ಘಳಿಗೆಯೆಂಬಾಗ ಚಕ್ರೇಶನಾ
ಲಲನೆಯರರಿಯದಂತೆದ್ದು
ಜಲವ ಮುಕ್ಕುಳಿಸಿ ವೀಳೆಯಗೊಂಡು ಮತ್ತದ
ಕಳೆದಾತ್ಮಯೋಗದೊಳಿದ್ದ ೫೧

# ಭೂಚರಿಯರ ವೈವಾಹ ಸಂಧಿ

ಇಂತು ನಿರಾತಂಕಲೀಲೆಯೊಳರಸನೋ
ರಂತಲ್ಲ ಕಲವು ದಿನಗಳ
ತಾಂ ತವಿಸುತ ಸುಖಮಿರುತಿರೆ ಮತ್ತೊಂದು
ಸಂತೋಷ ಬಂದುದೇನೆಂಬೆ ೧

ಗಜಘಟೆಯೊಳು ಮಹಾಗಜವೊಪ್ಪುವಂತೆ ಭೂ
ರಿ ಜನೇಶರಜೆಯೊಳಪ್ಪಾಗ
ವಿಜಯರಾಜನ ಚಿನ್ನವತ್ತಳೆ ಬಂದು ಭೂ
ಭುಜಗಿಕ್ಕಿವೋದಿದರೊಡನೆ ೨

ಸುಜನೇಂದು ಭರತಚಕ್ರೇಶಗೆ ಭಯ ಭಕ್ತಿ
ಋಜು ದೋರೆ ದೇವರೂಳಿಗದ
ವಿಜಯನು ಸಾಷ್ಟಾಂಗವೆರಗಿ ಕೈಮುಗಿದೆದ್ದು
ನಿಜದೋರಿ ಮಾಳ್ಪ ಬಿನ್ನಹವು ೩

ಸಾಧ್ಯವಾದುದು ಪಡುವಣ ಖಂಡ ತದ್ದೇಶ
ಮಧ್ಯದ ನೃಪರಲ್ಲರೊಸದು
ಅಧ್ಯಾತ್ಮಸೂರ್ಯ ನಿನ್ನಡಿಗಳ ಕಾಣ್ಬುದೊಂ
ದಧ್ಯಾಯನದೊಳರ್ದರೀಗ ೪

ವಾರಣ ವಾಜಿಯು ಕೆಲರಾಯ್ತು ತೆಗೆದಿದ್ದ
ರೀ ರಾಜರೊಳು ಮತ್ತೆ ಕೆಲರು
ವಾರಣಗಮನದ ರಾಜಪುತ್ರಿಯರ ಶೃಂ
ಗಾರಿಸಿ ತೆಗೆದಿದ್ದರೀಗ ೫

ಮುಂದಣ ಬಿನ್ನಹ ಕುಂದಣಬೊಂಬೆಗ
ಳಂದದ ರಾಜಪುತ್ರಿಯರ
ಚಂದದಿ ತರುತಿದ್ದರವರು ಮುನ್ನೂರಿಪ್ಪ
ತ್ತೈಂಪೋದಿ ಜಯ ಜಯಯೆಂದ ೬

ಕಪ್ಪಕ ತಂದಾನೆ ಕುದುರೆಗಳನ್ನು ಹೆಗ
ಲೊಪ್ಪಿಸಿಕೊಂಡನಾ ರಾಯ
ಸುಪ್ಪಾಣಿಪೆಂಗಳನೊಂದೆ ಪಸೆಯೊಳಿರು
ಳೊಪ್ಪದೊಳ್ವೈವಾಹವಾದ ೭

ಸುಖದೊಳಗಿಂತು ಕೆಲವು ದಿವ ಸಲುತಲ್ಲಿ
ಸುಖಿಗಳರಸನಿರುತಿರಲು
ಸುಖದ ಮೇಲುತ್ತಮ ಸುಖವೆ ಬಪ್ಪಂತೊಂದು
ಸುಖಚಿಹ್ನ ತೋರಿತು ಮತ್ತೆ ೮

ಮೂಡಣ ಖಂಡವ ಸಾಧಿಸಿ ಜಯರಾಜ
ಕೂಡಿಕೊಂಡಲ್ಲಿಯ ನೃಪರ
ಡೌಡೆ ತಂಬಟೆ ಭೇರಿ ಮೊದಲಾದ ವಾದ್ಯದ
ಗಾಢದೊಳೆಯ್ತರುತಿರ್ದ ೯

ರಾಯರ ದೇವಗೆ ಬಂಟನಲ್ಲದೆ ಮಿಕ್ಕ
ರಾಯರಿಗವ ರಾಯನಲ್ತೆ
ಆಯತ ಜಾತಿಕ್ಷತ್ರಿಯನಲ್ತೆ ರಾಜವಿ
ಡಾಯದೊಳೆಯ್ತರುತಿರ್ದ ೧೦

ಒಡೆಯಗೆ ಗಜ ಹಯಗಳ ತಂದ ರಾಯರ
ಪಡೆಯನೊಂಪೆಸೆಯೊಳು ಬಿಡಿಸಿ
ಕಡುಚೆಲ್ವ ಪೆಂಗಳ ತಂದ ಭೂಪರನೊಂದು
ಕಡೆಯೊಳಿಂಬಿಟ್ಟನಾ ಕುಶಲ ೧೧

ಮಾತಿನ ಮಾಲೆಯೇನವರನು ಮುನ್ನಿನ
ರೀತಿಯೊಳ್ಕಾಣಿಸಿಕೊಂಡ
ಆ ತೆರದೊಳೆ ಕಪ್ಪ ಸಂದುವು ಮದುವೆ ಮ
ತ್ತಾ ತೆರದೊಳೆ ನೃಪಗಾಯ್ತು ೧೨

ಚೆನ್ನಿಗರರಸನ ಕಂಡು ಕಣ್ಣಲಿದು ಪ್ರ
ಸನ್ನಲೀಲೆಗೆ ಮನ ಹಿಗ್ಗಿ
ಕನ್ನೆಯರೊಸೆದು ಕೂಡಿದರು ಚಂದ್ರನ ಕಂಡು
ಕನ್ನೈದಿಲರಳುವಂದದೊಳು ೧೩

ಮರೆಯಿಸಿದನು ತಂದೆ ತಾಯಿಗಳನು ಕೂಡೆ
ತೊರೆಯಿಸಿದನು ಬಂಧುಜನವ
ನೆರೆ ಜಾಣನಾ ರಾಯನೊಂದಿರುಳೊಳೆ ತನ್ನೊ
ಳಿರಕವ ಮಾಡಿದನವರ ೧೪

ವೇಳೆಯನರಿದು ಮತ್ತೊಂದು ಪಗಲು ರಾಯ
ನೋಲಗಕಯ್ತಂದು ಮಂತ್ರಿ
ಲೀಲೆಯೊಳಿರ್ದ ರಾಜೇಂದ್ರನ ಮುಂದೆಲ್ಲ
ಕೇಳೆ ಬಿನ್ನೈಸಿದನಿಂತು ೧೫

ಮೂರು ಖಂಡವು ಸಾಧ್ಯವಾದುವಿನ್ನಾಚೆಯ
ಮೂರು ಖಂಡವ ಗೆಲಬೇಕು
ಆರಿತು ಬೆಂಕಿ ಪ್ರಯಾಣಕುಜ್ಜುಗಿಸೆಲೆ
ಮಾರಾಂಕದಲ್ಲಣಯೆಂದ ೧೬

ನೆರೆದರಸುಗಳನೆಲ್ಲರ ಕಳುಹಿದನು ಖೇ
ಚರಮಂತ್ರಿ ವಿನಮಿರಾಜರನು
ಭರತೇಶ ಕಳುಹುವೆನೆಂದು ನೋಳ್ಪೆಡೆಗೆ ಭೂ
ಚರಿಯರ ವೈವಾಹಸಂಧಿ ೧೭

# ವೈದುನ ಮಾತಿನ ಸಂಧಿ

ಹಲಬರ ಕಳುಹಿ ಪ್ರಧಾನಿ ಸಹಾಯರು
ಕೆಲದೊಳಗಿರೆ ಚಕ್ರಧರನು
ಕಳುಪಬೇಕಲ್ಲವೆ ವಿನಮಿಯನೆಂದು ಮ
ತ್ತೊಳುನುಡಿಯಿಂದಿಂತು ನುಡಿದ ೧

ವಿನಮಿ ಕೇಳ್ನಮಿನಾಮಧೇಯನು ತನ್ನೊಂದು
ಘನತರ ಪ್ರೌಢಿಯನೆಸಗೆ
ಮೊನೆದೋರುತಿದ್ದನು ನನ್ನ ಈ ನಾರೆಂದು
ನೆನೆದನೋ ಜಿನ ಜಿನಯೆಂದ ೨

ಏನ ಕಾಣಿಸಿದನು ಜಾಣ್ಮೆಯ ದೇವರಿ
ದೇನ ಚಿತ್ರೈಸುವಿರಕಟ
ಹಾ ನಮ್ಮ ಕರ್ಮದ ಫಲವೈಸೆ ಭಾವಾಜಿ
ನೀನಿಂತು ನೆನೆವರೆಯೆಂದ ೩

ಸಾಕೈ ಸಟೆಯ ವಿನಯ ನಿಮ್ಮ ವಚನ ವ್ಯ
ಲೀಕವಲ್ಲದೆ ಸತ್ಯವಹುದೆ
ಏಕೆ ತಾನೆನ್ನ ಬಳಿಗೆ ಬಾರದಾದನು
ಈ ಕೊಂಕು ನಾನರಿಯದುದೆ ೪

ಬೇಡವೈ ವಿನಮಿ ನಿಮ್ಮಣ್ಣಗೆ ಹೇಳೆನ್ನ
ಕೂಡಿಪ್ಪ ಹೆಮ್ಮೆ ಮೆರೆವುದೆ
ನೋಡುವವದಕೇನು ತಾ ನಾನು ಸರಸವ
ನಾಡುವವೆಂದನು ಕೂಡೆ ೫

ಮತ್ತೇನು ದೇವರ ಸಾಮರ್ಥ್ಯ ನಮ್ಮನೆ
ವೊತ್ತಬೇಕೈಸೆ ಸೋದರದ
ಅತ್ತೆಯ ಮಗನಿಂದ ಹರುಷಿಸಿ ನಗಬಾರ
ದತ್ತೆವೆಂದೆನಿಸಬೇಕಂದ ೬

ಹೋ ವಾಕ್ಯಪ್ರೌಢಿಯಿಂದಾರ ಚಾಳಿಸಬಂದೆ
ಭಾವಿಸ್ಸೆ ನೀವು ಸೋದರದ
ಮಾವನ ಸುತರಲ್ತೆ ನಂಟುಮಾಡುವರೊಮ್ಮೆ
ಮಾವನೆನಿಸಿದಿಸ್ಸೆಯೆಂದ ೭

ನಮಿಯೆಂದು ವಿನಮಿಯೆಂದೆಂದು ಮಾವಾಜಿಯ
ರನುರಿಸಿ ಪೆಸರಿತ್ತರರಿಯ
ನಮಿಸಬೇಡವೆ ನೀವು ನನಗೆ ನಿಮ್ಮಯ್ಯಂದಿ
ರಮುಳವಾಕ್ಯಗಳ ಮೀರುವರೆ ೮

ಭರತೇಶನೆಂದೆನಗಪ್ಪಾಜಿ ನಾಮವ
ಕರುಣಿಸಲಾತನೆಂದಂತೆ
ಭರತೋರ್ವಿಯೆಲ್ಲವನಾಳ್ವೆನ್ಸೈ ನೋಡು ನೀ
ವರರೆ ಬಾಹಿರರಾದಿರೆಂದ ೯

ಪರನಲ್ಲ ವಿನಮಿ ನೀನೆನ್ನವನುರೆ ನಿನ್ನ
ಹಿರಿಯನೊಬ್ಬನೆ ಪರನದರ
ಪರಿಯ ಒಲ್ಲೆನು ಹೇಳಬಾರದು ನೀನರಿ
ದಿಪು ಮುಂದೆ ಕಾಣಿಪೆನೆಂದ ೧೦

ಭಾವಾಜಿ ನಿನ್ನ ಚಿತ್ತವ ನಾವು ನೋಯಿಪು
ದಾವ ಬಲ್ಲವಿಕೆ ಕೇಳ್ನಿನ್ನ
ಭಾವಕೆ ಸಂತೋಷನಪ್ಪಂತೆ ಮಾಳ್ಪೆವೆಂ
ದೋವಿ ವಿನಮಿರಾಜ ನುಡಿದ ೧೧

ವಿನಮಿ ಕೇಳದಕಲ್ಲ ನಿಮ್ಮಣ್ಣ ಹೆಮ್ಮೆಯ
ನೆನಗೆ ತೋರುವುದದು ಗುಣವೆ
ನಿನಗಾಗಿ ತಾಳಿದೆನ್ಸೈ ನನ್ನ ಮುಂದೊಂದು
ಗೊನೆಹವೆ ಪರರ್ಗೆಂದು ನುಡಿದ ೧೨

ಮತ್ತಾರುಮಿಲ್ಲ ಗೂಢವಿದ್ದೆಸೆ ಕೇಳ್ನಿಮ್ಮ
ಹೆತ್ತ ತಾಯೆನ್ನ ಚಿಕ್ಕಂದು
ಎತ್ತಿ ಮುದ್ದಾಡಿರ್ದಳದರಿಂದ ತಾಳ್ದೆನೆಂ
ದತ್ತಿಗೆ ವಿನಯವೇರಿಸಿದ ೧೩

ನಮಿರಾಜಗಾನು ಬಿನ್ನವಿಸಿದೆನೆನ್ನಿದು
ಕ್ರಮವಲ್ಲ ತನ್ನ ಭಾವನನು
ಮಮತೆಯೊಳಗೆ ಬಂದು ಕಾಣಹೇಳೆಂದನು
ತ್ತಮನು ಬುದ್ಧಿಸಾಗರ ಮಂತ್ರಿ ೧೪

ಹಲವು ಮಾತೇನು ಭಾವಾಜಿ ನೀನುತ್ತರ
ಕೂಲವಿಂದ ಗಮಿಸಲಾಕ್ಷಣ
ನಲವಿಂದ ನಮಿರಾಜ ಬಂದು ಕಾಣ್ಬನು ನಿನ್ನ
ತೊಲಗಿ ನಾವಿಹುದೊಂದು ಬದುಕೆ ೧೫

ನಿನ್ನಿಂದ ಹೆಚ್ಚಿನ ಬೀಯಗರಾರುಂಟು
ಭಿನ್ನಪ್ರೀತಿಯ ಮಾಡೆವಿನ್ನು
ನಿನ್ನಯ ಮನಕೆ ಸಂತಸವ ಮಾಡುವೆವೆಂದು
ಚೆನ್ನ ಚೆನ್ನನೆ ತೋರಿ ನುಡಿದ ೧೬

ಆಗಲ್ಕೆ ಮಾವನ ಮಕ್ಕಳೆಂದುರೆ ಪ್ರೀತಿ
ಯೋಗವ ಬಯಸಿದೆ ನಾನು
ಲೋಗರಂತಿರದಿರಿ ನೀವೆಂದು ಮತ್ತನು
ರಾಗದಿ ನುಡಿದನಾ ಚಕ್ರಿ ೧೭

ಇತ್ತ ಬಾರೆಂದು ತನ್ನೊತ್ತಿಗೆ ಕರೆದವ
ಗುತ್ತುಂಗದುಡುಗೊರೆಯಿತ್ತ
ಮತ್ತೆ ಮಂತ್ರಿಗೆ ಕೊಟ್ಟ ನಮಿನಾಮಧೇಯಗೆಂ
ದಿತ್ತನು ದೊಡ್ಡುಡುಗೊರೆಯ ೧೮

ಹರಿಸದಿ ವಿನಮಿ ಕೈಮುಗಿದು ಬೀಳ್ಕೊಂಡ ಖೇ
ಚರಮಂತ್ರಿ ಸಾಷ್ಟಾಂಗವೆರಗಿ
ದೊರೆಯ ಬೀಳ್ಕೊಂಡನೆಲ್ಲರು ವಿಮಾನವನೇರಿ
ತೆರಳಿದರಾಕಾಶವಿಡಿದು ೧೯

ಕೊಡದಿದ್ದರಹುದೆ ಸುಭದ್ರಾದೇವಿಯನಿನ್ನು
ಬಿಡುವನಲ್ಲೀ ಚಕ್ರಿ ನಾವು
ಬಡಬಡಿಸುವ ನಮಿರಾಜನೆಂದತ್ತ
ನುಡಿವುತ ಸಾಗಿದರವರು ೨೦

ಕೃತಮಾಲ ಬಂದನಷ್ಟರೊಳವನದು ದಳ
ಪತಿ ತಂದು ನೃಪನ ಕಾಣಿಸಿದ
ಕ್ಷಿತಿಪನಾಗಳೆ ಭದ್ರಮುಖನ ಕರೆಸಿ ದಳ
ಪತಿಗವನಿಗು ಪೇಳ್ದನಿಂತು ೨೧

ಇವನು [1]ತಮಿಸ್ರ[1]ಗುಹೆಯ ಹೊಲಬಿಗನು ನೀ
ವಿವನೊಡನೆಯ್ದಿ ಹಾದಿಯನು
ಸವರಿ ಬಹುದು ಮತ್ತೆ ದಂಡೆತ್ತಿ ಹೋಹೆವೆಂ
ದವನೀಶ ನೇಮವನಿತ್ತ ೨೨

ತೆಗೆದಗಳಸು ಹೂಳೆ ಮುಂದೆ ವಜ್ರದ ಪಡಿ
ತೆಗೆದು ಕತ್ತಲೆಯಿಡಿದಿರ್ದ
ವಿಗಡದ ಗುಹೆಯನ್ನು ಕಾಕಿಣಿ ಪ್ರಭೆಯಿಂದ
ಹೊಗುವುದೊಯ್ಯಾರದೊಳೆಂದ ೨೩

ಗುಹೆಯ ನಡುವೆ ಸಿಂಧುನದಿ ತೆಂಕಮುಖವಾಗಿ
ವಿಹರಿಸುತಿರ್ದುದಾ ನದಿಯು
ಲಹರಿಗೆ ಮೂಡಣಿಂ ಪಡುವಣಿಂದೆರಡು ದು
ರ್ವಹನದಿ ಕೂಡಿರ್ದುವೆಂದ ೨೪

ಬೆಂಡ ಬಿಟ್ಟರೆ ಗುಂಡಿನಂತೆ ಪಾತಾಳಕೆ
ಕೊಂಡೊಯ್ಯುತಿಹುದು ನಿಮಗ್ನ
ಗುಂಡ ಬಿಟ್ಟರೆ ಮೇಲಕುನ್ಮಗ್ನನದಿ ಹೊಯಿ
ಚೆಂಡಿನಂತಿಡುತಿಹುದೆಂದ ೨೫

ಎಲ್ಲ ನದಿಯ ಚರ್ಮದೊಳು ದಾಟಬಹುದವ
ರಲ್ಲಿಗಾಗದು ಚರ್ಮರತ್ನ
ಬಲ್ಲಿತಾಗಿರೆ ಸೇತುಗಟ್ಟಬೇಕೆಂದು ಭೂ
ವಲ್ಲಭ ತಂತ್ರದೋರಿದನು ೨೬

ಒಡನೆ ಮುಂದೆಯ್ದಿ ಮತ್ತಾ ಗುಹೆಗಿಕ್ಕಿದ
ಬಡಗಣ ಕದವಿನ ಕೀಲ
ಬಡಿದೊತ್ತಿ ತೆಗೆವುದು ನಾವೆಯ್ದುವಿನೆಗಲ್ಲಿ
ಪಡೆಗೂಡಿ ಕೃತಮಾಲನಿರಲಿ ೨೭

---

[1] ತಿಮಿಶ್ರ (ಭ)

ವ್ಯಂತರಾಗ್ರಣಿ ಮೊದಲಾದರ ಖಚರರ
ನಂತರಿಸದೆ ಕೂಡೆ ಕರಸಿ
ಮುಂತವರೊಡಗೂಡಿ ಕಳುಹಿದನವರು ಭೂ
ಕಾಂತಗೆರಗಿ ಪ್ರೋದರತ್ತ ೨೮

ಬಳಿಕ ಮಂತ್ರಿಗೆ ವಿನಯವನಾಡಿ ಮನ್ನಣೆ
ಗಳನಿತ್ತು ಬೀಡಿಗೆ ಕಳುಹಿ
ತಳುವದೆದ್ದನು ಜಿನಶರಣೆನುತರಮನೆ
ಯೊಳಹೊಕ್ಕನಾ ಸಾರ್ವಭೌಮ ೨೯

# ವೃಷ್ಟಿನಿವಾರಣ ಸಂಧಿ

ತಿಂಗಳವೇಲೆ ಭೇರಿಯ ನಾದ ಭೂಗಗ
ನಾಂಗಣ ಮುಸುಕಿ ಸೂಳೈಸೆ
ಸಂಗರಾಂಗಣಮಲ್ಲ ದಂಡೆತ್ತಿ ನಡೆದನು
ತ್ತುಂಗಲಗ್ನದೊಳು ಲಗ್ಗೆಯೊಳು ೧

ಎಣಿಸಿ ಗಾವುದಕೊಂದು ಚಂದ್ರಾರ್ಕರೂಪ ಕಾ
ಕಿಣಿಯಿಂದ ಗುಹೆಯ ಗರ್ಭದೊಳು
ಆಣಿದೊತ್ತಿ ಬರೆಯಲಾ ಬೆಳಗಿಂದ ಭೂಭುಜಾ
ಗ್ರಣಿಯ ಕಟಕ ಗಮಿಸಿದುದು ೨

ಎಂದಿನಂದದಿ ಹಿಂದೆ ಸತಿಯರೆಯ್ತಪ್ಪುದು
ಚಂದವಲ್ಲೆಂದು ರಾಜೇಂದ್ರ
ಅಂದು ತನ್ನೊತ್ತಿನೊಳಿಲ್ಲರ ಕೂಡಿಕೊಂ
ಡೊಂದು ಲೀಲೆಯೊಳೆಯ್ದುತಿರ್ದ ೩

ಲಲನೆಯರಂಜುವರಲಸುವರೆಂದಾಗ
ಹಲವು ರೂಪಾಂತೆಲ್ಲರೊಡನೆ
ಒಳನುಡಿದೋರುತೆಯ್ತಂದನು ಹಿಂದು ಮುಂ
ದೆಳಸಿದ ತೆರೆಯ ಕೋಟೆಯೊಳು ೪

ಪಾಲವ ಡಾಂಟಿದನಲ್ಲಿಗಲ್ಲಿಗೆ ಮುಂದೆ
ಪಾಳೆಯ ಬಿಡುತ ಸೇನೆಯನು
ಪಾಲಿಸುತೊಯ್ಯಾರದೊಳು ದಂಡು ತೆರಳೆ ಭೂ
ಪಾಲನಾ ಗುಹೆಯ ದಾಂಟಿದನು ೫

ಲಾಯದೊಳಿದ್ದಶ್ವ ಬಯಲಿಗೆ ಬಂದು ವಿ
ಡಾಯದಿ ಹರಿದಾಡುವಂತೆ
ಸ್ತ್ರೀಯರ ಕಂಗಳು ಗುಹೆಯಿಂದ ದಾಂಟಿ ನಿ
ಟ್ಟಾಯದೆಣ್ದೆಸೆಯ ನೋಡಿದುವು ೬

ಮದಗದೊಳಗೆ ನೀರು ಗಳಗಳನಿಳಿವಂತೆ
ಮದಗಜ ಹಯ ರಥ ಸೇನೆ
ಕದುಬಿ ಮೊತ್ತದಿ ಪೊರಮಡುತಿದ್ದುದಾ ಗುಹೆ
ಯುದರದಿಂದುತ್ತರ ಧರೆಗೆ ೭

ನಡುವಣ ಮ್ಲೇಚ್ಛಖಂಡವ ಮೆಟ್ಟಿ ಪಾಳೆಯ
ಬಿಡಿಸಿದನಾ ಚಕ್ರವರ್ತಿ
ಪಡೆ ಬರುತಿರ್ದುದು ಸಾಲಾಗಿ ದಿನಚರಿ
ವಿಡಿದು ಗುಹಾಮುಖದಿಂದ ೮

ಊಳೆಯದೆ ಒಲವೆಲ್ಲ ಬಂದುದ ಕೇಳ್ದದೆ
ಯೊಳು ರಾಯ ನಿಶ್ಚಿಂತನಾದ
ತಿಲಮಾತ್ರ ಮರಹುಂಟೆ ಕೃತಮಾಲಗವನ ಪೆ
ರ್ಬಲಕಿತ್ತ ಕರೆದು ಮನ್ನಣೆಯ ೯

ಸರ್ವಬಲವ ನೋಡಿ ಸಂತವಿಟ್ಟಾ ಮಧ್ಯ
ದುರ್ವಿಯೊಳರಸನಿಪ್ಪಾಗ
ಪೂರ್ವದೊಳಾರು ಕಂಡರಿಯದುದೊಂದು ವಿ
ಗುರ್ವಣೆಯಾದುದೇನೆಂಬೆ ೧೦

ಆ ವಸುಮತಿಗೆ ಚಿಲಾತರಾಜನು ಬಳಿ
ಕಾವರ್ತರಾಜನೆಂದೆಂಬ
ಭೂವರರಿಬ್ಬರಗ್ಗಳರವರೆಸಗಿದ
ರಾವೇಳೆಯೊಳಗೊಂದು ಭಯವ ೧೧

ಎಂದುಯಿಲ್ಲದ ಚಕ್ರಿ ಬಂದನಿವನಿಗಾವು
ವಂದಿಸುವೆವೆ ಘಡಾಯೆಂದು
ಮಂದಿಸಹಿತ ಕಾದಿ ತೆರಳಿಸಲರಿದು ಮ
ತ್ತೊಂದು ತಂತ್ರವ ಕಂಡರವರು ೧೨

ಕಾಲಮುಖರು ಮೇಘಮುಖರೆಂಬ ತಮ್ಮ ವಿ
ಶಾಲ ಕುಲಾಧಿದೈವಗಳ
ಆಲಸ್ಯವಿಲ್ಲದರ್ಚಿಸಿ ಭಜಿಸಿದರವು
ಮೇಲೆ ಮೈದೋರಿದುವೊಡನೆ ೧೩

ನಮ್ಮ ನೀವೇನು ಕಾರಣ ಜಪಿಸಿದಿರಿಯೆಂ
ದುಮ್ಮಿ ದೈವಗಳು ಕೇಳಿದುವು
ನಿಮ್ಮ ಭಕ್ತರು ನಾವು ಪರರಿಗೆರಗುವುದು
ಸಮ್ಮತಾಂಗವೆಯೆಂದರವರು ೧೪

ಕಾದಿ ಜಯಿಸಲೆವುಗರಿದು ಪಾಯ್ದುಳ ಬಂದ
ಹಾದಿಯೊಳ್ತಿರುಗಿ ಹೋಹಂತೆ
ಭೇದವಿಲ್ಲದೆ ಮಳೆಗರೆದು ಬೇಸರಿಪೆವೆಂ
ದಾ ದೈವ ಕಳುಹಿದುವವರ ೧೫

ಒಡ್ಡಿತಾಗಳೆ ಮುಗಿಲಾಕಾಶ ತುಂಬಿ ಮಾ
ರೊಡ್ಡಿದಾನೆಯ ಹಿಂಡಿನಂತೆ
ಅಡ್ಡಪಿಡ್ಡಗೆ ಸುಳಿದುವು ಕಾಲರಾಹುವಿ
ನೊಡ್ಡು ಸಂಚಲಿಸುವಂದದೊಳು ೧೬

ಮೊಗಸಿತು ಚಂದ್ರಸೂರ್ಯರಿಗೆ ಮುಸುಕು ಕಾರ
ಮುಗಿಲು ಸುತ್ತಲು ಪಸರಿಸಿತು
ಹಗಲು ಕತ್ತಲೆ ಕವಿದಂತಾಯ್ತು ದುಷ್ಟದೈ
ವಗಳ ವಿಗುರ್ವಣೆಯಿಂದ ೧೭

ಮುಂಚಿ ಕಾರ್ಮುಗಿಲೊಡ್ಡು ಬಹುದೆಂದು ದೈವಗ
ಳಂಚಿನ್ನೊಳಿಂದು ಸೂಚನೆಗೆ
ಕುಂಚವ ಬೀಸುತಿದ್ದುವೊಯೆನೆ ಚೆಲುವಾಗಿ
ಮಿಂಚು ಮಿಂಚಿದುವಲ್ಲಿಗಲ್ಲಿ ೧೮

ಕೊಡದ ಸಾಲಂದದ ಮುಗಿಲ ಕಾಮನ ಬಿಲ್ಲ
ಬಡಿಗೆಯಿಂ ಬಡಿಯೆ ದೈವಗಳು
ಒಡೆದಂತೆ ಗುಡುಗಾದುದೊಳಗಿದ್ದ ನೀರು ತೊ
ಟ್ಟಿಡುವಂತೆ ಕರೆದುದು ವೃಷ್ಟಿ ೧೯

ಮುಗಿಲೆಂಬ ಮದಗಜಗಳ ಮದಧಾರೆಯೊ
ಮಿಗೆ ಮೇಘವೆಂಬ ರಾಹುಗಳು
ಉಗುಳುವ ವಿಷವೊಯೆಂಬಂತಾಗ ಕಷ್ಟ ವೃ
ಷ್ಟಿಗಳ ಸೂಸಿದುವು ದೈವಗಳು ೨೦

ಏನೆಂಬೆ ಪಡೆ ಬೆಚ್ಚುವಂತಾಲಿವರಲ ಮ
ತ್ತಾನೆಯ ತೋರದೊಳ್ಕರೆಯೆ
ಆನೆಕಲ್ಲಿಂದಿಂದು ಮುಟ್ಟಲು ನುಡಿವರು
ಮಾನವರಾಲಿಕಲ್ಲುಗಳ ೨೧

ಅಗಣಿತ ದೈವಗಳೊಂದು ಹಬ್ಬವ ಮಾಡ
ಲಗಲದೊಳ್ನೆರೆದೊತ್ತಲಾಗಿ
ಗಗನವೆಂದೆಂಬ ಸೇವಗೆಯೊರಳಿಂದ ಸೇ
ವಗೆಯಿಳಿವೊಲು ಮಳೆಯಾಯ್ತು ೨೨

ಕರೆದುದು ವೃಷ್ಟಿಯೇನೆಂಬೆನಂಬರವೆ ಬಾ
ಯ್ದೆರೆದುಗುಳಿದುದೊಯೆಂಬಂತೆ
ಕಿರುಧಾರೆಯಲ್ಲ ತೆಂಗಿನ ಮರಗಳ ತೋರ
ದುರುವ ಧಾರೆಯೊಳೆಡೆವಿಡದೆ ೨೩

ಕೆರೆ ಬಾವಿ ಹಳ್ಳ ಕೊಳ್ಳಗಳು ಬೆಂಚೆಗಳು ಹೆ
ದ್ದೊರೆ ಹೊಳೆ ತಗ್ಗುತಿಟ್ಟೆಲ್ಲ
ಮರೆಸಿ ಯೇಕಾರ್ಣವವಾಯ್ತು ದೈವಗಳುಬ್ಬಿ
ಕರೆವುತಿದ್ದುವು ಮತ್ತು ಮಳೆಯ ೨೪

ಬಳಸಿದ್ದ ಕೋಂಟೆಯ ಮಿಾರಿ ಪಾಳೆಯಕೆ ನೀ
ರಿಳಿವುದ ಕಂಡು ಪಾಯ್ದಳವು
ಗಳಬಳಿಸಲು ಛತ್ರ ಚರ್ಮರತ್ನಗಳನಾ
ಗಳೆ ಚಕ್ರಿ ಹರಹೆಹೇಳೆಂದ ೨೫

ಛತ್ರ ರತ್ನವ ಮೇಲೆ ಪಸರಿಸಿ ಚರ್ಮವ
ಧಾತ್ರಿಯೊಳಗೆ ಹರಹಿದರು
ಶತ್ರುವಿಜಯನ ಪಾಯ್ದಳವಿದ್ದುದಲ್ಲಿ ಬ
ಹಿತ್ರದೊಳ್ಪರದರಿಪ್ಪಂತೆ ೨೬

ಹೊಳಿತು ಚಂದ್ರಸೂರ್ಯರ ಪ್ರಭೆ ಮಳೆಯಿಂದ
ಕಾಳಗತ್ತಲೆ ಹೆಚ್ಚಿತಾಗ
ಢಾಳದ ಚಕ್ರ ಕಾಕಿಣಿಗಳ ಬೆಳಗಿಂದ
ಪಾಳೆಯವಿರ್ದುದಾ ನೃಪನ ೨೭

ಹಗಲಿರುಳೆಡವಿಡದೀ ಮಳೆ ಕರೆದುದು
ತೆಗಹಿಲ್ಲ ಮುಂದೆ ಹೆಚ್ಚುತಿದೆ
ತಗಹಿಕ್ಕಿದಂತಾಯ್ತು ಪಾಯ್ದಳಕೆಂದು ಚ
ಕ್ರಿಗೆ ಮತ್ತೆ ಯೋಚನೆಯಾಯ್ತು ೧೮

ಹೋಗದೆ ಸುರಿವುತಿದ್ದುದು ನೋಡು
ವಾಗ ದೈವಗಳ ಪ್ರೇರಣೆಯೊ
ಮಾಗಧಾಂಕಿತ ಜಯನಾಮ ಹೊರಗೆ ಮೇಲು
ಭಾಗೆಯ ನೋಡಿರ್ದೆಯೆಂದ ೧೯

ಕಂಡರವರು ಮೇಲುಭಾಗೆಯೊಳಗೆ ಸಾಲು
ಗೊಂಡಿದ್ದ ದೈವಗಳೊಡ್ಡ
ಮಂಡೆ ಮಣಿದು ಚಕ್ರಿಗೊರೆದು ಬೆಸನವ ಕೈ
ಕೊಂಡು ಲಂಘಿಸಿದರಂಬರಕೆ ೨೦

ತಂಬಟೆ ಭೇರಿ ತಿತ್ತಿರಿ ಕಾಳೆ ನಿಸ್ಸಾಳ
ಚೆಂಬಕವರೆ ಪಟಹಗಳ
ಬೆಂಬಳಿಯೊಳು ಬಡಿವುತ ಹೋಗಿ ತಾಗಿದ
ರಂಬರದೊಳಗೆ ದೈವಗಳ ೨೧

ದೂರದೊಳಗೆ ನಿಂದು ದೈವಗಳುಬ್ಬಿ ಕ
ಠೋರಯುದ್ಧಕ್ಕೆ ಮನವಿಕ್ಕಿ
ನೀರ ಸೂಸುವುದ ಮಾಣ್ದೊಡನೆ ಗುಂಡಿನ ಬಿರು
ಧಾರೆಯ ಸೂಸಿದುವಾಲ್ದು ೨೨

ಅವರಿಟ್ಟ ಗುಂಡ ತಪ್ಪಿಸುತಾಂತು ವ್ಯಂತರ
ರವರನಿಟ್ಟರು ಗುಂಡಿನಿಂದ
ಪವಿಯ ಹರಿಗೆ ಜೋಡುಟಾಳಿಯ ಬಲದಿಂದ
ವಿವಿಧ ಖೇಚರರು ನೂಂಕಿದರು ೨೩

ಇನ್ನೊಂದನೇನೆಂಬೆನೀ ಕಡೆಯೊಳಗಿನ
ರುನ್ನತದಿಂದೊತ್ತುವಾಗ
ಬೆನ್ನ ಕಡೆಯೊಳು ದೈವಗಳನೊತ್ತುತ ಬಂದ
ರಿನ್ನಾರೋ ಅವರೂ ವ್ಯಂತರರು ೨೪

ಜೋಡಿಸಿ ಪೆಟಲು ತುಪಾಕಿ ಮುಸುಂಡಿ ಸಿಂ
ಗಾಡಿಯೊಳಿಟ್ಟೊತ್ತುವಾಗ
ಮಾಡದ ಮೇಲಣ ಕಾಗೆಗಳಂತೆ ಕೆ
ಟ್ಟೋಡಿದುವಖಿಲ ದೈವಗಳು ೩೫

ಹಿಡಿ ಹಿಡಿ ಕಾಲಮುಖನ ಮೇಘಮುಖನನೆಂ
ದೊಡನೆ ಬೆನ್ನಟ್ಟಿ ವ್ಯಂತರರು
ಕುಡಿಮಿಂಚಿನಂತೆ ಹೇಮಾದ್ರಿಯ ನೆಗೆದು ಕಂ
ಗೆಡುತೋಡಿ ಹೋದರಾ ಖಳರು ೩೬

ಕುಲದೈವ ಸೂಸುವ ಮಳೆಯ ನೋಡುತ ಹೆಮ್ಮೆ
ಯೊಳಗಿದ್ದು ಮಳೆ ನಿಲ್ಲಲೊಡನೆ
ತೊಲಗಿ ಚಿಲಾತಭೂವರನೊಂದು ದೆಸೆಯೊಳು
ತಲೆಮರೆಸಿದನು ಮುಂದರಿದು ೩೭

ಮಳೆ ನಿಂದರೇನೆಮ್ಮ ಕುಲದೈವಗಳು ಕಾದಿ
ಗೆಲವೆಯೆಂದಾವರ್ತರಾಜ
ಕುಲಲಿಯೆನುತ ನೋಡುತಿದ್ದನಾತನ ಭೂತ
ಗಳು ತೋರೆ ಜಯರಾಜ ಪಿಡಿದ ೩೮

ಕಾಳಗದೊಳು ಕಾದಿದವರು ಹಲಬರಲ್ಲಿ
ಕೋಳುಸಿಕ್ಕಿದುದೊಬ್ಬ ಕಲಿಗೆ
ತೋಳೆರಡನು ಕಟ್ಟಿ ಜಯರಾಜನಿತ್ತ ಚ
ಡಾಳಿಸಿ ತರುತಿದ್ದನತ್ತ ೩೯

ಆವರ್ತನೃಪನ ತಂದಿದಿರಲ್ಲಿ ಕೆಡಹಿ ಸೇ
ನಾವರನುಬ್ಬಿ ಕೈಮುಗಿದು
ದೇವ ಚಿತ್ರೈಸಿವನೀಗ ದೈವಗಳಿಂದ
ನೋವುಗಾಣಿಸಿದವನೆಂದ ೪೦

ಪಮಳದಿ ಬಂದೆರಗದೆ ನನಗಿದಿರಾಗಿ
ಕದನವೆಸಗಿದನಿವನೆ
ಒದೆ ಒದೆ ತೊಂಡನ ಮಕುಟವನೆಂದು ಕೋ
ಪದಿ ನುಡಿದನು ಚಕ್ರಧರನು ೪೧

ಮಟ್ಟಗೆ ಕಾವಲೊಳಿರಲಿವನೆಂದಾಗ
ಕೊಟ್ಟನು ದಳಪತಿಗವನ
ಕಟ್ಟಬಿಡಿಸಿ ಭೃತ್ಯನೊಡನೊಂದು ಮನೆಗವನ
ಕೊಟ್ಟು ಕಳುಹಿದನಾಕ್ಷಣವೆ ೪೨

## ಸಿಂಧುದೇವಿಯಾಶೀರ್ವಾದ ಸಂಧಿ

ಏಳು ದಿವಸ ಮಳೆಯೊಳಗಲಸಿದ ತನ್ನ
ಲೋಲನೇತ್ರೆಯರನಾ ನೃಪತಿ
ಲಾಲನೆಗೈದನೆರಡು ದಿನ ಸರಸ ಸ
ಲ್ಲೀಲೆಯೊಳೇನು ಕೋವಿದನೊ ೧

ಒಳಗೆ ತನ್ನಬಲೆಯರೆಲ್ಲರ ಮನ್ನಿಸಿ
ಬಳಿಕ ಮೂರನೆಯ ದಿನದೊಳು
ಹೊಳೆವ ಚಾವಡಿಯೊಳೋಲಗವಾಗಿ ಕದನದ
ಕಲಿಗಳೆಲ್ಲರ ಕರೆಯೆಂದ ೨

ಬಂದು ಕೈಮುಗಿದು ಸರ್ವರು ಕಂಡರಾನಂದ
ದಿಂದಾತನೆಲ್ಲರ ನೋಡಿ
ದಂದುಗಬಟ್ಟಿರ್ರೈ ಮೊನ್ನೆ ನೀವೆಲ್ಲರೂ
ಸಂದ ಸಂಗ್ರಾಮದೊಳೆಂದ ೩

ನವಗಾವ ದಂದುಗ ನಿನ್ನೊಂದು ದಿವ್ಯನಾ
ಮವ ನೆನೆವುತ ನಡೆವಾಗ
ಸುವಿಲಾಸವಾಗಿಹುದೆಂದೊಡೆಯನಿಗೆ ಬಿ
ನ್ನವಿಸಿದರೆಲ್ಲರರ್ತಿಯೊಳು ೪

ಹುಸಿಯಲ್ಲ ನಾವೀಚೆ ನಡೆವಾಗ ಮೊನ್ನೆ ತಾ
ಮಸದೈವಗಳನಿಬ್ಬರಾಚೆ
ಅಸಮಸೇನೆಯೊಳೊತ್ತಿ ಬಂದರು ನಿನ್ನಯ
ಹೆಸರ ಹೇಳುತ ಹಿತವಾಗಿ ೫

ಎನೆ ಚಕ್ರಿ ನಲಿದವರಾರೆಂದು ಮಾಗಧಾಂ
ಕನ ಕೇಳಿದನು ಕೇಳಲೊಡನೆ
ಮನುಜೇಂದ್ರ ಚಿತ್ತವಿಸವರೆಮ್ಮ ವ್ಯಂತರ
ಜನತತಿಗಾರಾಧ್ಯರೆಂದ ೬

ಒಬ್ಬನು ಸಿಂಧುದೇವನು ಸ್ವಾಮಿ ಲಾಲಿಸಿ
ನ್ನೊಬ್ಬ ಗಂಗಾದೇವನವರು
ಇಬ್ಬರು ಬಂದು ದೈವಗಳೊಡ್ಡನೊತ್ತಿದ
ರೊಬ್ಬುಳಿಯಾಗಿ ಜಾರಿದರು ೭

ಆವರ್ತನನುಜ ಮಾಧವನು ಚಿಲಾತನು
ದೇವರ ಕಾಣಲೆಯ್ತಂದು
ತಾಪಂಜುತಿದ್ದರು ಕರುಣಿಸೆಂದೊಡೆಯನಿ
ಗಾ ವೇಳೆಯೊಳು ಪೇಳ್ದನವನು ೮

ಕೊರಳಿಗೆ ಚಿಂದಿಯ ಹಾಕಿ ಬಂದವರಿಬ್ಬ
ರರಸನ ಮುಂದಡ್ಡಗೆಡೆದು
ಶರಣಾಗತವಜ್ರಪಂಜರ ಪಾಲಿಸು
ಮರುಳರನೆಂದೊರಲಿದರು ೯

ವೇಳೆಯರಿದು ಮುಂದೆ ಬಹುದೆಂದು ನುಡಿದು ನೃ
ಪಾಲ ಚಿಲಾತಗವನಿಗೂ
ಮೇಲೆ ಮನ್ನಣೆಯಿತ್ತನಾವರ್ತಸಹಿತ ನಿ
ರಾಲಸ್ಯದೊಳು ಕಳುಹಿದನು ೧೦

ವ್ಯಂತರಪತಿಗಳೆಲ್ಲರ ಮಾಗಧೇಂದ್ರನು
ಪಿಂತಿಕ್ಕಿಕೊಂಡೆಯ್ದಿ ನಮ್ಮ
ಅಂತಸ್ಥವೊಂದ ಪಾಲಿಪುದೆಂದು ರಾಯನ
ಮುಂತೆ ಸಾಷ್ಟಾಂಗವೆರಗಿದ ೧೧

ದೇವ ಬಿನ್ನಹ ಸಿಂಧುದೇವನು ಗಂಗಾ
ದೇವನೆಂಬಿಬ್ಬರು ಜಿನನ
ಭಾವನೆವಿಡಿದಿಹರೆಮ್ಮೆಲ್ಲರಿಗೆ ಪೂಜ್ಯ
ಭಾವರಾಗಿಹರನವರತ ೧೨

ನಿನ್ನೊಳು ಭಕ್ತಿಯುಳ್ಳವರಹುದದ ಪೇಳ
ಲಿನ್ನೇಕೆ ನೀನರಿಯದುದೆ
ಮನ್ನಣೆಯೊಳಗೆ ಕಾಣಿಸಿಕೊಳ್ಳಬೇಕೆಂದು
ಬಿನ್ನವಿಸಿದನೊಡೆಯನಿಗೆ ೧೩

ಆಗಲ್ಬೈ ನೀವಿದಕಡ್ಡ ಬೀಳಲದೇಕೆ
ಮಾಗಧ ನೀನೆಂದ ನುಡಿಯು
ಹೋಗಲಾಡುವೆನೆ ಕಾಣಲಿ ಕರೆಸೆಂದನು
ರಾಗಿಸಲೆಲ್ಲ ವ್ಯಂತರರು ೧೪

ಬಂದು ಕಾಣ್ಕೆಯನಿಕ್ಕಿ ಜಂಬುಕಾನದೊಳೋಜೆ
ಯಿಂದ ಭದ್ರಾಸನಾದಿಗಳ
ಮುಂದೆ ಪಾಗುಡವಿತ್ತು ಕೈಮುಗಿದರು ಸನ್ನೆ
ಯಿಂದ ಚಕ್ಕಳದಿ ಕುಳಿತರು ೧೫

ನಿನಗೆ ವಿರೋಧಿಯಾದಿವನೀಗ ತನ್ನ ತಾ
ತನಗೆ ವಿರೋಧಿಯಾದವನು
ನಿನಗೆ ಹಿತವ ನೆನೆದವನೀಗ ಚೆನ್ನಾಗಿ
ತನಗೆ ಹಿತವ ನೆನೆದವನು ೧೬

ಒಡೆಯನ ಸಹಜಗುಣವನೆ ಬಣ್ಣಿಸಿದಿರೆಂ
ದೊಡನೆ ವ್ಯಂತರಿಗರಾಡಿದರು
ವೊಡವಿಗೊಡೆಯನದನಾಲಿಸುತೊಲವಿಂದ
ನುಡಿದನಿಂತೆಂದವರೊಡನೆ ೧೭

ಕೊಡುವ ಕೊಂಬೊಂದು ಬೀಯಗತನ ಕೂಡಮು
ನುಡಿಯೊಳೆ ಮಾಳ್ಪೆವಿನ್ನೆಮ್ಮ
ಮಡದಿಯರ್ನಿಮ್ಮಕ್ಕಂದಿರು ನಿಮ್ಮ ಸತಿಯರೆ
ಮ್ಮೊಡಹುಟ್ಟಿದನುಜೆಯರೆಂದ ೧೮

ನಿಮ್ಮೂರೊಳಿದ್ದ ಜಿನೇಂದ್ರಬಿಂಬವ ನೋಡ
ಲೆಮ್ಮ ಚಿತ್ತದೊಳರ್ತಿಯುಂಟು
ಘಮ್ಮನೆ ನಾಳೆ ಬಪ್ಪೆವು ಮುಂದೆ ತೆರಳಿಯೆಂ
ದೊಮ್ಮೊದಲೊಳೆ ಬೀಳುಕೊಟ್ಟ ೧೯

ನಲಿದುಬ್ಬಿ ಕೈಮುಗಿದವರು ಹೋದರು ರಾಯ
ತಳುವದೆದ್ದನು ಮರುದಿವಸ
ಹಲವು ಪಯಣದಲ್ಲಿ ಸಿಂಧುಕೂಟವ ಸಾರಿ
ಕೆಲದಲ್ಲಿ ಪಾಳೆಯ ಬಿಟ್ಟ ೨೦

ದೇವವಾಹಿನಿಗೂಡಿ ಬಂದು ಸುವಸ್ತುಚ
ಯಾವಳಿಯುಲುಪೆಯ ತಂದು
ಆ ವೀರಕಟಕವೆಲ್ಲವು ತಣಿವೊಲು ಸಿಂಧು
ದೇವ ಮನ್ನಿಸಿದ ಭಾವನನು ೨೦

ಗಗನವ ತುಡುಕುವ ಹಿಮಶೈಲನೊಳು ಪುಟ್ಟಿ
ನೆಗೆದು ದಕ್ಷಿಣ ಮುಖವಾಗಿ
ಧಿಗಿಧಿಗಿನಿಳೆಗೆ ಬೀಳುವ ಸಿಂಧುನದಿಯನಾ
ಸುಗುಣ ಚಕ್ರೇಶ ನೋಡಿದನು ೨೨

ಮೇಲೆ ಕಿರಿದು ಬರ ಬರ ತೆರಪಾಗಿರೆ
ನೀಳವಾದೊಂದು ಮುತ್ತಿಡಿದ
ಕಾಳಿಯ ತಲೆಕೆಳಗಾಗಿ ಪಿಡಿದವೊಲು
ಬೀಳುತಿದ್ದುದು ಸಿಂಧುತಟಿನಿ ೨೩

ನೆಲದ ಮೇಲೊಂದು ವಜ್ರದ ಕಿರುಪರ್ವತ
ನೆಲಸಿಹುದದರ ತುದಿಯೊಳು
ಪಳುಕಿನ ಜಿನಬಿಂಬೆಸೆವುದಾ ಬಿಂಬದ
ತಲೆಯೊಳಾ ನದಿ ಬೀಳುತಿಹುದು ೨೪

ಮಾನಿನಿಯರಿಗೆ ತೀರ್ಥದ ಚೆಲ್ವ ಕಾಣಿಸಿ
ಜೈನಬಿಂಬವ ಸ್ತುತಿಗೈದು
ಸ್ನಾನವ ಮಾಡಿ ಭೂಸುರರಿಗಿತ್ತನು ಭೂರಿ
ದಾನವ ಮನದಣಿವಂತೆ ೨೫

ಶ್ರೀ ವಿಪ್ರಜನದ ಪರಕೆ ಕೇಳುತಿರೆ ಸಿಂಧು
ದೇವನೆಯ್ತಂದೊತ್ತ ಸಾದ್ರ್ದ
ದೇವರ ತಂಗಿ ದೇವರ ಕಾಣ್ಬೆನೆಂಬಳೆಂ
ದೋವಿ ಕರ್ಣದೊಳು ಸೂಚಿಸಿದ ೨೬

ಲೇಸೆನುತೊಡಬಟ್ಟು ಬಳಿಕ ವಿನಯದಿಂದ
ಭೂಸುರರೆಲ್ಲರ ನಿಲಿಸಿ
ಆ ಶುಖಿಯೊಳವೊಕ್ಕು ಸಸಿಯರುವೆರಸಿವಿ
ಲಾಸದೊಳೋಲಗವಾದ ೨೭

ಗರುವಿಗೆ ಗಾಡಿ ಶೃಂಗಾರ ಲಾವಣ್ಯ ಮೈ
ಸಿರಿಗೂಡಿ ನಡೆದು ಬಹಾಗ
ಭರತರಾಜೇಂದ್ರನ ತಂಗಿಯೆ ತಪ್ಪದೆಂ
ಬಿರವಿನೊಳ್ಬಂದಳಾ ದೇವಿ ೨೮

ಹತ್ತಿರ ಸಾರ್ದು ಹಸ್ತಗಳಲ್ಲಿ ಹೊಳೆವೆಳೆ
ಮುತ್ತಿನಕ್ಷತೆಗಳ ತುಂಬಿ
ಎತ್ತಿ ನಿಂದಣ್ಣಾಜಿ ಸುಖಬಾಳು ಬಾಳೆಂದು
ಮುತ್ತೈದೆ ಹರಸಿ ಸೂಸಿದಳು ೨೯

ಅಣ್ಣನ ಹರಸಿ ಮತ್ತಾತನೊತ್ತಿನೊಳಿದ್ದ
ಹೆಣ್ಣುಗಳೆಲ್ಲರನಾಕೆ
ಕಣ್ಣರ್ತಿವಿಗೆ ನೋಡಿ ನಗುತ ಹರಸಿದಳು
ಬಣ್ಣವಣ್ಣಿಗೆಯೊಳೇನೆಂಬೆ ೩೦

ಹರೆಯ ಜಾರದೆ ಮುಪ್ಪುದೋರದೆ ಸವತಿ ಮ
ತ್ಸರವಾಗದೆನ್ನಣ್ಣನೊಡನೆ
ಸ್ಥಿರ ಬಾಳಿರೆಂದು ದೇವಾಂಗದ ಸೀರೆಯ
ಹರಸಿ ಸರ್ವರಿಗಿತ್ತಳಾಕೆ ೩೧

ಎರಡು ಪೊತ್ತಬಲೆಯರ್ವೆರಸಿ ರಾಜೇಂದ್ರನಾ
ದರದೊಳಾರೋಗಣೆಗೈದು
ಇರುಳ ಕಳೆದು ಮರುದಿನದಲ್ಲಿ ತಂಗಿಯ
ಕರೆದು ಮನ್ನಿಸಿದನೇನೆಂಬೆ ೩೨

ಬಾ ಸಿಂಧುದೇವಿ ಮುನ್ನೆನ್ನೊಬ್ಬ ತಂಗಿ ಕೈ
ಲಾಸದೊಳ್ತಪಸುದಾಳಿದಳು
ವ್ಯಾಸಂಗದಾ ನೋವು ನಿನ್ನ ಕಂಡಗಲಿತೆಂ
ದಾ ಸುಮುಖರ ದೇವ ನುಡಿದ ೩೩

ಅವಳ ಪೆಸರು ಬ್ರಾಹ್ಮಿಲಾದೇವಿಯೆಂದು ನಿ
ನ್ನವಯವದಂತವಳಿರವು
ನವಗಿನ್ನು ಬ್ರಾಹ್ಮಿಲಾದೇವಿ ನೀನೆಂದು ಮಾ
ನವಪತಿ ನುಡಿದನಾಕೆಯೊಳು ೩೪

ಅವ್ವ ನೀನೊಸಗೆ ಮಾಡಿದೆ ನವಗೆಲ್ಲರ್ಗೆ
ಸುಮ್ಮಾನಗೆಯ್ದೆ ಮುಂದಿನ್ನು
ನವ್ಮೊಳೊಂದೊಸಗೆಯಹಾಗ ಸ್ತ್ರೀಪುರುಷರ
ನಿಮ್ಮ ಕರೆಸಿಕೊಂಬೆನೆಂದ ೩೫

ತಂಗಿ ನೀ ನಿಲ್ಲೆಂದು ನಿಲಿಸಿಯಾ ರಾಜಲೀ
ಲಾಂಗನಾಕ್ಷಣದೊಳಲ್ಲಿಂದ
ಮುಂಗಡೆಗೆದ್ದನು ಪರನಾರಿಸೋದರ
ಚಾಂಗು ಭಲಾಯೆಂದು ಹೊಗಳೆ ೩೬

ನಾರಿಯರೆಲ್ಲರು ಸಿಂಧುದೇವಿಗೆ ಸರ
ಸಾರೂಢಿದೋರಿ ಮೌಕ್ತಿಕದ
ಹಾರ ಮಾಣಿಕ್ಯದುಂಗುರ ಮೊದಲಾದುಪ
ಚಾರ ವಸ್ತುವ ಕೊಟ್ಟರೊಸೆದು ೩೭

ಅನ್ಯೋನ್ಯ ವಿನಯವ ಬಿಡದಿರಿಯೆಂದು ತಾ
ವನ್ಯೋನ್ಯ ನೋಡಿ ಮಾತಾಡಿ
ಮಾನ್ಯಕಾಂತೆಯರು ಮಾನ್ಯಾಂಗನೆಯಿಂದ ಸೌ
ಜನ್ಯದಿ ಬೀಳ್ಕೊಂಡರೊಡನೆ ೩೮

# ಅಂಕಮಾಲಾ ಸಂಧಿ

ಸಿಂಧುದೇವನ ವಿನಯದಿ ನಿಲಿಸುತ ಗುಣ
ಸಿಂಧು ಜಿನೇಂದ್ರನ ನೆನೆದು
ದಾಂ ಧಣಂ ಧಾಣೆಂಬ ನಿಸ್ಸಾಳಧ್ವನಿಯ ಪ್ರ
ಬಂಧದೊಳಿದ್ದನಾ ರಾಯ ೧

ಗಂಗಾನದಿಯಿನ್ನು ಗಾವುದವೆಂಬಾಗ
ಗಂಗಾದೇವನು ತನ್ನ
ಸಂಗಸಂಪದಗೂಡಿ ಬಂದಿದಿರ್ಗೊಂಡನು
ಸಿಂಗಾರಕಾರ ಭಾವನನು ೨

ನಡೆದು ಗಂಗಾನದಿಯೊತ್ತಿನೊಳ್ಪಾಳೆಯ
ಬಿಡಿಸಿದನಾ ಚಕ್ರವರ್ತಿ
ಹಿಡಿದುದುಲುಪೆ ಸೇತುಗಟ್ಟಾಗಿ ಭಾವನ
ಪಡೆಯನಾ ಸುಖಿ ತಣಿಸಿದನು ೩

ಮೈದುನ ಮಾಡಿದ ವಿನಯದಿಂದಾ ದಿನ
ಹೋದುದು ಮರುದಿನ ತನ್ನ
ಸೋದರಿಗನ ಕಾಣ್ಬೆನೆಂದರ್ತಿಯಿಂದ ಗಂ
ಗಾದೇವಿ ಬಂದಳು ತಾನೆ ೪

ರಾಜೀವವನಕೆ ಪೆಣ್ಣಂಚೆಗಳೊಡಗೂಡಿ
ರಾಜಹಂಸವನೆಯ್ದಿಪಂತೆ
ರಾಜಗೃಹವ ಹೊಗಿಸಿದಾಕೆ ಚೆಲ್ವ ಕಾಂ
ತಾಜನ ಕೂಡಿ ಚಕ್ರಿಯನು ೫

ಮಜ್ಜನ ಭೋಜನಗೈದು ಮತ್ತಾದಿನ
ಸೆಜ್ಜೆವನೆಯೊಳು ವಿಶ್ರಮಿಸಿ
ಸಜ್ಜನಾನಂದನು ಮರುದಿನದೊಳು ತೀರ್ಥ
ದುಜ್ಜುಗಕೆಚ್ಚೈಮಾಡಿದನು ೬

ಅರುಹನ ಪ್ರತಿಮೆಯೆಂಬಮಳಚಂದ್ರನ ಕಂಡು
ಕರಗಿ ಹಿಮಾದ್ರಿಯೆಂದೆಂಬ
ಸುರುಚಿರ ಶಶಿಕಾಂತ ಸೋರುತಿರ್ಪುದೊಯೆನೆ
ಬರುತಿರ್ದುದಾ ಪುಣ್ಯಗಂಗೆ ೭

ಅರ್ಭಕ್ತಿಯೊಳು ಮಿಂದರವರ ಪಾಪಗಳ ತಾ
ನಾರ್ಭಟಸೋರುತಟ್ಟುವೊಲು
ಭೋರ್ಭೋರು ಘುಮುಘುಮು ಝುಲ್ಲುಝುಲ್ಲೆಂಬ ಸಂ
ದರ್ಭದೊಳಿಳಿದುದಾ ತೀರ್ಥ ೮

ಅರಮನೆಯೊಳಗೆ ಮತ್ತಾ ದಿನ ತಡೆದು ಶ್ರೀ
ಗುರುಹಂಸನಾಥನ ಭಜಿಸಿ
ಹಿರಿದು ಕರ್ಮಗಳ ನಿರ್ಜರೆಮಾಡಿ ಮರುದಿನ
ತೆರಳಲೆಳಸಿದನೇನೆಂಬೆ ೯

ತಂಗಿ ಬಾ ನಾನಿಂತು ದಂಡುಮಾಡಿದ ನೋವು
ಹಿಂಗಿದುದಕ್ಕ ನಿನ್ನಾಣೆ
ಗಂಗಮ್ಮ ಲೇಸುಮಾಡಿದೆಯೆಂದು ಮೃದುವಚ
ನಂಗಳಿಂದಣ್ಣ ಮನ್ನಿಸಿದ ೧೦

ಗಂಗಾದೇವನ ವಿನಯದಿ ನಿಲಿಸಿ ಜಿ
ನಂಗೆ ಕೈಮುಗಿದಾನೆಯೇರಿ
ತ್ರಾಂಗು ತ್ರಾಂಗೆಂದು ನಿಸ್ಸಾಳ ಸೂಳೈಸಲು
ಮುಂಗಡೆಗೆದ್ದನಾ ಚಕ್ರಿ ೧೧

ಆ ಸಮಯದಿ ಮೂಡ ಪಡುವಣ ಖಂಡದ
ದೂಸರಿಂದಿಬ್ಬರೆಯ್ತಂದು
ಆ ಸೀಮೆ ವಶವಾದುವೆಂದು ತಂಡೋಲೆಯ
ಭೂಸುದತೀಶಗಿಕ್ಕಿದರು ೧೨

ಉತ್ತರ ಪೂರ್ವ ಪಶ್ಚಿಮ ಮುಖವಾಗಿ ದಂ
ಡೆತ್ತಿ ನಡೆವ ಕಾರ್ಯ ಮುಗಿದು
ಮತ್ತಗಜವನೇರಿ ಮಧ್ಯಮಖಂಡದೊ
ಳ್ಮತ್ತೆ ದಕ್ಷಿಣಕೆ ತಿರುಗಿದ ೧೩

ನಡುವಣಖಂಡದ ನಟ್ಟನಡುವೆ ಕಳ
ದೆಡೆಯಲ್ಲಿ ಮೇಟಿಯಿಪ್ಪಂತೆ
ನಿಡಿದಾದ ವೃಷಭಾದ್ರಿಯಿಹುದಲ್ಲಿಗಾ ಚಕ್ರಿ
ನಡೆತರುತಿರ್ದನುಬ್ಬಿನೊಳು ೧೪

ಉರ್ವಿಯೆಲ್ಲವು ತನ್ನ ವಶವಾಗಲುರುಗರ್ವ
ಪರ್ವತವೇರಿ ಬಪ್ಪಂತೆ
ಕೊರ್ವಿದ ವಿಜಯಪರ್ವತವೇರಿ ಬಂದನು
ಗರ್ವಿತಾರಾತಿದಲ್ಲಣನು ೧೫

ಕರ್ಣದ ಮದಧಾರೆಗೆರಗಿ ಕವ್ವರೆಗೊಂಡು
ಘೂರ್ಣಿಸಿ ತುಂಬಿಗಳೆಸೆವ
ಪೂರ್ಣೇಭವೇರಿ ಬಂದನು ನೀಲಗಿರಿಯ ಸು
ವರ್ಣಾದ್ರಿಯೇರಿ ಬಪ್ಪಂತೆ ೧೬

ದಾಂಟುವುದಿಡುಗುಡ್ಡೆಗಳ ಗಿರಿಗಳನಿಕ್ಕಿ
ದಾಂಟುವ ಡಾಳಿಯಂದದೊಳು
ಉಂಟಾದ ಸೇನೆಯ ನಡುವೆ ಹರಿವುದು ಪೂ
ದೋಂಟದೊಳ್ಗಾಳಿ ಪೋಪಂತೆ ೧೭

ಆನೆಯೊಳೊಮ್ಮೆ ತೇಜಿಯೊಳೊಮ್ಮೆ ಶಿಬಿಕಾ ವಿ
ಮಾನ ರಥಗಳೊಳೊಮ್ಮೊಮ್ಮೆ
ಆನುತೇಳುತ ಬಂದು ಹಲವು ಪಯಣದಲ್ಲಿ
ಭೂನಾಥ ಸಾರ್ದನಾ ಗಿರಿಯ ೧೮

ಕಾಲ ಕಾಲದೊಳಾದ ಚಕ್ರವರ್ತಿಗಳಂಕ
ಮಾಲೆಯ ಬರೆಸುವರಲ್ಲಿ
ಶೈಲವೆಲ್ಲವು ಲಿಪಿ ತುಂಬಿರೆ ನೋಡಿ ನೃ
ಪಾಲನ ಗರ್ವ ಸೋರಿದುದು ೧೯

ಎನಿಬರಾಳಿದರೊಯಿ ಗಿರಿಯಲ್ಲಿ ಬೆರಳಿಡು
ವನಿತಿಲ್ಲ ಬರೆಯದ ತಾಣ
ಜಿನ ಜಿನ ಭೂತಳ ನನ್ನದೆಂದುಬ್ಬುವ
ಮನುಜನೆ ಮರುಳೆಂದು ನೆನೆದ ೨೦

ತನ್ನಂಕಮಾಲೆಗೆ ತೆರಪಿಲ್ಲದಿರೆ ನೋಡಿ
ಮುನ್ನಿದ್ದದೊಂದು ಶಾಸನವ
ಉನ್ನತ ಶೌರ್ಯನು ದಂಡದಿಂದೊರಸೆಂದು
ಸನ್ನೆದೋರಿದನು ಕಿಂಕರಗೆ ೨೧

ತೊಡೆ ತೊಂಡಲಿಪಿಯನೆಂದನು ಧೂಳಿಲಿಪಿಗಳ
ಕೊಡೆವಂತೆ ತೊಡೆದನಾ ಭೃತ್ಯ
ನೆಡುವಂತೆ ಬರೆಯೆನೆ ವಜ್ರಶಾಸನನೆಂಬ
ಕಡುಜಾಣ ಕರಣಿಕ ಬರೆದ ೨೨

ಶೃಂಗಾರಯೋಗಿ ಶುದ್ಧಾತ್ಮನು ರಾಗಿ ರಾ
ಜ್ಯಾಂಗನಾಗಿಯು ಸಂಗತ್ಯಾಗಿ
ಅಂಗನಾಜನವನಸುಧುಮಾಸ ದಿವ್ಯ ಮು
ಕ್ತ್ಯಂಗನಾಚಿತ್ತವಿಲಾಸ ೨೩

ಹುಂಡಾವಸರ್ಪಿಣಿ ಕಾಲದಾದಿಯೊಳು ಷ
ಟ್ಖಂಡವ ಭರತಚಕ್ರೇಶ
ಚಂಡನಾಳ್ದನು ಸುಮಂಗಲ ಮಹಾಶ್ರೀ ಶ್ರೀ
ಮಂಡನಮಸ್ತು ಹಿ ಸ್ವಾಹ ೨೪

ಮಣಿಮಾಲೆಯಂದದೊಳಕ್ಷರಗಳನು ಕಾ
ಕಿಣಿಯಿಂದ ಬರೆಯಲಾ ನೃಪತಿ
ಗಣಕಗುಚಿತವಿತ್ತು ಶೈಲದೊತ್ತಿನೊಳು ಸಂ
ದಣಿ ಮಿಗೆ ಪಾಳೆಯ ಬಿಟ್ಟ ೨೫

ಲಾಲಿಸಿ ಸರ್ವರ ಬೀಡಿಗೆ ಬೀಳ್ಕೊಟ್ಟು
ಬಾಲನ ಪೌಜೆಯ್ದಿತೆನಲು
ಲೀಲೆಯಿಂದರಮನೆವೊಕ್ಕನೆಂಬೆಡೆಗಂಕ
ಮಾಲೆಯ ಸಂಧಿ ಸುಗಂಧಿ ೨೬

# ಮಂಗಲಯಾನ ಸಂಧಿ

ವಿಜಯ ಪ್ರಶಸ್ತಿಯ ಬರೆಯಿಸಿ ಷಟ್ಖಂಡ
ವಿಜಯನಲ್ಲಿರಲೆಂಟು ದಿವಸ
ವಿಜಯಾರ್ಧದೊತ್ತಿನೊಳ್ಸೇನೆಯನಿಂಬಿಟ್ಟು
ವಿಜಯರಾಜನು ಬಂದು ಕಂಡ ೧

ಒಂದೊಂದು ಖಂಡದಿ ನಾನ್ನೂರು ಪೆಂಗಳು
ಬಂದಿರ್ದರಂಬರೇಚರರು
ತಂದಿದ್ದರೆಂಟುನೂರೆಳೆವೆಣ್ಣನೊಟ್ಟೈಸು
ವಂದೆರಳ್ಸಾವಿರವೆಂದ ೨

ಸುರಪುರದಂದದಿ ಕಟಕ ಸಿಂಗರವಾಗೆ
ಶರಧಿವೊಲ್ವಾದ್ಯಗಳುಲಿಯೆ
ಎರಡುಸಾವಿರ ಪೆಣ್ಣುಗಳನೊಂದೆ ಹಸೆಯೊಳು
ಕರವಿಡಿದಿಂಬಿಟ್ಟುಕೊಂಡ ೩

ಹೆಂಗಳ ಜನಕರೆಲ್ಲರನು ಮನ್ನಿಸಿ ಸರ
ಸಾಂಗದೊಳಿರೆ ರಾಯನಿತ್ತ
ಸಂಗಲಿಸಿದುದತ್ತ ನಮಿರಾಜಗಾತ್ಮಜ
ನಂಗಳ ವಾಕ್ಯವೇನೆಂಬೆ ೪

ಕೊಡುವುದುತ್ತಮ ದೇವರನುಜೆಯ ಚಕ್ರಿಗೆಂ
ದೊಡಬಡಿಸಿದರು ಬಾಂಧವರು
ಒಡನದು ಲೇಸೆಂದು ಸುಮತಿಸಾಗರನೂ ತ
ನ್ನೊಡಹುಟ್ಟಿದವನೂ ನುಡಿದರು ೫

ನಿನ್ನ ತಮ್ಮನ ಕೂಡೆ ಮಂತ್ರಿಯ ಕೂಡಾತ
ಮೊನ್ನೆ ತೋರಿದ ಮಾತ ಮರೆದೈ
ಚೆನ್ನಲ್ಲ ಕೊಡು ಕೊಡು ಚಕ್ರಿಯ ಬಳಿಗೆಯ್ದೆ
ಬನ್ನವಲ್ಲೆಂದರುತ್ತಮರು ೬

ಮಾನಹಾನಿಯ ನೋಡದಾ ನೃಪರಿತ್ತರು
ನಾನಂತು ಕೊಡೆನದಂತಿರಲಿ
ಏನ ಮಾಡುವನೆನ್ನ ತಮ್ಮನೊಳ್ನುಡಿದಾತ
ತಾನು ಗೆಯ್ವುದ ಕಾಣ್ಬೆನೆಂದ ೭

ಆಪ್ತರು ತಿಳುಹಲಾರದೆ ಯಶೋಭದ್ರೆಗೆ
ಗುಪ್ತದಿ ಸೂಚಿಸಲಾಕೆ
ಪ್ರಾಪ್ತರ ಕಳುಹಲೆದ್ದನು ತಾಯ ಮನೆಗತಿ
ದೀಪ್ತದೊಳಾ ನಮಿರಾಜ ೮

ಏನಣ್ಣ ಭರತೇಶಗನುಜೆಯು ಕುಡೆನೆಂದು
ನೀನತಿರಭಸದೋರ್ಪೆ ಗಡಾ
ಆ ನೃಪಗೆಂದೆ ಬಳೆದ ಪೆಣ್ಣ ಕೊಡಬೇಕು
ಗ್ಲಾನಿದೋರದಿರೆಂದಳಾಕೆ ೯

ಹೆಣ್ಣು ಬೇಕಾದರೆ ಬರಬೇಕು ನಾವೆಮ್ಮ
ಬಣ್ಣಿಗೆದಪ್ಪಿ ಕೊಡುವೆವೆ
ಹೆಣ್ಣು ಗಂಡಿನ ಕೂಳು ಕೊಡೆಯ ವೈಸಿರಿ ತಪ್ಪಿ
ಬಣ್ಣಿಸಲಾಗದಿಂತೆಂದ ೧೦

ಗಾಡಿಯೊಳಿಂದ್ರನ ನಗುವ ಚಕ್ರಿಗೆ ಶಚಿ
ಪಾಡಲವೆಂಬೆನ್ನ ಮಗಳ
ಜೋಡಿಸಲೊಲ್ಲೆಯ ತಣ್ಣಗಿರಾನೊಮ್ಮೆ
ನೋಡುವೆ ಕೈಲಾಸಗಿರಿಯ ೧೧

ರಾಜಗೌರವ ತಪ್ಪಿ ಬಾಳುವ ಸಿರಿಯಿಂದ
ಶ್ರೀಜಿನದೀಕ್ಷೆಯೆ ಲೇಸು
ಓಜೆಯಲ್ಲದುದ ಪೇಳ್ದವ ನಾನೆ ಪೋಪೆನೆ
ಮ್ಮಾಜಿ ತೆಪ್ಪಗಿರಿ ನೀವೆಂದ ೧೨

ಅಳುಕಿದಳದಕೆ ಕೇಳ್ಮಗನೆ ನೀನಿಷ್ಟು ವೆ
ಗ್ಗಳಿಸದಿರಾ ಚಕ್ರಿ ನಿನ್ನ
ನಿಳಯಕೆ ಬಾರನು ತಾಳಿ ಬಂದಿಯ ಕಟ್ಟಿ
ಲೊಲಿದೀವೆಯಾಯೆಂದಳೊಡನೆ ೧೩

ಇಲ್ಲಿಗಾಪ್ತರನಟ್ಟಿ ಬಂದಿಗಟ್ಟಿಸನು ತ
ನ್ನಲ್ಲಿಗೆ ಬರಲೆಂಬನವ್ವ
ಇಲ್ಲಿ ತನ್ಮಂಗಲವೆಸಗಿದರದೆ ಸಾಕು
ಸಲ್ಲೀಲೆಯೊಳಗೀವೆನೆಂದ ೧೪

ಬಾಲತ್ವದೊಳು ಭರತೇಶನ ಬಲ್ಲಳೀ
ಕಾಳಿಂದ ಮತ್ತೆನ್ನ ಮಗಳ
ಮೇಳದ ಮಧುವಾಣಿ ಕಡುಜಾಣೆಯವರಿಂದ
ಹೇಳಿಪೆನೆಂದೆಣಿಸಿದಳು ೧೫

ಗನ್ನವ ಕಲಿಸಿಕೊಟ್ಟಳಿಯಗೆ ತಕ್ಕಂತೆ
ಚಿನ್ನುಡುಗೊರೆಗಟ್ಟಿ ಕೊಟ್ಟು
ಸನ್ನುತ ಮಂತ್ರಿಯೊಡನೆ ಕಳುಹಿದಳು ಪ್ರ
ಸನ್ನೆ ಯಶೋಭದ್ರಾದೇವಿ ೧೬

ಭರದಿ ವಿಮಾನವನ್ನೇರಿ ಬಂದೋಲಗ
ಹರಿವಾಗ ನೃಪತಿಯ ಕಂಡು
ಬರವೇನು ಕಾರಣವೆಂದು ಭೂವರ ಕೇಳ
ಲೊರೆದನಾ ಮಂತ್ರಿ ಕರ್ಣದೊಳು ೧೭

ಅರಿದನಾಗಳೆ ಹೆಣ್ಣಿನೊಸಗೆಯೆಂದದನರಿ
ದರಿಯದಂತವನನಿಂಬಟ್ಟು
ಹೊರಸಭೆಯಿಂದೊಳಚಾವಡಿಗೆಯ್ದಿ ಚಿ
ಲ್ವೆರಕದೊಳೋಲಗವಾದ ೧೮

ಒಳಗಿದ್ದ ಪಂಡಿತೆ ಬರಲೆನುತತ್ತಾತ್ಯಜಿ
ಕಳುಹಿದವರ ಕರೆಯೆಂದ
ಘಳಿಲನೆ ಬಂದಳು ಪಂಡಿತೆ ಖಚರೆಯ
ರೊಳಹೊಕ್ಕರರಸನೋಲಗಕೆ ೧೯

ನಿನ್ನತ್ತೆ ಕಳುಹಿದಳುಡುಗೊರೆಗಳನೆಂದು
ಬಿನ್ನವಿಸಿದಳಪ್ಸರೊಳಗೆ
ಚಿನ್ನದಾವರೆಯ ಕಾಣ್ಕೆಯನಿಕ್ಕಿ ಮಧುವಾಣಿ
ತನ್ನ ಕೈಮುಗಿದಳರ್ತಿಯೊಳು ೨೦

ಆರು ನೋಡದ ಮಾಲೆ ತೊಡದ ಪೊಂಮೊಡಿಗೆ ಚ
ಕೋರ ತುಡುಕದಚ್ಚ ಜೊನ್ನ
ಸೇರಿ ನೋಡದ ಚಿತ್ರವೆನೆ ಕಚ್ಛನೃಪನ ಕು
ಮಾರಿಯಿಹಳು ಮಿಾಸಲಾಗಿ ೨೧

ಕಾಗುತಿದ್ದುದು ಮಧುವಾಣಿಯ ನುಡಿ ರುಚಿ
ಯಾಗುತಿದ್ದುದು ರಾಯ ನಗುತ
ಈಗ ನೀವೆಯ್ತಂದ ಕಾರ್ಯವೇನತಿ ಜೋಲಿ
ಯಾಗದೆ ಪೇಳೆಂದನೊಡನೆ ೨೨

ನವಗೇನು ಕಾರ್ಯ ನಿನ್ನುತ್ತ ನಿವಗೆ ತನ್ನ
ಕುವರಿಯ ಕುಡುವೆನೆಂದೆಮ್ಮ
ಅವಸರದಿಂದಟ್ಟಲೆಯ್ತಂದೆವಾಕೆಯ
ಸುವಿವೇಕವೊಂದ ಕೇಳಿನ್ನು ೨೩

ವಿನಮಿರಾಜನು ಮಂತ್ರಿ ಬಂಧುಗಳೆಲ್ಲರು
ನಿನಗೆ ಪೆಣ್ಗೊಡುವರೊಪ್ಪಿದರು
ಘನತರ ಭಾಗ್ಯವಂತಗೆ ಕೊಡಲಮ್ಮವೆಂ
ದನುಮಾನಿಸಿದನು ದೊಡ್ಡರಸು ೨೪

ತಾಳಿ ಬಂದಿಯ ಕಟ್ಟಿಸುವನಾತ ಬಳಿಕಾತ
ನಾಲಯಕೆಯ್ದಿ ಪೆಣ್ಗೊಡುವ
ಲೀಲೆಗೊಪ್ಪೆಂದರೊಪ್ಪಿದನದನಾವೊಲ್ದು
ಹೇಳಲೆಯ್ದಿದೆವೆಂದಳವಳು ೨೫

ಅಂತಹುದತ್ಯಾಜಿಯರ ಮಾತ ಮುರಿವೆನೆ
ಸಂತತಿಭೂಪರ ಕಳುಹಿ
ನಾಂ ತಾಳಿಬಂಧಿಗಟ್ಟಿಸುವನೆಂದನು ಮುಖ
ಕಾಂತಿಯಾಯ್ತವರಿಗಾಕ್ಷಣವೆ ೨೬

ಸಂದುದಾ ದಿನ ಮರುದಿನ ತನ್ನ ಮಂತ್ರಿಯ
ಮುಂದು ಮಾಡೆಲ್ಲರ ಕೂಡೆ
ಬಂದ ಪೆಂಗಳಿಗೆ ಖೇಚರಮಂತ್ರಿಗುಚಿತವಿ
ತ್ತೊಂದೆ ಲಗ್ನೆಯೊಳು ಕಳುಹಿದ ೨೭

ಮಂಗಲವಸ್ತುವೆರಸು ತಾಳಿ ಬಂದಿಯ
ನಂಗನೆಗಟ್ಟಿ ಮತ್ತಿತ್ತ
ತಂಗಿಯರಿಗೆ ಬಳಿಯಟ್ಟಿದನಿಲ್ಲಿಗೆ
ಮಂಗಲಯಾನದ ಸಂಧಿ ೨೮

## ಉಂಗುರುಡಿಗೆಯ ಸಂಧಿ

ಕಾಳಿಂದಿ ಮಧುವಾಣಿಯರು ಪೇಳಲೊಸಗೆಯ
ಕೇಳಿ ಯಶೋಭದ್ರಾದೇವಿ
ಓಲಾಡಿ ಹರುಷದೊಳವರನಾಗಳೆ ತನ್ನ
ತೋಳೆರಳ್ತುಂಬಿಯಪ್ಪಿದಳು ೧

ಸಿಂಗರಿಸಿದ ಪುರದೊಳು ಗಜ ತೇರು ತು
ರಂಗ ಪತಾಕೆ ವಿಮಾನ
ಸಂಗಡಿಸಿರೆ ವಾದ್ಯರವದೊಳು ಮೆರೆದುವಂ
ದುಂಗುರ ತಾಳಿಬಂದಿಗಳು ೨

ತೊಡಿಗೆಯ ಕಿರಣವ ಕೆದರುತೆಲ್ಲರು ಬಂದು
ಕಡು ದೀರ್ಘಗೃಹವೆಂಬ ಕೊಳದ
ನಡುವೆ ತಾವರೆಯಂತೆ ಬಂದಿಯ ಹರಿವಾಣ
ಬೆಡಗುವಟ್ಟರೆ ನಿಟ್ಟಿಸಿದರು ೩

ಆಸನಾವಳಿಯನೆಲ್ಲರಿಗೀಯೆ ಪರಮ ವಿ
ಲಾಸದೊಳ್ನಮಿರಾಜ ಕುಳಿತ
ಭೂಸುರರೋದಿದರೊಡನೆ ಸಿದ್ಧಾಂತ ವಿ
ನ್ಯಾಸದೊಳ್ಮಂಗಳಾಷ್ಟಕವ ೪

ಮಂಗಲ ಕೌಶಿಕೆಯೊಳು ಪಳಮಂಜರಿ
ಸಂಗದೊಳೆಸೆದುದು ಗಾನ
ಹೆಂಗಳು ಧವಳ ಶೋಭನವ ಪಾಡಿದರು ಕ
ರ್ಣಂಗಳೆ ಬರ ಬರವಂತೆ ೫

ಜಯ ಜಯ ಶೋಭನ ಶೋಭನವೆಂಬ ವಾ
ಙ್ಮಯದೊಳು ಗೀತವಾದ್ಯದೊಳು
ಪ್ರಿಯ ಸಖಿಯರು ತೊಂಡಿಲುಂಗುರ ಸೀರೆ ಬಂ
ದಿಯ ನೀರೆಗನುಗೊಳಿಸಿದರು ೬

ಮುತ್ತಿನ ತೊಂಡಿಲು ಮುಡಿಯೊಳೊಪ್ಪಿತು ಪದ್ಮ
ಕತ್ತಲೆಯೊಳಗಲರ್ದಂತೆ
ಉತ್ತುಂಗಚಕ್ರಿಯ ಪುಣ್ಯಸಾಮರ್ಥ್ಯವ
ನೆತ್ತಿತೋರ್ಪಂತೆ ಭೂತಳಕೆ ೭

ನಾಳೆ ಚಕ್ರೇಶನೀ ಕೊರಳ ತಾವುಜ ತಕ್ತ
ತೋಳೊಳಿಂತಪ್ಪುವನೆಂದು
ಹೇಳುವಂತೆಸೆದುದು ತಾಲಿವೆರಸಿ ರತ್ನ
ಕೀಲಣೆಗುಣಿಕೆಯ ಬಂದಿ ೮

ದೊರೆಗಳೊಡೆಯನಿನ್ನು ನಿನ್ನ ಕೈವಶವಾಗಿ
ಸ್ಥಿರಬಾಳಲೆಂದು ಪೇಳ್ವಂತೆ
ಅರಸನ ರೂಪಿನ ರತ್ನಮುದ್ರಿಕೆ ಸಣ್ಣ
ವೆರಳೊಳೊಪ್ಪಿತು ಚಂದ್ರಮುಖಿಗೆ ೯

ಶ್ರೀ ಸುಭದ್ರಾದೇವಿ ಭರತರಾಜನ ರಾಣಿ
ವಾಸಕೆ ತಲೆವಣಿಯಾಗಿ
ಭಾಸುರಸುಖದೊಳೋಲಾಡೆಂದು ಮುತ್ತಿನ
ಸೇಸೆಯನಿಟ್ಟಳಾ ತಾಯಿ ೧೦

ತಾಂಬೂಲ ವಸ್ತ್ರಭೂಷಣವಿತ್ತು ನಮಿರಾಜ
ತುಂಬಿದ್ದ ಜನವ ಬೀಳ್ಕೊಟ್ಟ
ಮುಂಬಾಗಿಲೆಡೆಮುಟ್ಟ ಹೋಗಿ ತಿರುಗಿ ಬಂದ
ನೇಂ ಬಲ್ಮೆಕಾರನೊ ಮಂತ್ರಿ ೧೧

ಸ್ವಾಮಿ ಕಳುಹಿದನತ್ತ್ಯಾಜಿಗೆ ಮೈದುನ
ಗೀ ಮನೆವೆಂಗಳಿಗೆಂದು
ಕ್ಷಾಮವಸ್ತ್ರಾಭರಣವ ಬೇಗ ತರಿಸಿ ತಾ
ನಾ ಮನೆಯನು ತುಂಬಿಬಿಟ್ಟ ೧೨

## ಮದುವೆಯ ಸಂಭ್ರಮ ಸಂಧಿ

ಮದುವೆಯುತ್ಸವಕೆಂದು ಕಟಕದ ನಡುವೆಯೊ
ಡ್ಡಿದುದೊಂದು ಹೊಸ ಜಿನವಾಸ
ಅದಕೆ ನೃಪರ ಮನೆ ದೇಹಾರಗಳು ನೆಲ
ಸಿದುವವಸರಕೆ ತಕ್ಕಂತೆ ೧

ಜಿನಪೂಜೆಯಾಗಲಭ್ಯಂಗಪೂರ್ವಕ ವಿಪ್ರ
ಜನಕೆ ಸತ್ರದೊಳನ್ನವಾಯ್ತು
ಕನಕವಸ್ತುಗಳ ಕರ್ಪೂರ ವೀಳೆಯವ ಚಂ
ದನವನಿತ್ತನು ತಣಿವಂತೆ ೨

ಸತಿ ಸುಭದ್ರಾದೇವಿ ಪತಿ ಭರತೇಶನೂ
ರ್ಜಿತಸುಖದೊಳು ಬಾಳಲೆಂದು
ಹಿತದಿಚ್ಛಾಭೋಜನವುಂಡು ದಾನವ ಕೊಂಡು
ವಿತತ ವಿಪ್ರರು ಪರಸಿದರು ೩

ಕಣ್ಣು ತಣಿಯೆ ಚಕ್ರಿ ಮಾಳ್ಪೊಸಗೆಯ ನೋಡಿ
ಹೆಣ್ಣಾದುದತ್ತೆಯ ಚಿತ್ತ
ಬಣ್ಣವೇರಿದ ನಮಿರಾಜನೊಂದಾನೊಂದು
ಹೆಣ್ಣ ಕೊಠಾರ್‌ಗದುದೇನು ೪

ಮುಂಬಗಲಿಂತು ಲೀಲೆಯೊಳು ಸಾಗಿತು ಮತ್ತೆ
ಹಿಂಬಗಲಿನೊಳು ಚಕ್ರೇಶ
ತುಂಬಿದ ಕಟಕದೊಳ್ಕುಂಕುಮ ಗಂಧ ಕ
ದಂಬದೋಕುಳಿಯಾಡಿಸಿದನು ೫

ಕುಸುಮ ಶ್ರೀಗಂಧ ಕುಂಕುಮದಲ್ಲಿ ಪನ್ನೀರೊ
ಳಸಮ ಕಟಕವೆಲ್ಲ ನೆನೆದು
ಕೆಸರಾಯ್ತು ನೆಲನೆಲ್ಲ ಬೇಸಗೆಯೊಳಗೆ ತಂ
ಪೆಸೆವ ಪೆರ್ಮಳೆಗರೆದಂತೆ ೬

ಒದವಿ ಗಂಗಾದೇವಿ ಸಿಂಧು ದೇವಿಯರು ರಾ
ಗದೊಳಣ್ಣನೊತ್ತಿಗೆ ಬಂದು
ಮದುವೆಗೆ ಸಿಂಗರಿಸಿದ ಪೆಣ್ಣ ನಾವು ನೋ
ಡಿದರಾಗಲೆಯೆಂದರೊಡನೆ ೭

ಸ್ವೀಕಾರಬಟ್ಟು ಕರೆಸಿಕೊಂಡು ಹೋಗದೆ
ನೂಕಿ ಬಂಧುಗಳೆಯ್ದಲವರು
ಏಕವರ್ಬಂದರೋ ಕರೆವೆವೆಯೆಂಬರು
ತೂಕ ತಗ್ಗುವುದಕ್ಕೆಯೆಂದ ೮

ನೀನೊಲ್ದು ನಂಟರೆಂದರೆ ನಂಟರುರೆ ಬಂಟ
ಮಾನಸರೆನೆ ಬಂಟರೆಲ್ಲ
ಏನ ಮಾಡುವರಣ್ಣ ಪರರೆನುಗವರ ಸ
ನ್ಮಾನವೇನೊಲಿದಿಟ್ಟುದೇನು ೯

ಸಲಲಿ ನಿಮ್ಮಿತ್ತಿಯೆಂದೊಡನೆ ಬೀಳ್ಕೊಟ್ಟನಾ
ಗಳೆ ಹೋಗಿ ಹೊಕ್ಕರಾ ಗೃಹವ
ಅಳಿಯನ ತಂಗಿಯರೆಯ್ತಂದರೆಂದತ್ತೆ
ನಲಿದು ಸನ್ಮಾನ ಮಾಡಿದಳು ೧೦

ಸೂಸುಮೋಹನದ ಸಿಂಗರದೊಟ್ಟು ತನ್ನ ವಿ
ಲಾಸಿನಿಯರ ಬಳಸಿನೊಳು
ಪೂಸರಲನ ಪೂಣ್ಯದೇವತೆಯಂತಿರ್ದ
ಭಾಸುರಾಂಗಿಯ ಕಂಡರಾಗ ೧೧

ನಿನ್ನರಸನ ತಂಗಿಯರು ಬಂದರೀಳಕ್ಕ
ಮನ್ನಿಸೆಂದಳು ತಾಯಿ ಮಗಳ
ಚೆನ್ನೆಯೆದ್ದಿದಿರಾಗಿ ಬಂದಳನ್ಯೋನ್ಯ ಪ್ರೇ
ಮನ್ನೆಡಲಾಲಿಂಗಿಸಿದರು ೧೨

ಮೂವರೊಂದಾಗಿ ಕುಳಿತರು ಯಶೋಭದ್ರಾ
ದೇವಿ ಕೆಲದೊಳು ಕುಳಿತಳು
ಸೇವೆಯ ನರ ಸುರಸತಿಯರು ಬಳಸಿಯಿಂ
ದಾ ವಿಭವದೊಳಿರ್ದರಾಗ ೧೩

ನೋಡಿದರಾಕೆಯ ಹಾವಭಾವಗಳ ಮಾ
ತಾಡುವಂತೆಸೆವ ಸಿಂಗರವ
ನಾಡಾಡಿ ಪೆಣ್ಣೆಲ್ಲ ಚಕ್ರವರ್ತಿಯ ಮರು
ಳ್ಮಾಡುವಳೆಂದು ನೆನೆದರು ೧೪

ರಾಗ ರಸಾಬ್ಧಿಯ ತೆರೆಗಳೊ ಮದುವೆಗೆ
ಸೀಗುರಿಗಳ ಮಾಳ್ಪೊಡಿಕೆ
ತೂಗಿ ಮೇಲ್ಪಂತಿದೋರ್ಪಳೊಯೆನೆ ನಿರಿಗಳ
ಸಾಗಿಸಿದುಡಿಗೆ ಮೋಹಿಸಿತು ೧೫

ವೈವಾಹದುಚಿತವಲ್ಲದೆ ತೊಡವೇಕೆ ಸ್ವ
ಭಾವಶೃಂಗಾರಾಂಗಿಯವಳು
ಹೂವಿಂದ ನಾರೊಪ್ಪುವಂತೆಯಾಕೆಯ ಸೋಂಕಿ
ಪಾವನವಾದವು ತೊಡಿಗೆ ೧೬

ನೀನೇ ನಮ್ಮಣ್ಣನ ಸೋಲಿಪಳೆಂದವ
ರಾನಂದದಿಂದ ಕೇಳಿದರು
ಏನದು ದೊಡ್ಡಿತೆ ನನಗೆಂದು ನಗುವಂತೆ
ಮೋನದೊಳ್ನಗುತಿರ್ದಳಾಕೆ ೧೭

ಈ ತಿಲಕವೆ ಚಕ್ರಧರನ ಸೋಲಿಪುದು ಪೇ
ಳೀ ತುರುಬೆ ಮತ್ತೀ ಪೂವೆ
ಮಾತಾಡು ಹೆಣ್ಣೆಯೆಂಬರು ಲಜ್ಜೆಯಿಂದಾಕೆ
ಸೋತಂತೆ ತಲೆಗುಸಿದಿಹಳು ೧೮

ಕೆಯ್ಯಿಂದ ಮೊಗವಿಡಿದೆತ್ತಿ ನಗುತ ನೋಳ್ಪ
ರಯ್ಯಯ್ಯೊ ನಿನ್ನಯ ಜಾಣ್ಮೆ
ಮೆಯ್ಯುಳ್ಳ ಮದನ ನಿನಗೆ ಮೆಚ್ಚುವನೆ ನಮ್ಮೊ
ಳೊಯ್ಯನೆ ನುಡಿಯೆಂಬರೊಸೆದು ೧೯

ಕಡೆಗಡ್ಡಮೊಗವಿಕ್ಕಿ ಸುಮ್ಮನಿಹಳು ನೋಡಿ
ನುಡಿಗೆಟ್ಟ ಹೆಣ್ಣಿಗೆಮ್ಮಣ್ಣ
ಕಡುಸೋತುದಾಯ್ತಲ್ಲಯೆಂದೊತ್ತಿ ಚುನ್ನವ
ನುಡಿವರದಕೆ ನಗುತಿಹಳು ೨೦

ಸರಸಗುಣಗಳಿಲ್ಲದಿವಳ ರೂಪೇನು ಕಾ
ಸರಕನ ಹೆಣ್ಣಿನಂತೆಂದು
ಕೆರಳಿಸಿ ನುಡಿವರು ಮಾತಾಡಬೇಕೆಂದು
ಶಿರಬಾಗಿ ನಗುತಿಹಳಾಕೆ ೨೧

ಇಂದು ನುಡಿಯಳಾಕೆ ನಾಳೆ ನಾಡಿದು ನೀವು
ಒಂದೊಮ್ಮೆ ಮಾತಾಡಿ ನೋಡಿ
ಒಂದೊಂದು ನುಡಿಯೊಳೆ ಕಟ್ಟಿಬಿಡುವಳು ಸಾ
ಕೆಂದಿಗೆಂದಳು ಮಧುವಾಣಿ ೨೨

ಅತ್ತಿಗೆ ನೋಳ್ಪೆವುಂಗುರಗಳ ತೋರೆನು
ತೊತ್ತಿ ತೆಗೆದು ಬೆರಳಿಂದ
ಇತ್ತಳು ಕುರುಹನೆಂದಿವ ನಿನ್ನ ಪುರುಷನಿ
ಗಿತ್ತಪೆವೆನುತಿದ್ದರೊಡನೆ ೨೩

ಏಳೇಳಲಿಬ್ಬರ ಕೈವಿಡಿದಳು ಕುಳಿ
ತೇಳದೆ ಕೈಗಳ ನೀಡೆ
ಚಾಳಿಸಿ ಪೋಪೆವೆಂದತ್ತಿತ್ತಲೊಲೆದರು
ಬಾಲೆ ಬಲ್ವಿಡಿದು ತೆಗೆದಳು ೨೪

ಸಂಧಾನಕೆಂದೆಯ್ದಿ ಸೂರೆಮಾಡಿದರೆಂಬ
ಅಂದದೋರ್ಪಿರೆಯೆಂದು ನಗುತ
ಸಿಂಧೂರದಂತಾಯ್ದುಕೊಂಡಳುಂಗುರಗಳ
ತಾಂ ದನಿದೋರುತವರೊಳು ೨೫

ನುಡಿಪೊಣ್ಮಲಾಕೆಯ ಧ್ವನಿ ಸ್ವರ್ಗ ವೀಣೆಯ
ನುಡಿಸಿದಂತಿಂಪಾಯ್ತು ಕಿವಿಗೆ
ನುಡಿಗೇಳಬೇಕೆಂದು ತೊಡಗಿದ ಕಾರ್ಯ ಸಂ
ಗಡಿಸಿತೆಂದವರು ನಲಿದರು ೨೬

ಮುದದಿಂದ ಚಕ್ರೇಶನೆಡೆಗೆಯ್ದಿ ಕಂಡೆವಾ
ಮದುವೆಯ ಪೆಣ್ಣನಣ್ಣಾಜಿ
ಮೊದಲು ನೀನೆಸಗಿದುತ್ಸವ ಪಿರಿದೆಂದಿದ್ದೆ
ನದು ತಕ್ಕುದೆಂದರಾ ಸಕಿಗೆ ೨೭

ಆಕೆಯ ಶೃಂಗಾರವಾಕೆಯ ಗಂಭೀರ
ಸಾಕು ಮತ್ತಾಕೆ ನೋಡಿದರೆ
ಲೋಕದಂಗನೆಯೆ ಪೆಣ್ಣೆನಲೊಂದು ರತ್ನಶ
ಲಾಕೆ ಹುಟ್ಟಿದುದೆಂದರೊಡನೆ ೨೮

ಇರುಳಾಯಿತಷ್ಟಕ್ಕೆ ಹುಣ್ಣಿಮೆಯೆಂದು ಚಂ
ದಿರನ ಪ್ರಕಾಶ ಬಿಂಬಿಸಿತು
ನರಲೋಕವಲ್ಲ ಜ್ಯೋತಿರ್ಲೋಕವೆಂಬಂತೆ
ಹರೆದುವು ನೊಡರು ಪಂಜುಗಳು ೨೯

ಮೊಳಗಿತು ವಾದ್ಯ ಕೋಟಾ ಕೋಟಿ ದಿವಿಜರ
ಪ್ರೊಳಲು ಮಾರ್ದನಿಗೊಡುವಂತೆ
ಕಲಕಲಿಸಿತು ಸೇನೆ ಜಯ ಜಯಯೆಂದುಬ್ಬಿ
ಘಳು ಘಳಿಸುವ ವಾರ್ಧಿಯಂತೆ ೩೦

ಆಳಾಪ ಲೆಕ್ಕವೆ ವಾದ್ಯ ಲೆಕ್ಕವೆ ನಾಟ್ಯ
ಕೇಳಿ ಲೆಕ್ಕವೆ ಕಟಕದೊಳು
ತೊಳವೆದ್ದಲ್ಲಲ್ಲಿ ಜನಗಳು ಕುಣಿವುದ
ಹೇಳಲಳವೆ ಮಹೋತ್ಸವವ ೩೧

ಪಟ್ಟದ ಸತಿಯಾಕೆ ಚಕ್ರೇಶಗೆಂಬುದ
ನಿಟ್ಟಿಸಿದವರರಿವಂತೆ
ಕಟ್ಟೆ ಪಟ್ಟವ ಸುಭದ್ರಾದೇವಿ ಬಲು ಕಡೆ
ಕಟ್ಟೆ ರಂಜಿಸುತಿರ್ದಳತ್ತ ೩೨

ಭರತೇಶನಿತ್ತ ಸಿಂಗರಿಸಿದ ನವರತ್ನ
ವಿರಚನೆವೆತ್ತ ಬಾಸಿಗವ
ಧರಿಸಲದರ ಕಾಂತಿ ಮುಖವೆಂಬ ಚಂದ್ರಗೆ
ಪರಿವೇಷದಂತೆ ರಂಜಿಸಿತು ೩೩

ರಾಜ್ಯಪಟ್ಟವ ತಮ್ಮ ತಂದೆ ಕಟ್ಟಲು ರತಿ
ರಾಜ್ಯ ಪಟ್ಟವನಿಂದು ತಾನೆ
ಪ್ರಾಜ್ಯಪುಣ್ಯದಿ ಕಟ್ಟಿಕೊಂಡನೆಂದೆನೆ ಲೋಕ
ಪೂಜ್ಯ ಕಟ್ಟಿದನು ಪಟ್ಟವನು ೩೪

ಅದೆಯಿದೆ ಲಗ್ನ ಸಮೀಪಕೆ ಬಪ್ಪುದೆಂ
ಬುದ ಹಾರುತರಮನೆಗಳೊಳು
ಮದವಕ್ಕಳುತ್ಸಾಹದೊಳಗಿದ್ದರಿಲ್ಲಿಗೆ
ಮದುವೆಯ ಸಂಭ್ರಮ ಸಂಧಿ ೩೫

# ಸ್ತ್ರೀರತ್ನ ಸಂಭೋಗ ಸಂಧಿ

ಚೆಲ್ಲಿದಂತೆಯ್ತಂದು ನೃಪನರಮನೆಯ ಮುಂ
ದೆಲ್ಲರು ನಿಂದರು ಹೊರಗೆ
ಪಲ್ಲಕ್ಕಿಯಬಲೆಯ ಮದುವೆಯ ಗೃಹಕೆ ಮ
ಹೋಲ್ಲಾಸದಿಂದೊಯ್ದರೊಡನೆ ೧

ಮುತ್ತಿನ ಮೆಟ್ಟಕ್ಕಿಯೊಳು ಕನ್ನೆ ನಿಂದಳು
ಮುತ್ತಿನ ತೆರೆಯ ಮರೆಯೊಳು
ಮತ್ತಕಾಶಿನಿಯರು ಹಾಡುತಿರ್ದರು ಸ್ವರ
ವೆತ್ತಿ ಶೋಭನ ಧವಳಗಳ ೨

ಮೆಟ್ಟಕ್ಕಿಯೊಳು ನಿಂದು ನಲ್ಲನೆದೆಗೆ ಜುಮ್ಮ
ದಟ್ಟಿಸಿ ಬರಿಸಿದಳೆನಲು
ತೊಟ್ಟನೆ ಭರತೇಶ ಬರುತಿರ್ದನಿದೆ ಲಗ್ನ
ಮುಟ್ಟಲಾಯ್ತೆನೆ ಕೇಳುತೊಡನೆ ೩

ತೆರೆಯ ಮರೆಯೊಳಿರ್ದ ನಲ್ಲಳ ನೋಡುವಾ
ತುರದೊಳುದ್ದವನೇರುವಂತೆ
ಬರುತ ಮೆಟ್ಟಕ್ಕಿಯ ಮೆಟ್ಟಿ ನಿಂದನು ಶುಭ
ಕರ ಜಯಜಯಯೆಂಬ ರವದಿ ೪

ಸುಲಲಿತ ಮಂಗಲಾಷ್ಟಕ ಪೂರ್ಣವಾಗಿ ಮಂ
ಗಲದ ಕೌಶಿಕಯ ರಾಗದೊಳು
ಪಳಮಂಜರಿಯೊಳು ಪಾಡಿದೊಡೆ ಮಧ್ಯದ ತೆರೆ
ತೊಲಗಿತು ಜಯಜಯಯೆನಲು ೫

ಪ್ರಮದೆಯ ಕೈಗೆ ಪೂಮಾಲೆ ಕೊಟ್ಟದ ನಿನ್ನ
ರಮಣಗೆ ಸೂಡಕ್ಕಯೆಂದು
ನಮಿರಾಜ ಸಿಂಧು ಗಂಗಾದೇವ ವಿನಮಿಗ
ಳಮಳ ಸಂಭ್ರಮದೊಳಾಡಿದರು ೬

ನಾಣಿಂದ ತಲೆಗುಸಿದವಳ ಕೈಗಳ ಮಧು
ವಾಣಿ ಮತ್ತೆತ್ತಿ ಸೂಚಿಸಲು
ಪ್ರಾಣಕಾಂತಗೆ ಮಾಲೆಯಿಟ್ಟಳು ಧವಳ ಕ
ಲ್ಯಾಣ ಶೋಭನದ ಘೋಷದೊಳು ೭

ನಿನ್ನಿಂದ ನನಗೆ ನನ್ನಿಂದ ನಿನಗೆ ತಾಪ
ಮುನ್ನಕ್ಕಿ ಹೊಯ್ಮಾಲೆಯಾಯ್ತು
ಇಲ್ಲಿಲ್ಲ ಹೊಯ್ಮಾಲೆ ಹೂಮಾಲೆಯಾಯ್ತೆಂಬ
ಗನ್ನದೊಳ್ಮಾಲೆಯಿಕ್ಕಿದಳು ೮

ಬಿನ್ನಾಣದಿಂದ ತಂಪೆಳೆಯ ಲತೆಯನು ಬಾ
ವನ್ನ ವೃಕ್ಷಕೆ ಹಬ್ಬಲಿತ್ತು
ಪನ್ನೀರನೆರೆವಂತೆ ನಮಿರಾಜನೆರೆದನು
ಹೊನ್ನ ಗಿಂಡಿಯಲಿ ಧಾರೆಯನು ೯

ಇನಿಯಳ ಕೈವಿಡಿದಿನಬಿಂಬದೊತ್ತಿನೊ
ಳ್ಬಿನದಕಾಡುವ ಕಾಮನಂದೆ
ಅನಲಕುಂಡವ ಸುತ್ತಿ ಬಂದನು ತನ್ನ ಸ್ವಾ
ನಿನಿಯ ಹಸ್ತಾಂಗುಲಿವಿಡಿದು ೧೦

ಅಳಿಯನೊಡನೆ ಪೋಪ ಮಗಳ ಗಾಡಿಯನು ಪೆಂ
ಗಳ ಮರೆಯೊಳು ನಿಂದು ನೋಡಿ
ಪುಳಕವಾಂತಾನಂದರಸದೊಳೋಲಾಡಿದ
ಳೆಳಸಿ ಯಶೋಭದ್ರಾದೇವಿ ೧೧

ನಮಿರಾಜ ಮೊದಲಾದ ನೃಪರ ಮಂತ್ರಿಯನು ಸಂ
ಭ್ರಮದ ನೋಟದೊಳು ಬೀಳ್ಕೊಟ್ಟು
ರಮಣಿಯ ಕೈವಿಡಿದಾ ರಾಯ ಹೊಕ್ಕನು
ತ್ರಮ ರಾಜಗೃಹವ ಲೀಲೆಯೊಳು ೧೨

# ಜಿನದರ್ಶನ ಸಂಧಿ

ಮಂಗಲ ಮುಗಿದು ಮತ್ತಾ ಚಕ್ರಿ ರಾಜಲೀ
ಲಾಂಗದೊಳಿರುತಿರಲಲ್ಲಿ
ತಂಗಾಳಿ ಬನಕೆ ಬಹಂತೊಂದು ದಿನ ಮಂತ್ರಿ
ಪುಂಗವ ಬಂದನೋಲಗಕೆ ೧

ಮೂರು ವಾರ್ಧಿಯ ಮಧ್ಯದೊಳು ಹೇಮಗಿರಿ ಮುಟ್ಟಿ
ತೋರುವ ಧರೆ ಸಾಧ್ಯವಾಯ್ತು
ಆರುಖಂಡವ ಗೆಲ್ದು ವೃಷಭಾದ್ರಿಯೊಳು ರೇಖೆ
ದೋರಿದ್ದೆ ವೀರಶಾಸನವ ೨

ಅಮ್ಮಾಜಿ ದಿನಗಳನೆಣಿಸುತಿಹಳು ನಿನ್ನ
ತಮ್ಮಂದಿರಾಸೆ ಬಿಟ್ಟಿಹರು
ಇಮ್ಮೈಯೊಳಿದ್ದ ವೈದ್ಯನರ ಬೀಳ್ಕೊಟ್ಟಿನ್ನು
ಘಮ್ಮನೆ ಬಿಜಯ ಮಾಡೆಂದ ೩

ಸುಮತಿಸಾಗರ ಮೊದಲಾದ ಪಾಯ್ದಳಕೆ ಕೂ
ಡಮರರಿಬ್ಬರ ಸರ್ವದಳಕೆ
ಪ್ರಮುದದಿ ಪೆಣ್ಣಿತ್ತ ಖಚರರ್ಗೆ ಸಾಕು ಸಾ
ಕಮಮಯೆಂದೆನಲು ಮನ್ನಿಸಿದ ೪

ತೀರಿತೆಲ್ಲಾ ಜೋಲಿಯಾ ದಿನ ಮರುದಿನ
ವೀರಕಟಕದ ಲಗ್ಗೆಯೊಳು
ಈರಾರು ಭೇರಿ ಘೋರೆಂದು ಸೂಳೈಸೆ ಮ
ಹಾರಾಯನೆದ್ದನುಬ್ಬಿನೊಳು ೫

ಬಿಡುತೆತ್ತಿ ನಡೆವುತ ದಕ್ಷಿಣ ಮುಖವಾಗಿ
ಪಡೆಗೂಡಿ ಬರುತ ರಾಜೇಂದ್ರ
ಕಡುಬೆಳ್ಪ ಕೆದರುವ ಕೈಲಾಸಗಿರಿಯು ತ
ನ್ನೆಡದಲ್ಲಿ ಕಂಡ ದೂರದೊಳು ೬

ಬಿಡಹೇಳೊ ಇಲ್ಲಿ ಪಾಳೆಯವನೆಂದನು ಕೂಡೆ
ಪಡೆವಳ್ಳ ಬಿಡಿಸಿದನಲ್ಲಿ
ಮಡದಿಯರೆಲ್ಲರ ಬೀಡಿನೊಳ್ಸಂತವಿ
ಟ್ಟೊಡನೆದ್ದ ಕೈಲಾಸಗಿರಿಗೆ ೭

ಸಾವಿರದಿನ್ನೂರ್ವರಣುಗರು ಗಣಬದ್ಧ
ದೇವರ್ಕಳೊಡಗೂಡಿ ನೃಪತಿ
ದೇವರ್ಕಳಂತೆ ವಿಮಾನದೊಳ್ಗಗನಮಾ
ರ್ಗಾವಲಂಬನದೊಳೆಯ್ದಿದನು ೮

ಹಲವು ವಿಮಾನವ ಪೊರಗಿಂಪುಗ್ಗೆದುಮ
ಕ್ಕಳುಗೂಡಿ ಸೋಪಾನವೇರಿ
ತಳರುತ ನವರತ್ನದಿಂದ ರಂಜಿಪ ಪೊರ
ಪಳಯದ ಕೋಟೆಯ ಸಾರ್ದ ೯

ನಾಗೇಂದ್ರ ನಿಲ್ಲು ದೇವೇಂದ್ರ ವಂದಿಸು ಕೆಲ
ಕಾಗಿರ್ಪೈ ದಿಕ್ಪಾಲರೆಲ್ಲ
ಯೋಗಿಗಳ್ಕುಳ್ಳಿರಿರೆಂಬ ವೇತ್ರಿಗರ ಶ
ಬ್ದಾಗಮ ಕೇಳುತೆಯ್ದಿದನು ೧೦

ಸುರಿವ ಪೂಮಳೆ ಕಾಂತಿಯುರಿವ ಭಾಮಂಡಲ
ಮೊರೆವ ದೇವಾನಕವೆಸೆಯೆ
ಹರಿಪೀಠದಬ್ಜವ ಸೋಂಕದಿಪ್ಪಯ್ಯನ
ಚ್ಚರಿಗೆ ಹಿಗ್ಗುತ ಬರುತಿರ್ದ ೧೧

ಸುರ ಸಿದ್ಧ ಯಕ್ಷ ಕಿಂಪುರುಷರು ಮೊದಲಾದ
ಪರಮನ ಸಭೆಯವರೆಲ್ಲ
ಭರತೇಶ ಬಹುದ ತಮ್ಮಿದಿರಲ್ಲಿ ಕಾಣುತ
ಚ್ಚರಿವಟ್ಟರೇನ ಬಣ್ಣಿಪೆನು ೧೨

ಅರಿವನಧಿಕ ಲಾವಣ್ಯನು ಚೆಲ್ವ ಕು
ಮಾರರು ವೆರಸಿ ಬಹವನು
ತಾರಾದ್ರಿಯೊಳು ಮುನ್ನ ನಾವೆಂದು ಕಂಡುದಿ
ಲ್ಲೀ ರೂಪನೆಂದು ನುಡಿದರು

ಹತ್ತಿರ ಬರಲೀತ ಭರತೇಶನಲ್ತೆ ದೇ
ವೋತ್ತಮನಾತ್ಮಜನಲ್ತೆ
ಮತ್ತಾರಿಗೀ ಸಿರಿ ಸಲುವುದಾತನಿಗೆಂದು
ಚಿತ್ತದೊಳ್ನಲಿದು ನೋಡಿದರು ೧೪

ಹರುಷದೊಳೊಳಪೊಳಹೊಗುತಿದ್ದನಷ್ಟರೊಳು ದೇ
ವರ ದೇವ ತ್ರಿಭುವನಾದಿತ್ಯ
ಪುರುನಾಥ ಚಿತ್ತೈಸು ಭರತೇಶ ಬಂದನೆಂ
ದೊರೆದರು ಸುರವೇತ್ರಧರರು ೧೫

ಒಳವೊಕ್ಕನೊಡನೆ ರತ್ನಾಂಜಲಿಯನು ಪಾದ
ನಳಿನಯುಗಕೆ ಸೂಸಿ ಚಕ್ರಿ
ನಳತೋಳ ನೀಡಿ ಸಾಷ್ಟಾಂಗವೆರಗಿದನು
ಪುಳಕ ಸರ್ವಾಂಗದೊಳುಣ್ಮೆ ೧೬

ಧಾತ್ರಿಯೊಳ್ಮೂರು ಸೂಳೆರಗಿ ನಿಂದಾ ದಿವ್ಯ
ಗಾತ್ರನ ಮುಂದೆ ಕೈಮುಗಿದು
ಸ್ತೋತ್ರವ ಮಾಡಿದನೇನೆಂಬೆ ತನ್ನ ಸು
ಪುತ್ರರುಗೂಡಿ ಚಕ್ರೇಶ ೧೭

ಕರತಳ ಕಂಪಿಸುತಿದ್ದುವಾನಂದಾಶ್ರು
ಸುರಿವುತಿದ್ದುವು ಕಂಗಳಿಂದ
ದರಹಸಿತಾಸ್ಯ ಸುಸ್ವರದೋರಿ ತನ್ನ ಸ
ದ್ಗುರುವ ಕೀರ್ತಿಸಿದನಿಂತೆಂದು ೧೮

ಸುತ್ರಾಮಶತಮುಕುಟಾನರ್ಘ್ಯರತ್ನಾಂಶು
ಚಿತ್ರಿತ ಚರಣಾಬ್ಜಯುಗಳ
ಛತ್ರ ಮುಕ್ತಾಂಶು ಗಂಗಾವೃತ ಬಹು ಜಟಾ
ಸೂತ್ರಿತ ಜಯಜಯಯೆಂದ ೧೯

ಸಂಗ ನಿಸ್ಸಂಗ ಸುರಾಂಗ ಚಿದಂಗ ಮ
ತಂಗಜರಿಪುವಿಷ್ಟರಾಢ್ಯ
ಸಾಂಗಿಕ ಸುರಕುಸುಮಾಸಾರ ಧೂಳಿ ಭ
ಸ್ಮಾಂಗಿತ ಜಯಜಯಯೆಂದ ೨೦

ಪಿಂಜರಿತೋಗ್ರ ಕರ್ಮಾರಣ್ಯ ದಾವಧ
ನಂಜಯ ಸುಜ್ಞಾನಭಾನು
ಭಂಜಿತಜಾತಿ ಜರಾಮಯದುಃಖ ಮೃ
ತ್ಯುಂಜಯ ಜಯಜಯಯೆಂದ ೨೧

ಕಂಜಕಿಂಜಲ್ಕ ಭುಂಜಿತ ಮಂಜುಳಾಳಿ ಸ್ವ
ರಂಜಿತ ಮಂಜು ಘೋಷೆಯರ
ರಂಜಿತಗೀತ ಪುಷ್ಪಾಂಜಲಿ ಪೂಜ್ಯ ಪ
ರಂಜ್ಯೋತಿ ಜಯಜಯಯೆಂದ ೨೨

ಸುರಕೃತ ಜಲದಿಂದ ಮಿಂದನು ಕೂಡೆ ಸಿಂ
ಗರಿಸಿದನಾತ್ಮಜರ್ವೆರಸಿ
ವರವಸ್ತುಚಯದಿಂದ ಜಿನನ ಪೂಜಿಸಿದನಾ
ಭರತೇಶಗೇನದಚ್ಚರಿಯೆ ೨೩

ತೀರ್ಥಾಂಬು ಮಲಯಜಾಕ್ಷತೆ ಪುಷ್ಪ ಚರು ದೀಪ
ಪ್ರಾರ್ಥನೆ ಧೂಪ ಫಲಾರ್ಘ್ಯ
ಸಾರ್ಥಸಿದ್ಧಿಗೆ ಸಾರೆ ಸಭೆ ಜಯಜಯಯೆನೆ
ತೀರ್ಥನಾಥನ ಪೂಜಿಸಿದನು ೨೪

ಪರಮನ ಸಭೆಗೊಂದು ಹೊಸಸಿರಿ ಬಂದು ಸಿಂ
ಗರವಾದುದಾ ಚಕ್ರಿ ತನ್ನ
ಗುರುವನೆಳಸಿ ನೋಡುತಿದ್ದನಿಲ್ಲಿಗೆ ಜಿನ
ದರುಶನ ಸಂಧಿ ಸುಗಂಧಿ ೨೫

## ಶ್ರೀಧರ್ಮಾಗಮನ ಸಂಧಿ

ಮಂಗಲ ಮಹಿಮನ ತಳತಳಿಸುವ ಪಾವ
ನಾಂಗದೊಳಾ ಚಕ್ರಧರನು
ಕಂಗಳ ಸುಳಿದಾಡಿ ಚಿತ್ತಕಾನಂದತ
ರಂಗವನುಂಟುಮಾಡಿದನು ೧

ತನಗೆ ಕೈವಲ್ಯವಪ್ಪಂದವ ಮುನ್ನಾದಿ
ಜಿನರಲ್ಲಿ ಕೇಳಿದ್ದನಹುದು
ತನುಜರ್ಗೆ ಕೈವಲ್ಯವಪ್ಪುದ ಕೇಳ್ದನಾ
ಜನಕಗೆಂತುಟೊ ಪುತ್ರಮೋಹ ೨

ಮಂದಿಯ ಹಾದಿಯೊಳಿರಿಸಿ ಬಂದೈ ಚಕ್ರಿ
ನಂದನರರ್ಥವ ಕೇಳ್ದೈ
ಇಂದಿಗೆ ಸಾಕಿನ್ನು ಹೋಗತಿ ಜೋಲಿ ಬೇ
ಡೆಂದನು ವೃಷಭಸೇನಾರ್ಯ ೩

ಎಂದರೆ ದೇವಾಜ್ಞೆಯ ಮೀರಲೇಕೆಂದು
ನಂದನರ್ವೆರಸೆದ್ದು ಜಿನಗೆ
ವಂದಿಸಿ ಪುನರಪಿ ದರ್ಶನಮಸ್ತೆಂದು
ಚಂದದಿ ಬೀಳ್ಕೊಂಡನೊಡನೆ ೪

ಸರ್ವರು ಸ್ವಾಮಿಯ ಮಹಿಮೆಯ ನುಡಿಯುತ
ಕೊರ್ವಿಂದ ನಗುತೆಯ್ದುತಿರಲು
ಇರ್ವರವರೊಳು ಸುಮ್ಮನೆ ಬರುತಿದ್ದರಿ
ನ್ನೂರ್ವರು ಕಿರಿಯ ಮಕ್ಕಳೊಳು ೫

ಅರಿದನು ಚಕ್ರಿಯವರ ಚಿತ್ತ ದೀಕ್ಷೆಯ
ತ್ತೆರಗಿತೆಂದಂತರಂಗದೊಳು
ಮರುಕದಿಂದೊತ್ತಿಗೆ ಕರೆದುಕೊಂಡೊಡನೆ ಬಾ
ಯ್ದೆರದಿಂತು ನುಡಿದನವರೊಳು ೬

ಏನಣ್ಣ ಜಿನರಾಜು ಮುನಿರಾಜು ಸುತರು ಸು
ಮ್ನಾನದೊಳೆಯ್ದುರುತಿರಲು
ದೂನಿಸುತಿದ್ದಿರಿ ನೀವೆಮಗಿದರ ಸಂ
ಧಾನಗಾಣಿಸದಾಡಿರೆಂದ ೭

ಮುಂದೆ ನೋಡದೆ ನೀವು ಹಿಂದಕೆ ತಿರುತಿರು
ಗಿಂದು ನೋಡುವುದೇತಕೆಂದ
ಎಂದು ಕಾಣ್ಬೆವು ಸ್ವಾಮಿ ಪುಣ್ಯಶೈಲವನದ
ರಿಂದ ನೋಡಿದೆವೆಂದರೊಡನೆ ೮

ಬಲ್ಲೆನಣ್ಣ ನಿಮ್ಮ ಮನದನುಭವವದ
ನಲ್ಲನನೀಗೆಣಿಸದಿರಿ
ಮೆಲ್ಲಗೆ ನೀವು ನಾವೊಂದಾಗಿ ಜಿನಸಭೆ
ಯಲ್ಲಿ ಮುಂದೆಸಗುವುವೆಂದ ೯

ಭೋಗಮೊಳ್ಕೆಲವು ದಿನಸವಿದ್ದು ಮತ್ತೆ ದೀ
ಕ್ಷಾಗಮವೆಯ್ದುವ ಮತ್ತೆ
ಈಗಲೆ ತವಕಿಸದಿರಿಯೆಂದನವರ್ಗದು
ಬಾಗಿಲ ತೆರೆದವೊಲಾಯ್ತು ೧೦

ಎಳೆವರೆಯದೊಳೆ ಮುಕ್ತಿಯರಾಳಬೇಕೆಮ್ಮ
ಕಳುಹ ಚಿತ್ತೈಸೆಂದು ನುಡಿಯೆ
ತಳಹೊಳಗೊಂಡನೆದೆಯೊಳು ಚಕ್ರೇಶನಾ
ಗಳೆ ಕಣ್ಣನೀರ್ಗಳುಮ್ಮಿದುವು ೧೧

ಕೆಟ್ಟೆಕಟ್ಟೆನು ಹಾ ಹಾ ನೀವೆನ್ನ ಬಿಟ್ಟು ಬಿ
ಳ್ಪಿಟ್ಟಕೆಯ್ದುವೆವೆಂಬ ಮಾತ
ಬಟ್ಟೆನ್ನ ರಕ್ಷಿಸಬೇಕೆಂದು ತೆಗೆದೆತ್ತಿ
ಕಟ್ಟಕ್ಕರಿಂದಪ್ಪಿಕೊಂಡ ೧೨

ಕುವರರು ಕಡಮೆಯೆ ದೇವರ್ಗೆ ನಾವಿಬ್ಬ
ರವಿಚಳ ತಪವ ಕೈಕೊಂಡು
ಜವನನಟ್ಟಿದರದು ತಾ ನಿನ್ನ ಕೀರ್ತಿಯ
ಲ್ಲವೆ ಸ್ವಾಮಿ ಹೇಳೆಂದರೊಡನೆ ೧೩

ಆ ಕೀರ್ತಿ ಬೇಡ ನೀವೆನ್ನೊಡನಿರಿ ನನ
ಗೀ ಕೀರ್ತಿ ಸಾಕೆಂದನಯ್ಯ
ಕಾಕು ಮಾಡುವ ಜನನೊಳಗಾಗಿ ಬಾಳ್ವುದು
ಸಾಕು ಚಿತ್ತೈಸೆಂದರವರು ೧೪

ಅಲ್ಲವಪ್ಪ ನೀವು ನಮ್ಮ ಪುರವ ನೋಡಿ
ತಿಲ್ಲ ನಮ್ಮಮ್ಮಾಜಿ ನಿಮ್ಮ
ಲಲ್ಲಿಯ ಕಂಡಿತಿಲ್ಲೀಗ ನೀವೆಯ್ದುವು
ದೆಲ್ಲರ ಮನಸಿಗೆ ಬಹುದೆ ೧೫

ಮತ್ತೆ ಬಹುದೆ ದೀಕ್ಷೆಗಿಚ್ಛೆ ವಿಚಿತ್ರ ಸಂ
ಪತ್ತಿನೊಳ್ಸಿಕ್ಕಿದ ಮೇಲೆ
ಅತ್ತಣ ಸುದ್ದಿಯ ತಡಹಬೇಡೆಮ್ಮ ಸು
ಚಿತ್ತದೊಳ್ಕಳುಹೆಂದರೊಡನೆ ೧೬

ಸಲ್ಲದಪ್ಪಾ ನೀವು ನನ್ನ ಮನಸಿಗಿಷ್ಟು
ತಲ್ಲಣದೋರ್ಪುದು ಚದುರೆ
ಸೊಲ್ಲಿಸದಿರಿರಿನ್ನು ತಪದ ಸುದ್ದಿಯನೆಂದು
ಗಲ್ಲವ ಪಿಡಿದಲುಗಿದನು ೧೭

ನೋಡಿದ ಪುತ್ರರ ತವಕವನಿದಕೊಂದ
ಮಾಡಬೇಕೆಂದೆಣಿಸಿದನು
ಕೂಡೊಂದು ಕರಿಣದ ತಂತ್ರವ ಕಂಡು ಮಾ
ತಾಡಿದನವರೊಡನಿಂತು ೧೮

ಸರ್ವಥಾ ದೀಕ್ಷೆಗೆಯ್ದಲೆ ಬೇಕೆ ಬೇಕಾಗ
ಲುರ್ವಿಗುತ್ತಮವ ನೆನೆದಿರಿ
ಒರ್ವೊರ್ವರೊಂದೊಂದು ವಸ್ತುವ ನವಗೆ ಕೊ
ಟ್ಟೆರ್ವರು ತೆರಳಿರೈಯೆಂದ ೧೯

ತೊಟ್ಟಿರ್ದ ಸರ್ವವ ತೊರೆದು ದೀಕ್ಷೆಗೆ ಹೋಗು
ತೊಟ್ಟೈಸಿದಾಸೆಯೆ ನಮಗೆ
ಕೊಟ್ಟಪೆವೇನು ನಿರೂಪಿಸೆಂದರು ರಾಯ
ತೊಟ್ಟನಂಗ್ಸೆಯ ನೀಡಿದನು ೨೦

ಒಬ್ಬ ಕರ್ಪೂರವನಿರಿಸಿಲ್ಲಿ ಕೂಡೆ ಮ
ತ್ತೊಬ್ಬ ತೈಲವನಿಲ್ಲಿ ಹನಿಸಿ
ಇಬ್ಬರು ಹೋಗಿರ್ಪೈ ಜಿನನಾಣೆ ತಡೆಯೆನೆಂ
ದುಬ್ಬಿ ಕಣ್ಣೀರೊಳೆ ನುಡಿದ ೨೧

ಸ್ವಾಮಿ ಕೈಯೊಡ್ಡಿ ವಿಷವ ಬೇಡುವಂತಾಯ್ತು
ಈ ಮಾತ ಕೇಳ್ದಿವೆ ನಾವು
ಹಾ ಮಝು ಜಿನ ಜಿನ ಗುರು ಹಂಸನಾಥಯೆಂ
ದಾ ಮಗ ಕಿವಿಯ ಮುಚ್ಚಿದನು ೨೨

ಅಣ್ಣನ ಮೊಗವನಯ್ಯನ ಮೊಗವನು ನೋಡಿ
ಕಣ್ಣ ನೀರ್ಗುಳುಗುಳನುಗತ
ಪೊಣ್ಣನೆ ಕಾಲ್ಗೆ ಬಿದ್ದರು ದೀಕ್ಷೆಯೆಂದಿನ್ನು
ಹಣ್ಣೆವು ಕ್ಷಮಿಸೆಂದರಂಜಿ ೨೩

ತಂದೆ ಮಕ್ಕಳ ಕಣ್ಣ ನೀರ್ಗಳ ತೊಡೆದನಾ
ತಂದೆಯ ಕಣ್ಣೀರನವರು
ಚಂದಳಿಗೈಯಿಂದ ತೊಡೆದರು ತಳ್ಕಂಕ
ನಿಂದಿತು ಮನ ತಿಪ್ಪಗಾಯ್ತು ೨೪

ನೋಡಿರ್ಪೈ ನಾನೆನ್ನ ತಂದೆ ರಾಜ್ಯದೊಳಿಂಬು
ಮಾಡಿದಂತಿಹೆನು ನಮ್ಮಮ್ಮ
ಊಡಿದ ಮೊಲೆವಾಲ ಋಣಕಾಕೆಯಾಜ್ಞೆಯೊ
ಳಾಡುತಿದ್ದಪೆನಲ್ತೆಯೆಂದ ೨೫

ಅರಸಂಚಿ ಮರಿಗಳಿಗೋಜೆಯ ಕಲಿಸುತ
ಭರದೊಳು ಬರದಂತೆ ನೃಪತಿ
ಸರಸಸಲ್ಲಾಪವ ಸುತರೊಳು ನುಡಿವುತೆ
ಯ್ತರುತ್ತಿದ್ದನಧಿಕ ಲೀಲೆಯೊಳು ೨೬

ಬರೆ ಬರೆ ಕಟಕ ಸಮಿಾಪವಾದುದು ನನ್ನು
ದೊರೆಯಿಂದು ತೀರ್ಥವಂದನೆಯ
ಪರಮ ಲಾಭದೊಳೆಯ್ದುತಿದ್ದನೆಂದತಿ ಭಕ್ತಿ
ವೆರಸಿದಿಗೆ ಂಡುದು ಕಟಕ ೨೭

ಅಲ್ಲಲ್ಲಿಗಿಡುವ ನಿವಾಳಿಯಾರತಿ ಪುಷ್ಪ
ಪಲ್ಲವ ಫಲ ಪೂಜೆಗೊಳುತ
ಎಲ್ಲ ಪುತ್ರರುಗೂಡಿ ಪುಷ್ಪಕವಿಳಿದೋಜೆ
ಯಲ್ಲಿ ಮುಂದಿಳಿತರುತಿರ್ದ ೨೮

ನಗೆನುಡಿ ನೋಟ ಕೈಸನ್ನೆಯಿಂದಲ್ಲಿಗ
ಲ್ಲಿಗೆ ಸರ್ವಜನರ ಬೀಳ್ಕೊಡುತ
ಸುಗುಣ ಚಕ್ರೇಶ ಹೊಕ್ಕನು ರಾಜಗೃಹವ ಪೆಂ
ಪೊಗಯೆ ಸುಪುತ್ರರುಗೂಡಿ ೨೯

ಬೀಗಿ ಸುಪುತ್ರರುಗೂಡಿ ಪಂತಿಯೊಳಾ
ರೋಗಣೆಗೈದು ಚಕ್ರೇಶ
ರಾಗಾನುಲೀಲೆಯೊಳಿರ್ದನೆಂಬೆಡೆಗೆ ತೀ
ರ್ಥಾಗಮನದ ಪುಣ್ಯಸಂಧಿ ೩೦

# ಅಂಬಿಕಾದರ್ಶನ ಸಂಧಿ

ಪುರು ಪರಮೇಶನ ಪಾದಗಂಧೋದಕ
ಶಿರ ಸೋಂಕೆ ಸುಪವಿತ್ರವೆತ್ತು
ತೆರಳಿತು ದಂಡು ನಿಸ್ಸಾಳ ಸೂಳೈಸಲಂ
ಬರ ಭೂಮಿ ಕಿಷ್ಕಿಂಧವಾಗಿ ೧

ಭರತೇಶ ತಿರುಗಿದನೆಂಬುದ ಪೌದನ
ಪುರದೊಳಿದ್ದಂಬಿಕೆ ಕೇಳ್ದು
ಪಿರಿದು ಸಂತಸವೆಯ್ದಿ ವಾರ್ತೆಯ ತಂದ ದೂ
ತರಿಗಿತ್ತಳೊಸೆದು ಮನ್ನಣೆಯ ೨

ಮಗನಟ್ಟಿದುಡುಗೊರೆಗಳ ತಾನು ತಂಗಿಯು
ತೆಗೆದುಟ್ಟು ತೊಟ್ಟರ್ತಿವಟ್ಟು
ಮುಗುಳೆಂಬಗದರ ವೃತ್ತಾಂತವನರುಹಿ ಮೂ
ಜಗವನಾಳ್ದಂತಿರ್ದರವರು ೩

ನಡೆದಿನ್ನು ಹತ್ತೆಂಟುದಿನಕಮ್ಮ ಪುರದ ಮುಂ
ಗಡೆಗೆ ದಂಡೆಯ್ದುವುದೆನಲು
ಪಡೆದ ತಾಯಲ್ಲವೆ ತಾನಷ್ಟು ದಿನಮುಟ್ಟ
ತಡೆದಿರಲಾರದೆಯ್ದಿದಳು ೪

ಭರತಣ್ಣನೆಲ್ಲಿದ್ದನದೆ ಪುರ ನನ್ನದೆ
ತರಹರಿಸದೆ ಪೋಪೆ ನಾನು
ಪುರವ ಹೊಕ್ಕಾಗ ನೀವೆಯ್ತಹುದೆಂದು ಬಿ
ತ್ತರಿಸಿ ತಂಗಿಯ ನಿಲಿಸಿದಳು ೫

ಆರು ಅರಿಯದಂತೆ ಪುಳುದುಳನೆಯ್ದಿ ಬೀ
ಡಾರವ ಹೊಕ್ಕಾಗ ತನ್ನ
ನಾರಿಯರ್ತಾನು ಬೆಕ್ಕಸಬಡಬೇಕೆಂದು
ಪಾರನನೊಡಬಡಿಸಿದಳು ೬

ಪಲ್ಲಕ್ಕಿಯೊಳು ಪೋಗೆ ತಡವಹುದದು ಬೇಡ
ಫುಲ್ಲಪುಷ್ಪಕವೇರಿ ಗಮಿಸಿ
ನಿಲ್ಲದಿಂದೆ ಕಾಣ್ಬೆನಣ್ಣನನೆಂದಿನಿ
ವಿಲ್ಲನ ಒಳ್ಕೊಂಡಳೊಡನೆ ೭

ಕ್ಷಣಕೆ ಪುಷ್ಪಕ ಸೇನ ಮುಟ್ಟಲಾಯ್ತೆನೆ ಬಂದು
ದೆಣೆಯಿಲ್ಲದ ಕಟಕವನು
ಗುಣರತ್ನನಂಬಿಗೆ ಮತ್ತೊಯ್ಯನಂಬರಾಂ
ಗಣವಲ್ಲಿ ನೋಡುತೆಯಿದ್ದಳು ೮

ಮುಂಗಡೆಯೊಳು ಸುರವೀರ ನಂಬುಗೆವಂತ
ರಂಗಯ್ಯನೆತ್ತಿ ಖೋಯೆಂದು
ಡಂಗುರಿಸಿದರೆಮ್ಮ ಸ್ವಾಮಿಯಂಬಿಕೆ ಬಿಜ
ಯಂಗೈದಳೆಂದು ಪಾಯ್ದಳಕೆ ೯

ಪಟುಮತಿಯಿಂದವರಾಡಲಾ ನುಡಿ ಕರ್ಣ
ಪುಟದಲ್ಲಿ ಬೀಳಲಾಕ್ಷಣವೆ
ನಿಟಿಲಕೆ ಕರವಿಟ್ಟು ಜಯ ಜಯಯೆಂದೆಲ್ಲ
ಕಟಕ ಬೊಬ್ಬಿರಿದುದಂದಲ್ಲಿ ೧೦

ಅವರ ಕಂಡನರು ಮತ್ತವರ ಕಂಡಾಚೆಯಿ
ದ್ದವರವರಿಂದಾಚೆಯವರು
ತವ ತವಗೆಲ್ಲರು ಜಯ ಜಯಯೆಂದು ಘೋ
ಷವ ಮಾಡಿದರು ಸೇನೆತುಂಬಿ ೧೧

ಬಡಿವ ತಂಬಟೆ ಭೇರಿ ಮಿಡಿವ ಕಹಳೆ ಕೊಂಬು
ಸುಡುವ ಪಟಲು ಕೊಡೆ ನೆಗೆವ
ಗುಡಿ ಕೇತು ತೋರಣದಿಂದ ಪಾಯ್ದಳವೆಲ್ಲ
ಸಡಗರಗೊಂಡುದತ್ತತ್ತ ೧೨

ಪಡೆಯೆಲ್ಲ ಬಳ್ಳಿಯ ಮೊದಲನಲುಗಲೆಲ್ಲ
ಕುಡಿಗಳು ಮಿಸುಕಿದಂತಾಯ್ತು
ಬಡವನ ಜನನಿಯೆ ಪಟ್ಟಂಡದೆರೆಯನ
ಪಡೆದಳೆಯ್ತರಲಿದು ಘನವೆ ೧೩

ಅರಮನೆಯೊಳಗಿದ್ದ ನೃಪನದ ಕೇಳ್ದು ತೊ
ತ್ತಿರನಟ್ಟಿ ನೋಡಿಸಲವರು
ಹರಿತಂದು ಕಡೆಯ ಬಾಗಿಲ ಸಾರಿ ನೋಡಿ ಚ
ಚ್ಚರದೊಳೋಡಿದರಾಣ್ಮನೆಡೆಗೆ ೧೪

ಒಡೆಯ ಬನ್ನಹ ನಮ್ಮ ಕಟಕವೆಲ್ಲವು ಬಲು
ಕಡಲು ಕಲಕಿದಂತೆ ಕಲಕಿ
ಪೊಡವಿಯಾಗಸ ತುಂಬಿ ಹರಿದೋಡುತಿದೆ ನಮ್ಮ
ನುಡಿಗೇಸ್ತರಿಲ್ಲೆಂದರವರು ೧೫

ಧರೆ ಸಾಧ್ಯವಾಯ್ತೆಂದು ವ್ಯೆಮರೆದಾಗಿಂತು
ಬರುತಿರಲೀ ವೇಳೆಯರಿದು
ಅರಿಗಳಾರಾದರು ಮೇಲ್ಗವಿದರೊಯೆಂದು
ಭರತೇಶ ನೆನೆದನೆದೆಯೊಳು ೧೬

ಸೌಂದರಿಯರಿಗಂಜದಿರಿರೆಂದು ಪೇಳ್ದು ಸೌ
ನಂದಕವೆಂಬ ಖಂಡೆಯವ
ಕುಂದಣದೊರೆಯಿಂದ ಸುಗಿದನು ಫಣಿ ಹೆರೆ
ಯಿಂದುಚ್ಚಿ ನಿಮಿರಿದಂತಾಯ್ತು ೧೭

ಜವನ ನಾಲಗೆಯಂತೆ ಮೆರೆವ ಖಡ್ಗವನಾಂತು
ಯುವತಿಯರೆಂತ್ತಿ ನಿಂದೆದ್ದು
ಕವಚ ಹರಿಗೆ ಮೊದಲಾದ ಸಂಜೋಗವಿ
ಲ್ಲವನೀಶನೆದ್ದನಿದ್ದಂತೆ ೧೮

ರಕ್ಕಸರಾಗಲಿಂದಿದಿರಾದರಾದರೆ
ಹಕ್ಕಿಯನಟ್ಟುವಂತವರ
ದಿಕ್ಕು ದಿಕ್ಕಿಗೆ ತೆಮುಳ್ದುವೆನೆಂಬ ವಿಕ್ರಮ
ಮುಕ್ಕಳಿಸುತ ನಡೆತಂದ ೧೯

ದಿಗಿದಿಗಿನೆಯ್ತಂದು ಕಡೆಯ ಬಾಗಿಲ ಸಾರ್ದು
ಜಗದೇಕವೀರ ನೋಳ್ಪಾಗ
ಬಿಗಿದ ಚಲ್ಲಣ ಕಾಸೆ ಕೂರಸಿವೆರಸಿ ಕೈ
ಮುಗಿದರು ಕುವರರು ಬಂದು ೨೦

ಗಣಬದ್ಧರೊದಗಿದರಷ್ಟರೊಳರಸ ಮುಂ
ದಣ ಪೌಜ ನೋಳ್ಪಾಗ ಮುಂದೆ
ಎಣೆಗೂಡಿ ಶೂರ ವೀರರು ಬೆರಸೆಯ್ತಂದು
ಮಣಿದುಸಿರ್ದರು ಕಾರ್ಯಗತಿಯ ೨೧

ಗುರುಹಂಸನಾಥ ನಮ್ಮಮ್ಮಾಜಿಯೆಯ್ತಂದ
ಪರಿಯ ಭಾಪೆಂದುಬ್ಬಿ ನಗುತ
ಕರವಾಳ ಭಟನ ಕೈಗಿತ್ತನು ಶೂರವೀ
ರರಿಗಿತ್ತನೊಡನೆ ಮನ್ನಣೆಯ ೨೨

ಗಾಳಿಯೆದ್ದಷ್ಟರೊಳ್ಬಂದು ಪುಷ್ಪಕ ಹೊರ
ಪಾಳಯದೊಳವೊಕ್ಕುದೊಡನೆ
ಮೇಲಣಲೋಕದ ದಿವಿಜೆಯಂತಿಳಿದಳಾ
ಲೋಲೆ ಯಶಸ್ವತೀದೇವಿ ೨೩

ಹೊದೆದ ದೂವಟವ ನಿವಾಳಿಯಿಟ್ಟೊಡನೊಂದ
ಹೊದೆವುತ ನೃಪ ತನ್ನ ತಾಯ
ಇದಿರಲ್ಲಿ ಸಾಷ್ಟಾಂಗವೆರಗಲಷ್ಟರೊಳಾಕೆ
ಒದಗಿ ಕೈಯೊಡ್ಡಿ ತಡೆದಳು ೨೪

ಏರುವ ಜವ್ವನ ಜಾರದೆ ನೆರೆತಲೆ
ದೋರದೆ ಚಿರಬಾಳು ಕಂದ
ಆರು ಖಂಡವ ಬಹುದಿನವಾಳ್ದು ಮುಕ್ತಿಯ
ಸೂರೆಗೊಳ್ಳೆಂದಳು ಕ್ಷಣಕೆ ೨೫

ಅರವತ್ತು ಸಾವಿರ ವರ್ಷವಾಯ್ತಣ್ಣ ನೀ
ನುರೆ ನನ್ನ ಪಕ್ಕದಿಂದಗಲಿ
ಮರಿಯಾನೆ ಇಂದು[1]ಸಂದಿಸಿದೆ[1]ಯಯ್ತೆಂದಪ್ಪಿ
ಮರುಕದೊಳ್ಮುಡಿದಳಾ ಜನನಿ ೨೬

ಒಡನೆ ಕೈಲಾಗಿತ್ತು ಹೊರಗಣ ಪೌಳಿಯಿಂ
ನಡುವಣ ಪೌಳಿಗಂಬಿಕೆಯ
ಅಡಿಯಿಡಿಸಿದನು ಚಿಕ್ಕಮ್ಮನ ಕ್ಷೇಮಗೇ
ಳ್ದೊಡಹುಟ್ಟಿದನ ಲೇಸ ಕೇಳ್ದು ೨೭

---

[1] ಸಂದಿಸಿದೆ [1] ಯೆಂದಪ್ಪಿ

ನಡುವಣ ಚಾವಡಿಗೆಯ್ದಿ ಗದ್ದುಗೆಯಲ್ಲಿ
ಪಡೆದಳ ಬಿಜಯಂಗೈಸಿ
ಎಡ ಬಲದಲಿ ಕುವರರು ತಾನು ನಿಂದು ಪೆಂ
ಪಿಡಿಸುದೋಲೈಸಿದರೊಸೆದು ೨೮

ಅತ್ತೆ ಬಂದುದ ಸೊಸೆಯರು ಕೇಳ್ದು ನವ್ಯ ಸಂ
ಪತ್ತು ಬಂದಂತರ್ತಿವಡುತ
ಒತ್ತಿ ಬಂದರು ಮಝು ಮನದ ಸಂತಸವೆಂತೊ
ತತ್ತರಗೊಂಡು ತಮ್ಮೊಳಗೆ ೨೯

ಸಡಿಲುವ ಮುಡಿಯ ಸಾಗಿಸದೆ ಸೇವಕಿಯರ
ತಡಹದೆ ಪತಿಗೆ ಶಂಕಿಸದ
ನಡೆತರುತಿರ್ದರು ಸೊಕ್ಕಿದಾನೆಯು ಹಿಂಡ
ತಡೆಯಬಟ್ಟಂತೆ ಲಗ್ಗೆಯೊಳು ೩೦

ಗೆಲುವಾಂತು ಸೊಸೆಯರೆಯ್ತರುತಿರಲತ್ತೆ ಕಂ
ಗಳು ತುಂಬಿ ಕಂಡುಬ್ಬಿ ನಗುತ
ಎಲೆಲೆ ನನ್ನನುಜರ ಸುತೆಯರು ಬಂದರೊ
ನಲಪ ತಂದರೊಯೆಂದಳೆನಗೆ ೩೧

ಮೊಗವೆಲ್ಲ ನಗೆ ತನುವೆಲ್ಲ ಪುಳಕ ಕಣ್ಣೊ
ಳೊಗುವ ಬಾಷ್ಪಗಳಿಂದ ಸಾರಿ
ದುಗುಲ ನಿವಾಳಿಯಿಟ್ಟತ್ತೆಯ ಪಜ್ಜೆಗೆ
ಬಗೆಮೆಚ್ಚಿ ನೊಸಲಿಟ್ಟರವರು ೩೨

ತರತರದೊಳು ಬಂದು ನಮಿಸುವ ಸೊಸೆಯರೆ
ಲ್ಲರ ನೋಡಿ ನಗುತಲಾ ದೇವಿ
ಶಿರವಿಡಿದೆತ್ತೆತ್ತಿ ಹರಸುತಿರ್ದಳು ಬಲು
ಪರಿಷೆಯ ದೇವತೆಯಂತೆ ೩೩

ವಂದನೆ ಮುಗಿದ ಮೇಲತ್ತೆಯಮ್ಮ ನಾವೆಲ್ಲ
ರಂದು ಕೈಕೊಂಡ ನೇಮಗಳು
ಇಂದಿಗೆ ಸಂಪೂರ್ಣವೆಂದರು ಬಲುವ್ರತ
ಸಂದುವೆ ಲೇಸೆಂದಳಾಕೆ ೩೪

ಸೊಸೆಯರಾಕೆಗೆ ನಮಿಸಿದ ಮೇಲೆ ಸೊಸೆಯರ
ಸೊಸೆಯರು ನಮಿಸಿದರಾಗ
ವಸುಧೇಶ ಚಕ್ರೇಶ ತಾಯೊಡನೊಂದ ಸಂ
ತಸವಾಂತು ನುಡಿದನೇನೆಂಬೆ ೩೫

ನಿಮ್ಮ ಸೊಸೆಯರ ನೀವಂದು ಹರಸಲಾಗಿ
ಸುಮ್ಮಾನದೊಳು ಬಾಳುತಹರೆ
ನಮ್ಮ ಸೊಸೆಯರಿವರನು ನೋಡಿ ಹರಸಬೇ
ಕಮ್ಮಾಜಿಯೆಂದನರ್ತಿಯೊಳು ೩೬

ಅಹುದೆ ಕೇಳರಸಣ್ಣ ನಿನ್ನ ಸೊಸೆಯರೆನ್ನ
ಮಹಿಮೆಯ ಸೊಸೆಯರಂದದೊಳು
ಬಹು ಸುಖದೊಳು ಬಾಳಲೆಂದು ಗಹ
ಗಹಿಸಿದಳ್ಬಿನದಕೆ ಮಗನ ೩೭

ಸರ್ವರು ಬಂದರೇಕಕ್ಕಾಜಿ ಬಾರಳೆಂ
ದುರ್ವಿ ಪೆಂಗಳು ನೋಡುವಾಗ
ಸಾರ್ವಭೌಮನ ಪಟ್ಟದರಸಿಯಲ್ಲವೆ ಬಂದ
ಳುರ್ವಿಯ ಸಿರಿಯು ಬಹಂತೆ ೩೮

ಸಿಂಗರಿಸಿದ ಸತಿಯರ ಬಳಸಿನೊಳು ತ
ನ್ನಂಗಶೃಂಗಾರ ವೆಗ್ಗಳಿಸೆ
ಅಂಗದ ಕಾಂತಿಯೊಕ್ಕಡುಗಟ್ಟಿ ತುಳುಕೆ ಲ
ತಾಂಗಿ ಬಂದಳು ವಿಲಾಸದೊಳು ೩೯

ತುಂಬುಜವ್ವನ ತುಂಬಿದಂಗ ಮತ್ತದರಲ್ಲಿ
ತುಂಬಿ ತುಳುಕುವ ಲಾವಣ್ಯ
ತುಂಬಿದ ಗಾಡಿಯೊಳ್ಪರುತಿದ್ದ ಸೊಸೆಯ ಕ
ಣ್ತುಂಬ ನೋಡಿದಳತ್ತೆ ಕೂರ್ತು ೪೦

ಕಚ್ಛೇಂದ್ರಸುತೆ ಸುಭದ್ರಾದೇವಿ ಗುಣರತ್ನ
ಗುಚ್ಛದೊಳೆಸೆವ ಸ್ತ್ರೀರತ್ನ
ಅಚ್ಛಾವಧಾನ ಸಾರ್ತಂದಳೆಂದರಿಪಿದ
ರಿಚ್ಛೆಯೊಳ್ಕಂಚಿಕಾತಿಯರು ೪೧

ಪಟ್ಟೆ ನಿವಾಳಿಯಿಟ್ಟೊಡನೊಂದು ಹಾರವ
ನಿಟ್ಟು ನಿವಾಳಿಯ ಮೇಲೆ
ತೊಟ್ಟನೆರಗಲತ್ತೆ ತೆಗೆದಪ್ಪಿಕೊಂಡರ್ತಿ
ವಟ್ಟು ಹರಸಿದಳಾ ಸೊಸೆಯ ೪೨

ಅಣ್ಣನ ಕಂಡವೊಲಾಯ್ತೆಂದು ನುಡಿದಳು
ಹಣ್ಣಾದುದಿಬ್ಬರ ಹೃದಯ
ಕಣ್ಣೊಳಿಬ್ಬರಿಗುಕ್ಕುವಶ್ರು ಸೋದರಿಕೆಯ
ಬಿಣ್ಣಿತೆನಿಪ ಮೋಹವಲ್ತೆ ೪೩

ಘಳಿಯಾರದೊಳಗಪ್ಪರೊಳು ಶಂಖನಾದವು
ಚ್ಚಳಿಸಿತಾರೋಗಣೆಗಿನ್ನು
ತಳರ್ವುದುತ್ತಮವೆಂದು ಚಕ್ರೇಶ ತನ್ನವ್ವ
ಗೆಳಸಿ ಬಿನ್ನವಿಸಿದನೊಡನೆ ೪೪

ಚಾವಡಿಯಿಂದೆದ್ದು ಸರ್ವರು ಬೇರೆ ಬೇ
ರಾವಾಸಗಳ ಹೊಕ್ಕು ಮಿಂದು
ದೇವ ಪೂಜೆಯ ಮಾಡಿ ಭೋಜನ ಗೃಹಕೆ ಮ
ಹಾ ವಿಭವದಿ ಹೊಕ್ಕರೊಡನೆ ೪೫

ಇಂಬಿಂದ ಪುತ್ರ ಪೌತ್ರರು ಸೊಸೆಯರ್ಕಳು
ತುಂಬಿ ಮತ್ತವರ ಸೊಸೆಯರು
ಅಂಬಿಕೆಯೊಡನೆ ಪಂತಿಯೊಳುಂಡು ತಣಿದರಿ
ದಂಬಿಕಾದರ್ಶನ ಸಂಧಿ ೪೬

# ಕಾಮದೇವಾಸ್ಥಾನ ಸಂಧಿ

ಜನನಿಯ ಕಂಡು ಸಂತಸವ ತಾಳ್ದಾ ಮರು
ದಿನದೊಳು ಭೇರಿ ಸೂಳೈಸೆ
ಜನನಾಥ ದಂಡೆತ್ತಿ ನಡೆದನು ಧರೆಯು ತೆ
ಕ್ಕನೆ ತನ್ನ ಪಡೆ ತುಂಬಿ ನಡೆಯೆ ೧

ಸೇನೆಯೆಲ್ಲರ ಮುಂದೆ ಚಂದ್ರ ಸೂರ್ಯಧ್ವಜ
ಚೀನ ಪತಾಕೆಯೊಗ್ಗಿನೊಳು
ಭಾನುಮಂಡಲ ನಡೆವೊಲು ಚಕ್ರರತ್ನ ಪ್ರ
ಭಾನುಲೀಲೆಯೊಳೆಯ್ದುತಿಹುದು ೨

ಹತ್ತೆಂಟು ಪಯಣವ ಬಂದು ಪೌದನಪುರ
ದತ್ತ ಸಾರ್ದಲ್ಲಿಂದ ಮುಂದೆ
ಎತ್ತ ನಡೆವೆನೆನೆ ನಿಂದುದು ನಡೆಯದ
ತ್ತಿತ್ತಲೆಯದೆ ಚಕ್ರರತ್ನ ೩

ಚಕ್ರಿಗೆರಗಿದವರುರ್ವಿಯೊಳ್ನಡೆವುದು
ವಕ್ರಿಸಿದವರ ಸೀಮೆಯೊಳು
ಚಕ್ರ ಪೋಗದೆ ನಿಲ್ವುದಾ ಚಕ್ರ ನಿಲೆ ಸೇನಾ
ಚಕ್ರ ವಿಸ್ಮಯಬಟ್ಟುದೆಲ್ಲ ೪

ಏನು ಕಾರಣ ನಿಂದಿತ್ತೈ ಚಕ್ರವೆಂದು ಪ್ರ
ಧಾನಿಯ ಕೇಳ್ದನಾ ಚಕ್ರಿ
ಮೀನಾಂಕ ಮೊದಲಾದ ನಿನ್ನ ಸೋದರರು ಬಂ
ದಾನತರಾಗಬೇಕೆಂದ ೫

ಬಿಡಿಸಿ ಪಾಯ್ದಳವನಲ್ಲಿ ಲೇಖನವ ತ
ನ್ನೊಡಹುಟ್ಟಿದವರಿಂಗಟ್ಟಿದನು
ಕಡೆಗವರೆಲ್ಲರಾ ಲೇಖನಾರ್ಥವನೋದಿ
ಪೊಡವಿಭುಜಾಸೆಯ ಬಿಟ್ಟರೊಡನೆ ೬

ತಂಪೆ ಕೊಟ್ಟಂಬಳಿಯೊಳಗಿರ್ದು ತನಗಿನ್ನು
ವಂದಿಸಿ ಬಾಳ್ವೆವೆಯೆಂದು
ಒಂದನು ನುಡಿಯದೆ ಕೈಲಾಸಗಿರಿಗೆಯ್ದಿ
ತಂದೆಯೊತ್ತಪದಾಳ್ದರವರು ೭

ಕುಡುವಿಲ್ಲ ಪೊರಗಾಗಿ ತೊಂಬತ್ತು ಮೂವರು
ನಡೆದು ದೀಕ್ಷೆಯ ಕೊಂಡರೆಂಬ
ನುಡಿಗೇಳ್ದು ಚಕ್ರೇಶ ಮನದೊಳು ಮರುಗಿದ
ನೊಡನೆ ವಿಕ್ರಮುಕ ಮೆಚ್ಚಿದನು ೮

ಎಲ್ಲರಿಗೋಲೆಯು ಕಳುಹಿದ್ದನಾ ವೋಲೆ
ಯಲ್ಲಿ ಬಂದೆರಗುವುದೆಂಬ
ಸೊಲ್ಲಿರೆ ನೊಂದವರ್ತಪಸುದಾಳ್ದರು ಕಬ್ಬು
ವಿಲ್ಲಗಂತೋಲೆ ಹೋಯ್ತಿಲ್ಲ ೯

ಈಕ್ಷಿಸಿ ಸಖರೆಲ್ಲರನುಮತದಿಂದೊಬ್ಬ
ದಕ್ಷಿಣಾಂಕನ ಚಕ್ರಿ ಕರೆದು
ಇಕ್ಷುಚಾಪನ ತಹುದೆಂದಟ್ಟಲವ ಹೋಗಿ
ಸುಕ್ಷೇಮದೊಳು ಪೊಕ್ಕ ಪುರವ ೧೦

ಸತ್ತಿಗೆ ಚಮರ ಚಮ್ಮಾವುಗೆಯುಳಿದು ಬೆಂ
ಬತ್ತಿದ ಸರ್ವರ ನಿಲಿಸಿ
ಮತ್ತೆ ತಾನೊರ್ವನೆ ಕಡೆಯ ಹಜಾರದ
ಮುತ್ತಿನಬಾಗಿಲ ಸಾರ್ದ ೧೧

ಮಾರಗೆ ತಾನು ಬಂದುದನವಸರದೊಬ್ಬ
ಸೌರಭಾನಿಲಗೆ ಪೇಳ್ದಟ್ಟಿ
ದ್ವಾರದೊಳಿರ್ದು ವೋಲಗಕೆ ಪೋಪುದ್ದಂಡ
ನಾರಿಯರಿರವನೀಕ್ಷಿಸಿದ ೧೨

ನಾರಿಯರೊಳ ವೊಕ್ಕರೊಡನೆ ಮುನ್ನೆಯ್ದಿದ
ದ್ವಾರ ಸೌರಭ ಮಗುಳಿದನು
ದಾರಿಯ ನೋಡುತ ನಿಂದಿರ್ದ ದಕ್ಷಿಣಾ
ಗಾರಯ್ದು ನುಡಿದನಿಂತೆಂದು ೧೩

ಸ್ವಾಮಿಯೋಲಗವಾದ ನೀನೆಯ್ದಿದಿರವ ಕೇ
ಳ್ದಾಮೋದಿಸಿದನು ಬಾರೆಂದು
ಕಾಮನೋಲಗಕೆ ಚಕ್ರೇಶನ ಸಖನ ಸು
ಪ್ರೇಮದೊಳೊಯ್ದನಾ ಸುಮುಖ ೧೪

ಪುತ್ತಳಿಗೆಲಸದ ಬಾಗಿಲು ಕಾಂಚನ
ಭಿತ್ತಿ ಮಾಣಿಕದ ಕಂಭಗಳು
ಕಸ್ತುರಿ ಸಾರಣೆ ಪೂವಲಿ ನೆಲದೊಳು
ಮೆತ್ತ ಮೆತ್ತನೆ ಬರುತಿರ್ದ ೧೫

ಬರುತಿಪ್ಪವನಾರು ದಕ್ಷಿಣಾಂಕನೊ ಪಂಚ
ಶರನ ಕಾಣಲ್ಕೆ ಪೋದಪನೊ
ಭರತೇಶನಲ್ಲಿದ್ದನಿವನೇಕೆ ಬಂದನೆಂ
ದರಗಿಳಿ ನುಡಿದುವಲ್ಲಲ್ಲಿ ೧೬

ಅಗ್ಗದ ದೊರೆಯ ಕೆಳೆಯನೆಂಬ ಗರ್ವವೊ
ಮೊಗ್ಗೆಗೋಲನ ಸಭೆಗಿನಿಸು
ತಗ್ಗಿ ಬಾ ನೋಡಿ ಬಾ ಮೆಲ್ಲನೆ ಬಾರೆಂದು
ಹೆಗ್ಗಾರ ನುಡಿದುವಲ್ಲಲ್ಲಿ ೧೭

ಮೋರೆಯ ತಾಗುವಂತೊಂದು ಪಾರಿವಪಕ್ಕಿ
ಪಾರಿ ಬಹಾಗ ದಕ್ಷಿಣನು
ಮೋರೆಯನೊಲೆದು ಕೈಯೊಡ್ಡಿ ಕಳೆಯೆ ಕಂಡ
ನೀರೆವೆಂಗಳು ನಕ್ಕರೊಸೆದು ೧೮

ಆರಯ್ಪುತೋಸರಿಸುತ ನಡೆತಪ್ಪಾಗ
ನಾರಿಯರೋಲಗದೊಳಗೆ
ದೂರದೊಳಿದಿರೊಳೊಪ್ಪುವ ಮನಸಿಜನ ಕ
ಣ್ಣಾರೆ ಕಂಡನು ದಕ್ಷಿಣಾಂಕ ೧೯

ಅರಲಸಿಂಹಾಸನದಗ್ರದೊಳಂಚೆಯ
ಕೊರಳ ತುಪ್ಪುಳ ಗಮ್ದುಗೆಯೊಳು
ನರ ಸುರ ನಾಗಲೋಕದಮೋಹನಾಂಗವೆ
ಪುರುಷರೂಪಾಂತವೊಲಿರ್ದ ೨೦

ಪಚ್ಚೆಯ ಪ್ರತಿಮೆ ಪ್ರಾಣಂಬೆತ್ತು ನವರತ್ನ
ದಚ್ಚದೊಡಿಗೆ ತೊಟ್ಟು ತೋರ್ಪ
ಮೆಚ್ಚಿನೊಳಿರ್ದನಾ ಕಾಮದೇವನು ನೋಳ್ಪ
ರಚ್ಚರಿವಡುವ ಚೆಲ್ವಿನೊಳು ೨೧

ಕೋಗಿಲೆವಿಡಿದರಗಿಳಿಗಳ ಪಿಡಿದನು
ರಾಗದಿಂದಂಚೆಯ ಪಿಡಿದ
ಸೋಗೆನವಿಲ ಪಿಡಿದಬಲೆಯರಿದ್ದರು
ಪೂಗೋಲನಾಸ್ಥಾನದಲ್ಲಿ ೨೨

ಗಾನ ಕೇಳುತ ತನ್ನ ಸಖರೆಂಟು ಮಂದಿ ಸಂ
ಧಾನಿಪರ್ಥಕೆ ಮೆಚ್ಚಿ ನಗುತ
ಮಿನಾಂಕನಿರ್ದನು ಮಲಗ ತಾನೊರಗಿ ಸು
ಮ್ಮಾನದೊಳ್ನೋಡಿ ಪಾದಗಳ ೨೩

ಮಲಯಮಾರುತ ಚರಣವನೊತ್ತುತಿರೆ ಹಸ್ತ
ತಳವ ಮಂದಾನಿಲನೊತ್ತೆ
ಕೆಳೆಯರ ನುಡಿಗೇಳುತಿದಿರ ಮಂತ್ರಿಯ ನೋಡು
ತೊಲವಿನೊಳಿದ್ದನಾ ಮದನ ೨೪

ಒತ್ತಿನೊಳನ್ಯರಿದ್ದಾಗ ಗಂಭೀರಾಂಗ
ವೆತ್ತಿಹರವ ಚಕ್ರಿಯಲ್ಲ
ಚಿತ್ತಜನಲ್ಲವೆ ಓಲಗದೊಳು ತನ್ನ
ಚಿತ್ತಕೆ ಬಂದವೊಲಿರ್ದ ೨೫

ಕಟ್ಟೆದಿರೊಳು ತೋರ್ಪ ಕಾಮನ ನೋಡುತ
ಮುಟ್ಟಲೆಯ್ದಿದನು ದಕ್ಷಿಣನು
ಕಟ್ಟಿತು ಸಂಗೀತ ಕಳಕಂಠನೆಂಬೊರ್ವ
ಕಟ್ಟೆಗೆಕಾರನಿಂತೆಂದ ೨೬

ಮನ್ಮಥವೀರ ಮರ್ತ್ಯಾಮರ ನಾಗಲೋ
ಕೋನ್ಮದಕರಿ ಸಂಹಾರಿ
ಚಿನ್ಮಾರ್ಗಚಕ್ರಿಯು ಸಖ ಬಂದನವಧಾನ
ಸನ್ಮೋಹಿ ಸಲೆ ಪರಾಕೆಂದ ೨೭

ಚಕ್ರೇಶನನುಜಾತ ನರ ಸುರ ನಾಗ ಭೂ
ಚಕ್ರ ಮೋಹನಮೂಲಕರ್ತ
ಚಕ್ರವಾಕಧ್ವಜ ತೇ ನಮೋ ನಮ-ಯೆಂದು
ಚಕ್ರಿಯ ಸಖನೆದ್ದು ನಿಂದ ೨೮

ಬಂದುದುತ್ತಮವಾದುದಿತ್ತ ಬಾ ದಕ್ಷಿಣ
ಯೆಂದೊತ್ತಿನೊಳು ಕುಳ್ಳಿರಿಸಿ
ಕಂದರ್ಪ ನಗುತ ಕುಳ್ಳಿರವೇಳೆ ಕುಳಿತನ
ದೊಂದು ಸಾಲದೆ ರಾಜತೇಜ ೨೯

ಸುಳಿಯದಿರಬಲೆ ನೋಂಕದಿರೆಲೆ ಪ್ರಬಲೆ ನಿ
ಮ್ಮೊಳು ಮಾತು ಸಾಕು ಕಂಕಣದ
ಬಳೆಗಳ ದನಿದೋರದಿರಿ ಪೆಂಗಳೆಂದಲ್ಲಿ
ಕಳಕಂಠ ಸೊಬಗುದೋರಿದನು ೩೦

ಸುತ್ತಲೆಲ್ಲರು ಸುಮ್ಮನಾಲಿಸುತಿದ್ದರು
ಚಿತ್ತಜನೊಡನೆ ದಕ್ಷಿಣನ
ಎತ್ತಣಿಂ ಬಂದೆ ನಿನ್ನೊಡೆಯನನೆಲ್ಲೆಲ್ಲಿ
ಸುತ್ತಿಸಿ ತಂದೆಯ್ಯೆಯೆಂದ ೩೧

ಎತ್ತಣಿಂದೆಂಬೆಯ ನಿನ್ನ ಕಾಣುವ ಪುಣ್ಯ
ದತ್ತಣಿಂ ಬಂದೆನಂತಿರಲಿ
ಸುತ್ತಿಸಿ ತಹರಾರು ಜಗವ ಸುತ್ತಿಪ ಕಾಮ
ನತ್ತಣಿಂ ಪಿರಿಯನನೆಂದ ೩೨

ಲೀಲಾಮಾತ್ರದಿ ಧರೆ ಸಾಧ್ಯವಾಯ್ತಾದ
ಮೇಲಾ ಸಾಹಸನ ತೋರುವನು
ಪೇಳಲಚ್ಚರಿ ಚಕ್ರಧರನ ಸಂಪತ್ತ ಪೂ
ಗೋಲ ಬಲ್ಲಹೆ ಲಾಲಿಸೆಂದ ೩೩

ಕಮ್ಮಗೋಲಿಂದ ಮೂಜಗವನಂಡಲೆವಾತ
ತಮ್ಮನು ಭಟರಿಂದ ನೃಪರ
ಹೆಮ್ಮೆಯು ಬಿಡಿಸುವನಣ್ಣನೆಂಬಾಗ ಹೋ
ನಿಮ್ಮ ಮುಕ್ಕಧಿಕರಾಲೆಂಧ ೩೪

ನೀವಗ್ರಗಣ್ಯರೆಂದಾಡಲೇತಕೆ ನಿಮ್ಮ
ಸೇವಾನುಮತದೊಳಾಚರಿಪ
ನಾವೆಲ್ಲರಧಿಕರೆಂಬುದು ಲೋಕವೆಂದನಾ
ಕಾವನ ಸಖರು ಲೇಸೆನಲು ೩೫

ಪ್ರಣಯಚಂದ್ರಮ ಮಂತ್ರಿ ಕೇಳಿದ್ಯೆ ನುಡಿವ ದ
ಕ್ಷಿಣನ ಚಾತುರ್ಯವನೆಂದ
ಗುಣವನುಳ್ಳದನಾಡಿದನು ಸ್ವಾಮಿಯೆಂದು ಪೂ
ಗಣೆಯಗಾ ಮಂತ್ರಿ ಸೂಚಿಸಿದ ೩೬

ನೀನತಿ ದಕ್ಷ ನಿನ್ನಣ್ಣನಗ್ಗಳನೆಂಬು
ದೇನುಪಚಾರದ ನುಡಿಯೆ
ಭಾನು ಚಂದ್ರರ ಲೋಕ ಬಣ್ಣಿಪಂತಿಹುದೆಂದು
ಮೀನಾಂಕಗೊರೆದನಾ ಸಚಿವ ೩೭

ಇಂದಿಗೋಲಗ ಸಾಕು ದಕ್ಷಿಣನಾಯಕ
ಬಂದಲಸಿಕೆಯ ಹಿಂಗಿಸಲಿ
ಮುಂದಾತನೆಯ್ತಂದ ಕಾರ್ಯವ ಬೆಸಗೊಂಬ
ವೆಂದನಾ ಮಂತ್ರಿ ಮನ್ಮಥಗೆ ೩೮

ಉಡುಗೊರೆಯಿತ್ತು ದಕ್ಷಿಣಗೆ ಮತ್ತೀತನ
ಪಡೆಯ ಮನ್ನಿಸು ಮಂತ್ರಿಯೆಂದ
ನಡೆಯಿಂದು ವಿಶ್ರಮಿಸೆಂದು ತನ್ನಯ ಸಖ
ರೊಡನೆ ಬೀಳ್ಕೊಟ್ಟನಾ ಮದನ ೩೯

ಈ ಮಂತ್ರಿಸಖರು ತನ್ನತ್ತಲೀ ಭುಜಬಲಿ
ಸ್ವಾಮಿ ಬೇರಾಗಿದ್ದನೆಂದು
ಕ್ಷೇಮಾರ್ಥಿ ದಕ್ಷಿಣ ನೆನೆವುತೆಯ್ದಿದನಿದು
ಕಾಮದೇವಾಸ್ಥಾನ ಸಂಧಿ ೪೦

# ಸಂಧಾನಭಂಗ ಸಂಧಿ

ಮದನನ ಸಖರಿಗೆ ಮಂತ್ರಿಗೆ ದಕ್ಷಿಣ
ಹೃದಯದರ್ಥವನಾಡಿ ತೋರಿ
ಹದಗೈದು ಕೊಂಡೆಯ್ದಿ ಮರುದಿನ ಕಂಡನು
ಮದನನನಾಸ್ಥಾನವಲ್ಲಿ ೧

ಬಿನ್ನಹ ಸ್ವಾಮಿ ದೊಡ್ಡೊಡೆಯನ ಸೋದರ
ನನ್ನ ಚಿಕ್ಕೊಡೆಯ ನಾಡೊಡೆಯ
ಚೆನ್ನಿಗರೊಡೆಯ ನಿನ್ನವನ ಬಿನ್ನಹವ ಪ್ರ
ಸನ್ನ ಚಿತ್ತದಿ ಲಾಲಿಸೆಂದ ೨

ರಾಯಗೆ ಧರೆ ಸಾಧ್ಯವಾಯ್ತಾದ ಮೇಲೆ ಮಾ
ರ್ಗಾಯದೊಳೆಯ್ದನ ಕಂಡ
ತಾಯ ಕಂಡನು ಮೇಲೆ ತಮ್ಮನ ಕಾಣ್ಬರ್ತಿ
ಯಾಯಿತೆಂದಾಯೆದೆಯೊಳಗೆ ೩

ದೊರೆಗಳೆಲ್ಲರು ನೀವು ಸಂಧಿಸಿ ನುಡಿವೊಂದು
ಸಿರಿಗಾಣಲರ್ತಿಸುತಹರೆ
ತೆರಳ್ವಾಗ ಸ್ಮರಪುರದಿದಿರಲ್ಲಿ ಸಂಧಿಸೆ
ಧರಣೀಶನದಕೊಡಂಬಟ್ಟ ೪

ದೂರವಲ್ಲೀಗ ನಿನ್ನೂರ ಸಮೀಪದೊ
ಳಾ ರಾಯನಿದ್ದನರ್ತಿಯೊಳು
ಹಾರಯ್ಸಿದವರ ಕಣ್ಣಾರ್ತಿಯು ಸಲಿಸೆಲೆ
ಮೂರಯೆಂದೊಡನಡ್ಡಬಿದ್ದ ೫

ಏಳೇಳು ಕುಳಿತು ಮಾತಾಡೆನೆ ಕುಳಿತನು
ಕೇಳು ದಕ್ಷಿಣ ನಿಮ್ಮ ಪುರಕೆ
ಲೀಲೆಯೊಳೆಯ್ದುರ್ಕ್ಕೆ ನಿಮ್ಮಾಣೆ ಪೇಳ್ದಂತೆ
ನಾಳೆ ನಾನೆಯ್ತಿಹೆನೆಂದ ೬

ಬೇಡವೈ ಸ್ವಾಮಿ ನೀನೆಯ್ದಿ ನಿಮ್ಮಣ್ಣನ
ನೋಡಿ ನಿಮ್ಮಯ ವಿಳಾಸವನು
ನೋಡದ ಪಡೆಗೆ ಸಂತಸಮಾಡು ವಿರಸವ
ಮಾಡುವುದುಚಿತವೆಯೆಂದ ೮

ಬಲ್ಲೆವೈ ನೀನಿಷ್ಟು ಜಾಣನೆಂಬುದ ಮಾತಿ
ನಲ್ಲಿ ನಮ್ಮನು ಚಾಳ್ಸಿಸದಿರು
ಸಲ್ಲದು ನನಗೀಗ ಬಹುದಕೆ ಹೋಗೆಂದು
ಮಲ್ಲಿಗೆಗೋಲನಾಡಿದನು ೮

ಅಣ್ಣನೊತ್ತಿಗೆ ಗಮಿಸುವರಾಗದೆಂದಿಂತು
ಬಣ್ಣಿಸುವರೆ ಸ್ವಾಮಿಯೆಂದ
ಅಣ್ಣನಲ್ಲೆಮಗಾತನೊಡೆಯನೈ ನೀನಿಂತು
ಬಣ್ಣವಿಕ್ಕದಿರು ಸಾಕೆಂದ ೯

ಚಕ್ರ ನಿಂದರೆ ನನ್ನ ಕಾಣಿಸಿಕೊಂಬ ಪ
ರಾಕ್ರಮಾರ್ಥಕೆ ಬೀಡುಬಿಟ್ಟೆ
ಚಕ್ರಿ ಕಳುಹೆ ಬಂದು ಬಣ್ಣವ ನುಡಿಯುವೈ
ವಕ್ರವನರಿದೆ ಹೋಗೆಂದ ೧೦

[1]ನಿಂ[1]ದಿತು ಚಕ್ರ ನೀವಿಬ್ಬರೀ ಸ್ಥಳದಲ್ಲಿ
ಸಂಧಿಸಲೆಂಬರ್ಥಕಾಗಿ
ಮಂದಿ ಹಾರಿತು ಕಂಡ ನಿಮ್ಮನೋಲೈಸುವೆ
ನೆಂದು [2]ಹಾರದೆ[2] ಚಕ್ರವೆಂದ ೧೧

ಒಳಗನರಿಯದಲ್ಲಿ ಜಾಣ್ಡೋರಬೇಕಹು
ದೊಳಗ ಕಂಡವರಿದಿರಿನೊಳು
ಸಲುವುದೆ ಜಾಣ್ಮೆ ಸಾಕೈ ಸುಮ್ಮನಿರು ಮಾತ
ಕಲಿತೆಯೆಂದಾಡುವೆಯೆಂದ ೧೨

ಏನಿಷ್ಟು ಸೊಕ್ಕು ನಿಮ್ಮೊಡೆಯಗೆ ಧರಣಿಯ
ಭೂನಾಥರೆರಗೆ ತಣಿಯದೆ
ಸೇನೆಯ ಮುಂದೆನ್ನನೆರಗಿಸಿಕೊಂಬ ಬ
ಲ್ಮಾನಕೆ ನಾನೆಯ್ದಬೇಕೆ ೧೩

---

[1] ಸ (ಛ) [2] ನಿಂದರೆ ರವೆ (ಛ)

ಎರಗುವುದಕೆ ಪ್ರಸ್ತವೇನು ತನ್ನಯ ಹಂಗು
ಕಿರಿದುಂಟೆ ನನಗಯ್ಯನಂದು
ಪಿರಿಚಿ ಕೊಟ್ಟುಂಬಳಿಯಲ್ಲಿ ನಾನಿಹೆನು ಕ
ಣ್ಗರುಬಾಯ್ತೆ ಕನಗದ ನೋಡಿ ೧೪

ಉಂಬಳಿಯೇನು ನಿಮ್ಮಣ್ಣ ನಿನಗೆ ತನ್ನ
ತುಂಬಿದ ಧರೆಯೊಳರ್ಧವನು
ಇಂಬರಿದೀವೆನೆಂದೆಮ್ಮೊಳಾಡಿದನಿಂತು
ಟೆಂಬರೆ ಸ್ವಾಮಿ ನೀನೆಂದ ೧೫

ಬಿಡೆಯಲಾ ನಿನ್ನ ಜಾಣ್ಮೆಯ ಮತ್ತು ನನಗೊಂದು
ಪೊಡವಿಯಾಸೆಯ ತೋರಿ ಕರೆದು
ಒಡೆಯನ ಕಾಲ್ಗೆರಗಿಪೆನೆಂದು ನೆನೆವೆಯ್ಕೆ
ಬಡಮನದವನೆ ನಾನೆಂದ ೧೬

ಗುಣಕೆರಗುವೆನಹುದಣ್ಣನೆಂದೊಮ್ಮೆ ರಭಂ
ಕಣೆಗೆರಗುವೆನೆ ತಾನೀಗ
ಅಣಿದೋರಿ ನಿಂದು ಬಣ್ಣಕೆ ನಿನ್ನ ಕಳುಹಿ ಪ್ರೇ
ರಣಿಸುತಿದ್ದನು ಭಾವು ನೋಡ ೧೭

ಕೇಳಬ್ಬರರಸಿಯರುಂಟೈಸೆ ದೊರೆ ಪಾಟ
ಊಳಿಗವೆಣ್ಣೆಲ್ಲ ಪಿತಗೆ
ಊಳಿಗದವರ ಮಕ್ಕಳ ಕರೆವಂತೆವ್ಮ್ಮ
ಕೇಳಬಹುದೆ ನಿಮ್ಮ ನೃಪತಿ ೧೮

ಅಟ್ಟೋಲೆಗಳನಟ್ಟಿ ಚಿಕ್ಕ ಚಿಕ್ಕನುಜರ
ದಟ್ಟಿಸಿ ತಪಸಿಗೋಡಿಸಿದ
ದಿಟ್ಟನೆಂಬುದನರಿದೆನ್ನಗೀಗ ಕೆಳೆಯೆನ
ನಟ್ಟಿದನ್ಯೆ ಬಲ್ಲೆವೆಂದ ೧೯

ಹುಸಿವಿನಯವ ತೋರುತಂಜಿಸುತೆವ್ಮ್ಮ ಚಾ
ಳಿಸುವುದ ಕಂಡೆವ್ಮ್ಮ ಹೃದಯ
ಬಿಸಿಯಾಗದಿಹುದೆ ತಂಪೆನಿಪ ಚಂದನ ಮಥ
ನಿಸೆ ಹೊಸೆಕಿಡಿ ಸೂಸದಿಹುದೆ ೨೦

ಕ್ಷಣಕ್ಷಣಕೆನಗೆ ನಿನ್ನೊಡೆಯನ ಗುಣವನೊ
ಕ್ಕಣಿಸುವಾಗೆದೆಯಲ್ಲಿ ಕೋಪ
ಕುಣಿದಾಡುತಿದೆ ನನ್ನ ಕೆರಳಿಸಬೇಡ ದ
ಕ್ಷಿಣ ಹೋಗು ಹೋಗು ಸಾಕೆಂದ ೨೧

ಕಂಬನಿದುಂಬಿದನೊಡನೆದ್ದು ದಕ್ಷಿಣ
ನುಂಬಟ್ಟೆಯೊಳಗಡ್ಡ ಬಿದ್ದು
ಇಂಬುಗೊಳ್ಳಲೆ ಸ್ವಾಮಿ ನಿಮ್ಮ ನೋಯಿಸಿದೆನೇ
ನೆಂಬೆ ನಾನತಿಕ್ರೂರನೆಂದ ೨೨

ಒಡೆಯರಿಬ್ಬರನೊಡಗೂಡಿ ನೋಡುವೆವೆಂದು
ಸಡಗರಗೊಂಬೆವು ನಾವು
ಕಡುಪಾಪಿಗಳು ನೆನೆದುದು ಫಲಿಸುವುದೆ ಚಿ
ಕ್ಕೊಡೆಯಯೆಂದತ್ತತ್ತು ನುಡಿದ ೨೩

ಮೂಲೋಕಕವ್ಯತವ ಕರಿವನ ಮನದಲ್ಲಿ
ಜ್ವಾಲೆಗೊಳಿಸಿದೆನು ನಾನು
ಹಾಲು ಬಪ್ಪಲ್ಲಿ ನೆತ್ತರ ಬರಿಸಿದೆ ನಾನು
ಮೂಲೋಕಕತಿಪಾಪಿಯೆಂದ ೨೪

ಪಾಪಿಯಲ್ಲೇಳೇಳು ಪೋಗೆಂದನೊಡನೆದ್ದು
ಪೋಪೆನೆಂದವನು ಪೋಗುತಿರೆ
ಹೋ ಪೋಗದಿರು ದಕ್ಷಿಣಾಂಕ ನಿಲ್ಲೆಂದು ಸ
ಮಾಪದ ಮಂತ್ರಿ ಮಾರ್ಕೊಂಡ ೨೫

ಅಂಜುವೆನೊಡೆಯ ನಿಮ್ಮಯ ಕೋಪಕಿದಿರಾರು
ನೀಂ ಜಾಣದೊರೆಯದರಿಂದ
ಕಂಜಾಸ್ತ್ರ ನೀವಿಕ್ಕಿದಾಜ್ಞೆಗೊಳಗು ಲಾಲಿ
ಸಂಜದಿನ್ನಾಡುವೆನೆಂದ ೨೬

ಪುರುಷರಮೇಶನ ಸುತರು ನೀವಿಬ್ಬರು
ವಿರಸದ ನುಡಿ ನುಡಿದಾಗ
ಧರೆಯೊಳಿದ್ದವರಿನ್ನು ಸಹಜದಿ ನಡೆವರೆ
ಮರುಳುಗೊಂಡಾಡರೆ ವಿಭುವೆ ೨೭

ಗುರುವಿಗೆ ಶಿಷ್ಯ ತಂದೆಗೆ ಮಗ ತನ್ನಯ
ಪುರುಷಗೆ ಸ್ತ್ರೀಯೆರಗದಿರೆ
ಹಿರಿಯಣ್ಣಗನುಜರೆರಗದಾಗ ಮಳೆ ಬೆಳೆ
ಧರೆಯೊಳುಂಟೆ ಸ್ವಾಮಿಯೆಂದ ೨೮

ಅದರ ಮೇಲೊಡೆಯ ನಿನ್ನಣ್ಣನು ನೀನು ಲೋ
ಕದೊಳೆಲ್ಲರಂದದ ನೃಪರೆ
ತ್ರಿದಶಲೋಕದ ಮೆಚ್ಚಿನರಸುಗಳಲ್ಲವೆ
ಇದ ನೆನೆವರೆ ಸ್ವಾಮಿಯೆಂದ ೨೯

ಜಗಕಗ್ರಗಣ್ಯರು ನೀವು ಕೂಡಿರಲದು
ಜಗದ ಸೌಭಾಗ್ಯವೆಮ್ಮಾರ್ತಿ
ದುಗುಡ ಬೇಡೆಂದು ಮಂತ್ರಿಗೆ ಸನ್ನೆಮಾಡಿ ಕೈ
ಮುಗಿದಡ್ಡಬಿದ್ದರಾ ಸಖರು ೩೦

ನನಗತಿಹಿತರೆಂದು ಕಂಡಿದ್ದೆ ನೀವೆನ್ನ
ಮನಕಿಚ್ಚೆಯಿಲ್ಲದ ನುಡಿಯ
ಅನುವಡಿಸುವರೆ ನನ್ನವರೆಂದರೆನ್ನ ಮಾ
ತನೆ ಮೆಚ್ಚಬೇಡವೆಯೆಂದ ೩೧

ನೋಡಿರೈ ಚಕ್ರಿಯಿಚ್ಛೆಯನೆ ಚಕ್ರಿಯ ಸಖ
ನಾಡಿದನಲ್ತೆ ನೀವಿವನ
ನೋಡಿಕೊಂಡಾದರು ನನ್ನತ್ತಲಾಗದಿಂ
ತಾಡಬಹುದೆಯೆಂದನೊಡನೆ ೩೨

ಕೇಳುತಿದ್ದವರು ಸೈರಿಸಲಾರದಷ್ಟರೊ
ಳೋಲಗವೆಂಗಳೊಕ್ಕೆಲರು
ಪಾಲಿಸಬೇಕೆಲ್ಲರಿಚ್ಛೆಯನೆಂದು ಮೈ
ನೀಳಗೊಟ್ಟೆರಗಿದರವರು ೩೩

ಸುತ್ತ ಸುಮ್ಮನೆ ನೋಡುತಿರದೆ ಬುದ್ಧಿಯ ಹೇಳ
ಲಿತ್ತಲಾರ್ಕರೆತಂದರಿವರ
ತೊತ್ತಿರ ಬಡಿ ಬಡಿಯೆಂದು ಮನ್ಮಥ ನೇಮಿ
ವಿತ್ತನು ಕಳಕಂಠಗೊಡನೆ ೩೪

ಬಾಳೆಯಸುಳಿಯಕಟ್ಟಿಗೆ ಕೋಲೊಳವ ಹೊಯ್ದು
ನೇಳೇಳು ಮೂಲೆಗೋಡಾಡಿ
ಆ ಲೇಸುವೆಂಗಳ ಮೈಗೆ ಬಾಸಳು ಪುಷ್ಪ
ಮಾಲೆಯಂತೆದ್ದುವಾಕ್ಷಣವೆ ೩೫

ಅವಿವೇಕದೊಳು ನಾನು ನಡೆವವ ನೀವೆಲ್ಲ
ಸುವಿವೇಕದೋಜೆದೋರುವರು
ಕವುದಿಗೆ ಹಲ್ಲು ಬಂದಂತಾಡಿಸುವುದು ಕಾ
ಲವೊ ಕರ್ಮವೊ ಹಂಸನಾಥ ೩೬

ನೊರನ [1]ಹೊಯ್ದುರೆ[1] ಬೆಕ್ಕನಂಜಿಸಿಕೊಂಡ[2]ನೆಂ[2]
ಬರಿಕೆಯ ನುಡಿಯಂತೆ ಮದನ
ಉರುಬಿ ಹೇಳುವ ಮಂತ್ರಿ [3]ಸಖರ[3] ನಂಜಿಸಿಕೊಂಡ
ಹೊರವೆಣ್ಣುಗಳ ಮೇಲೆ ಮುನಿದು ೩೭

ಹೋರಿ ಹೇಳುವ ಮಂತ್ರಿ ಸಖರ ಮೇಲಣ ಕೋಪ
ವಾರನಾರಿಯರ ನೋಯಿಸಿತು
ಊರಿಗೆಯ್ದಿದ ಮಾರಿ ಬೀರಸೆಟ್ಟಿಯ ಹೊಯ್ದು
ದಾರಿಕಾರರ ಗಾದೆಯಂತೆ ೩೮

ತಲೆಗುತ್ತಿ ನಡುಗುತ ಸುಮ್ಮನಿದ್ದುದು ಸಭೆ
ಬಳಿಕ ಹೂಂಕರಿಸುತಂಗಜನು
ತೊಲಗಿ ದೂರದೊಳಿದ್ದ ಗುಣವಸಂತಕನೆಂಬ
ದಳನಾಯಕನ ನೋಡಿ ನುಡಿದ ೩೯

ಇತ್ತಿತ್ತ ಬಾ ಬಾರೈ ಗುಣವಸಂತಕ ದೂರ
ದತ್ತತ್ತಲೇಕೆ ನೀ ನಿಲ್ವೆ
ಹೊತ್ತು ಹೋಕವೊ ಯೆನ್ನ ಮಾತು ನೀತಿಯೊ ಪೇಳು
ಚಿತ್ತದೊಳಿರ್ದುದನೆಂದ ೪೦

ಕೆಟ್ಟೆ ಕೆಟ್ಟೆನು ಸ್ವಾಮಿ ನಿನ್ನ ನಿರೂಪವ
ಕುಟ್ಟಿ ಪರೀಕ್ಷಿಪರುಂಟೆ
ಕಟ್ಟಾಣಿ ಮುತ್ತಿನ ಸರವದು ಸೊಬಗಿನ
ಕಟ್ಟೆ ಲೇಸಿನ ಬಟ್ಟೆಯೆಂದ ೪೧

---

[1]ಹೊಯಿದ [2]ರೆಂ [3]ನೃಪರ

ಗುಣಗಕೆರಗುವೆನೆಂದೆ ವಿಕ್ರಮಕೆರಗೆನೆಂ
ದೆಣಿಸಿದೆ ನಿನ್ನಲ್ಲಿ ತಪ್ಪೆ
ಗುಣಿಗಳಾರಿದ ಮೆಚ್ಚದವರೆಂದು ನುಡಿದನು
ಗುಣವಸಂತಕ ವೇಳೆಯರಿದು ೪೩

ಮೆಚ್ಚಿದನದಕೆ ಬಾ ಬಾರೆಂದು ಕರೆದೊಂದು
ಪಚ್ಚೆಯ ಪದಕನನಿತ್ತ
ಒಚ್ಚೆಯಗೊಡದತಿ ವೀರನ್ಯೆ ನಿನ್ನ ನಾ
ನಚ್ಚಿದೆನಿನ್ನು ಹೋಗೆಂದ ೪೩

ಕಳಕಂಠ ಮತ್ತಕೋಕಿಲ ಮಂದಮಾರುತ
ಮಲಯಮಾರುತರು ಹೊತ್ತರಿದು
ಎಲೆ ಸ್ವಾಮಿ ನಿನ್ನ ಕಾರ್ಯಕೆ ಸರಿಯುಂಟೆಯೆಂ
ದುಲಿದರದಕೆ ಮೆಚ್ಚುಗೊಟ್ಟ ೪೪

ನೀವೀಗ ನನ್ನವರುಳಿದವರೇನೆಂದು
ಭಾವಿಪೆನೆನುತೋರೆ ಮೊಗದಿ
ಕಾವನಿನ್ನೋಲಗ ಪರಿಯಲ್ಕೆಯೆಂದನು
ಚಾವಡಿಯಿಂದೆದ್ದರೆಲ್ಲ ೪೫

ನುಡಿಯದೆ ಸಖರು ಮಂತ್ರಿಯು ದಕ್ಷಿಣಾಂಕನು
ಪೊಡವಟ್ಟು ಸಾಗಿದರವರು
ಒಡನೆ ಕೈ ಮುಗಿದು ಪೆಣ್ಣುಗಳೆಲ್ಲ ಪೋದರು
ದುಡುಗುಟ್ಟುವೆದೆಯ ಬಲ್ಪಿಡಿದು ೪೬

ಇದ್ದರು ಗುಣವಸಂತಕ ಮೊದಲಾದವ
ರಿದ್ದವರೆಲ್ಲ ಸಾಗಿದರು
ಗದ್ದುಗೆಯೊಳಗಿದ್ದು ಕರೆ ಕರೆ ಕಳಕಂಠ
ಹೊದ್ದಿ ದಕ್ಷಿಣನ ಬೇಗೆಂದ ೪೭

ಕಡೆಯ ಬಾಗಿಲಿಗನ ಹರಿತಂದು ಕರೆದನು
ಸಡಗರಗೊಂಡು ದಕ್ಷಿಣನ
ಒಡೆಯನ ಮನವಿಷ್ಟು ತಿಳಿದುದೊಯೆಂದಾಸೆ
ವಡುತ ಬಂದವನು ಕೈಮುಗಿದ ೪೮

ಬಡವರ ಸಂಧಿಸಿದಂದವಲ್ಲೀಗ ದಾ
ಳಿಡುವನಾ ಭುಜಬಲಿರಾಜ
ಪಡೆಗೂಡಿ ಜೋಕೆಯಾಗಿರಲೆಂದನವನಿದು
ಕಡೆಗಾಲ ನಿವಗೆಂದು ನೆನೆದ ೪೯

ಹೋಗು ನಿನ್ನೊಡೆಯಗೀ ಹದನ ಹೇಳೆನಲವ
ಮೂಗುವಟ್ಟೊಡನೆ ಕೈ ಮುಗಿದು
ಹೋಗುತಿದ್ದನು ಮರುಚು ತೀವ್ರ ಕರ್ಮವೆ ಮೋಕ್ಷ
ಭಾಗಿಯ ಕಾಡುವೈಯೆನುತ ೫೦

ಅಣೆಯದು ಚಕ್ರಿಯಾಪ್ತಿಗರೆಯ್ದಲೆಮ್ಮ ಪ
ಟ್ಟಣದೊಳಹೊಗಿಸಬೇಡೆಂದು
ಗುಣವಸಂತಕ ಮೊದಲಾದರ ಕಳುಹಿ ಪೂ
ಗಣೆಯ ಹೊಕ್ಕನು ನಿಜಾಲಯವ ೫೧

ನಮಿಸಬೇಕೆಂಬರಲ್ಲದೆ ತಮ್ಮಣ್ಣಗೆ
ಸಮರಕೊಡ್ಡುವುದು ಲೇಸೆಂದು
ಅಮೃತವನುಂಡವರಾರು ನುಡಿವರೆಂದು
ತಮತಮಗೆಲ್ಲರಾಡಿದರು ೫೨

# ಕಟಕ ವಿನೋದ ಸಂಧಿ

ಕುಡುವಿಲ್ಲನಾಪ್ತರ ಬೀಳ್ಕೊಂಡು ತನ್ನ ಪೆ
ರ್ವಡೆಗೂಡಿ ಚಕ್ರಿಯ ಸಖನು
ಕಡೆಯ ಹಜಾರದ ಬಾಗಿಲ ಮುಂದಕೆ
ನಡೆದನೇನೆಂಬೆನುಬ್ಬೆಯೊಳು ೧

ಗುರುಸೇವೆ ತಪ್ಪಿದ ಶಿಷ್ಯ ಚಿಂತಿಸುವಂತೆ
ದೊರೆಯಟ್ಟಿದೂಳಿಗ ತಪ್ಪೆ
ಕೊರಗುತ ಕಾಲ್ನಡೆಯೊಳು ಬಂದು ಪೌದನ
ಪುರದ ಬಾಗಿಲನು ದಾಂಟಿದನು ೨

ಸ್ವಾಮಿಯ ಕಾರ್ಯಕೆ ಗೆಲವಾದರಾವು ಮ
ಹಾ ಮಹಿಮೆಯೊಳಿಯ್ದಬೇಕು
ಕಾಮಿನಿಯಿಲ್ಲ ಕೈಧಾರೆಮಂತ್ರವೆಯೆಂದು
ಸ್ವಾಮಿಹಿತವನೊಂದು ನುಡಿದ ೩

ತಡವಿಲ್ಲದಾನೆಯ್ದಿ ಸ್ವಾಮಿಯ ಕಾಣ್ಬೆನು
ಪಡೆ ಹಿಂದೆ ಬರಲೆಂದು ತನ್ನ
ಪಡೆಯ ಮುಖ್ಯಗೆ ಪೇಳ್ದು ನಡೆದನು ಮರುತ ಮಾ
ವಡರಿ ತನ್ನೊಡನೆಯ್ದೆ ಕೆಲರು ೪

ಮರುತನನೇರಿ ಬಪ್ಪವನಿಗೆ ತಳುವುಂಟೆ
ತುರಿಹದಿ ಕಟಕವ ಸಾರ್ದು
ನೆರವಿಯ ಹೊಕ್ಕೆಯ್ದಿ ವಾಹನವಿಳಿದು ಮಂ
ದಿರಕೆ ಬೀಳ್ಕೊಟ್ಟ ತನ್ನವರ ೫

ಇರುಳೊಳೋಲಗವಿತ್ತು ಚಕ್ರೇಶನೆಲ್ಲರ
ಕರೆಯೆಂಬ ವೇಳೆಯೊಳೊಬ್ಬ
ಚರನೋಡಿ ಬಂದು ದಕ್ಷಿಣ ಬಂದ ವಾರ್ತೆಯ
ಧೊರೆಗಿಂತು ಬಿನ್ನವಿಸಿದನು ೬

ನಡೆತಂದನಷ್ಟರೊಳಗೆ ದಕ್ಷಿಣಾಂಕ ತ
ನ್ನೊಡೆಯನನಿದಿರಲ್ಲಿ ಕಂಡು
ಒಡವೆಯ ನೀಗಿದ ಮಗನು ತಂದೆಯ ಕಾಣ್ಬ
ಕಂಡುಲಜ್ಜೆಯೊಳು ಬರುತಿರ್ದ ೭

ಬಾಡಿದ ಮೊಗ ಬಸವಳಿದ ಮೈಯೊಳು ತನ್ನ
ನೋಡೆ ನಾಣ್ಚುತ ಬಪ್ಪ ಸಖನ
ನೋಡಿ ಚಕ್ರೇಶ್ವರ ಚಿಂತೆಯೇಕೈ ನಲ್ಮೆ
'ಗೂಡಿ ಬಾ ಬೆದರದಿರೆಂದ ೮

ಬಂದು ಸಮ್ಮುಖದಲ್ಲಿ ಮೈನೀಡಿ ಚಕ್ರಿಯ
ಮುಂದಡ್ಡ ಬಿದ್ದೆಲೆ ಸ್ವಾಮಿ
ಒಂದನು ನುಡಿವೆನೆಂದರೆ ಬಾಯಿ ಬಾರದೆ
ನ್ನಿಂದ ಕಾರ್ಯವು ತಪ್ಪಿತೆಂದ ೯

ಇನ್ನೊಬ್ಬ ಹೋದರೆ ಚಂದವಪ್ಪುದು ಕಾರ್ಯ
ನನ್ನಿಂದ ಹಸಗೆಟ್ಟುದೊಡೆಯ
ನಿನ್ನ ತಮ್ಮನೊಳೇನು ಕಡಮೆಯಿಲ್ಲೆಂದನು
ಚೆನ್ನಾದುದೇಳು ಸಾಕೆಂದ ೧೦

ಸಮ್ಮುಖದೊಳಗೆದ್ದು ನಿಂದನಾಗಲಿ ನನ್ನ
ತಮ್ಮನೇನೆಂದ ಹೇಳೆನಲು
ಕಮ್ಮಗಣೆಯನಲ್ತೆ ಕಠಿಣವ ನುಡಿವನೆ
ಕಮ್ಮನಾಡಿದನೆಂದನವನು ೧೧

ಆಡಿದುದೇನೆಂದನಣ್ಣಾಜಿ ಪರಿವಾರ
ಗೂಡಿ ಕೌಶಲಿಗೆಯ್ದುಲೆಂದ
ನೋಡೆನ್ನ ಪುರಕೆಯ್ದೆ ತನ್ನಪ್ಪಣೆಯ ಗರ್ವ
ಕಾಡುತಿದ್ದುದು ತನಗೆಂದ ೧೨

ಕಾಳಗವೆಂದನೊ ಕಡೆಯ ಮಾತೊಂದನೆ
ಹೇಳಂಜಬೇಡ ನೀನೆಂದ
ಕಾಳಗವಲ್ಲಣ್ಣನೊಡನೆ ಸಾಧನೆಮಾಳ್ಪ
ಲೀಲೆಗೀಚ್ಛೈಸಿದನೆಂದ ೧೩

ನಿನ್ನ ಕಂಡಂತೆ ಭಕ್ತಿಯ ಮಾಡಿದೆನು ನಸು
ಭಿನ್ನಹುಟ್ಟದ ಮಾತ ನುಡಿದೆ
ತನ್ನವರೆಲ್ಲ ಮೆಚ್ಚಿದರಾತಗಾಯ್ತಿಲ್ಲ
ನನ್ನ ಪಾಪದ ಫಲವೆಂದ ೧೪

ಬಹಿರಾತ್ಮರಿಗೆ ತನ್ನ ಪುಷ್ಪಬಾಣವ ತೋರಿ
ಬಹುಬಾಧೆಗೊಳಿಸಿದ ಸೊಕ್ಕ
ಸಹಜಾತ್ಮರಸಿಕಗೆನಗೆ ತೋರುತಿದ್ದನೆ
ಸಿಹಿವಿಲ್ಲ ಸುಡು ಫಡಾಯೆಂದ ೧೫

ಹಂಸನಾಧನ ನೋಡಿ ಪುಷ್ಪಬಾಣಗಳ ವಿ
ಧ್ವಂಸ ಮಾಡುವೆನವ ಮಾರಿ
ಹಿಂಸೆಗಂಜದೆ ಖಡ್ಗವಿಡಿದು ಬಂದರೆ ಖಡ್ಗ
ವಂ ಸೆಳೆಕೊಂಡು ನೂಂಕುವೆನು ೧೬

ದಿಟ್ಟಿಸಿ ಹೋಗೆಂಬೆ ಹೋಗದಿದ್ದರೆ ಬೆನ್ನ
ಮುಟ್ಟಿ ಹೋಗೆಂದು ನೂಂಕುವೆನು
ದಟ್ಟಿಸಿದರೆ ಕಟ್ಟಿ ಕಳುಹುವೆ ಶಿಬಿಕೆಯೊ
ಳಿಟ್ಟು ಚಿಕ್ಕಮ್ಮನ ಒಳಿಗೆ ೧೭

ಮುನಿದೆನಾದರೆ ಚೆಂಡನಿಡುವಂತೆ ಒಡಿದೆತ್ತಿ
ವನಧಿಗಿಡುವ ಶಕ್ತಿಯುಂಟು
ಅನುಜನ ಮೇಲೆ ಶಕ್ತಿಯ ತೋರಬಹುದೆ ಮೇ
ದಿನಿ ಮೆಚ್ಚುವುದೆ ತೋರೆನೆಂದ ೧೮

ಸಾವಿರವಾದರು ಹಿರಿಯನೆಂಬರು ನನ್ನ
ಕಾವನೆ ಕಿರಿಯನೆಂಬರಲಾ
ಅವುದಗ್ರವನನುಪಾಯದೊಳ್ಗೆಲುವೆನೈ
ನೀವೆಲ್ಲರರಿದಿರಿಯೆಂದ ೧೯

ಪನ್ನೀರ ಕೊಡಿಸಿ ವೀಳೆಯಗೊಡಿಸಿದನೇಕೆ
ಖಿನ್ನನಪ್ಪೆ ದಕ್ಷಿಣಾಂಕ
ನಿನ್ನಿಂದ ಕಾರ್ಯ ತಪ್ಪದು ನಾನು ಬಲ್ಲೆನೈ
ನನ್ನಾಣೆ ಮರುಗದಿರೆಂದ ೨೦

ಕಡೆಯೊಳು ದಕ್ಷಿಣಗುಡುಗೂರೆಗೊಡುತ ಮೈ
ದಡವಿ ಮಂಡೆಯನಪ್ಪಿಕೊಳುತ
ಬಿಡು ನೋವನೆಂದು ಮುದ್ದಿಸಿದನಾ ನೃಪನಾತ
ಗೊಡೆಯನೊ ತಂದೆಯೊ ಗುರುವೊ ೨೧

ಸರ್ವರು ಚಿಂತಿಸುತಿದ್ದರಾ ವಾರ್ತೆಯ
ಸಾರ್ವಭೌಮನು ಕೇಳಿ ನಕ್ಕ
ಗರ್ವ ವೆಗ್ಗಳಿಸಿತ್ತೆ ಮದನಗೆಂದರು ರವಿ
ಜಾರ್ವುದು ರಾತ್ರಿಯಾಯ್ತೊಡನೆ ೨೨

ಭರತೇಶ ಸೆಜ್ಜೆವನೆಯೊಳೊರಗಿದನಂದಿ
ನಿರುಳ ಮೂರನೆಯ ಜಾವದೊಳು
ಪರಮಾತ್ಮಯೋಗದೊಳಿದ್ದನಷ್ಟರೊಳೊಂದು
ಸರಸಾರ್ಥ ಹುಟ್ಟಿತೇನೆಂಬೆ ೨೩

ಮರನಲುಗದ ಮಾತುಗುಟ್ಟದ ಹೊತ್ತದು
ತೆರೆನಿಂದ ಕಡಲಂತೆ ಕಟಕ
ಪರವಶವಾಗಿದ್ದುದಿಬ್ಬರೆಚ್ಚತ್ತು ಭೂ
ವರನನಿಂತೆನುತಿದ್ದರಾಗ ೨೪

ಹನಿಗೂಡಿ ಹಳ್ಳ ನಾರೊಡಗೂಡಿ ಹಗ್ಗವೆಂ
ಬನುವಿನೊಳ್ಪಡೆಗೂಡಿ ಚಕ್ರಿ
ಘನತೆವೆತ್ತನು ಸೇನೆ ಹೊರತಾದವರಿವನೊಬ್ಬ
ಮನುಜನಲ್ಲವೆಯೆಂದರವರು ೨೫

ಭಾವ ಮೈದುನರು ಖೇಚರರವರಾಡಲಾ
ಭೂವರ ಕೇಳ್ದದನೊಂದು
ಭಾವದಿ ಪ್ರಕಟಿಸಬೇಕೆಂದು ನೆನೆದಿದ್ದ
ತಾವರೆಯೋಪ ಮೂಡಿದನು ೨೬

ದೇವತಾಶ್ಚರ್ಯವನಿತ್ತು ಕಡೆಯ ಚಾವಡಿಗೆಯ್ದಿ
ರೀವಿಯಿಂದೋಲಗವಾದ
ಭಾವಶುದ್ಧದೊಳಿಲ್ಲರೆಯ್ತುಂದು ಕಂಡು ಸ
ಭಾವಾಸ ತುಂಬಿದ್ದರಾಗ ೨೭

ಮೊಗವನಲ್ಪವ ಮಾಡಿಕೊಂಡು ಮೋನದೊಳು ಗ
ದ್ದುಗೆಯೇರಿ ಚಕ್ರೇಶನಿರಲು
ಮುಗುಳಂಬ ಮಲೆತ ಚಿಂತೆಯೆಯೆಂದು ನೆನೆವುತ
ಮಿಗೆ ಪೊರ್ದಿ ಮಂತ್ರಿಯಿಂತೆಂದ ೨೮

ಚಿಂತೆ ಬೇಡೆಂದೆವುಗರುಹಿ ದೇವರಿದೇನ
ಚಿಂತಿಪುದೆನೆ ಕೇಳ್ದು ನೃಪತಿ
ಕಂತುವಿಗೆಣಿಸೆನ್ನೆ ನರ ಬಿಗಿದೆನ್ನನು
ಚಿಂತೆಗೊಳಿಸುತಿದೆಯೆಂದ ೨೯

ಪರಿಕಿಪೆವೆಲ್ಲೆಲ್ಲಿಯೆಂದ ಮಂತ್ರಿಗೆ ಕಿರು
ವೆರಲ ಸಟೆಗೆ ಡೊಂಕು ಮಾಡಿ
ಅರಸ ತೋರಿದನದು ತುದಿಬಾಗಿದೊಂದು ಪೂ
ಸರಲಂತೆ ಕಣ್ಗೆ ಮೋಹಿಸಿತು ೩೦

ಭೂನಾಥನಂಗವೈದ್ಯರು ಬಂದು ನಿಂದರು
ಮೂನೂರರುವತ್ತು ಮಂದಿ
ಸೇನೆಯೊಳುಳ್ಳ ಸರ್ವರು ಬಂದು ನೆರೆದರು
ನಾನು ಮಾಣಿಪೆನೆಂದರವರು ೩೧

ಬಡವಗೆ ಬಲುರೋಗ ಬಂದು ಬಾಯ್ಬಿಡಲೊರ್ವ
ರೆಡಹಿಯು ಕಾಣರುರ್ವಿಯೊಳು
ಒಡವೆಯುಳ್ಳವಗಲ್ಪರುಜೆ ಬರೆ ವಿಸ್ಮಯ
ಬಡುತ ಸಾರುವರದು ಸಹಜ ೩೨

ನೆಟ್ಟಿಯ ತೆಗೆದೊಮ್ಮೆ ನೋಡಿರೈಯೆಂದಾಗ
ಜಟ್ಟಿಗಳಿಗೆ ಕೈಯ ನೀಡೆ
ಬೆಟ್ಟಿಮಾಡದೆ ಕೈಯನವರೊತ್ತಲರಸನ
ಬೆಟ್ಟದ್ದುದಿನಿಸು ಸಡಿಲದೆ ೩೩

ನೆಸುನೇರವಾಗದೆ ಬೆರಳಿದ್ದರಿನ್ನೊಂದು
ಪೊಸತಂತ್ರವುಂಟೆಂದು ನೃಪತಿ
ಮಿಸುನಿಯ ಸರಪಣಿಯೊಂದನಂಗುಲಿಗೆ ಪೋ
ಣಿಸಿ ತೂಗಿರೆಂದನೆಲ್ಲರಿಗೆ ೩೪

ಹಂದಾರಿ ಮುಟ್ಟಿಲ್ಲ ಸಾಲಾಗಿ ನಿಂದೊಂದು
ಸರಪಣಿವಿಡಿದು ತೆಗೆದರು
ಬೆರಳಿಷ್ಟು ಮಿಸುಕದು ಮತ್ತರೆಗಾವುದು
ಹರಿದು ತೆಗೆದರು ಖೋಯೆಂದು ೩೫

ಅದರೊಳು ಸೇರವಾಗದು ಚಕ್ರವರ್ತಿಯಿ
ನ್ನಿದಕೊಂದು ತಂತ್ರವುಂಟಂದ
ಇದಿರಲ್ಲಿ ನಿಂದಿರ್ದ ವಿಶ್ವಕರ್ಮನ ನೋಡಿ
ಸದಮಲಾನಂದನಿಂತೆಂದ ೩೬

ಕಟಕವೆಲ್ಲಕ ಹಬ್ಬುವೊಲು ಸರಪಣಿಯ ಸಂ
ಘಟಿಸಿ ತಾ ಬೇಗದೊಳೆಂದ
ಸ್ಫಟದಿ ನಿರ್ಮಿಸಿಕೊಟ್ಟನವ ಕೂಡೆ ಚಕ್ರಿಯ
ತುಟಿ ಮಿಸುಕಿದ ಕಾರ್ಯ ತಡವೆ ೩೭

ಹೊಡೆಬಳ್ಳಿಯೊಂದರ ಗಂಟುಗಂಟಿಗೆ ಕುಡಿ
ಯೊಡೆದೆಂಟು ದೆಸೆಗೆ ಪೋಪಂತೆ
ನಿಡುಸರಪಣಿಯೊಂದು ಬಹಸರಪಣಿ ತನ್ನ
ತೊಡರೆ ಹಬ್ಬಿತು ಕಂಡ ಕಡೆಗೆ ೩೮

ಕಿರುವೆರಳಿಗೆ ಸರಪಣಿಯ ಸಂಧಿಸಿ ರಾಯ
ಬಿರಿಸಾಗಿ ತೂಗಿರ್ಕೆಯೆಂದ
ಇರುಪೆಗಳೆಣ್ಣೆಸೋಂಕಿದ ನೇಣ ಮುತ್ತುವಂ
ತೆರಗಿ ಪಿಡಿದುದಾಗ ಕಟಕ ೩೯

ತೇರನೆಳೆಯಬಹುದ್ದೈಸೆ ಹಗ್ಗವ ಹಾಕಿ
ಮೇರುವನೆಳೆದರೆ ಬಹುದೆ
ಆರಾರು ಬಹುದಹುದಾ ಸೇನೆ ತೆಗೆದಾಗ
ಧೀರಾಗ್ರನಿದ್ದನಿದ್ದಂತೆ ೪೦

ನರವಿಷ್ಟು ಸಡಿಲದು ತೆಗೆಯ ಹೇಳಧಿಕ ನಿ
ರ್ಭರದಿಂದ ಕಟಕವನೆಂದ
ಮುರಿದು ಪಲ್ಗಚ್ಚಿಕೊಂಡುಳ್ಳ ಶಕ್ತಿಯನಿಕ್ಕಿ
ಸರಪಣಿದುಯ್ದುದಾ ಸೇನೆ ೪೧

ಕಾಲ ಪೈಸರಗೊಟ್ಟು ಸರಪಣಿವಿಡಿದು ಹಿ
ಮ್ಮಾಲಾಗಿ ಪಡೆ ತೆಗೆವಾಗ
ತೋಳ ಸಿಕ್ಕಿಗೆ ರಾಯ ಸೀಡಿದನುರೆ ಹೊಟ್ಟಿ
ಮೇಲಾಗಿ ಕೆಡೆದರುರ್ವಿಯೊಳು ೪೨

ಬಲುಹಾಗಿ ಹಿಡಿಯಹೇಳಾನೊಮ್ಮೆ ನನ್ನತ್ತ
ಬಲಿದು ನೋಡುವೆನೆಂದನದಕೆ
ಕಲಿಗಳು ಫಣಿಗಳ ಪಿಡಿವಂತೆ ಸರಪಣಿ
ಗಳ ಪಿಡಿದರು ದೃಢವಾಗಿ ೪೩

ಸದರದೊಳಗೆ ತೆಗೆವನು ಮೊದಲೊಮ್ಮೆ ಮ
ತ್ತದರಿಂದ ನಸು ಹೆಚ್ಚಿ ತೆಗೆದ
ಆದಕೆ ವೆಗ್ಗಳಿಸಿ ನಾಲ್ವತ್ತೆಂಟುಗಾವುದ
ಗದಗದಿಸಿತು ರಾಜಕಟಕ ೪೪

ಸಣ್ಣಬೆರಳ ಶಕ್ತಿಯಿಂತು ಪೆಬ್ಬೆಟ್ಟಿನ
ಬಿಣ್ಣಿತೆಂತುಟೊ ಮುಷ್ಟಿಯೆಂತೊ
ಬಣ್ಣದ ನುಡಿಯಲ್ಲ ಚಕ್ರಿಗುಂಟದ್ರಿಯ
ನಣ್ಣಿಕಲ್ಲಾಡುವ ಶಕ್ತಿ ೪೫

ನರನಾಥ ತಲೆವಾಗಿ ನಸು ನಕ್ಕನಾಗ ಮಿ
ತ್ರರು ಹುಸಿರೋಗವೆಂದರಿದು
ಪರರಿಂದ ಮಾಣದೊಡೆಯ ನೀನೆ ನಿನ್ನ ನು
ಣ್ಬೆರಳ ಮಾಣಿಪುದೆಂದರೊಸೆದು ೪೬

ಸರಪಣಿದೆಗೆದೆಡಗೈಯಿಂದ ತನ್ನ ನು
ಣ್ಬೆರಳನೊತ್ತುತ ವಿನೋದಾರ್ಥಿ
ಗುರು ಹಂಸನಾಥಾಯ ಸ್ವಾಹಯೆಂದನು ಕೂಡೆ
ಸಂತವಾಗಿದ್ದುದಾ ಬೆರಳು ೪೭

ಸುರರು ಪೂಮಳೆಗರೆದರು ಮೊಳಗಿತು ಮೂರು
ವರೆಕೋಟಿ ವಾದ್ಯ ಘೋರೆಂದು
ಸುರಗಣಿಕೆಯರು ನರ್ತಿಸಿದರು ಸಾಲದೆ
ಭರತರಾಜನದೊಂದು ಭಾಗ್ಯ ೪೮

ಸರಸಾರ್ಥವಿದನೇಕೆ ನೆನೆದೆ ಚಕ್ರೇಶಯೆಂ
ದುರು ಮುದದೊಳು ಮಂತ್ರಿ ಕೇಳ್ದ
ಇರುಳಿಬ್ಬರಾಡಿದ ನುಡಿಗಿಂತು ನನದೆನೆಂ
ದರಸನಾ ಸ್ಥಿತಿಯ ಪೇಳಿದನು ೪೯

ಬಡಗಣದೆಸೆಯೊಳಾಡಿದರೆಂದು ಚಕ್ರೇಶ
ನುಡಿಯಲಾ ಖಚರರು ಕೇಳಿ
ಒಡೆಯನಾವರಿಯದಾಡಿದೆವೆಂದು ಮುಂದಡ್ಡ
ಗೆಡೆದರು ಪಾಲಿಪುದೆಂದು ೫೦

ನಾಡುಗರಿಗೆ ಸೇನೆದೋರಿ ಗೆಲ್ದನು ಯುದ್ಧ
ಮಾಡುವರಿವಗಿದಿರುಂಟೆ
ನೋಡು ಚಕ್ರಿಗೆ ಸರ್ವಬಲದಾಸೆಯೆಂದಿವ
ರಾಡಬಹುದೆಯೆಂದರೆಲ್ಲ ೫೧

ಗಡಬಡೆ ಸಾಕು ಹೊ ಪಡೆ ನೊಂದಿತಾನೊಂದು
ನುಡಿಗಿಂತುಟಲೆದೆನೆ ಮಂತ್ರಿ
ಕಡಿ ಕಡಿದವರಿಗಾ ಸರಪಣಿಯನೆ ಹಂಚಿ
ಕೊಡು ನೊಂದ ನೋವಾರಲೆಂದ ೫೨

ತಣಿದುದು ಕಟಕವೆಲ್ಲವು ಕೂಡೆ ಸರ್ವರ
ಗುಣವಚನದೊಳು ಬೀಳ್ಕೊಟ್ಟು
ಅಣುಗರ ಬೀಳ್ಕೊಟ್ಟು ಚಕ್ರೇಶ ಹೊಕ್ಕನಾ
ಕ್ಷಣ ತನ್ನ ರಾಜಮಂದಿರವ ೫೩

ಲಲನೆಯರರ್ತಿಯ ಹೇಳಲರಿಯೆ ಮೊಗ
ತಳತಳಿಸುತ ನಗುತೆಯ್ದಿ
ಗೆಲುವಿನೊಳಾರತಿಯೆತ್ತಿ ನಿವಾಳಿಯಿ
ಟ್ಟೊಲಿದೆರಗಿದರೋಪನಡಿಗೆ ೫೪

ಸ್ತ್ರೀಯರ ಹಿಂದಿಕ್ಕಿ ಬಂದು ಭೂಪತಿ ತನ್ನ
ತಾಯಂಘ್ರಿಗಳ ನಮಿಸಿದನು
ಮಾಯದ ರೋಗದೋರಿತೆ ನನ್ನ ಮಗಗೆ ಮಾ
ಮಾಯೆಂದಳಾಕ ತಕ್ಕೈಸಿ ೫೫

ನಿನಗೆಂತು ರುಜೆ ಬರಬಾರದು ರುಜೆ ನಿನ್ನ
ನೆನೆದರ್ಗೆ ಬರಬೇಡವೆಂದು
ಜನನಿ ಹರಸಿ ಮುತ್ತಿನಕ್ಷತೆಯಿಟ್ಟಳು
ಬಿನದಕೆ ಮೆಚ್ಚುತ ಮಗನ ೫೬

ದಿಟವಿನ್ನು ದೇವರ ಹರಕ ರಕ್ಷಿಪುದೆಂದು
ಚಟುಲಾಕ್ಷಿಯರು ತಾಯಿವೆರಸಿ
ಪಟುಚಕ್ರಿ ಭೋಜನಕೆಯ್ದಿದನಿಲ್ಲಿಗೆ
ಕಟಕವಿನೋದದ ಸಂಧಿ ೫೭

# ಮದನಸನ್ನಾಹ ಸಂಧಿ

ಕಟಕದ ವಾರ್ತೆಯ ಕೇಳುತಿಷ್ಟಳುಕುತ
ಪಟುವಾಗಿ ಮೊದಲು ತಾ ನುಡಿದ
ಘಟಿತ ಗರ್ವವ ನೆನೆದಾ ಕಾಮ ಕೂಡೆ ಹೋ
ರಟೆಗೆ ಮುಂಕೊಂಡನೇನೆಂಬೆ ೧

ಮಿಗೆ ಸುನಂದಾದೇವಿ ಕೇಳ್ದು ಪ್ರಾಪ್ತರನಟ್ಟಿ
ಮಗನ ಕರೆಸಿದಳು ಮನೆಗೆ
ದುಗುಡವ ಕಾಣಿಸದಂಗಜ ಬಂದಿಷ್ಟು
ನಗೆಮೊಗದಿಂದೆರಗಿದನು ೨

ಭುಜಬಲಿ ದೊಡ್ಡಣ್ಣನೊಡನೆ ಕಾಳಗವೆಂದು
ಗಜಬಜಿಸಿದೆ ಕಂಡ ನೀನು
ಸುಜನರಾರಿದ ಮೆಚ್ಚುವರು ಸುಡು ನಿನ್ನೊಂದು
ಕುಜನಮಾರ್ಗವನೆಂದಳಾಕೆ ೩

ಅಣ್ಣನ ಕೂಡೆ ಕಾಳಿಗವ ಮಾಡೆಂದಾನು
ಬೆಣ್ಣೆವಾಲೂಡಿ ಸಾಕಿದೆನೆ
ತಣ್ಣನೆ ಮಾಡಬೇಕೆಮ್ಮೆಲ್ಲರುದರಕೆ
ಹುಣ್ಣು ಮಾಳ್ಪುದು ಲೇಸೆ ಮಗನೆ ೪

ಹಿರಿಯಣ್ಣ ಹೆತ್ತ ತಂದೆಯ ಪಾಟಿಯೆಂದು ಸ
ತ್ಪುರುಷರು ಭಕ್ತಿ ಮಾಡುವರು
ಸರಿ ನಾನು ತಾನೆಂದು ದಾಯಾದ್ಯರಾಗಿ ಧೂ
ರ್ತರು ಹೋರುವರು ಜಗದೊಳಗೆ ೫

ಎಲ್ಲರು ತಪಸಿಗೆಯ್ದಿದರು ನೀನೊಬ್ಬ ನ
ಮ್ಮೆಲ್ಲರರ್ತಿಯ ಸಲಿಸಣ್ಣ
ಬಲ್ಲಿತುದೋರದಿರಣ್ಣನಿಗೆರಗೆಂದು
ಗಲ್ಲವ ಪಿಡಿದಲುಗಿದಳು ೬

ಇಲ್ಲವಮ್ಮಾಜಿ ಕಾಳಗವೆಂದು ಮೊದಲಿಷ್ಟು
ಸೊಲ್ಲಿಸಿದೆನು ಕೋಪದಿಂದ
ಸಲ್ಲದೆಂದೆಲ್ಲರಾಡಲು ಬಿಟ್ಟೆನಣ್ಣನ
ಮೆಲ್ಲಡಿಗೆರಗುವೆನೆಂದ ೭

ಪರರಲ್ಲವೆಂಬುದ ಮಾಡೆನು ನಾನು ದೇ
ವರಿಗತಿ ಚಿಂತೆಯೇಕಿದಕೆ
ಶಿರಬಾಗಿ ಬಹೆನಣ್ಣಗೆಂದನು ಮಾತಿನೊ
ಳಿರಿಸಿಕೊಂಡೆದೆಯೊಳು ಕೋಪ ೮

ಸಂತಸಬಟ್ಟಾಕೆ ತಕ್ಕೈಸಿಕೊಂಡೆನ್ನ
ಕಂತು ನೀನಂತೆ ಮಾಡೆಂದು
ಚಿಂತೆ ಹೋಯ್ತೆಂದು ಪರಸಿ ಕಳುಹಿದಳೆಲ್ಲ
ರಂತರಂಗವ ಕಾಂಬರಾರು ೯

ಪಡೆದಳಿಗೆರಗಿ ಬೀಳ್ಕೊಂಡು ತನ್ನರಮನೆ
ಗೊಡನೆ ಹೊಕ್ಕನು ಪುಷ್ಪಬಾಣ
ಬೆಡಗಾಗಿ ಸಿಂಗರಿಸಿದನು ತನ್ನಂಗಕೆ
ಕಡೆಯ ಶೃಂಗಾರವದಲ್ತೆ ೧೦

ಜೋಡಿಯಿಲ್ಲದ ಮೋಹನಾಂಗವದಕೆ ತಕ್ಕ
ಗಾಡಿ ಮೋಡಿಯೊಳು ಸಿಂಗರಿಸಿ
ನೋಡುವರೆಲ್ಲರ ಕಣ್ಮನಗಳ ನಲಿ
ದಾಡಿಸುತಿದ್ದನಾ ಸೊಬಗ ೧೧

ಸಿಂಗರವಾಗಿ ಕನ್ನಡಿಯ ನೋಳ್ಪಾಗ ತ
ನ್ನಂಗನೆಯರು ಬಂದರೆಲ್ಲ
ಹೆಂಗಳು ಸಹ ಪಟ್ಟದರಸಿ ಕೈಮುಗಿದಳ
ನಂಗಗಿಚ್ಛಾಮಹಾದೇವಿ ೧೨

ಆರ ಮೇಲೆಸುಗೆ ದೇವರಿಗೆ ಹೆಂಗಳ ಮೇಲೊ
ದೂರಿಸುವಾಳ್ಗಳ ಮೇಲೊ
ವೀರಾಂಗ ಶೃಂಗಾರವಾಗಿದೆಯೆಂದು ವಿ
ಚಾರಿಸಿದಳು ಪಟ್ಟದರಸಿ ೧೩

ಹೆಂಗಳಿಲ್ಲರು ನನ್ನ ಪಕ್ಷ ಪುರುಷರೆಲ್ಲ
ರಿಂಗೋಲ ಕೇಳ್ನಿನ್ನ ಪಕ್ಷ
ಕಂಗೆಡಿಸದಿರೆನ್ನ ಪಕ್ಷದವರನೆಂದು
ಭೃಂಗಾಕ್ಷಿ ನುಡಿದಳೋಪನೊಳು ೧೪

ಆಗಲೌ ನಲ್ಲಳೆ ನಿನ್ನ ಪಕ್ಷದ ಮೇಲೆ
ಪೂಗಣೆ ತೊಡುವುದಿಲ್ಲಬಲೆ
ಹೋಗದೆನ್ನೊಡನೊಡ್ಡಿ ನಿಂದ ಚಕ್ರಿಯ ಪೌಜ
ತಾಗುವೆನೆಂದನಾ ಮದನ ೧೫

ನಲ್ಲದೋಪನೆ ಬಿಡು ಹಿರಿಯಣ್ಣನೊಡನಿಂತು
ಬಲ್ಲಿತುದೋರ್ಪುದು ಗುಣವೆ
ಬಿಲ್ಲು ಕೊಂಕಲು ನಿನ್ನ ನಡೆ ಡೊಂಕೆ ಬೇಡೆಂದು
ನಲ್ಲಳಾಡಿದಳು ನಲ್ಮೆಯೊಳು ೧೬

ಒಂದು ಮನೆಯ ಹೆಣ್ಣುಗಳ ತಂದು ಸಡ್ಡುಕ
ರೆಂದು ಬಾಳ್ವವರುಂಟು ಕೂಡಿ
ಇಂದು ನೀವಣ್ಣತಮ್ಮದಿರೆವಗೆಮ್ಮಕ್ಕ
ನೊಂದುಗೂಡಿಸದಗಲಿಪರೆ ೧೭

ಸುಖಿಯಲ್ತೆ ದೇವ ನೀನೆಲ್ಲರ್ಗೆ ಜಗದೊಳು
ಸುಖವನೆ ಸಂಧಿಪೆಯಲ್ತೆ
ಸುಖಿಗಳಗ್ರಣಿಯಲ್ತೆ ನಿಮ್ಮಣ್ಣನಾತಗೆ
ಸುಖನುಖದೋರೆಂದಳಾಕೆ ೧೮

ಚತುರೆ ಚಾಪಲನೇತ್ರೆ ನಿಶ್ಚಲಮತಿ ನೀರೆ
ಪತಿಭಕ್ತೆ ಧೀರೆ ಶೃಂಗಾರೆ
ರತಿಕಲಾಕುಶಲೆ ರಟ್ಟೆಡಿಕಾತಿ ನುಡಿದಳು
ರತಿದೇವಿ ರಮಣನೊಳಾಗ ೧೯

ಅಲ್ಲವೆ ತನ್ನ ಸಾಮರ್ಥ್ಯ ತನ್ನವರ ಮೇ
ಲಲ್ಲದಿನ್ನೆಲ್ಲಿ ಮರೆವುದು
ಬಿಲ್ಲಂಬ ಹಿಡಿದೊಂದು ಬಲ್ಮೆಯು ನಿನ್ನಣ್ಣ
ನಲ್ಲಿ ತೋರುವುದೊಳ್ಳಿತಾಯ್ತು ೨೦

ಬಾವಾಜಿಯವರ ಹೆಣ್ಣುಗಳಿಗೆಮಗೆಲ್ಲರ್ಗೆ
ನೋವುದೋರುವೆನೆಂಬ ನಿನ್ನ
ಕಾವನೆಂಬರದೇಕೆ ಕೊಲ್ವನೆನ್ನದೆ ಭ್ರಾಂತ
ಜೀವರು ನರ ಸುರೋರಗರು ೨೧

ಒಬ್ಬರ ಮನಸಿಗು ಸಿಹಿಯಿಲ್ಲವೀ ನಡೆ
ಕಬ್ಬುವೊಕ್ಕ್ಯೊಳಗಿಹುದು
ಕಬ್ಬಿನ ಬಿಲ್ಲೊ ಕಾಕಬ್ಬಿನ ಬಿಲ್ಲೊ ಸಾ
ಹೆಬ್ಬಿದಿರಿನ ಕೊಂಕುಬಿಲ್ಲೊ ೨೨

ಮೆಲ್ಲೆದೆಯಳಿದು ತಮ್ಮಣ್ಣನಿಗಿದಿರಹ
ನಲ್ಲೆದೆಯೋಪನಂಬುಗಳು
ಮಲ್ಲಿಗೆಗೋಲ್ಗಳೊ ಮರದ ಮಿಂಟೆಯೊ ಪೇಳು
ಪುಲ್ಲಂಬೊ ಲೋಹದಂಬುಗಳೊ ೨೩

ಉಳಿದ ಹೆಂಗಳು ಯುದ್ಧ ಬೇಡೆಂದು ನುಡಿದರಾ
ಹಲಬರ ನುಡಿಗೇಳಿ ಮದನ
ನುಡಿದುದುತ್ತಮವಾಯ್ತು ನಿಮ್ಮೆಲ್ಲರರ್ತಿಯ
ಕೆಡಿಸೆನೌ ಸುಖದೋರ್ಪೆನೆಂದ ೨೪

ಬಂದು ತನ್ನರಮನೆಯಿದಿರಲ್ಲಿ ನೆರೆದಿಹ
ಮಂದಿಯ ನೋಡುತಂಗಜನು
ವಂದಿಗಳ್ಬಾಂಗು ಭಲಾ ಜೀವುರೆನಲು ಮಾ
ಕಂದನೆಂಬಾನೆಯೇರಿದನು ೨೫

ಬಲದಲ್ಲಿ ಗೌಳಿ ನುಡಿದುವಾಗ ವಾಯಸ
ಬಲದಿಂದ ಹಾರಿದುವೆಡಕೆ
ಫಲಫಲನೊಕ್ಕಾಯ್ತು ತಿರುಗಲರಿಯನಿನ್ನು
ಪೊಳಲಿಗೀ ಕಾಮನೆಂಬಂತೆ ೨೬

ಆದ ಕಂಡು ಮಂತ್ರಿ ಮರುಗಿ ಸಾರಿ ನಾಳೆ ನಾ
ಡಿದು ಗಮಿಸುವೆ ಸ್ವಾಮಿಯೆಂದ
ಇದು ಮಹಾಲಗ್ನವೈ ಸುಮ್ಮನೆ ಬಾರೆಂದು
ಮದನಮುಖದೊಡೆಯನೆಯ್ದಿದನು ೨೭

ಬಲವನೀಕ್ಷಿಸಿ ಮೆಚ್ಚಿ ಮನ್ಮಥ ಕರೆದಾಗ
ದಳಪತಿಗಿತ್ತನು ಮೆಚ್ಚ
ಗೆಲವೇರಿ ನಡೆಯಲ್ಕೆ ಕಟಕವೆಂದನು ಘುಳು
ಘುಳಿಸುತ ನಡೆದುದಾ ಸೇನೆ ೨೮

ಪೊಡವಿ ಘೋರಿಡೆ ತನ್ನ ಪಡೆಗೂಡಿ ಚಕ್ರಿಯ
ಪಡೆಯನು ನೋಡಲೆಯ್ತಂದು
ಕಡಲಿದಿರೊಳು ನಿಲ್ವ ಕೆರೆಯಂತೆ ನಿಂದನು
ಕುಡುವಿಲ್ಲ ಕಟಕದಿದಿರೊಳು ೨೯

ಅಲರಂಬ ದಾಳಿಗೆಯ್ತಂದನೆಂದಾ ಚಕ್ರ
ಧರನ ಪಾಳೆಯವೆಲ್ಲ ಮಸಗಿ
ಮುರಿ ಮುರಿದೀಕ್ಷಿಸುತಿದ್ದುದು ಮದನನ್ನೆ
ಸಿರಿಯಿದೆಯೆಂದರ್ತಿವಡುತ ೩೦

ಕಾದಲೆಯ್ತಂದನು ಕಿರಿಯಯ್ಯ ನಮ್ಮ ಕಂ
ಡಾದರೂ ತಿಳಿಯನೆಯೆಂದು
ಸೋದರರೊಡಗೂಡಿಕೊಂಡಿದಿರ್ಗೆಯ್ದಿದ
ನಾದರದಿಂದರ್ಕಕೀರ್ತಿ ೩೧

ಕುಂದದ ಚಂದ್ರರಂದದಿ ಬಹ ಸುತರ ಮಾ
ಕಂದದ ಮೇಲಿರ್ದು ಕಂಡು
ಕಂದರ್ಪನಿವರಾರು ಚೆಲ್ವರ್ಕ್ಕೆಯೆನೆ ನಿನ್ನ
ಕಂದಂದಿರೆಂದನಾ ಮಂತ್ರಿ ೩೨

ಬರಬೇಡ ಹೋಗ ಹೇಳೋ ತಮ್ಮ ಪಿತ ನನ
ಗರಸು ತಾವಣುಗರೆ ನನಗೆ
ಅರರೆ ತಾವಾರ ಚಾಳಿಸಬಂದರೆಂದನಾ
ಸ್ಮರನೆನಲೆದ್ದುದೊ ಕರ್ಮ ೩೩

ನಿಲ್ಲದೆ ಪರಿತಂದು ಕಳಕಂರನಿದು ವೇಳೆ
ಯಲ್ಲೆಂದರೆಂದು ಕೈಮುಗಿದ
ಕಲ್ಲ ತಾಗಿದ ಮಿಂಟೆಯಂತವರ್ತಿರುಗಿದ
ರೆಲ್ಲರ ಮನಕೆ ನೋವಾಗೆ ೩೪

ಅಯ್ಯಯ್ಯೊ ಅಣ್ಣಾಜಿಯರು ಬರೆ ಪೋಗಲೆಂ
ದಯ್ಯ ಬಾರಿಸಿದನೆಯೆಂದು
ಒಯ್ಯನಾನೆಯನಿಳಿದಾ ಮಹಾಬಲರಾಜ
ಮೆಯ್ಯ ತೋರದೆ ಪೋದ ನೊಂದು ೩೫

ಕಾಮನ ಸುತನಲ್ತೆ ಲಾವಣ್ಯ ಸೊಸುತ
ಭೂಮಿಶನೆಡೆಗೆಯ್ದುವಾಗ
ಶ್ರೀ ಮಹಾಬಲರಾಜ ನಿನ್ನ ತಮ್ಮನು ಸೂನು
ಸ್ವಾಮಿಯೆಂದನು ದಕ್ಷಿಣಾಂಕ ೩೬

ಸಾರಿ ಕಾಣಿಕೆಯಿಕ್ಕಿ ಪಜ್ಜೆಗೆರಗಿದ ಕು
ಮಾರನ ತೆಗೆದಪ್ಪಿಕೊಂಡು
ತೋರದೊಡೆಯೊಳಿಟ್ಟುಕೊಂಡನಾ ನೃಪನಂತೆ
ಸಾರಹೃದಯರೊಬ್ಬರುಂಟೆ ೩೭

ಮೊಗವೇಕೆ ಬಾಡಿತು ಗೂಢದೊಳೆಯ್ತಂದ
ಬಗೆಯೇನು ನಿನಗೊಬ್ಬರೊಡನೆ
ಜಗಳವಾದುದೊ ಹೇಳು ಹೇಳಣ್ಣಯೆಂದಪ್ಪಿ
ಮಗನನಾ ಚಕ್ರಿ ಕೇಳಿದನು ೩೮

ದೇವರ ಸುತರು ಚಿಕ್ಕಯ್ಯನೊತ್ತಿಗೆ ಸಾರ
ಲೀ ವೇಳೆ ಬೇಡವೆಂದಟ್ಟಿ
ನೋವ ತಾಳ್ದೀತನಿಂತೆಯ್ತಂದನೆಂದರು
ಸೇವಕರಾ ಚಕ್ರಿಯೊಡನೆ ೩೯

ಹಂಸನಾಥನೆ ಬಲ್ಲ ಮದನನ ಮನದ ವಿ
ಧ್ವಂಸ ಭಾವನೆ ನಿಂದುದಕಟ
ನಾಂ ಸೇರದಿರೆ ನನ್ನ ಸುತರು ವೈರಿಗಳೆ ಕ
ರ್ಮಾಂಶನ ನಡೆ ಸುಡಲೆಂದ ೪೦

ತಂದೆಯ ನುಡಿಗೊಪ್ಪದೀ ಕುಮಾರಕ ಜಾರಿ
ಬಂದ ವಿವೇಕಕಿನ್ನೆಣೆಯೆ
ಇಂದಿಷ್ಟು ಬುದ್ಧಿ ಜವ್ವನವಾದರಿನ್ನೆಂತೊ
ಯೆಂದು ಸರ್ವರು ಪೊಗಳಿದರು ೪೧

ಒಡ್ಡಿದಂಕವ ನಾನು ಗೆಲ್ವೆ ನೀನೆನ್ನಕ
ದೊಡ್ಡಣ್ಣನೊಡನಿರೆಂದವಗೆ
ಎಡ್ಡ ಮನ್ನಣೆಯನಿತ್ತರ್ಕಕೀರ್ತಿಯು ತೋರ
ಲಡ್ಡಬಂದವ ಕರೆಕೊಂಡ ೪೨

ಮದಗಜವೇರಿ ಮನ್ಮಥನಿರ್ದ ಸಭೆಯೊಳ
ಗ್ಗದ ಚಕ್ರಿಯಿರ್ದನಿನ್ನವರ
ಕದನ ಕರ್ಕಶದೋರಿ ಮೃದುವಪ್ಪುದಿಲ್ಲಿಗೆ
ಮದನಸನ್ನಾಹದ ಸಂಧಿ ೪೩

# ರಾಜೇಂದ್ರ ಗುಣವಾಕ್ಯ ಸಂಧಿ

ಭರತೇಶ ಭುಜಬಲಿರಾಜರ ಮಂತ್ರಿ ಮಿ
ತ್ರರು ನಡುನೆಲದೊಳೊಗ್ಗಾಗಿ
ದೊರೆಗಳಿಬ್ಬರ ಕದನಕೆ ಮುಂದೆ ಯೋಚಿಸಿ
ದರು ಮೃದುಕಲೆಯನೇನೆಂಬೆ ೧

ಸರ್ವಬಲವ ಕೊಲ್ಲಬೇಡ ಕೂರಸಿವಿಡಿ
ದೊರ್ವರು ಕಾಡಬೇಡಿನ್ನು
ಇರ್ವರ ಧರ್ಮಯುದ್ಧಕೆ ಕೇಳ್ವೆವೆಂದೆಯ್ದಿ
ಸಾರ್ವಭೌಮನ ಕೇಳ್ದರೊಡನೆ ೨

ಕುಲಿಶದೇಹಿಗಳು ನೀವಿಬ್ಬರಿನ್ನಂಕದ
ತಳದಲ್ಲಿ ಕಾಲಿಕ್ಕುವಾಗ
ಬಳಿಗಾರವಸರದೊಳೆರಡಾನೆ ಹೊಕ್ಕು ಹೋ
ಕುಳಿಸಿದಂತಹುದೆಂದರವರು ೩

ಇದಕೆ ನೀವೇನ ಕಂಡಿರಿ ಪೇಳಿರೆಂದರಂ
ಜದೆ ನುಡಿವೆವೆ ಸ್ವಾಮಿಯೆನಲು
ಎದೆಹಾರು ಬೇಡವ್ವೆ ಪೇಳಿರೆಂದನು ಧರ್ಮ
ಕದನಕೊಪ್ಪೆಂದರಾ ಹಿತರು ೪

ಅಂತಿಂತುಟೆಂದೆನ್ನ ಕೇಳಬೇಡರಲಂಬ
ನೆಂತೊಪ್ಪಿದಂತೆ ಕೇಳುವೆನು
ಚಿಂತಿಸಿಕೊಳ್ಳಿರೈ ಹೋಗಿರೆಂದನು ಮಹಾ
ಸಂತಸಬಡುತ ಸಾಗಿದರು ೫

ಮದನನ ಕಂಡು ಕೈಮುಗಿದು ಬಿನ್ನವಿಪೊಡೆ
ಮ್ಮದೆ ಬೆಚ್ಚುತಿದೆಯೆಂದರವರು
ಕದನವುಂಟಾದರೆ ಭೀತಿ ಬೇಡುಸುರಿರೈ
ಮೊದಲಂತೆ ಹೇಳಬೇಡೆಂದ ೬

ಕಾಳಗವುಂಟು ಖಡ್ಗದ ಯುದ್ಧ ಬೇಡ ಕೇ
ಳ್ಮೀಲಾದ ಮೃದುಲಯುದ್ಧವನು
ತೋಳ ಬಲ್ಮೆಯೊಳೆ ನೀವಿಬ್ಬರು ಮಾಳ್ಪುದೆಂ
ದಾ ಲೇಸುಗಾರರಾಡಿದರು ೭

ಎವೆಯಿಕ್ಕದೊಬ್ಬರೊಬ್ಬರ ನೋಡಬೇಕು ಕ
ಣ್ಣೆವೆಯಿಕ್ಕಿದಾಗದು ಸೋಲ
ಬವರವನಪ್ಪರೊಳ್ಬಿಡಬೇಕು ಬಿಡದಿರ್ದ
ರವಧರಿಸಿನ್ನೊಂದು ಮಾತ ೮

ಮೊಗೆದು ಹಸ್ತಗಳಿಂದ ಜಲವನೊಬ್ಬೊಬ್ಬರು
ಮೊಗಕೆ ಚೆಲ್ಲುವುದು ಚಲ್ಲುತಿರೆ
ಮೊಗವಡ್ಡದೆಗೆದಾಗ ಸೋಲಪಲ್ಲಿಯು ಯುದ್ಧ
ಮುಗಿಯದರಾಲಿಸಿನ್ನೊಂದ ೯

ಮಲ್ಲಯುದ್ಧವ ಮಾಳ್ಪುದವರೊಳೊಬ್ಬನನೆತ್ತಿ
ದಲ್ಲಿ ಸುಮ್ಮನೆ ನಿಲಬೇಕು
ಅಲ್ಲಿಂದ ಮುಂದೊಂದು ಕಾಳಗ ಗೀಳಗ
ಸಲ್ಲದೊಪ್ಪೆನಲೊಪ್ಪಿತೆಂದ ೧೦

ಸಂಗರ ದೊರೆಗಳಿಬ್ಬರಿಗಲ್ಲದುಳಿದ ಷ
ಡಂಗವಾಹಿನಿಗಿಲ್ಲವೆಂದು
ಡಂಗುರ ಸಾರಿತು ಕಟಕದೊಳ್ಕದನನ
ಣ್ಣಂಗೊಡ್ಡಿ ನಿಲೆ ಮೇರುವಂತೆ ೧೧

ತರತರವಾಗಿ ನಿಂದರು ವ್ಯಂತರಾಂಕರಂ
ಬರಚರರಾಕಾಶದಲ್ಲಿ
ನರರು ತುರುಗಿ ತುಂಬಿ ನಿಂದಿರ್ದರಾ ವಸುಂ
ಧರೆ ತೆರಪೆಯ್ದದೆಂಬಂತೆ ೧೨

ಗರ್ವಗಿರಿಯನಿಳಿವಂತಾನೆಯಿಂದಿಳಿ
ದುರ್ವಿಯೊಳಲ್ಪದೂರದಲಿ
ಕರ್ವುವಿಲ್ಲನು ಮಧ್ಯದೊಳು ನಿಂದನಾ ಪಸು
ರ್ಪರ್ವತ ನಿಂದುದೆಂಬಂತೆ ೧೩

ಹೆಣ್ಣು ಗಂಡಿನ ಕಂಗಳವನಲ್ಲಿ ನಿಂದವು
ಕಣ್ಣಿಯೊಳೆರಳೆ ಬಿದ್ದಂತೆ
ಅಣ್ಣಗೊಡ್ಡಿದುದೊಂದು ಕೊರತೆಯಲ್ಲದೆ ಮಿಕ್ಕ
ಬಣ್ಣದೊಳವಗುಂಟೆ ಕೊರತೆ ೧೪

ಹತ್ತಿರಕೆಯ್ತಂದು ಚಾಂಗು ಭಲಾಯೆನ
ಲೆತ್ತಿದ ಶಿಬಿಕೆಯಿಂದಿಳಿದು
ಹತ್ತೆಂಟು ಮಾರೆನೆ ಸ್ಮರನಿದಿರೊಳು ನಿಂದ
ನುತ್ತುಂಗಭರಿತನಾ ಚಕ್ರಿ ೧೫

ಕುಂದಣದದ್ರಿ ಪಚ್ಚೆಯ ಗಿರಿಯೆರಡೊಡ್ಡಿ
ನಿಂದುವೊ ಕಳದೊಳೆಂಬಂತೆ
ಸೌಂದರಾಯತದೀರ್ಘದೇಹಿಗಳಣ್ಣ ತ
ಮ್ಮಂದಿರೊಪ್ಪಿದರು ನೋಳ್ಪರಿಗೆ ೧೬

ಭೂರಿವಾದ್ಯದ ನಾದ ನಿಂದುದು ಕದನದ
ಭೇರಿಯ ಸನ್ನೆ ಮತ್ತಿರಲಿ
ಆರಯ್ದು ನಾಲ್ಕೆಂಟು ನುಡಿವೇಳ್ವ ಮೊದಲೆಂದ
ನಾ ರಾಯ ಪಲರು ಕೇಳ್ವಂತೆ ೧೭

ಮನಸಿಜ ಕೇಳಣ್ಣ ನಿನಗೆನಗಿಂದು ದು
ರ್ಮನದಿಂದ ಜಗಳವಪ್ಪುದಕೆ
ಘನವೇನು ಹೇಳು ನಿಷ್ಕಾರಣ ಕದನವ
ಜನಪರೆಸಗುವರೆಯೆಂದ ೧೮

ನಿನ್ನೊಡವೆಯ ನಾನು ಕೊಂಡುದಿಲ್ಲಣ್ಣ ನೀ
ನೆನ್ನೊಡವೆಯ ಕೊಂಡುದಿಲ್ಲ
ಮುನ್ನಯ್ಯನಿರಿಸಿದಂದದಿ ರಾಜ ಯುವರಾಜ
ಸನ್ನಾಹದೊಳಗಿರ್ದೆವಲ್ತೆ ೧೯

ನುಡಿಯಲ್ಲಿ ನಾ ನಿನ್ನ ಬಿಟ್ಟಾಡಿದೆನೆ ನನ್ನ
ಪಡೆಯೊಳಗೊಬ್ಬರಾಡಿದರೆ
ಒಡಹುಟ್ಟಿದವನ ನೋಡುವೆನೆಂದು ಬರಹೇಳಿ
ಘಡ ಹುಸಿಯೆಂಬರೆ ಅಪ್ಪ ೨೦

ಮಾತಿಗೆ ತೊಡಗಿದ ಕದನಕಿಂದಿವನಿಗೆ
ಭೀತಿಯಾದುದೆಯೆನಬೇಡ
ಪೂತು ಮಝ್ಝುರೆಯೆನ ಕದನದೋರ್ಪೆನು ಕೇಳು
ಪಾತಕ ಕಳೆವೆನು ಮೊದಲು ೨೧

ನಾನಿಷ್ಟು ನಿನ್ನಿಂದ ಹಿರಿಯನಾದುದರಿಂದ
ಸೇನೆಗೆ ಬರವೇಳ್ದೆನ್ನೈಸೆ
ನೀನೆನಗಗ್ರಜನಾದರೆ ನೀನಿರ್ದ
ಸ್ಥಾನಕೆಯ್ದದೆ ತಡೆದಿಹೆನ ೨೨

ಪಾಟಿಸಿ ಕೇಳಣ್ಣ ನಾನು ನೀನಾಡುವ
ರಾಟಕಾರರು ನಮ್ಮ ಭಟರು
ನೋಟಕಾರರೆ ನೀನು ನೆನದ ಸಂಗ್ರಾಮ ಸ
ಘಾಟಿಕೆಯಾಯ್ತು ಕಂಜಾಸ್ತ್ರ ೨೩

ನನ್ನ ಗೆದ್ದುದರಿಂದ ನಿನಗೆ ಕೀರ್ತಿಯೆ ಹೇಳು
ನಿನ್ನ ಗೆಲ್ದೆನಗೊಂದು ಜಸವೆ
ಪನ್ನಗ ನರ ಸುರ ಲೋಕದುತ್ತಮರು ಛೀ
ಯೆನ್ನರೆ ಯೋಚಿಸಿ ನೋಡು ೨೪

ಅದಕೇನು ನೀನಿಂತು ಕದನಕೆಯ್ದಿದೆಯ್ದೈನೆ
ಕದನದೊಳ್ಗೆಲವ್ವೈಸೆ ಕಡೆಗೆ
ಬದೆಗರಂದದಿ ಹೋರಲೇತಕೆ ಗೆಲವು ನಿ
ನ್ನದು ಸೋಲವೆನಗೆ ಹೋಗೆಂದ ೨೫

ಗೆಲವೆಂಬುದೇನುಪಚಾರವಲ್ಲಣ್ಣ ತೋ
ಳ್ವಲವ ಬಲ್ಲೆನು ಸತ್ಯವಹುದು
ಬಲ್ಲವೆಲ್ಲ ಕೇಳ್ವಂತೆ ಪೇಳ್ವೆನು ಕೇಳೆಂದು
ಬಳಿಕ ಚಕ್ರೇಶನಿಂತೆಂದ ೨೬

ದೃಷ್ಟಿವಿಜಯವೆಂತು ಪಂಚವಿಂಶತಿಚಾಪ
ದಷ್ಟುದ್ದ ಹೆಚ್ಚು ನೀನೆನ್ನ
ದೃಷ್ಟಿಸಬಹುದಾನು ನಿನ್ನ ನೋಳ್ಪುಗೂರ್ಧ್ವ
ದೃಷ್ಟಿ ನೊಂದೆವೆ ಹೊಯ್ಸುದೆಂದ ೨೭

ಜಲಯುದ್ಧದೊಳು ನಾನು ಚಿಲ್ಲಿ ನಿನ್ನೆದೆ ಮುಟಿ
ಯಿಳಿವುದು ವಾರಿ ನೀನೆನ್ನ
ಮುಳುಗಿಸಿ ಬಿಡಬಹುದದರಿಂದ ನನಗಾಗ
ಚಳಿತಡ್ಡ ಮೊಗವಹುದೆಂದ ೨೮

ಮಲ್ಲಗಾಳಗವೆಂತು ಭುಜಬಲಿಯೆಂದಯ್ಯ
ನಲ್ಲವೆ ಪೆಸರಿಟ್ಟನೆಂದು
ಬಲ್ಲೆನಯ್ಯನ ವಾಕ್ಯ ಹುಸಿಯದು ಭುಜಬಲ
ದಲ್ಲಿ ನೀನೆತ್ತುವೆಯೆಂದ ೨೯

ಅನುಜಾತಗಗ್ರಜ ಸೋತೆನೆಂಬಾಗ ಕ
ರ್ರನೆ ದಶದಿಕ್ಕು ಕಂದಿದುವು
ಅನಲವಿಲ್ಲದೆ ಹೊಗೆ ಸೂಸಿತು ಸೂಸದೆ
ಮನರತ್ನ ನೊಂದಾಡುವಾಗ ೩೦

ಬೆದರಿತು ಕಟಕ ಹಾ ಕಷ್ಟವ ನೆನೆದೆನೆಂ
ದೆದೆಯೊಳಂಗಜ ನೊಂದುಕೊಳುತ
ಮದನ ಸಮ್ಮುಖವಾಗದೋರೆಯಾಗಿರೆ ಚಕ್ರಿ
ಮುದದೋರಿ ಮತ್ತಿಂತು ನುಡಿದ ೩೧

ಕೇಳಣ್ಣ ಚಕ್ರವ ಬಯಸಿತಿಲ್ಲಾನು ಶ
ಸ್ತ್ರಾಲಯದೊಳು ತಾನೆ ಹುಟ್ಟಿ
ಏಳಿಸಿ ನಾಡ ಸುತ್ತಿಸಿತು ನಿಮ್ಮೆಲ್ಲರ
ಆಲಿಗೆ ನೋವಾಗುವಂತೆ ೩೨

ಅರಸಾಗಿ ನೀನೂರೊಳಿರ್ದೆ ನೀನಟ್ಟಿದ
ದೊರೆಯಾಗಿ ನಾನೆಯ್ದಿ ನಿನ್ನ
ಧರೆಯ ಸಾಧಿಸಿ ತಂದೆನೊಪ್ಪುಗೊಳ್ಳಿನ್ನ ಭೂ
ವರವೃಂದವಿದೆ ಕಟಕವಿದೆ ೩೩

ನಿನಗೆ ನಾನಣ್ಣನೆಂಬಕ್ಕರವಿಲ್ಲ ನೀ
ನನುಜನೆಂಬಕ್ಕರುಂಟಪ್ಪ
ನನೆವಿಲ್ಲ ನಿನ್ನ ಭಾಗ್ಯವ ಕಣ್ಣುತುಂಬ ನೋ
ಳ್ಪೆನು ರಾಜಪದವಿಗಿಂತೊಪ್ಪು ೩೪

ಕೌಶಲಿಯೊಳು ನೀನು ಸುಖಬಾಳು ನನಗೊಂದು
ದೇಶವ ಕೊಟ್ಟು ಬೇರಿರಿಸು
ಕ್ಲೇಶದ ಮಾತಲ್ಲ ಸಂತೋಷ ಪುರುಷರ
ಮೇಶನ ಕೆಂಬಚ್ಚೆಯಾಣೆ ೩೫

ವಿರಸವ ಬಿಡು ಬಿಡೆಂದಾ ಚಕ್ರಿ ನುಡಿಯೆ ಪೂ
ಸರನು ತಗ್ಗುತ ಮನಸಿನೊಳು
ಮುರಿದ ಮೋರೆಯೊಳಿರೆ ಚಕ್ರರತ್ನವನಾಗ
ಕರೆದಿಂತು ನುಡಿದನಾ ಚಕ್ರಿ ೩೬

ಹೋಗು ಚಕ್ರವೆ ಭುಜಬಲಿಯನೋಲೈಸೆನೆ
ಹೋಗದೀತಗೆ ಪುಣ್ಯವುಂಟು
ಪೂಗಣೆಯಗೆ ಚಕ್ರ ಬೆಸಗೈಯ್ವ ಪುಣ್ಯವಿ
ಲ್ಲಾಗಿ ನಿಂದಿತು ಮುಂದೆ ಬಂದು ೩೭

ಎಲೆಲೆ ಪಿಶಾಚ ಹೋಗೆಂದರೇತಕೆ ಹೋಗೆ
ಕಲಹ ನಿನ್ನಿಂದಾದುದೆನಗೆ
ಜಲಜಾಸ್ತ್ರನತ್ತ ಸಾರೆಂದು ನೂಕಿದರದು
ಬಳಿ ಜಾರುವಂತೆ ಜಾರಿದುದು ೩೮

ಗರುಡಮಂತ್ರಕೆ ವಿಷವಿಳಿವಂತೆ ಭರತಭೂ
ವರನ ವಾಕ್ಯವ ಕೇಳಲಾಗಿ
ಜರಿಜರಿದಂಗಜಗೆತ್ತಿದ ಕೋಪ ಪೈ
ಸರಿಸಿತು ಹೃದಯ ತಂಪಾಯ್ತು ೩೯

ಒಲೆದ ಮೋರೆಯ ತಿರುಹಿದನು ಸಮ್ಮುಖವಾಗಿ
ಕಳೆದನೊಯ್ಯನೆ ತೋಳತೊಡಕ
ಅಳಕಾದುದಣ್ಣನ ಮೊಗವ ನೋಡದೆ ನಾಚಿ
ತಲೆಗುಸಿದಿರ್ದನಾ ಮದನ ೪೦

ಕಡೆಯ ಯುದ್ಧದೊಳಲ್ಲದಿವರುಕ್ಕು ನಿಲ್ಲದೆಂ
ದಿಡಿಕಿರಿದೀಕ್ಷಿಸುತಿರ್ದು
ನುಡಿಯೊಳೆ ಚಕ್ರಿ ಗೆಲ್ದುದ ಕಂಡು ಪೊಗಳ್ದರು
ನುಡಿಯದೆ ಸಖ ಮಂತ್ರಿ ನೃಪರು ೪೧

ನುಡಿವ ಗಂಭೀರ ಬೋಧಿಪ ಬೋಧೆ ತಮ್ಮನೆಂ
ಮೊಡಕು ಹುಟ್ಟಿಸದೊಂದು ಪ್ರೀತಿ
ತೊಡರದ ಮಾತಿಂದ ಗೆಲ್ದ ಚಾತುರ್ಯಕೆ
ಪಡೆಯೆಲ್ಲ ಮೆಚ್ಚಿ ಕೀರ್ತಿಸಿತು ೪೨

ನಾಸಿಕಾಗ್ರದೊಳಿಟ್ಟ ಬೆರಳಿಂದ ತನ್ನ ದು
ರ್ವಾಸನಾ ಚರಿತವ ನೆನೆದು
ಹೇಸುವ ತಲೆಗೊಡಹುವನಾಗ ಮನಸಿಜ
ನಾಸನ್ನ ಮೋಕ್ಷಕನಲ್ತೆ ೪೩

ಪಾಪಿ ನಾನೆನ್ನಣ್ಣಗಿದಿರಾಗಿ ಕುಲಕೆ ಲೋ
ಕಾಪವಾದವ ತಂದೆನಕಟ
ಕೋಪ ಗರ್ವಗಳಾರ ಕೆಡಿಸವೆಂದಾ ಪುಷ್ಪ
ಚಾಪ ತನ್ನೊಳು ಮರುಗಿದನು ೪೪

ಸಮ್ಮತವಲ್ಲದ ಕಾರ್ಯವ ನೆಗಳ್ವೆನ್ನ
ನುನ್ಮತ್ತನೆನ್ನದೆ ಪಿತನು
ಮನ್ಮಥನೆಂದೇಕೆ ಕರೆದನೆಂದೆದೆಯೊಳು
ದ್ಯನ್ಮೋಕ್ಷಗಾಮಿ ಚಿಂತಿಸಿದ ೪೫

ನೀತಿವೇಳ್ವಾಗ ನಿನ್ನಣ್ಣ ನಿನ್ನಣ್ಣನೆಂ
ದೋತೆಲ್ಲರೊರೆವಾಗ ನಾನು
ಆತನೀತನು ಚಕ್ರಿಯೆಂದೆನಗ್ರಜನೆಂಬ
ಮಾತನಾಡಿದೆನೆ ಹಾಯೆಂದ ೪೬

ಲೋಕದ ಮುಂದಣ್ಣ ಸೋಲವೆಂದನು ನೂಕು
ತಾಕಾಯ್ತು ಚಕ್ರಕೆನ್ನಿಂದ
ತೂಕವೆ ನನಗಿದು ಲಘುತೆಯೆಂದಾತ್ಮನಿ
ರಾಕರಣೆಯ ಮಾಡಿಕೊಂಡ ೪೭

ದೀಕ್ಷೆಗೆಯ್ದುವುದೆ ಲೇಸೆಂದೆದೆಯೊಳು ನೆನೆ
ದಿಕ್ಷುಕೋದಂಡನಣ್ಣನನು
ಈಕ್ಷಿಸದೆಡಬಲದತ್ತ ನೋಡಿದನು ಶಾಂ
ತಾಕ್ಷಿಯೊಳೊಮ್ಮೆ ಪಾಯ್ದುಳವ ೪೮

ಆಕಾಶ ಭೂಮಿ ತುಂಬದ್ದ ದಳವ ನೋಡ
ಲಾ ಕಾಮುಗೊಡನೆ ಕೈಮುಗಿಯೆ
ಏಕೆ ಕೈಮುಗಿದಪರೆನಗೆಂದು ನಾಣ್ಚಿ ಮ
ತ್ತೀಕಡೆಗೊಲೆದು ನೋಡುವನು ೪೯

ಪೌಜ ನೋಳ್ಪುದ ಬಿಟ್ಟು ತಲೆವಾಗಿ ಮದನನ
ಣ್ಣಾಜಿಗಿನ್ನೆನ್ನ ಕಾರ್ಯವನು
ಮಾಜದಾಡುವೆನೆಂದು ನೆನೆದಿರ್ದನಿಲ್ಲಿಗೆ
ರಾಜೇಂದ್ರಗುಣವಾಕ್ಯ ಸಂಧಿ ೫೦

# ಚಿತ್ರಜನಿರ್ವೇಗ ಸಂಧಿ

ನೋವುತಿರ್ದುದು ಚಿತ್ರ ಮನ್ಮಥ ತಲೆಯೆತ್ತಿ
ಭೂವರಾಗ್ರಣಿಯ ನೋಡಿದನು
ದೇವರು ಕ್ಷಮಿಸುವುದೆನ್ನದು ತಪ್ಪೆಂದು
ಭಾವಶುದ್ಧದೊಳು ಕೈಮುಗಿದ ೧

ತಪ್ಪಿಲ್ಲವಣ್ಣ ನಿನ್ನಯ ನಡೆಯೆಲ್ಲವು
ಒಪ್ಪವೆನ್ನೆದೆಗೆ ಸಂತೋಷ
ಒಪ್ಪಚ್ಚಿ ನೋವೆನಗಿಲ್ಲವೆಂದೊರೆದನಾ
ಛಪ್ಪನ್ನದೇಶದೊಡೆಯನು ೨

ದೂಷಣವನು ತೊಡಗಿದೆ ನಾನು ಪೇವರು
ಭೂಷಣಗೈದಿರಿ ನನ್ನ
ದೋಷವೆನ್ನನೆ ಪುದಿದಲೆವುದು ಪರಮ ಸಂ
ತೋಷ ದೇವರಿಗಹುದೆಂದ

ಅಂತಾಡದಿರು ನೀನು ಬೇರೆ ನಾ ಬೇರೆಯೇ
ನಿಂತು ನೋವರೆ ಕಬ್ಬುವಿಲ್ಲ
ಕುಂತೆಂಬುದೆನಗಿಲ್ಲ ನಿನಗಿಲ್ಲ ನೀನಿಂತು
ಚಿಂತೆಗೊಳ್ಳದಿರೆಂದನಣ್ಣ ೪

ನನಗಾವ ಚಿಂತೆಯಿಲ್ಲೆನ್ನ ಬಿನ್ನಹವನೊಂ
ದನೆ ಪಾಲಿಪುದು ದೇವರಿಂದ
ಅನುಜ ಪೇಳೇನೆಂದ ದೀಕ್ಷೆಗೆ ಪೋಪೆನೊ
ಪ್ಪೆನುತ ಕೈಮುಗಿದನಂಗಜನು ೫

ಭೋಂಕನೆದ್ದನು ಚಕ್ರಿ ಗಳಗಳನೆಯ್ತಂದು
ಪಂಕಜಾಯುಧ ದೀಕ್ಷೆಗೇಗ
ಮುಂಕೊಂಡು ಪೋಪೆನೆಂಬುದ ಮರೆಯೊಂದು ತ
ಳ್ಪಂಕದಿ ತಕ್ಕೈಸಿಕೊಂಡ ೬

ದೀಕ್ಷೆಗೆಯ್ದಲವೇಕೆ ಭಂಗವೇನಾಯ್ತು ಕ
ಟಾಕ್ಷಿಸಿ ನುಡಿದೆನೆ ನಿನ್ನ
ಮೋಕ್ಷಕಾರ್ಯವ ಮುಂದೆ ಯೋಚಿಸಿಕೊಂಬವಿಂ
ದೀ ಕ್ಷೋಭೆ ಬೇಡಪ್ಪಯೆಂದ ೭

ಭಂಗವಿಲ್ಲೆನಗೆ ದೇವರಿಗೊಡ್ಡಿ ನಿಂದಾಜಿ
ರಂಗದಿ ಲಘುತೆದೋರಿದೆನು
ಭಂಗುರಕರ್ಮತಂತ್ರದಿ ನೊಂದೆನೆನ್ನಂತ
ರಂಗ ಹೇಸಿತು ಪೋಪೆನೆಂದ ೮

ದರ್ಪಕ ನೀನೇನ ಮಾಡಿದ್ದೈ ಹುಂಡಾವ
ಸರ್ಪಿಣಿದೋಷದೊಳೆನಗೆ
ತೋರ್ಪುದೀ ಭಂಗವೆಂದೊರೆದನಯ್ಯನು ನೀನು
ಬೇರ್ಪಟ್ಟು ನೆನೆಯದಿರೆಂದ ೯

ಕಾಲದೋಷದೊಳಾದರೆನ್ನಿಂದ ಪ್ರಕಟವಾ
ದೀ ಲೋಕವಾರ್ತೆ ಜಾರುವುದೇ
ಕೈಲಾಸಗಿರಿಗೈಯ್ದಬೇಕೆನ್ನ ಬಿನ್ನಹ
ಕಾಲಸ್ಯ ಮಾಡದೊಪ್ಪೆಂದ ೧೦

ಆಡದಿರಾ ಮಾತನೆನ್ನ ಮುನಿಸಿಗತಿ
ಮಾಡಿ ಮತ್ತೆಯ್ದು ನೀನೆಂದು
ಕೂಡೊಮ್ಮೆ ತಕ್ಕೈಸಿ ಗಡ್ಡವ ಪಿಡಿದೊತ್ತಿ
ಬೇಡಿಕೊಂಡನು ಚಕ್ರಧರನು ೧೧

ಎಂದಿರ್ದು ದೀಕ್ಷೆಯ ತಾಳ್ದು ನಾನಪವರ್ಗ
ಮಂದಿರದೊಳು ನಿಲ್ವೆನ್ಸೈಸೆ
ತಂದೆಯ ಬಳಿಗಿಂದೆ ಪೋಪೆನೊಪ್ಪಣ್ಣಾಜಿ
ಯೆಂದನಾ ಕುಸುಮಕೋದಂಡ ೧೨

ಹರಿದುದು ಸಂಸಾರಸುಖದಾಸೆ ನಿಮ್ಮೆಲ್ಲ
ರೆರಕದ ಮಮತೆ ಜಾರಿದುದು
ಮುರಿದ ಚಿತ್ತವನಿನ್ನು ಮೊನೆಮಾಡಬಹುದೆ ಬಾ
ಯ್ದೆರೆದು ಹೋಗೆಂದುಸುರೆಂದ ೧೩

ಅಣ್ಣನಿಗಿದಿರೊಡ್ಡಿ ನಿಂದ ದೇಹವ ಮಸಿ
ಮಣ್ಣ ಮಾಳ್ಪೆನು ತಪಕೊಡ್ಡಿ
ಉಣ್ಣದುರಿವ ಕರ್ಮಗಳ ಸುಟ್ಟು ಮೋಕ್ಷಕೆ
ಪೊಣ್ಣನೆಯ್ದುವೆನು ನೋಡೆಂದ ೧೪

ಮುನ್ನಿದ್ದರರುವರು ತೊಂಬತ್ತಮೂವರು
ನಿನ್ನೆ ಹೋದರು ನೀನು ಹೋಗೆ
ಭಿನ್ನ[1]ಗಾ[1]ಗದೆಯೆನ್ನ ಭಾಗ್ಯ ಬೇಡಣ್ಣ ನೀ
ನೆನ್ನ ನುಡಿಯ ಮನ್ನಿಸೆಂದ ೧೫

ಪುರುನಾಥನಾಣೆ ದೇವರ ಪಾದದಾಣೆ ಶ್ರೀ
ಗುರು ಹಂಸನಾಥನೆ ಸಾಕ್ಷಿ
ಇರೆನು ದೀಕ್ಷೆಗೆ ನನ್ನ ಕಳುಹಚಿತ್ತೈಸೆಂದು
ಚರಣಾಬ್ಜದೊಳು ಮಂಡೆಯಿಟ್ಟ ೧೬

ಕಂಬನಿ ಗುಳಗುಳನೊಕ್ಕವೇಳೇಳಣ್ಣ
ನೀಂ ಬಯಸಿದುದಾಗಲೆಂದ
ಇಂಬಿನೊಳಿದ್ದಾಗಲೆಂದೊಡಂಬಟ್ಟು ಪಾ
ದಾಂಬುಜಕೆತ್ತ ಹೆಮ್ಮಗನ ೧೭

ಆಳುತಿರ್ದನಣ್ಣನು ನಗುತ ಕೈಮುಗಿದವ
ಕಳಭ ಸಂಕಲೆ ಬಿಟ್ಟು ವನಕೆ
ತಳರ್ವಂತೆ ಸಂಗವ ತೊರೆದೆಯ್ದುತಿರ್ದನು
ದಳವೆಲ್ಲ ಬೆರಗಾಗಿ ನೋಡೆ ೧೮

ಆಕಟ ಕಷ್ಟವನೊಂದನೇನೆಂಬೆ ಕುಟಿಲನಾ
ಯಕ ಶರನಾಯಕನವರು
ಮಕರಾಂಕ ಮೊದಲು ತಮ್ಮೊಡೆಯನಿಗೊಡ್ಡಿದಾ
ಟಕೆ ನೋವ ತಾಳ್ದಿದ್ದರೊಳಗೆ ೧೯

ಒಡೆಯನಿಗನುಕೂಲವಾದರೀ ಸ್ಮರನು ನ
ಮ್ಮೊಡೆಯನು ಮೀರಿದಾಗಿದವನು
ಒಡೆಯನೆ ಯೆಂದಲ್ಪದೂರವ ಹೋಗಿ ಬೆಂ
ಗಡೆಯೊಳಿಂತೆಂದರು ನಿಂದು ೨೦

---

1 ಘಾ (ಖ)

ಸಿರಿಯ ಹೋಗಾಡಿ ಹೋಹರಸ ಕೇಳ್ಳೀನೆಮ್ಮ
ಭರತಚಕ್ರೇಶ್ವರಗೆರಗಿ
ಇರದಾದೆ ಹೋಗು ಹೋಗಿನ್ನು ಭಿಕ್ಷೆಗೆ ನೀನು
ತಿರಿವೊಡಾತನ ನಾಡೆ ಬೇಕು ೨೧

ಜಪಶಾಂತಿಯೊಳು ಹೋಗುತಿರ್ದನಾ ನುಡಿಗಿಷ್ಟು
ಕುಪಿತದಿ ತಿರುಗಿ ನೋಡಿದನು
ತಪಸಿಗೆಯ್ದುವಗೆ ಸ್ಮರಣೆ ಮುಖ್ಯವೆಂದು ನಿ
ರ್ಲಪಿತದಿ ನಡೆದನಾ ಮದನ ೨೨

ಜೋಲಿಯಿಲ್ಲದೆ ಬಂದು ಜಿನನ ಕಂಡಾತ್ಮಸ
ಖಾಳಿವೆರಸಿ ಯೋಗಿರೂಪ
ತಾಳಿದನಂಗಜನೆಂಬೆನು ಕೊಸರುವ
ವೇಳೆಯಲ್ಲಿರಲತ್ತಲಿತ್ತ ೨೩

ಮಂದಿಯ ಕಳುಹಿ ಕಣ್ಣೀರಿಕ್ಕುವಂಗಜ
ನಂದನರುಗಳ ಕೈವಿಡಿದು
ಕಂದಿದ ಮೊಗ ಕಣ್ಣೊಳೊಗುವ ಕೆಂಬನಿಯಿಂದ
ಮಂದಿರವೊಕ್ಕನಾ ಚಕ್ರಿ ೨೪

ಪೂಗೋಲ ದೀಕ್ಷೆಗೆಯ್ದಿದನೆಂಬ ನುಡಿ ಕಿವಿ
ದಾಗೆ ಯಶಸ್ವತೀದೇವಿ
ತೂಗುಮಂಚದೊಳಿರ್ದು ಮೂರ್ಛೆಹೋದಳು ಮೂರ್ಛೆ
ಯಾಗದೆ ಪೆತ್ತ ತಾಯ್ಗಳಿಗೆ ೨೫

ಚಿಕ್ಕಣ್ಣ ದೀಕ್ಷೆಗೆಯ್ದಿದನೆ ಹಾ ಹಾ ನನ್ನ
ಚಿಕ್ಕಾನೆ ಮದವೆದ್ದು ಹೋಯ್ತೆ
ಹೊಕ್ಕಡ್ಡಗಟ್ಟಿ ತಡೆವರಿಲ್ಲದಾದರೆ
ಅಕ್ಕಟಯೆಂದಳಲಿದಳು ೨೬

ಇರುಳಾದುದಷ್ಟಕಾ ಯಿರುಳೆಲ್ಲ ಶೋಕಜಾ
ಗರವಿದ್ದರುದಯವಾಯ್ತೊಡನೆ
ಇರುಳೆ ಝುಂಝಾನಿಲನೆಂಬ ನಂಬುಗೆವಂತ
ಸ್ಮರಪುರಕೆಯ್ದಿ ಹೇಳಿದನು ೨೭

ಕೇಳಲೊಡನೆ ಸುನಂದಾದೇವಿ ಮೂರ್ಛೆಯ
ತಾಳಿದಳರಸಿಯರೆದೆಗೆ
ಬಾಳ ಬೀಸಿದ ತೆರನಾಯ್ತು ಹಾಯೆಂದು ಮೂ
ರ್ಛಾಲಂಬವಡೆದೊರಗಿದರು ೨೮

ಎಚ್ಚತ್ತು ಜನನಿ ಏನೇನು ಝಂಝಾನಿಲ
ಪಚ್ಚೆವಿಲ್ಲಣ್ಣನೇನಾದ
ಹುಚ್ಚುಗೊಂಡಂತೆನ್ನ ಬಿಸುಟು ಹೋದನೆ ದೀಕ್ಷೆ
ಮೆಚ್ಚಾಯ್ತೆ ಹೋಗೆಂದಳಳುತ ೨೯

ಕಾಣ್ಬೆನೆಂದೆಯ್ದಿದನಣ್ಣನ ದೀಕ್ಷೆಗೆ
[1]ಪೂಣ್ಬ ವಿರಕ್ತಿಯೆಂ[1] ತಾಯ್ತೆ
ಜಾಣ್ಬಿಡೆ ನುಡಿವನಲ್ಲರಸಣ್ಣ ಹೇಳೆಂದು
ಗೋಣ್ಬಾತು ಕೇಳಿದಳಳುತ ೩೦

ಮತ್ತೆ ಮೂರ್ಛೆಗೆ ಸಲ್ವಳೆಚ್ಚರುವಳು ಬಟ್ಟ
ಮುತ್ತಿನಂತಿಳಿಯೆ ಕಣ್ಣೀರು
ಚಿತ್ತಜ ನನ್ನ ಕೊಂಪ್ಯೆ ಕಂದ ಹಾ ಹಾ ಗು
ಣೋತ್ತಮಯೆಂದಳಲಿದಳು ೩೧

ಮಕ್ಕಳ ನೆನೆಯದೆ ಪೆಂಡಿರ ನೋಡದೆ
ಲೆಕ್ಕಕೆ ತಾರದೆ ನನ್ನ
ಚಿಕ್ಕಪ್ರಾಯದೊಳಿಂತು ದೀಕ್ಷೆಗೆ ಲಂಘಿಸ
ತಕ್ಕುದೆ ನಿನಗೆ ಕಂದರ್ಪ ೩೨

ಜನವ ಮೋಹಿಪ ನಿನ್ನ ಸಿರಿಯೆತ್ತ ನೀನೆತ್ತ
ಮುನಿವೇಷವಡೆವುದಿದೆತ್ತ
ಕನಸ ಕಂಡಂತಾಯ್ತೆ ನಿನ್ನ ಸಂಪದವೆಂದು
ಜನನಿ ಮರುಗಿದಳಂಗಜನ ೩೩

ಪರವಶ ತಿಳಿದೆದ್ದು ಸ್ಮರನ ರಾಣಿಯರೈದೆ
ಜರಿವುತ ಮಳಲೇರಿಯಂತೆ
ಸುರಿವ ಕಂಬನಿಯಿಂದ ಹಲುಬಿದರೊಡನೆ ನ
ಲ್ಲರನಗಲ್ದಾರು ಸೈರಿಪರು ೩೪

---

[1]ಪೂಣ್ಬ ವಿರಕ್ತಿಗೆ (ಖ)

ನಲ್ಲ ಹಾ ಹಾ ನಮ್ಮ ಬಿಟ್ಟು ಹೋದೈ ಕಬ್ಬು
ವಿಲ್ಲ ಹಾ ಹಾ ನಮ್ಮ ತೊರೆದೈ
ಕೊಲ್ಲದೆ ಕೊಂದೆ ನೀನೆಮ್ಮನೆಂದಬಲೆಯ
ರೆಲ್ಲರು ಹಳವಳಿಸಿದರು ೩೫

ಅಂಗನೆಯರ ಕೂಟ ಸಾಕಾಯ್ತು ನಿನಗೆ ಮು
ಕ್ತ್ಯಂಗನೆಯಾಟ ಬೇಕಾಯ್ತು
ಸಂಗರವೆಂಬೊಂದು ನೆವದೋರಿ ವಿಧಿ ನಿನ್ನ
ಮುಂಗಡೆಗೊಯ್ದುದೆ ನೀರ ೩೬

ಅರಗಿಳಿಗಳಿರ ಬಾಣಾಂಕಿಗಳಿರ ಸಾಕಿ
ದೆರಳೆಗಳಿರ ಹಂಸಗಳಿರ
ಅರಲಂಬ ಪೋದ ಬಟ್ಟೆಗೆ ಪೋಪೆವಿನ್ನೆಮ್ಮ
ಸ್ಮರಿಸದೆ ಸುಖವಿರಿ ನೀವು ೩೭

ಲತೆಯೆ ನಂದನವೆ ತಂಗೊಳನೆ ತಾವರೆಯೆ ಮಾ
ರುತನೆ ಮತ್ತಾಳಿ ಕೇಳಿವ್ಮ
ಪತಿ ಪೋಪ ದೆಸೆಗೆ ಪೋಪೆವು ಸುಖವಿಹುದೆಂದು
ಸತಿಯರೆದ್ದರು ಗೃಹದಿಂದ ೩೮

ಬಂದು ತಮ್ಮತ್ತೆಯ ಕಂಡು ಕಾಲ್ಗೆರಗಿ ನ
ಮ್ಮೊಂದಾಗಿ ಮುನಿದು ನಿಮ್ಮಣುಗ
ಮುಂದಕೆಯ್ದಿದನು ನಾವೆಯ್ದಿ ತಿಳುಪಿ ಕರೆ
ತಂದಪೆವೆಂದರುಬ್ಬೆಯೊಳು ೩೯

ನಾನು ಬಪ್ಪೆನು ದೀಕ್ಷೆಗೆಲೆ ಹೆಣ್ಣುಗಳಿರಾ ಮ
ತ್ತೇನಿಲ್ಲಿ ಬಯಲಾಸೆಯೆನಗೆ
ಮಾನಿತಾರ್ಥವ ಭರತಣ್ಣಗಕ್ಕನಿಗೆ ಸಂ
ಧಾನಿಸಬೇಕೆಂದಳಾಕೆ ೪೦

ತಡವುಂಟು ನನಗದರಿಂದ ನೀವೆಯ್ದಿರೆಂ
ದೊಡಬಟ್ಟು ಮತ್ತವರವರ
ಒಡಹುಟ್ಟಿದವರು ಕೆಲಬರು ನಂಬುಗೆವಂತ
ರೊಡಗೂಡಿ ಬೀಳ್ಕೊಟ್ಟಳಾಕೆ ೪೧

ಸೊಸೆಯರ ಕಳುಹಿಸುವಾಗ ಸುಬಲರಾಜ
ವೆಸರಿನ ಮೂರು ವರುಷದ
ಹಸುಳೆ ಬಂದಯ್ಯನ ತೋರು ತೋರೆಂದು ಪೀ
ಡಿಸಿತು ಮನ್ಮಥನ ಮಾತೆಯನು ೪೨

ಇದ್ದಾಗ ತೊಡೆಯ ಮೇಲಿಟ್ಟುಕೊಂಡಂಗಜ
ಮುದ್ದಾಡುತಿಪ್ಪನಾ ಶಿಶುವ
ಗುದ್ದುವುದಜ್ಜಿಯ ಬಿದ್ದಳುವುದು ಕಾಡು
ತಿದ್ದುದು ಪಿತನ ತೋರೆಂದು ೪೩

ಏನೆಂಬೆ ಮಾರನ ಸತಿಯರಷ್ಟರೊಳು ವಿ
ಮಾನವನೇರಿ ದೂರದೊಳು
ಬಾನೆಡೆಯೊಳು ಪೋಗುತಿರೆ ಕಂಡು ಚಕ್ರಿಯ
ಸೇನೆಯೆಲ್ಲವು ಮರುಗಿದುದು ೪೪

ಶೋಕನಾದವ ಕೇಳಿ ಭರತೇಶ ಮನದಲ್ಲಿ
ವ್ಯಾಕುಲಬಟ್ಟು ಕೂಡೆನಗೆ
ಏಕೆ ಬಂದಿತು ಚಕ್ರವೀ ರಾಜ್ಯಪದವಿ ಮ
ಹಾ ಕಷ್ಟ ಹಾ ಹಾ ಸುಡೆಂದ ೪೫

ಫಲವಾವುದೈಸಿರಿ ಬಂದರೆ ತನ್ನಾಳ್ವ
ಬಳಗ ಸಂತಸ ಮಾಡಬೇಡ
ಕುಲವ ಗೋಳಿಡಿಸುವ ಸಿರಿಯ ಸುಡೆಂದು ಭೂ
ತಳಪತಿ ನೊಂದ ತನ್ನೊಳಗೆ ೪೬

ಆವಾವ ದುಃಖ ಬಂದರು ಹಂಸನಾಥನ
ಭಾವನೆ ಬರಿಗೈವುದೆಂದು
ನೋವನೊತ್ತರಿಸಿ ಕಣ್ಮುಚ್ಚಿ ತನ್ನಾತ್ಮನ
ಭೂವರನೀಕ್ಷಿಸುತಿರ್ದ ೪೭

ಗುರುಹಂಸನಾಥನೆ ಬಲ್ಲನಾ ನೃಪನ ಚಿ
ತ್ಪರಿಣತಿಯನು ಮುನ್ನ ಕವಿದ
ಉರುಚಿಂತೆಯೆತ್ತ ಹೋದುದೊ ಹತ್ತುಸಾವಿರ
ವರುಷದ ಯೋಗಿಯಂತಿರ್ದ ೪೮

ಅಣುಗರ ಜನನಿಯು ಪೆಂಡಿರ ಪಡೆಯ ಧಾ
ರಿಣಿಯ ತನ್ನೊಡಲನು ಮರೆದ
ಅಣುಮಾತ್ರವಾದರು ಪರಚಿಂತೆಯಿಲ್ಲದಾ
ಗುಣರತ್ನನಿದ್ದನಾತ್ಮದೊಳು ೪೯

ಅಳುತ ಕರೆವುತ ತನ್ನರಮನೆಯವರೆಲ್ಲ
ಮುಳುಗಿದ್ದರಧಿಕ ಶೋಕದೊಳು
ಒಲೆಯದಲ್ಲಾಡದೆ ಪರಮಾತ್ಮಸುಖದಲ್ಲಿ
ಮುಳುಗಿರ್ದನಾ ರಾಜಯೋಗಿ ೫೦

ಕೆಲರುಪವಾಸವ ಕೆಲರೇಕಭುಕ್ತವ
ಕೆಲರು ಫಲಹಾರವಿಡಿದು
ಒಳಗೆ ಹೆಂಗಳು ಹೊರಗಖಿಲವಾಹಿನಿಯಿರೆ
ಕಳೆದುದಿಂತುಟು ಮೂರು ದಿವಸ ೫೧

ಸ್ವದಳವೆರಸಿ ಚಕ್ರಿ ತಪವಿದ್ದ ಸಾಮರ್ಥ್ಯ
ತ್ರಿದಶಲೋಕವ ನಡುಗಿಸಿತು
ಅದ ಕೇಳಿ ಮರುಗಿ ಮಗನ ಕಾಣ್ಬೆನೆಂದು ಬೇ
ಗದೊಳಿದ್ದಳಾ ಚಿಕ್ಕ ತಾಯಿ ೫೨

ಕಿರಿಯಮ್ಮನೆಯ್ತಂದಳೆನೆ ಹಂಸನಾಥಗ
ಕ್ಕರು ಮಿಗೆ ನಮಿಸಿ ಕಣ್ದೆರೆದು
ಒರೆವ ಕಂಬನಿಗೂಡಿ ದಿಗಿಲನೆದ್ದಡಿಗಳಿ
ಗೆರಗಿದನಾ ಸಾರ್ವಭೌಮ ೫೩

ಅವರ ಪೂರ್ವಪ್ರಾಪ್ತಿಯವರ ಕೊಂಡೊಯ್ದುದು
ನವಗಿಷ್ಟು ನೋವಾಯ್ತು ಮೊದಲು
ದಿವಸ ಮೂರರ ಮೇಲೆ ತಂಪಾಯ್ತು ಮಗನೆ ಶೋ
ಕವ ಮರೆಯೆಂದಳಾ ಜನನಿ ೫೪

ಚಿಂತೆಯು ಮುಪ್ಪು ಸಂತೋಷ ಜವ್ವನವೆಂಬ
ಸಂತಾನ ವಾಕ್ಯವುಂಟಣ್ಣ
ಚಿಂತಿಸಬೇಡ ನನ್ನಾಣೆಯೆಂದಣುಗನ
ಸಂತಾಪನಾರೆ ನುಡಿದಳು ೫೫

ಹಸನಾಯ್ತು ಭೂವರನೆದೆಯಾಗ ಕುವರರ
ವಿಸರವೆರಗಿದುದಂಬಿಕೆಗೆ
ಸೊಸೆಯರಳುತ ಬಂದು ನಮಿಸಲಾ ಸೊಸೆಯರ
[1]ಹಸನಾಗಿ ಹರಸಿದಳಾಗ[1] ೫೬

ಚಿಕ್ಕಮ್ಮಗಾ ರಾಯ ಕೈಲಾಗುಗೊಟ್ಟೊಳ
ಹೊಕ್ಕು ದೊಡ್ಡಮ್ಮನ ಕಂಡ
ಅಕ್ಕ ತಂಗಿಯರಿಷ್ಟು ನೊಂದು ಮತ್ತಾ ನೋವ
ನಿಕ್ಕಿ ಸ್ವೈರಣೆವೆತ್ತರೊಡನೆ ೫೭

ಜಳಕ ದೇವಾರ್ಚನೆಗೈದು ಮತ್ತೆಲ್ಲರು
ಜ್ವಲದಿ ಪಾರಣೆಯ ಮಾಡಿದರು
ಬಲವೆಲ್ಲ ಪಾರಣೆ ಮಾಡಿತು ಸರ್ವರು
ಮ್ಮಳ ಹೋಯ್ತು ಕೂಡೆ ತಂಪಾಯ್ತು ೫೮

ಇತ್ತಲೀ ಕಟಕ ಶಾಂತಿಯೊಳಿದ್ದುದಾ ಹೆಂಗ
ಳತ್ತಲಾದೀಶನ ಕಂಡು
ಉತ್ತಮದೀಕ್ಷೆಯ ತಾಳ್ದರೆಂಬಲ್ಲಿಗೆ
ಚಿತ್ತಜನಿರ್ವೇಗ ಸಂಧಿ ೫೯

[1] ಕುಶಲ್ಲ ಹರಸಿದಳೋಜೆಯೊಳು [1] (ಸೊಸೆಯರು ಬಂದೆರಗಿದರು)

# ನಗರೀಪ್ರವೇಶ ಸಂಧಿ

ಕಿರಿಯಮ್ಮ ದೀಕ್ಷೆಗೆಯ್ದುವೆನನೆ ಭರತೇಶ
ನರುಗೋಲನಾತ್ಮಜರಿನ್ನು
ನೆರೆವನ್ನ ದೀಕ್ಷೆಗೆಳಸಲಾಗದೆಂದು ಕಾ
ಲ್ಗೆರಗಿ ನಿಲ್ಲಿಸಿದನಾ ಚಕ್ರಿ ೧

ಕರೆದು ಮಹಾಬಲರಾಜಗೆ ಪೌದನ
ಪುರದ ಪಟ್ಟವ ಕಟ್ಟಿ ಕೂಡೆ
ವರಮಂತ್ರಿ ದಳಪತಿ ಬಲಕುಡತೊಡಲಿತ್ತು
ದೊರೆ ಪೊಕ್ಕನೂಡನರಮನೆಯ ೨

ಚಿಕ್ಕಮ್ಮಗಾ ಕಾರ್ಯವನು ಪೇಳಲಾ ಸ್ಥಿತಿ
ಚೊಕ್ಕವೆಂದೊಪ್ಪಿದಳಾಕೆ
ಮಕ್ಕಳು ಮೂವರಿಗುಡಲಿತ್ತು ತೊಡಲಿತ್ತು
ತಕ್ಕೈಸಿಕೊಂಡಿಂತು ನುಡಿದ ೩

ಅಮ್ಮಾಜಿಯಾರ್ಯಿಕೆಗಿದ್ದಪಳಣ್ಣ ನಾ
ನೊಮ್ಮೊಮ್ಮೆ ಹಿತವರನಟ್ಟಿ
ನಿಮ್ಮನಾರೈಕೆ ಮಾಡುವೆನು ನಿಮ್ಮೂರಲ್ಲಿ
ಸುಮ್ಮಾನದೊಳಗಿಹುದೆಂದ ೪

ಅಂಗಜಸುತರತ್ತಲೆಯ್ದಿದರಿತ್ತ ಷ
ಡಂಗಭೇರಿಗಳು ಸೂಳೈಸೆ
ಸಂಗರಮಲ್ಲನೆದ್ದನು ತನ್ನ ಪುರಕೆ ಷ
ಡಂಗವಾಹಿನಿಯ ಲಗ್ಗೆಯೊಳು ೫

ಸಾಕೇತಪುರದ ಮಹಾಪ್ರಜೆಗೂಡಿ ಪ
ತಾಕೆ ಪಲ್ಲವ ಛತ್ರಗೂಡಿ
ಮಾಕಾಳನಾಯಕನಿದಿರ್ವಂದು ಕಂಡಾಗ
ಭೂಕಾಂತನಿದಿರೊಳಿಂತೆಂದ ೬

ಪುರವ ಬಿಟ್ಟಿರುವತ್ತು ಸಾವಿರ ವರುಷವು
ಪುರಜನಗಳು ನಾವು ನಿನ್ನ
ಸ್ಮರಿಸಿದ ತಪಸಿಂದು ಸಿದ್ಧಿಯಾಯ್ತೆನೆ ರಾಯ
ಕರುಣದಿ ನೋಡಿಪ್ಪು ನಕ್ಕ ೭

ದೇವಕೊತ್ತಿನೊಳಿರ್ದ ಸೇನೆಗೆ ದಂಡಾದ
ನೋವಿಲ್ಲ ದೇವರನಗಲಿ
ನಾವು ಧಾವತಿಬಟ್ಟೆವೆಂದರು ಪ್ರಜೆಗಳು
ಭೂವರ ನಗುತ ನೋಡಿದನು ೮

ಅಲ್ಲಲ್ಲಿ ಪುರಜನ ಪುರಸತಿಯರು ರಾಜ
ಮಲ್ಲ ಬೀದಿಯೊಳೆಯ್ದುವಾಗ
ಇಲ್ಲದ ಬಡವಗೆ ಬಲುರಾಜ್ಯ ಬಂದಂತೆ
ಸಲ್ಲೀಲೆವೆತ್ತು ನೋಡಿದರು ೯

ಅಂದು ನಮ್ಮೊಡೆಯನೊಂದಾಸೆಯೊಳ್ಪೋದ ನೋ
ಡಿಂದು ಕುಮಾರರಾನೆಗಳ
ಸಂದಣಿಯೊಳು ಬಂದದೊಂದು ಭಾಗ್ಯವೆಯೆಂದು
ಮಂದಿ ನೋಡಿತು ನಲವೇರಿ ೧೦

ಬಂದನೊ ಧರೆಯೊಳುಳ್ಳಧಿಕವನಾಯ್ದಾಯ್ದು
ತಂದನೊ ರಾಯರ ದೇವ
ಇಂದಯೋಧ್ಯಾಪುರದೈಸಿರಿ ದ್ವಿಗುಣವಾ
ಯ್ತೆಂದುಲಿದುದು ಜನಸ್ತೋಮ ೧೧

ನುಡಿವ ಪ್ರಜೆಯ ನುಡಿಗೇಳುತ ನೋಡುತ
ಸಡಗರಕೆದೆಯುಬ್ಬಿ ನಗುತ
ಅಡಿಗಡಿಗವರಿಗಲ್ಲಲ್ಲಿ ಮನ್ನಣೆಗಳ
ಕೊಡಿಸುತೆಯ್ತಂದನಾ ಸುಮುಖ ೧೨

ರಾಜಗೃಹದ ಮುಂದೆ ನಿಂದು ಸರ್ವರನು ವಿ
ಭ್ರಾಜಿತವಿನಯದಿ ಕಳುಹಿ
ರಾಜಶಿರೋಮಣಿ ಜಯ ಜಯ ಚಾಂಗೆನ
ಲೋಜೆಯಿಂದಿಳಿದನಾನೆಯನು ೧೩

ತನುಜರುವೆರಸೊಳವೊಕ್ಕು ರಾಣಿಯರು ಚಿ
ಲ್ವಿನೊಳು ನೀರಾಜನವೆಸಗೆ
ಜನಪ ನೋಡುತ ಹಂಸನಾಥನ ನೆನದರ
ಮನೆವೊಕ್ಕನಧಿಕಲೀಲೆಯೊಳು ೧೪

ಮದುವೆಯ ಮನಯಂತೆ ಪುರದಲ್ಲಿ ಸಂದಣಿ
ಕೆದರಿದುದೆಲ್ಲಿ ನೋಡಿದರು
ಅದನೇನ ಪೇಳ್ವೆ ಷಟ್ಖಂಡದ ಸಿರಿಯೆಲ್ಲ
ಪುದುಗಿದ್ದುದೊಂದೆ ತಾಣದೊಳು ೧೫

ಅರಸಿಯರೆಲ್ಲರ ಬಳಸಿನೊಳಗೆ ಪಟ್ಟ
ದರಸಿ ಸೋಂಕಿರಲೊಲ್ದು ಕುಳಿತು
ಧರಣಿಯ ಸಂತಸವಿಟ್ಟಂದವ ನುಡಿದು ಸಿಂ
ಗರದೊಳಿದ್ದನು ಭರತೇಶ ೧೬

# ಶ್ರೇಣ್ಯಾರೋಹ ಸಂಧಿ

ಶತ್ರುಗಳಿಲ್ಲವೆಂಬಂತೆ ಷಟ್ಖಂಡದ
ಧಾತ್ರೀಪಾಲರ ಗೆಲ್ದು ಚಕ್ರಿ
ಮಿತ್ರಭಾವದೊಳಾಳುತಿರ್ದನುರ್ವಿಯನೇಕ
ಛತ್ರದೊಳೇನ ಬಣ್ಣಿಪೆನು ೧

ನೆರೆದ ಪೆಣ್ಗಂಡು ಮಕ್ಕಳ ಮದುವೆಯ ಮಾಡು
ತುರೆ ಹಸುಳೆಗಳ ಮುದ್ದಿಸುತ
ನಿರಿಗುರುಳಬಲೆಯರೊಳು ಲೀಲೆಮಾಡುತ
ಕ್ಕರಿನೊಳಿರ್ದನು ಮಹಾ ಸುಕೃತಿ ೨

ಮಸಗಿ ದಿನಂಪ್ರತಿಯೊಳು ತೋರ್ಪ ಹೊಸಪರಿ
ಯೊಸಗೆಯೊಳಾಟ ಪಾಟದೊಳು
ಅಸಮಪುಣ್ಯದ ಫಲಪಾಕವನುಂಡು ತೀ
ರಿಸುತಿರ್ದನಾತ್ಮಸಾಕ್ಷಿಯೊಳು ೩

ಆವಾಗ ಲೀಲೆಯೊಳಿರೆ ತನ್ನ ಸೋದರ
ಮಾವಂದಿರೆನಿಪ ಯೋಗಿಗಳು
ಕೈವಲ್ಯಬೋಧವಡೆಧ ಸುದ್ದಿ ಪರಿದುದು
ಭೂವರ ಕೇಳ್ದರ್ತಿವಟ್ಟ ೪

ಭುಜಬಲಿಯೋಗೀಂದ್ರನೆಂತಿರ್ದನೆಂದನು
ರಜತಗಿರಿಯ ಬಿಟ್ಟು ಬೇರೆ
ಗಜವಿಪಿನದೊಳಿರ್ದನಾತನ ತಪದ ಬ
ಲ್ಬುಜವ ಚಿತ್ರೈಸೆಂದರವರು ೫

ಮುಚ್ಚಿದ ಕಣ್ಣು ಮುಚ್ಚಿದ ತುಟಿ ಬಿಟ್ಟ ತೋ
ಳೊಚ್ಚತಾಗಿರೆ ನಡೆವುಸುರು
ಸಚ್ಚಿದಾತ್ಮನ ನೋಡುತ್ತೈದಾನೆ ಲೋಕವೆ
ಲ್ಲಚ್ಚರಿವಟ್ಟು ನೋಡುತಿದೆ ೬

ಹುತ್ತವೆದ್ದುವು ಬಳ್ಳಿ ಮೈಗೆ ಹಬ್ಬಿದುವು ಹಾ
ವತ್ತಿತ್ತ ಹರಿದುವಂಗದೊಳು
ಚಿತ್ತ ಕಂಪಿಸದೆ ನಿಂದಿಹನ ಯೋಗದ ಕಲ್ಲ
ಪುತ್ತಳಿಯಂತೆ ಯೋಗೀಂದ್ರ ೭

ಇನಿತುಗ್ರವೇಕೆ ಸ್ವಾಮಿಯ ಕೇಳ್ವೆನೆಂದು ಭೋಂ
ಕನೆ ಪೊರಮಟ್ಟನಾ ಚಕ್ರಿ
ಘನಮಾರ್ಗವಿಡಿದು ಕೈಲಾಸಾದ್ರಿಗೆಯ್ತಂದು
ಜನಕಗೆರಗಿದನರ್ತಿಯೊಳು ೮

ಸ್ತುತಿ ಮಾಡಿ ಮತ್ತೆಲೆ ಸರ್ವಜ್ಞ ಭುಜಬಲ
ಯತಿಗುಗ್ರತಪವಿನಿತೇಕೆ
ಅತಿಘೋರ ತಪಸಾಗಿ ಘನಬೋಧವೇಕೆ ಶೋ
ಭಿತವಾಗದೆಂದನಯ್ಯನೊಳು ೯

ತಪಸುಗ್ರವಾದರೇನೊಳಗೆ ಕಷಾಯಗ
ಳುಪಶಮ ಬೇಕೆಲೆ ಭವ್ಯ
ಚಪಲಚಿತ್ತವ ಕೊಡಬೇಕಾತ್ಮಕಲೆಯೊಳೆಂ
ದುಪದೇಶಗೈದನಾ ಸ್ವಾಮಿ ೧೦

ಹೊರಗೆ ಸರ್ವವ ಬಿಡಬಹುದು ಚಿತ್ತದೊಳಿದ್ದ
ಕರೆಯನೊಂದನು ಬಿಡಲರಿದು
ಅರುವೆಯ ಬಿಸುಟರೆ ತಪಸಿಯೆ ಹೆರೆ ಬಿಟ್ಟ
[1]ರರೆಗೋಲೆ[1] ವಿಷ ಹೋಯ್ತೆ ಫಣಿಗೆ ೧೧

ಆ ಬುಜಬಲಿ ನಿನ್ನ ಬೀಳ್ಕೊಂಡು ಬಹಾಗ
ಶೋಭೆಯಿಲ್ಲದ ನುಡಿಗೇಳ್ದ
ಕ್ಷೋಭೆಯಾದುದು ಚಿತ್ತವದರಿಂದ ಘೋರ ತ
ಪೋಭಾರವಾಂತನ್ನೆ ಕೇಳು ೧೨

ನಿನ್ನ ಕೆಳೆಯರಿಬ್ಬರೆಮ್ಮರಸಿನ ರಾಜ್ಯ
ದನ್ನ ಪಾನವ ಬಿಟ್ಟು ಬೇರೆ
ಇನ್ನೆಲ್ಲಿ ತಪಿಸುವ್ಯೆ ಹೋಗೆಂದರದ ಕೇಳ್ದು
ಭಿನ್ನ ಮಾನಸನಾದನವನು ೧೩

---

[1] ತರಗೋಲ (ಘ) (ರ)

ಇವನ ಸೀಮೆಯೊಳನ್ನ ಪಾನವ ಕೊಂಬೆನೆ
ವಿವಿಧ ಕರ್ಮವ ಸುಟ್ಟು ಬೇಗ
ಶಿವನನೆಯ್ದುವೆನೆಂದು ನಿಂದನು ಧ್ಯಾನ ಸಂ
ಭವಿಸಿತಿಲ್ಲ ಗರ್ವದಿಂದ ೧೪

ಒಂದು ಸಂವತ್ಸರ ಮುಟ್ಟುಪವಾಸಾಗ್ನಿ
ಯಿಂದ ಕಷಾಯದಿ ನೊಂದ
ಇಂದು ನೀನೆಯ್ದಿ ವಂದಿಸೆ ಶಲ್ಯ ಬಿಡುವುದೊ
ಳ್ಪಿಂದಹುದುತ್ತಮ ಧ್ಯಾನ ೧೫

ಘಾತಿಕರ್ಮಗಳಿಂದು ಕೆಡುವುವು ಸುಜ್ಞಾನ
ಜ್ಯೋತಿ ಬಿಂಬಿಸುವುದಾ ಮುನಿಗೆ
ನೀ ತೆರಳೆನಲೊಸೆದೆರಗಿದನೆದ್ದನು
ಭೂತಳಪತಿ ತಪೋವನಕೆ ೧೬

ಕಂಡನು ಘೋರವಿಪಿನದಲ್ಲಿ ನಿಜಬಾಹು
ದಂಡವನಿಳುಹಿ ಕಣ್ಮುಚ್ಚಿ
ಕೆಂಡದಂದದ ಬಿಸಿಲೊಳು ನಿಂದ ಮುನಿಯನಾ
ಮಂಡಲೇಶನು ಚೋದ್ಯಪಟ್ಟ ೧೭

ಕಡುಬಿಸಿಲೊಳು ಹುತ್ತ ಬಿರಿದು ಕುಪ್ಪಳಿಸಿದ್ದು
ವೊಡನೆ ಮತ್ತೊಣಗಿದ ಲತೆಯ
ಕಡುಪಿಂದ ಬ್ರಾಹ್ಮಿಸೌಂದರಿಯರ ರೂಪಾಂತು
ಬಿಡಿಸುತಿದ್ದರು ಖಚರಿಯರು ೧೮

ಸುಜನಶೇಖರ ನೋಡುತೆಯ್ತಂದು ಪಾದವಾ
ರಿಜಗಳಿಗಿಟ್ಟು ಮಂಡೆಯನು
ಭುಜಬಲಿಯೋಗಿಶ್ವರಾಯ ನಮೋ ನಮೋ
ನಿಜರಾತ್ಮನೇ ನಮೋಸ್ತೆಂದ ೧೯

ಗುರುವೆ ನಿನ್ನಂತರಂಗದ ನೆಲೆಯನು ನಾನು
ಪುರುನಾಥನೊಳು ಕೇಳಿ ಬಂದೆ
ಧರೆ ನನ್ನದೆಂದು ನೆನೆವರೆ ಮಹಾತ್ಮ ಸ
ರ್ವರು ಮುನ್ನ ಪಿಡಿದಾಳ್ದುದಲ್ತೆ ೨೦

ಹಲಬರು ಮುನ್ನಾಳ್ದರಿಂದು ನಾನಾಳ್ವೆನಿ
ನ್ನೊಲಿದು ಮುಂದೆನಿಬರಾಳುವರೊ
ಬೆಲೆವೆಣ್ಣಿನಂತಿರ್ದ ಭೂಮಿಯ ನನ್ನದೆಂ
ದೆಲೆ ಸುಬೋಧಾತ್ಮ ಯೋಚಿಪರೆ ೨೧

ನೀನಿಳೆಯನು ತೃಣವೆಂದು ಬಿಸುಟು ಬಂದೆ
ನಾನಿದ ಬಿಡಲಾರದಾದೆ
ನೀನೀಗ ಗುರುವಾದೆ ಲಘುವಾದೆ ನಾನನ
ಮಾನ ಜಾರಿತು ಕೇಳ್ದು ಮುನಿಗೆ ೨೨

ಝೊಂಪಿಪ ಶಲ್ಯಭೂತವ ವಾಕ್ಯಮಂತ್ರದಿ
ತಾಂ ಪೊರಮಡಿಸೆ ಚಕ್ರೇಶ
ತಂಪಾಯ್ತು ಚಿತ್ತ ತಳ್ಳಂಕೆ ಜಾರಿತು ಧ್ಯಾನ
ಸಂಪತ್ತು ಫಲಿಸಿತಾ ಮುನಿಗೆ ೨೩

ಮೆಯ್ಯ ಬತ್ತಲೆ ಮಾಡಿ ಮನವ ಕತ್ತಲೆ ಮಾಡಿ
ಕೆಯ್ಯಿಕ್ಕಿ ನಿಂದನಾ ಮದನ
ಹುಯ್ಯಲನಾ ರಾಯ ಬಿಡಿದಸಿನೆಂಬಾಗ
ಸಯ್ಯಮವಾರದಿಬ್ಬರೊಳು ೨೪

ಭಾವಿತಾತ್ಮನ ನುಡಿಗೇಳಿದಷ್ಟಕೆ ಚಿತ್ತ
ದೋವರಿಯೊಳಮಬ್ಬು ಹೋಯ್ತು
ದೀವಿಗೆ ಹೊತ್ತಿಸಿದಂತಾತ್ಮರೂಪು ಪ್ರ
ಭಾವಿಸುತಿದ್ದುದಾ ಯತಿಗೆ ೨೫

ಭರತರಾಜೇಂದ್ರನಾನಂದಬಟ್ಟನು ಮನೋ
ಹರದಿ ಪೂಜಿಸಿದ ಕೀರ್ತಿಸಿದ
ನಿರುತ ಸಾಷ್ಟಾಂಗವೆರಗಿದನೆದ್ದೀಕ್ಷಿಸಿ
ಶಿರದೂಗಿ ಪೊಗಳ್ದನಾ ಜಿನನ ೨೬

ಸ್ವಾಮಿ ನನ್ನಿಂದುಪಸರ್ಗವಾದುದೆಯೆಂದು
ಭೂಮೀಶ ಬಿನ್ನವಿಸಿದನು
ಆ ಮಾತು ಬೇಡೆಲೆ ಭವ್ಯ ದುಷ್ಕರ್ಮಾಳಿ
ನೇಮಿಸಿತೆಂದನಾ ಸ್ವಾಮಿ ೨೭

ರಜತಶೈಲಕೆ ನಾವು ಗಮಿಸಬೇಕೆಲೆ ಭವ್ಯ
ನಿಜಪುರಿಗೆಯ್ದು ನೀನೆನಲು
ವಿಜಿತನೊಲ್ದೆರಗಿ ಬೀಳ್ಕೊಂಡನಾ ಜಿನ ಸುರ
ವ್ರಜಗೂಡಿ ತಳರ್ದನೋಜೆಯೊಳು ೨೮

ಜಯ ಜಯ ಸರ್ವಜ್ಞಯೆಂಬ ಸಂಭ್ರಮದಿ ಸ್ವಾ
ಮಿಯ ಗಂಧಕುಟಿಯತ್ತ ತೆರಳೆ
ನಿಯಮಿತ ಜನಗೂಡಿ ಕೌಶಲಿಗಿತ್ತ ಲೀ
ಲೆಯೊಳೆಯ್ದುತಿರ್ದನಾ ಚಕ್ರಿ ೨೯

ಜಿನಗಾದ ಸಿರಿಯಲ್ಲ ತನಗೆ ತಜ್ಜಿನಪದ
ಜನಿಸಿತೊಯೆಂಬ ಲೀಲೆಯೊಳು
ನನೆ ಕೊನೆವೋಗುತೆಯ್ತಂದು ಪಟ್ಟಣದ ಹೊ
ಕ್ಕನು ನಿವಾಸವ ಹೊಕ್ಕನೊಡನೆ ೩೦

ತಾರಾದ್ರಿಗೆಯ್ದಿದುದಾದಿಯಾಗಾದ ವಿ
ಚಾರವನೆಲ್ಲರಿಗರುಹಿ
ಭೂರಾಮನಿದ್ದನೆಂಬಲ್ಲಿಗೆ ಕ್ಷಪಕಶ್ರೇ
ಣ್ಯಾರೋಹಸಂಧಿ ಸುಗಂಧಿ ೩೧

# ಜನನೀ ವಿಯೋಗ ಸಂಧಿ

ಘಟನೆಯೊಳ್ತೆಲುಗ ಕನ್ನಡ ಹುರುಮುಂಜಿ ಸೊ
ರಟ ಗುಜ್ಜರಾದಿ ನಾಡಿನೊಳು
ರಟಸುತನಂತವೀರ್ಯಸ್ವಾಮಿಯುರುಗಂಧ
ಕುಟಿ ಬಂದುದಧಿಕ ಲೀಲೆಯೊಳು ೧

ಸುರಭೇರಿ ಮೊಳಗೆ ಸರ್ವರು ಜಯ ಜಯಯೆನೆ
ಧರೆಯಲ್ಲಿ ಪ್ರಭೆ ತುಂಬಿ ತುಳುಕೆ
ತರಣಿಮಂಡಳ ನಿಲುವೊಲು ಗಂಧಕುಟಿ ನಿಂದು
ದರರೆ ಬಾನದೊಳೂರ ಪೊರಗೆ ೨

ಒಸಗೆವೇಳ್ದರಿಗಂದುಚಿತವಿತ್ತು ಪಯಣಕ
ರ್ತಿಸುತರಮನೆಗೆಯ್ದಿ ನೃಪತಿ
ಉಸುರಲೆಲ್ಲರು ನಲಿದರು ತಾಯಿ ಸಂತೋಷ
ರಸದೊಳೋಲಾಡಿ ತೇಲಿದಳು ೩

ನಾ ಕಾಣ್ಬೆ ತಾ ಕಾಣ್ಬೆನೆಂದರು ನರ ಸುರಾ
ನೀಕವಿದ್ದೆಡೆಗೆ ರಾಣಿಯರ
ಏಕೆ ಕೊಂಡೊಯ್ವನಾ ಚಕ್ರಿಯೆಲ್ಲರ ಮೃದು
ವಾಕಿಂದ ತಿಳುಹಿ ನಿಲ್ಲಿಸಿದ ೪

ಶಿರದೊಳಗೊಂದು ಕಪ್ಪಿನ ಕುರುಳಿಲ್ಲೆನೆ
ನರೆತ ವಾರ್ಧಿಕೆಯಲ್ತೆ ನಾನು
ಅರುಹನ ಕಂಡರೇನಣ್ಣಾಯೆಂದೆನೆ ತಾಯ
ಹರುಷಕಾ ನೃಪನೊಡಂಬಟ್ಟ ೫

ಆನಂದಭೇರಿಯ ಹೊಯ್ಸಿ ತಾಯೊಡನೆಯ್ದಿ
ಸೂನುಗಳ್ವೆರಸಿ ಲೀಲೆಯೊಳು
ಮಾನವೇಶ್ವರ ಬಂದು ಗಂಧಕುಟಿಯ ಪೊಕ್ಕು
ನೇನೆಂಬೆನೆಲ್ಲರರ್ತಿಸಲು ೬

ಮಾತೆಯ ಮುಂದಿಟ್ಟು ಸುತರುವೆರಸಿ ಚಕ್ರಿ
ವೀತರಾಗಗೆ ಕಾಣ್ಕೆಯಿಕ್ಕಿ
ಘಾತಿಕರ್ಮೋದ್ಧೂತ ಜಯಯೆಂದು ಸಾಷ್ಟಾಂಗ
ರೀತಿಯೊಳ್ಪೊಡವಟ್ಟು ನಿಂದ ೭

ಜಿನಪೂಜೆಗೆಂದು ಮುನ್ನವೆ ಶುಚಿವೆತ್ತರ
ಮನೆಯಿಂದ ಬಂದಿದ್ದರಲ್ತೆ
ಅನುಪಮಪೂಜೆಗೈದರು ವಾದ್ಯಕೋಟಿ ಭೋ
ರೆನೆ ದಶದಿಕ್ಕು ಬಿಮ್ಮೆನಲು ೮

ಓರಂತೆ ಜನನಿ ಪೂಜಿಸುವಳದಕೆ ಪರಿ
ಚಾರಕನಾದನಾ ಚಕ್ರಿ
ಆರು ಬಣ್ಣಿಸಬಲ್ಲರಷ್ಟವಿಧಾರ್ಚನೆ
ಮೇರುವಾಯ್ತುರುಹನ ಮುಂದೆ ೯

ವಾರಿ ಗಂಧಾಕ್ಷತೆ ಪುಷ್ಪ ನೈವೇದ್ಯದಿಂ
ದಾರತಿಯಿಂ ಧೂಪ ಫಲದಿ
ಆ ರಾಜಮಾತೆ ಪೂಜಿಸಿದಳು ದಿವಿಜ ನ
ರೋರಗತತಿ ಪೊರೆಯಿಡಲು ೧೦

ಕಡೆಗರ್ಘ್ಯ ಶಾಂತಿಧಾರೆಯಮಾಡಿ ಮಿಸುನಿಪೂ
ಬಿಡುರನ್ನಗಳ ವೃಷ್ಟಿಮಾಡೆ
ತುಡುಕಿ ಮೇಲಮರರು ಪೂಮಳೆಗರೆದರು
ಗ್ಗಡವಾಯ್ತು ಜಯ ಜಯ ಘೋಷ ೧೧

ದೇವನ ಬಲಗೊಂಡು ಮುನಿಗಳಿಗೆರಗಿ ಮ
ಹಾ ವಿಭು ನಿಂದನಿಂಬರಿದು
ದೇವ ಗುರುಗಳ ವಂದಿಸಿ ತಾಯಿ ಪೊಕ್ಕಳು
ತೀವಿದಜ್ಜಿಯರ ಗೋಷ್ಠಿಯನು ೧೨

ಅಜ್ಜಿಕೆಗಳಿಗಾಕೆ ನಮಿಸಿದಳವರು ನೀ
ನಜ್ಜಿಕೆಯಲ್ತೆ ಬಾರೆನುತ
ಸಜ್ಜನಾರ್ಚಿತೆಯ ವ್ಯೆದಡವಿ ಮನ್ನಿಸಲೊಂದು
ಕಜ್ಜ ತೋರಿತು ದೇವಿಗೊಳಗೆ ೧೩

ಇವರಂತೆ ನಾನಪವರ್ಗವ ಗಳಿಸದೆ
ಭವನದೊಳಿಹುದಾವ ರೀತಿ
ನೆವದಿಂದ ಕಂಡೆನೀ ಸಭೆಯು ನಿನ್ನಾತ್ಮಕಾ
ರ್ಯವ ಮಾಳ್ಪೆನೆಂದೆಣಿಸಿದಳು ೧೪

ಮುನಿಗೋಷ್ಠಿಯೊಡನೆಯ್ದಿ ಪುತ್ರನೊಡನೆ ತನ್ನ
ಮನದೊಳಿದ್ದುದ ಪೇಳ್ದಳಾಕೆ
ಜಿನಸಿದ್ಧ ದೇವರಿಂತುಟು ನಿರೂಪಿಸಲಾಗ
ದೆನುತ ಕಾಲ್ಗೆರಗಿದನವನು ೧೫

ಕಂಡೆನು ಕಣ್ತುಂಬಿ ನಿನ್ನ ಸಂಪದವನ
ಖಂಡಿತೋತ್ಸಾಹದೊಳಿರ್ದೆ
ಮಂಡೆ ಬೆಳ್ಪಾದಮೇಲಿನ್ನು ತಪಸು ಮಾಳ್ಪೆ
ಗಂಡುಮಗನೆ ಕಳುಹೆನ್ನ ೧೬

ನ್ಯಾಯದೊಳಾತ್ಮಕಾರ್ಯವ ಮಾಳ್ಪೆನೆನಲಂತ
ರಾಯವ ಮಾಳ್ಪರೆ ನೀನು
ತಾಯಾರು ನೀನಾರು ಸುಮ್ಮನಿರೆಂದು ಸ
ಹಾಯರಾದರು ತಪೋಧನರು ೧೭

ನೆನೆದಾಗ ಬಹುದೆ ವಿರಕ್ತಿ ನೀನೊಪ್ಪೆಂದ
ಜನನಿಯ ಸುಮ್ಮನೆ ನೋಳ್ಪ
ಜನಪನ ಬಗೆಯರಿದಾ ಮುನಿಗಳು ಕೂಡೆ
ಜಿನನೊತ್ತಿಗೊಯ್ದರಾಕೆಯನು ೧೮

ಅರಸೆ ನಿನ್ನನುಮತವೆಯೆನೆ ನುಡಿಯದೆ
ಭರತೇಶ ಮೊಗಸನ್ನೆಗೊಟ್ಟ
ಅರುಹಗೊರೆದು ದೀಕ್ಷೆಗೊಡಿಪಿದರಾಕೆಗೆ
ಗುರುಗಳಿಂದಾಗದುದೇನು ೧೯

ದೇವದುಂಧುಭಿ ಮೊಗಳಲು ದೇವಗಾನವ
ದೇವಗಾಯಕಿಯರು ಪಾಡೆ
ದೇವಾಂಗವಸ್ತ್ರದ ತೆರೆವಿಡಿಯಲು ಜಿನ
ದೇವ ದೀಕ್ಷೆಯನಿತ್ತನೊಡನೆ ೨೦

ತನು ಮೊದಲಾದುವೆಲ್ಲವು ಪರವಸ್ತು ಹಂ
ಸನೆ ನಿನ್ನ ವಸ್ತು ನಂಬೆಂದು
ನೆನಹೆಲ್ಲವಳಿದೊಂದೆ ವಸ್ತುವ ನೋಡೆಂದು
ಜಿನನುಪದೇಶ ಮಾಡಿದನು ೨೧

ಸುರ ಮರ್ತ್ಯ ಭುಜಗರಾ ನವ್ಯದೀಕ್ಷಾಂಗಿಗಾ
ದರದಿಂದ ವಿನತಮಾಡಿದರು
ಸರಿಯಾಯ್ತೆ ಇಂದಿಗೆ ತಾಯಾಸೆಯೆನುತ ಪು
ತ್ರರುಗೂಡಿ ಮಣಿದನಾ ನೃಪತಿ ೨೨

ಬಿಸುಟ ಕುರುಳ್ತೊಡಿಗೆಯ ಸಗ್ಗವೆಂಗಳೊ
ಯ್ದು ಸೆದಬ್ಧಿಯೊಳು ಬಿಟ್ಟರತ್ತ
ವಸುಧೇಂದ್ರ ಜಿನಗೆ ವಂದಿಸಿ ಮುನಿಗಳಿಗೆ ವಂ
ದಿಸಿ ಪುರಕೆಯ್ದಿದನತ್ತ ೨೩

ಅತ್ತ ದೀಕ್ಷೆಯನಾಂತಳೆನೆ ಕೇಳ್ದು ಸೊಸೆಯರು
ಚಿತ್ತದಿ ಹೆಮ್ಮೈಸಿ ಕೆಡೆದು
ಎತ್ತಣ ತಳ್ಳಿ ಬಂದಿತೊ ಗಂಧಕುಟಿಯೆನು
ತತ್ತರು ಮನೆ ಮನೆಗಳಲಿ ೨೪

ಪೊರೆದ ಚಿಂತೆಯನೊತ್ತಿ ಮೂರು ದಿನದಮೇಲೆ
ಕರುಮಾಡದೊಳು ರಾಯನಿರಲು
ಅರಳಂಬೊ ತಾರೆಯೊ ಪಕ್ಷಿಯೊಯೆನೆ ದೂರ
ಬರುತಿದ್ದುದೊಂದು ಬಾನದೊಳು ೨೫

ಮುಟ್ಟೆ ಸಾರ್ವಾಗ ಪಾರಿವಪಕ್ಕಿಯದು ಗಾಳಿ
ವಟ್ಟೆಯಿಂದಿಳಿದೊತ್ತಿಗೆಯ್ದೆ
ಕಟ್ಟಿದ್ದುದದರ ಕಂಠದೊಂದು ಕಾಗದ
ಬಿಟ್ಟು ನೋಡಿದನವನೀಶ ೨೬

ಶ್ರೀ ಸುನಂದಾಂಬಿಕೆ ಮಗಗರಸಣ್ಣಗೆ
ಸೇಸೆಯಿಟ್ಟಿರಿಪುವ ಕಾರ್ಯ
ಭಾಸುರ ಭುಜಬಲೀಶನ ಗಂಧಕುಟಿ ಸಾರ್ದು
ದೀ ಸಮಯದೊಳೆಮ್ಮ ಪುರಕೆ ೨೭

ಆಡಬಾರದು ದೊಡ್ಡ ಕಾರ್ಯವುಂಟೆತಿ ಜೋಲಿ
ಮಾಡದಿಂದೆ ನೀನು ಬಹುದು
ನಾಡಿದು ನಾಳೆಯೆಂದರೆ ನನ್ನ ಕಾಣ್ಬುದು
ಕೂಡದು ನಿನಗಿತಿ ಸ್ವಾಹಾ ೨೮

ಎಂದೋದಿ ಲಿಪಿಗೆ ಕೈಮುಗಿದು ದೀಕ್ಷೆಯ ತಾಳ್ವೆ
ನೆಂದೆಂಬ ಪರಿಯಿದೆಂದರಿದು
ಬಂದ ಪಕ್ಕಿಗೆ ತಂಪು ಮಾಡಿ ವಿಮಾನದ
ಸಂದಣಿಯೊಳಗೆದ್ದನೊಡನೆ ೨೯

ಸ್ಮರಪುರಕೆಯ್ದಿ ನಂದನರಿದಿರ್ಗೊಳೆ ಮಾತೆ
ಯರಮನೆವೊಕ್ಕಮ್ಮಗೆರಗಿ
ಪರಕೆಯನಾಂತು ಸ್ವಸ್ಥದಿ ಕುಳಿತವನೀಶ
ಹರುಷವೇರಿಸಿದನಂಬಿಕೆಗೆ ೩೦

ಅಮ್ಮಾಜ ನಿಮ್ಮರ್ಥವೇನು ನಿಮ್ಮಕ್ಕನಂ
ತೆಮ್ಮ ಬಿಸಾಡುವ ಬಗೆಯೆ
ಮಮ್ಮಾ ನಾನೇನು ಕಷ್ಟನೊ ನಿಮಗೆಂದ ಚಿ
ಕ್ಕಮ್ಮನೊಡನೆ ಚಕ್ರಧರನು ೩೧

ಪುರದೊತ್ತಿಗದೆ ಗಂಧ ಕುಟಿ ಸಾರ್ದುದಾನತಿ
ಜರತಿಯಲ್ಲವೆ ಅಂತುಟಾಗಿ
ಭರತಣ್ಣ ನಿನ್ನ ಕೇಳದೆ ಪೋಗಲಂಜಿರ್ದೆ
ನಿರೆನಿನ್ನು ದೀಕ್ಷೆಗೆ ಕಳುಹು ೩೨

ದೇವರೊಪ್ಪಿದುದಾಗಲೆಂದನದಕೆ ಹರು
ಷಾವೇಶವೆದ್ದಪ್ಪಿಕೊಂಡು
ಈ ವೇಳೆಯೊಳೆ ಗಂಧಕುಟಿಗೆ ಹೋಗುವವೆಂದ
ಳಾವಾಸದಿಂದೆದ್ದರೊಡನೆ ೩೩

ಭೂಮಿ ಭೋರನೆ ಗಂಧಕುಟಿಗೆಯ್ದಿ ಭುಜಬಲಿ
ಸ್ವಾಮಿಗಂಬಿಕೆಗೂಡಿ ನಮಿಸಿ
ಆ ಮಾತೆಗಂದು ಪ್ರೇರಿಸಿದಂತೆ ಜಿನಪೂಜೆ
ಗೀ ಮಾತೆಗಿಂದು ಪ್ರೇರಿಸಿದ ೩೪

ನಾಕಿಗಳ್ಮ್ರಗನು ವಂದಿಸೆ ಪರಸುತ ಸುನಂ
ದಾ ಕಂತಿ ಸಾರ್ದಳಜ್ಜಿಗಳ
ಭೂಕಾಂತ ಜಿನಗೆ ತಾಪಸರಿಂಗೆರಗಿ ಸ್ವಲ್ಪ
ವ್ಯಾಕುಲಾಂಗದಿ ಮಗುಳಿದನು ೩೫

# ಬ್ರಾಹ್ಮಣನಾಮ ಸಂಧಿ

ಜನನಿಯರ್ತಪಸುದಾಳಿದಮೇಲೆ ಮತ್ತೊಂದು
ದಿನದೊಳಾ ಭರತರಾಜೇಂದ್ರ
ಅನುಭವದಧ್ಯಾತ್ಮರಸವನೋಲಗದೊಳಿಂ
ಪೆನೆ ಪೇಳ್ದನೇನ ಬಣ್ಣಿಪೆನು ೧

ದ್ವಿಜರು ಕ್ಷತ್ರಿಯರು ವೈಶ್ಯರು ಶೂದ್ರರೊಂದು ವಾ
ರಿಜವ ಸುತ್ತಿದ ಮದಾಳಿಗಳ
ವ್ರಜವೆನಲಿರೆ ಕಂಪುಗರೆವಬ್ಜದಂತೆ ಭೂ
ಭುಜನಾತ್ಮಹಿತವ ಸೂಸಿದನು ೨

ಸೋಹೆ ಸೋಹೆಯೊಳಾಡಿ ಹೋಗುತಿರ್ದನು ಕೇಳು
ತಾ ಹದನನು ಮಂತ್ರಿ ತಿಳಿದು
ಶ್ರೀಹಂಸಕಲೆಯನೆಲ್ಲರಿಗರಿವಂತುಟು
ದಾಹರಿಸೆಲೆ ಸ್ವಾಮಿಯೆಂದ ೩

ದೂರವಲ್ಲಾ ಹಂಸನೆಲ್ಲರ ಮೈಯು ಬೀ
ಡಾರದೊಳಿರುತಿಹನವನ
ಸಾರಿ ಮುಕ್ತಿಯನೆಯ್ದಲರಿಯದೆ ಜಗವೆಲ್ಲ
ಬಾರದ ಭವ ಬರುತಿಹುದು ೪

ಶುದ್ಧನು ಬುದ್ಧನು ನಿತ್ಯನು ಸತ್ಯನು
ಶುದ್ಧಭಾವಕೆ ತೋರ್ಪ ಸುಲಭ
ಸಿದ್ಧನು ಜಿನನು ಶಂಕರನು ನಿರಂಜನ
ಸಿದ್ಧನಲ್ಲದೆ ಪೆರನಲ್ಲ ೫

ಜ್ಯೋತಿಸ್ಸ್ವರೂಪನು ಜ್ಞಾನಸ್ವರೂಪನು
ವೀತರಾಗನು ನಿರಾಮಯನು
ಜಾತಿಜರಾಮೃತ್ಯುರಹಿತನು ಕರ್ಮಸಂ
ಘಾತದೊಳಿರ್ದು ನಿರ್ಮಲನು ೬

ತಾನನುಭವಿಸಬಹುದು ನುಡಿದನ್ಯರ್ಗೆ
ಮಾನಸದಟ್ಟಿಸಲರಿದು
ಏನೆನ್ನಬಹುದದು ಕೇಳ್ವರ್ಗೆ ಸಟೆಯಾಗಿ
ಧ್ಯಾನಿಸುವಗೆ ದಿಟವಹುದು ೭

ಕಾಡುವಿಂದ್ರಿಯಗಳ ಕಟ್ಟಿ ತೆಳ್ಳುಸುರಲ್ಪ
ವಾಡೆ ಚಿತ್ತವನೊತ್ತಿ ತರುಬಿ
ನೋಡುವ ಕಣ್ಗಳ ಮುಗಿದು ಸುಜ್ಞಾನದಿ
ನೋಡಲೊಳಗೆ ತೋರ್ಪನಾತ್ಮ ೮

ತನುವೆಂಬ ಕೊಡದಲ್ಲಿ ತೆಕ್ಕನೆ ತುಂಬಿದ
ತನಿವಾಲೊ ಅಲ್ಲ ಮೈಯೆಂಬ
ಮನೆತುಂಬಿ ಥಾಳಿಪ ತಂಪಿನ ದೀಪವೊ
ಎನಲಾತ್ಮ ತೋರ್ಪನೈ ಮಂತ್ರಿ ೯

ನುಡಿಗೊಳಗಾಗದ ವಸ್ತುವನಿಂತೆಂದು
ನುಡಿದು ತೋರುವೆನೆಂದರಹುದೆ
ಪೊಡವಿಗಪ್ರತಿಯಾದ ಚಿದ್ರೂಪನೊಂದಕೆ
ಪಡಿಯಿಟ್ಟು ತೋರುವುದೆಂತು ೧೦

ನೋಡಿಸಿಕೊಂಬನು ತಾನೆ ನೋಳ್ಪನು ತಾನೆ
ನೋಡುವ ದೃಷ್ಟಿಯು ತಾನೆ
ಆಡಲಚ್ಚರಿ ಮುಂದೆ ಧ್ಯಾನದ ಫಲದಿಂದ
ಕೂಡುವ ಮುಕ್ತಿಯು ತಾನೆ

ಒಳಗರಿದಾತ್ಮನ ನೋಳ್ಪುದು ಕರ್ಮವ
ತುಳಿವುದು ಬಲ್ಲವರೆಲ್ಲ
ತೊಳಲದೆ ಭವಮಾಲೆಯೊಳು ಮುಕ್ತಿಗೇರಿ ನಿ
ರ್ಮಲದಲ್ಲಿ ಬಾಳ್ವುದೈಯೆಂದ ೧೨

ಮೈಯೊಳಗಿದ್ದ ಶುದ್ಧಾತ್ಮನ ನೋಳ್ಪಂಗೆ
ಕೈಯೊಳಗಿಹುದು ಕೈವಲ್ಯ
ಸಯ್ಯಮಿ ತಾನೆ ಸಾಹಸಿ ತಾನೆ ಧ್ಯಾನದಿ
ಕೊಯ್ಯನೆ ಕರ್ಮದ ಬೇಳ್ಪ ೧೩

ಸಂತುಷ್ಟರಾದರೆಲ್ಲರು ಮಂತ್ರಿ ಮಿತ್ರರೋ
ರಂತೆ ಹೋಹುರೆ ಸ್ವಾಮಿಯೆಂದು
ಮುಂತೆ ನಿವಾಳಿಯಿಟ್ಟಡಿಗೆರಗಿದರು ಸಿ
ದ್ಧಾಂತ ಕೇಳ್ದಾರರ್ತಿವಡರು ೧೪

ಶೂದ್ರ ಕ್ಷತ್ರಿಯ ವೈಶ್ಯರುರೆ ನಿವಾಳಿಯನಿಟ್ಟು
ಚಿದ್ರೂಪರನಿಕಗೆರಗಲು
ಉದ್ರೇಕವೆತ್ತು ಸಂತಸಗೂಡಿ ವಿಪ್ರ ಸ
ಮುದ್ರವೆದ್ದುದು ಸೇಸೆವಿಡಿದು ೧೫

ಎಲ್ಲರ ಹರ್ಷವ ನೋಳ್ಪಾಗ ಭೂಸುರ
ರಲ್ಲಿದ್ದ ಹರುಷ ಹೆಚ್ಚಾಗೆ
ಅಲ್ಲಾಡಿ ಮಕುಟವನಧಿಕ ಜಾತಿಯಲಾಯೆಂ
ದುಲ್ಲಾಸವೆತ್ತನಾ ರಾಯ ೧೬

ಜಾತಿವಿಶಿಷ್ಟರಲ್ಲದೆ ಹಂಸನಾಥನ
ಖ್ಯಾತಿಗರ್ತಿಸರದೆಂತೆನಲು
ಶೀತಾಂಶು ಕಳೆಗೆ ಚಕೋರಗಳರ್ತಿಪಂ
ತಾತುರಿಸುವುವೆ ಕಾಗೆಗಳು ೧೭

ಬ್ರಹ್ಮವೆಂದರೆ ಹಂಸಾನುಭವಿ ತಾನೆ
ಬ್ರಾಹ್ಮಣನಿದು ಶಬ್ದ ಸಿದ್ಧ
ಬ್ರಹ್ಮವೇತ್ಯನುಭವತೀತಿಬ್ರಾಹ್ಮಣಯೆಂದು
ಬ್ರಾಹ್ಮಣವೆಸರಿತ್ತನವರ್ಗೆ ೧೮

# ಜಿನನಿವಾಸ ನಿರ್ಮಿತ ಸಂಧಿ

ದ್ವಿಜರಿಗೆ ಬ್ರಾಹ್ಮಣವೆಸರಿತ್ತ ದಿವಸದ
ರಜನಿಯ ಕಡೆಯೊಳಾ ಚಕ್ರಿ
ನಿಜಗೆಟ್ಟ ಷೋಡಶಸ್ವಪ್ನವ ಕಂಡನಂ
ಬುಜಸಖ ಮೂಡ ಮೂಡಿದನು ೧

ವಿನಯದಿಂದಾ ವಿಪ್ರಜನವ ಬರಿಸಿ ಕಂಡ
ಕನಸ ಪೇಳ್ದದರ ಫಲವನು
ಜಿನನಲ್ಲಿ ಕೇಳ್ವೆನೆಂದಾ ರಾಯ ಪಯಣವಾ
ದನು ಕೂಡೆ ಕೈಲಾಸಗಿರಿಗೆ ೨

ಅಂಬರಮಾರ್ಗದೊಳೆಯ್ತಂದು ಜಿನಸಭೆ
ಯೆಂಬೊಂದು ತಾವರೆಗೊಳನ
ತುಂಬಿಗಳೊಗುವಂತೆ ಪೊಕ್ಕು ಭೂಸುರನಿಕು
ರುಂಬವೆರಸಿ ಕಂಡ ಜಿನನ ೩

ಮುನಿಗಳಿಗೆರಗಿ ವಿಪ್ರರುಗೂಡಿ ಕುಳಿತಿಲೆ
ಜಿನ ನಿನ್ನ ಸೃಷ್ಟಿಯ ದ್ವಿಜರ
ನೆನಹ ಕಂಡಾನು ಬ್ರಾಹ್ಮಣವೆಸರಿತ್ತೆನೊ
ಪ್ಪೆನುತ ಕೈಮುಗಿದನಾ ಚಕ್ರಿ ೪

ಪರಮ ನೀನೆಂದು ಸೃಷ್ಟಿಸಿದೆ ನಿನ್ನಣುಗ ಭಾ
ಸುರನಾಮವಿತ್ತು ಮನ್ನಿಸಲು
ಕರಸೋತುದೆದೆ ನಾವು ಚಕ್ರಿಯ ಸೃಷ್ಟಿಯೆಂ
ದರು ಚಕ್ರಿ ಹೋ ಹೋ ಬೇಡೆನಲು ೫

ಇಲ್ಲಿನಲೇಕೊಪ್ಪ ಭವ್ಯವಿಪ್ರರಿಗೆ ನಿ
ನ್ನಲ್ಲಿ ಮಹಾಪ್ರೀತಿಯಿವರ
ಸೊಲ್ಲಿಂದು ಬಿನದವಾಗಿಹುದು ಕಾಲಾಂತರ
ದಲ್ಲಿ ನೆರೆವುದೆಂದನರುಹ ೬

ನಿಲಲಿ ಸಾಕಾ ಮಾತು ಹದಿನಾರು ಕನಸಿನ
ಫಲವ ನಿರೂಪಿಸೆಂದೊಡನೆ
ತಲೆವಣಿದಾ ರಾಯ ನುಡಿವುತಿರ್ದನು ಸ್ವಾಮಿ
ತಿಳುಹಿದನೇನ ಬಣ್ಣಿಪೆನು[1] ೭

ಪ್ರಳಯವಹುದು ಮತ್ತೆ ಪ್ರಳಯದ ಮುಂದೆಲ್ಲ
ಮೊಳೆವುವು ಧರ್ಮ ಕರ್ಮಗಳು
ಬೆಳೆದು ಮತ್ತಂತ್ಯದೊಳ್ಕೆಡುತ ಕೂಗಾಡುತ
ಸುಳಿವುದೀಪರಿಯೆಂದನಭವ ೮

ದುಸ್ವಪ್ನ ಮುಂದಿನ ಜನಕ್ಕೈಸೆ ನನಗಿಂದು
ಸುಸ್ವಪ್ನ ನಿನ್ನ ಕಂಡಾಗ
ಅಸ್ವಪ್ನಪತಿವಂದ್ಯ ಜಯ ಜಯ ಪುರೆಯೆಂದು
ಸುಸ್ವರಗೈದನಾ ರಾಯ ೯

ಇನ್ನೊಂದು ಬಯಕೆಯುಂಟೆಂದರುಹನ ಮುಂದೆ
ಮುನ್ನಹ ಜಿನನಿವಾಸಗಳ
ನಿನ್ನದ್ರಿಯೊಳು ರಚಿಸುವೆನೊಪ್ಪು ಸ್ವಾಮಿ ತು
ಭ್ಯನ್ನವೋಯೆನುತೆದ್ದು ನಿಂದ ೧೦

ಮೇಲಿದ್ದ ಜಿನಸಭೆಯಿಂದಿಳಿದಡಿಯಣ
ಶೈಲದೊಳ್ನಿಂದು ರಾಜೇಂದ್ರ
ಲಾಲಿತಜಿನಗೃಹಗಳನಿಲ್ಲಿ ರಚಿಸೆಂದು
ಸಾಲುದೋರಿದ ಭದ್ರಮುಖಗೆ ೧೧

ತತ್ತರ ಬೇಡೊಯ್ಯನೊಳ್ಪಾಗಿ ನಿರ್ಮಿಸೆ
ಪ್ಪತ್ತೆರಡಭವವಾಸಗಳ
ಮತ್ತಾನು ಬಂದು ಪ್ರತಿಷ್ಠೆಗುಜ್ಜುಗಿಪೆನೆಂ
ದಿತ್ತನಾತನಿಗೆ ನೇಮವನು ೧೨

ಶಿಖರಿಯೊಳಭವವಾಸಗಳ ನಿರ್ಮಿಸಿ ಭದ್ರ
ಮುಖ ಬಂದು ನೃಪಗೆ ಕೈಮುಗಿದು
ಸುಖದೊಳಾ ಕಾರ್ಯ ಸಂಪೂರ್ಣವಾಯ್ತೆನೆ ಕೊಟ್ಟ
ನಖಿಳರು ಮೆಚ್ಚೆ ಮನ್ನಣೆಯ ೧೩

---

[1] ಕೊನೆಯ ಟಿಪ್ಪಣಿಯನ್ನು ನೋಡಿ

ಪ್ರಗುಣ ಲಗ್ನವ ಕೂಡೆ ಕೇಳ್ದಾನು ಮುಖವಸ್ತ್ರ
ತೆಗೆವ ದಿನಕೆ ಬರ್ಪೆ ನೀವು
ನೆಗಳಿ ಪೂಜೆಯನೆಂದು ಮಂತ್ರಿ ಮಿತ್ರರು ಹೆ
ಮ್ಮಗನನು ಬೀಳ್ಕೊಟ್ಟನೊಡನ ೧೪

ಬಾರರೇತಕೆ ತನೂಜೆಯರು ತಂಗಿಯರೆಂದು
ಹಾರೈಸುತಿರ್ದನಷ್ಟರೊಳು
ಚಾರುವೈಭವ ತೋರೆ ವರರೊಡಗೂಡಿ ಕು
ಮಾರಿಯರೆಯ್ತಂದರೆಲ್ಲ ೧೫

ಜನನಿಯರೊಡಗೂಡಿ ಬಂದು ಪುತ್ರಿಯರು ಘ
ಮ್ಮನೆ ಕಾಣ್ಕೆಯಿಕ್ಕಿ ಕಾಲ್ಗೆರಗೆ
ಜನಕನಾಕ್ಷಣ ಬಹುರೂಪವಾಗಿ ತನ್ನ ನಂ
ದನೆಯರ ಎದೆಗಪ್ಪಿಕೊಂಡ ೧೬

ಹೊಕ್ಕ ಮನೆಯೊಳವರೋಜೆಯೊಳ್ಬಾಳ್ವುದ
ಮಕ್ಕಳಾಟಿಕೆಯಿಲ್ಲದಿಹುದ
ಪಕ್ಕದ ಸಾರ್ದು ದಾದಿಯರುಸುರಲು ಕೇಳಿ
ಚೊಕ್ಕಭೂವರನರ್ತಿವಟ್ಟ ೧೭

ಬಳಲಿದಿರಕ್ಕ ವಿಶ್ರಮಿಸಿರೆಂದೆಲ್ಲರ
ಕಳುಹಿಸಿದನವರ ತಾಯ್ಗೂಡಿ
ನಿಳಯದಿಂದೊಡನೆದ್ದು ನಡುವಣ ಚಾವಡಿ
ಯೊಳಗಿದ್ದ ಕಜ್ಜವೆಂಗಳಿರೆ ೧೮

ಅಣ್ಣನ ದೀರ್ಘರಾಜ್ಯವ ನೋಡುತೆದೆಯಲ್ಲಿ
ತಣ್ಣನೆ ಸಂತಸಬಡುತ
ಹೆಣ್ಣೊಡಹುಟ್ಟಿಬ್ಬರೆಯ್ತಂದು ಕಂಡರಾ
ಬಣ್ಣದ ಚಾವಡಿಯಲ್ಲಿ ೧೯

ಸೇಸೆಯನಿಕ್ಕಿದ ತಂಗಿಯರಿಗೆ ಮಂಗ
ಲಾಸನಗೊಡಿಸಿ ರಾಜೇಂದ್ರ
ಬಾ ಸಿಂಧುದೇವಿ ಗಂಗಮ್ಮ ಕುಳ್ಳಿರಿರೆನ
ಲಾ ಸುದತಿಯರು ಕುಳಿತರು ೨೦

ಅನಿತರೊಳವರು ಬಂದುದ ಕೇಳುತೊಳಗಣಂ
ಗನೆಯರು ಕರೆಯಲಟ್ಟಿದರು
ಜನನಾಥ ಕಳುಹಲಾ ದಿವಿಜೆಯರೆದ್ದು ಭೋಂ
ಕನ ಹೊಕ್ಕರಣ್ಣನ ಮನೆಗೆ ೨೧

ಪಟ್ಟದಾಕೆಯ ಮುಂದುಮಾಡಿಕೊಂಡಬಲೆಯ
ರೊಟ್ಟುಗೊಂಡಿದಿರ್ವರುತಿರ್ದು
ಕಟ್ಟಿದಿರೊಳು ಕಾಣುತತ್ತಿಗೆಯರೊಳಿಷ್ಟು
ಸಟ್ಟಾಟವಾಡಿದರಾಗ ೨೨

ಆವ ದೇಶದ ಪೆಂಗಳೆಮ್ಮ ಮನೆಗೆ ನುಗ್ಗಿ
ತಾವೇಕೆ ಬಹರೆಂದರವರು
ನಾವು ಹುಟ್ಟಿದ ಮನೆಯಲಿ ತುಂಬಿಕೊಂಡಿದ್ದ
ಭಾವೆಯರಾರೆಂದರವರು ೨೩

ಪಟ್ಟದರಸಿಯು ತಾವನ್ಯೋನ್ಯ ತೋಳ್ತುಂಬಿ
ತೊಟ್ಟುಕೊಂಡೊಡನೆ ಕುಳಿತರು
ನಿಟ್ಟಿಸಿ ನಕ್ಕು ನುಡಿದು ಮಿಕ್ಕ ಸತಿಯರು
ಮುಟ್ಟಿಸಾರ್ದಿದ್ದರೊಪ್ಪದೊಳು ೨೪

ಏನು ಮೋಹವೊ ಮುಝು ಸ್ಮರಪುರದೊಳಗಿದ್ದ
ಸೂನುಗಳನು ಸೊಸೆಯರನು
ಮಾನವಪತಿ ಕರೆಯಿಸಿಕೊಂಡು ತಳೆರ್ದನೊಂ
ದಾನಂದರಸವನೇನೆಂಬೆ ೨೫

ನಿಖಿಳಕುಟುಂಬವೆರಸಿ ವಾದ್ಯರವ ದಶ
ಮುಖದಿಕ್ಕು ತುಂಬಿ ಸೂಳೈಸೆ
ಮುಖವಸ್ತ್ರದೆಗೆವ ದಿನಕೆ ಬಂದು ಶೈಲದ
ಶಿಖರವ ಸಾರ್ದನಾ ರಾಯ ೨೬

ತರದೊಳೆಪ್ಪತ್ತೆರಡಮಲವಾಸದೊಳು ಭಾ
ಸುರವೆತ್ತ ಜಿನಬಿಂಬಗಳಿಗೆ
ದರುಶನವಿಕ್ಕಿ ವಂದಿಸಿದನು ಪುತ್ರ ಮಿ
ತ್ರರು ಮೊದಲಾದರುವೆರಸಿ ೨೭

ಕದಲಿದರೆಲ್ಲರು ವೃದ್ಧತಾಪಸರ ಮೇ
ಳದೊಳಿರ್ದನಾ ಪುರುನಾಥ
ಇದೆ ವೇಳೆಯೆಂದು ಪೆಂಗಳುಗೂಡಿ ಚಕ್ರಿ ಬೇ
ಗದಿ ಹೊಕ್ಕನಾ ಜಿನಸಭೆಯ ೨೮

ಕಾಣುತ ಜಯಜಯಯೆನುತ ಕಾಣ್ಕೆಯನಿಕ್ಕಿ
ಕ್ಷೋಣೀಶ ಸಾಷ್ಟಾಂಗವೆರಗಿ
ವಾಣೀಶ ವೃಷಭೇಶ ಪರಮಾತ್ಮಯೆನುತ ಬಿ
ನ್ನಾಣದಿಂದೊಡನೆದ್ದು ನಿಂದ ೨೯

ಸೊಸೆಯರು ಪುತ್ರಿಯರನುಜೆಯರರಸಿಯ
ರೊಸೆದು ಕಾಣಿಕೆಯಿಕ್ಕಿ ಜಿನಗೆ
ಸಸಿನೆರಗಿದರು ಭೂಮಿಯಮೇಲೆ ಹಬ್ಬಿದ
ಪೊಸಲತೆಗಳೊಯೆಂಬ ತೆರದಿ ೩೦

ಕೂಡೆಲ್ಲರೆದ್ದು ಕೈಗಳ ಮುಗಿದುರೆ ಸುತ್ತಿ
ನೋಡುತ ದೇವನ ಸೊಬಗ
ನೋಡಿ ಬಾಷ್ಪಗಳೊಗೆ ರೋಮಾಂಚ ನೆಗಯಲೋ
ಲಾಡಿದರಾನಂದದಲ್ಲಿ ೩೧

ವಿಸ್ತಾರದಲಿ ಪೂಜೆಗೈವೊಡೀಗಾಗ ದೇ
ವಸ್ತೋಮ ಬಹುದೆಂಬ ಶಂಕೆ
ಪ್ರಸ್ತುತಾರ್ಚನೆಯ ಸಂಕಲ್ಪಗೆಯ್ಸಿದನು ಸ
ಮಸ್ತ ನಾರಿಯರಿಂದ ನೃಪತಿ ೩೨

ಈ ಜನ್ಮವೊಂದಲ್ಲದಿವರಿಗೆ ಮುಂದಿನ್ನು
ಸ್ತ್ರೀಜನ್ಮವಿಲ್ಲ ಗಂಡಾಗಿ
ರಾಜಿಸುತಿರ್ದು ಕೈವಲ್ಯವೆಯ್ದುವರೆಂದು
ಶ್ರೀಜಿನೇಶ್ವರ ನಿರೂಪಿಸಿದ ೩೩

ಜಿನಗವರೆರಗಿ ಬೀಳ್ಕೊಂಡರು ಕೂಡೆ ಮೈ
ದುನರಳಿಯಂದಿರು ಸುತರು
ವನಿತೆಯರ್ಕಳ ಪೌಜ ಸಾಗಿಸಿಕೊಂಡು ಚಿ
ಕ್ಕನೆ ಪುಳಕೆಯ್ದ್ವೈಯೆಂದ ೩೪

ಬಂದಯೋಧ್ಯಯ ಪೊಕ್ಕು ಮಂತ್ರಿ ಮಿತ್ರರ ನೋಟ
ದಿಂದ ಬೀಳ್ಕೊಡುತ ರಾಜೇಂದ್ರ
ಮಂದಿರದೊಳವೊಕ್ಕು ತನ್ನಯ ಬಹುಪರಿ
ಸ್ಪಂದದೊಳಿರ್ದನೇನಂಬೆ ೩೫

ಬಸದಿಯುತ್ಸಾಹವ ಸ್ವಾಮಿಯ ಕಂಡುದ
ಬಿಸವಂದಬಟ್ಟು ರಾಣಿಯರು
ಕೊಸರಿ ಕೊಸರಿ ನುಡಿದಾಡಲಂತವರ ಸಂ
ತಸಗಂಡು ನಲವೇರುತಿರ್ದ ೩೬

# ಕುಮಾರ ವಿಯೋಗ ಸಂಧಿ*

ಜಿನವಾಸ ರಚನೆ ಜಿನೇಂದ್ರ ಪೂಜಾರ್ಚನೆ
ಘನವೆನಲೆಸಗಿ ಚಕ್ರೇಶ
ತನಯರ ನೋಟ ಪೆಂಡಿರ ಕೂಟದಿಂದ ಮೇ
ದಿನಿಯನಾಳುತ ಸುಖವಿರ್ದ ೧

ಒಂದು ದಿನದೊಳಾದಿ ಚಕ್ರವರ್ತಿಯ ನೂರು
ಮಂದಿ ಕುಮಾರರೊಂದಾಗಿ
ಬಂದೊಂದು ತೊರೆಯ ತಡಿಯ ಮಳಲೊಳಗಾ
ನಂದಿಸುತಿರ್ದರೇನೆಂಬೆ ೨

ಚೆಲ್ಲಣ ಹೊನ್ನೊಡ್ಡಿಯಾಣ ಮೇಲ್ಬಿಗುಹಿನ
ಕುಲ್ಲಾಯಿ ಕುಂಕುಮ ತಿಲಕ
ಗೆಲ್ಲದಿ ಪಿಡಿದ ತಾವಡಗೋಲ್ಗಳಿಂದತಿ
ಮಲ್ಲರೆದ್ದರು ಸಾಧನೆಗೆ ೩

ಹದಿನಾಲ್ಕು ಹದಿನೈದು ಹದಿನಾರು ಹದಿನೇಳು
ಹದಿನೆಂಟು ಪ್ರಾಯವಾದವರು
ಮದುವೆಯಾದವರಲ್ಲ ಗರುಡಿಯೋದಿನ ಮರ
ದೊದವಿನೊಳಾಡುತಿರ್ದವರು ೪

ಹೊತ್ತುಮೀರಿಯು ಸಾಧನೆಗೆಯ್ವ ಪೊರೆಗಳ
ಒತ್ತಿನೊಳಿಗದವರರಿದು
ಚಿತ್ತೈಸಿ ನಿಮಗಂಜಿ ರವಿಯೋಡಿ ಗಗನವ
ಹತ್ತಿದನೆಂದು ತೋರಿದರು ೫

* ಸಾಧನೆಯ ಸಂಧಿ, ವಿದ್ಯಾಗೋಷ್ಠಿ ಸಂಧಿ, ವಿರಕ್ತಿ ಸಂಧಿ, ಸಮವಸರಣ ಸಂಧಿ, ದಿವ್ಯಧ್ವನಿ ಸಂಧಿ, ತತ್ವಾರ್ಥ ಸಂಧಿ, ಮೋಕ್ಷಮಾರ್ಗ ಸಂಧಿ, ದೀಕ್ಷಾ ಸಂಧಿ, ಕುಮಾರ ವಿಯೋಗ ಸಂಧಿ, ಇವು ಮೂಲದಲ್ಲಿ ಕ್ರಮವಾಗಿ ಕಂಡು ಬರುವ ಸಂಧಿಗಳು ಇವುಗಳೆಲ್ಲವನ್ನೂ ಸಂಗ್ರಹಿಸಿ ಒಂದು ಸಂಧಿಯಾಗಿ ಮಾಡಿದೆ.

ಸಾಕು ಹೋ ಹೊತ್ತಾದುದೆಂದೆಡ ಬಲ ಜಾರಿ
ಯಾ ಕುವರರು ಮೆಯ್ಯನುರಿದು
ನಾಕಲಂಘಿಸಿ ಕೋಲುಕೋಲನೂಂದಿಸಿ ಜಿನ
ಗೇಕಚಿತ್ತದೊಳಿರಗಿದರು ೬

ಬನದ ತಣ್ಣೆಳಲ ತಂಗಾಳಿಯೊಳೊಪ್ಪುಚ್ಚಿ
ತನುವನೊರಗಿ ನಿದ್ದೆಗೆಯ್ದು
ಜಿನಸಿದ್ಧ ಗುರುವೆ ನಿರಂಜನಸಿದ್ಧಯೆಂ
ದೆನುತೆದ್ದರವರು ಜೋಕೆಯೊಳು ೭

ವೀಳೆಯಗೊಳುತ ಕನ್ನಡಿಯ ನೋಡುತ ತೆಳು
ಗಾಳಿಗೆ ಮೈಯನೊಪ್ಪಿಸುತ
ಮೇಲೊಯ್ಯನೊಯ್ಯನೆ ತಮ್ಮೊಳು ಸಂಗೀತ
ಕೇಳಿಗವರು ತೊಡಗಿದರು ೮

ದನಿಯಿಂಪು ರಾಗದ ಸೊಂಪು ತಾನದ ನುಂಪು
ಅನುವೆತ್ತ ಪದಗಳ ವ್ಯಕ್ತಿ
ನೆನೆಯಬಾರದು ಪಾಡಬಾರದಿನ್ನೊಬ್ಬರಿ
ಗೆನಿಸಿ ಪಾಡಿದರು ಗಾಡಿಯೊಳು ೯

ವ್ಯಾಕರಣದೊಳೊಮ್ಮೆ ತರ್ಕಶಾಸ್ತ್ರದೊಳೊಮ್ಮೆ
ಬೇಕಾದ ನ್ಯಾಸ ಭಾಷೆಯೊಳು
ಪ್ರಾಕೃತ ಗೀರ್ವಾಣ ದೇಶೀಯ ಭಾಷೆಯೊ
ಳಾ ಕುಶಲರು ವಚಿಸಿದರು ೧೦

ನುಡಿದುದೆಲ್ಲಾಗಮು ಭರತಪುತ್ರರು ತುಟಿ
ಮಿಡುಕಿದುದೆಲ್ಲ ಚಿತ್ರಾರ್ಥ
ತೊಡಗಿದುದೆಲ್ಲ ಪುರಾಣ ಕಾವ್ಯದ ಪಾಲು
ಗಡಲೆಂದರೇನ ಬಣ್ಣಿಪೆನು ೧೧

ಹಸ್ತಿನ ಪುರಪತಿ ಮೇಘೇಶ್ವರನು ಪ್ರ
ಶಸ್ತ ದೀಕ್ಷೆಯನಾಂತನೆಂದು
ಪ್ರಸ್ತುತವಾರ್ತೆಯು ಸಾಹಿತ್ಯಗೋಷ್ಠಿಯ
ಪ್ರಸ್ತಾಪದೊಳು ಬಂದುದವರ್ಗೆ ೧೨

ಇಂತೆಂಬ ಸುದ್ದಿಯ ಕೇಳ್ದವರೆಲ್ಲರೋ
ರಂತೆ ವಿಸ್ಮಯಚಿತ್ತರಾಗಿ
ಮುಂತೆ ಮೂಗಿನಮೇಲೆ ಬೆರಳಿಟ್ಟು ಜಿನ ಜಿನ
ನೋಂತರೆಂದೊಲೆದರು ಶಿರವ ೧೩

ಪ್ರಾಯ ತಗ್ಗದ ಮುನ್ನ ಕಾಯ ಜಗ್ಗದ ಮುನ್ನ
ಸ್ತ್ರೀಯರು ಮಕ್ಕಳೆಂದೆಂಬ
ಮಾಯೆ ಮುತ್ತದ ಮುನ್ನ ಯೆಚ್ಚರಬೇಕೆಂದು
ಪಾಯವ ನೋಡಿದರವರು ೧೪

ಕಣ್ಣರಿದಪ್ಪಾಜಿ ನಮಗೆಯಿನ್ನೊಂದೊಂದು
ಹೆಣ್ಣ ಸಂಬಂಧ ಮಾಡುವನು
ಹೆಣ್ಣಿಗೆ ಸಿಕ್ಕಿ ಬಾಳುವ ಬಾಳು ನೊಣ ಹಾರಿ
ಯೆಣ್ಣೆಯೊಳಗೆ ಬಿದ್ದ ರೀತಿ ೧೫

ಹೆಣ್ಣ ಹಿಡಿದಮೇಲೆ ಹೊನ್ನ ಹಿಡಿಯಬೇಕು
ಮಣ್ಣ ಹಿಡಿಯಬೇಕು ಸಹಜ
ಹೆಣ್ಣು ಹೊನ್ನು ಮಣ್ಣುವಿಡಿದಾತ್ಮರೆಲ್ಲರು
ಮಣ್ಣುವಿಡಿದ ಲೋಹದಂತೆ ೧೬

ಸಿರಿಯಿದ್ದು ತೊರೆವುದು ಹೆಚ್ಚು ಜೌವನದಲ್ಲಿ
ವರದೀಕ್ಷೆವಡೆವುದು ಹೆಚ್ಚು
ಪರಮಾತ್ಮತತ್ವವನರಿವುದು ಹೆಚ್ಚೀವು
ದೊರೆಕೊಂಡರೆಮಗರಿದುಂಟೆ ೧೭

ಕುಲ ಬಲ ಸಿರಿ ಸೊಬಗಿದ್ದರೆಲ್ಲವ ಬಿಟ್ಟು
ಗೆಲವಾಂತು ತಪಸು ಮಾಡಿದರೆ
ಚೆಲುವೆ ಪತಿವ್ರತೆಯಾದಂತೆ ಹೆಚ್ಚಿನ
ಫಲವಹುದೆಂದೆಣಿಸಿದರು ೧೮

ಕೈಲಾಸಗಿರಿಗೆ ಹೋಗುವವಲ್ಲಿ ಮಂದರ
ಶೈಲದಂತೆಸೆವಾದಿಜಿನನ
ಕೈಲೇಸಿನಿಂದ ದೀಕ್ಷೆಯ ಕೊಂಬವೆನುತಾಗ
ಮೈಲಾಗಿನಿಂದೆದ್ದರವರು ೧೯

ಅಪ್ಪಾಜಿಗರುಹಿ ದೀಕ್ಷೆಯ ಕಳುಹಿಸಿಕೊಂಡು
ಬಪ್ಪೆವೆಂದರು ಕೆಲರಲ್ಲಿ
ಅಪ್ಪಾಜಿಯರಿದರೆ ನಮ್ಮ ದೀಕ್ಷೆಯ ಕಾರ್ಯ
ತಪ್ಪುವುದೆಂದರು ಕೆಲರು ೨೦

ಅಪ್ಪಾಜಿಯರನೊಮ್ಮೆ ಭಾವಿಸಿ ಬೀಳ್ಕೊಡ
ಲ್ಪಪ್ಪುದೆಮ್ಮಯ ತಾಯಿಗಳನು
ಒಪ್ಪಿಗೊಳಿಸಲರಿದವರಿರದರೆ ಕಾರ್ಯ
ತಪ್ಪುವುದೆಂದರು ಕೆಲರು ೨೧

ಒಡವೆಯನೊಪ್ಪಿಸಬೇಕೊ ಮಕ್ಕಳ ಕೈಯ
ಲೆಡೆಗೊಟ್ಟು ಬರಬೇಕೊ ನಮ್ಮ
ಮಡದಿಯರನು ತೋರಿ ಸಲಹೆಂದು ಬರಬೇಕೊ
ತೊಡಕೇನು ನಮಗೈಯ್ಯನೊಡನೆ ೨೨

ಅವರ ಹಂಗೆಮಗಿಲ್ಲ ನಮ್ಮ ಹಂಗವರ್ಗಿಲ್ಲ
ಅವರಿಗವರು ನಾವು ನಮಗೆ
ಭವಮಾಲೆಯೊಳು ನೋಡಲಾರಿಗಾರುಂಟೆಂದು
ತವತವಗೆಲ್ಲರಾಡಿದರು ೨೩

ಮಗನಯ್ಯನಾಗುವನಯ್ಯನಾ ಮಗನಿಗೆ
ಮಗನಹನೊಂದು ಜನ್ಮದೊಳು
ಮಗಳು ತಾಯಾಗುವಳಾ ತಾಯಿ ಮಗಳಿಗೆ
ಮಗಳಹಳೊಂದು ಜನ್ಮದೊಳು ೨೪

ತಾಯುದರದಿ ತಂದ ತನು ನಮಗೆರವಿನ್ನು
ತಾಯಿ ತಂದೆಗಳ ಮಾತೇನು
ನ್ಯಾಯವಿದೇಳಿ ದೀಕ್ಷೆಗೆ ನಮೋ ಹಂಸನಾ
ಥಾಯಯೆಂದೊಡನೆದ್ದರವರು ೨೫

ಬೆಳುಮುಗಿಲೊಡ್ಡಿ ಬೇರೂರಿ ಭೂಮಿಯೊಳುಬ್ಬಿ
ಬೆಳೆದು ಬೆಳ್ವೆಟ್ಟವಾದಂತೆ
ತಳತಳಿಸುವ ಬೆಳುವೆಳಗಿಂದ ರಜತಾದ್ರಿ
ಹೊಳೆದುದಾ ಕುವರರ ಮುಂದೆ ೨೬

ಅಂಚೆಗಳಿಂಗಡಲೊಳು ಹರಿಸಂತೆಳೆ
ಮಿಂಚೇರುವಂತೆ ಬೆಳ್ಮುಗಿಲ
ಹಿಂಚು ಮುಂಚಾಗದೆ ತಮ್ಮೊಳ್ಳೊರ್ವರು ಹರಿ
ಹೆಂಚಾಗದೇರಿದರವರು ೨೭

ಬರುತಿರ್ದರೊಯ್ಯನೊಯ್ಯನೆ ಬಪ್ಪ ಪಥದೊಳಾ
ಗಿರಿಯಗ್ರಜಿನಸಭೆಯಿಂದ
ಸುರಭೇರಿ ದಂಧಣ ದಿಮ್ಮ ಭೋರ್ಭೋರೆಂಬ
ಸ್ವರ ಕೇಳಲಾಯ್ತು ದೂರದೊಳು ೨೮

ಭೇರಿಯ ದನಿಗೇಳಿ ನಲಿದರು ನವಿಲು
ಮುಂಗಾರ ಮೊಳಗುಗೇಳಿದಂತೆ
ಆ ರಾಜಪುತ್ರರು ಕಟ್ಟೆದಿರೊಳಗೆ ಕ
ಣ್ಣಾರೆ ಕಂಡರು ಜಿನಸಭೆಯ ೨೯

ಬೆಳ್ಳಿಯ ಬೆಟ್ಟದಮೇಲೊಂದು ಕಾಮನ
ಬಿಲ್ಲಿನ ಬೆಟ್ಟ ನಿಂದಿದೆಕೊ
ಬೆಳ್ಳಿಬೆಟ್ಟವ ಮುಟ್ಟದಿದೆ ಚಿತ್ರವೆಂ
ದೆಲ್ಲರು ನೋಡುತೆಯ್ದಿದರು ೩೦

ಬೆಳಗಿನ ಕಡಲೊಳು ನಡೆವಂತೆ ತಂಪಿನ
ಹೊಳೆಯೊಳು ಮುಳುಗಿ ಬಹಂತೆ
ತಳತಳಿಸುತ ಗಮಗಮಿಸುವ ಭೂಮಿಯೊ
ಳೊಳಹೊಕ್ಕು ಗಮಿಸಿದರೊಸೆದು ೩೧

ನಿಮಿಷದೊಳಗೆ ಮಿಂದು ಕೂಡೆ ಸಿಂಗರಿಸಿಯು
ತ್ತಮವಸ್ತುಚಯವ ಸಂಗ್ರಹಿಸಿ
ಅಮರೇಂದ್ರನನುಮತದಿಂದ ಸ್ವಾಮಿಯ ಪೂಜೆ
ಗಮಲಚಿತ್ತರು ತೊಡಗಿದರು ೩೨

ಮೋಕ್ಷಕೆ ಕಾರಣ ಧ್ಯಾನವದಕೆ ಬಾಹ್ಯ
ರಕ್ಷೆಯಲ್ಲವೆ ಜಿನದೀಕ್ಷೆ
ದೀಕ್ಷಾಂ ದೇಹಿಯೆಂದೆಲ್ಲರು ಸಾಷ್ಟಾಂಗ
ಲಕ್ಷಿತವೆಸಗಲೆರಗಿದರು ೩೩

ಮುಗಿದು ನೀಡಿದ ತೋಳು ನಿಮಿರಿ ಪಾಸಿದ ಕಾಲು
ಮಿಗೆ ಭೂಮಿ ಮುಟ್ಟಿದ ನೊಸಲು
ಜಗದೀಶನಿದಿರೊಳಿದ್ದರು ಮಿಸುಕವೆ ಹೊನ್ನ
ಹೊಗರ ಪುತ್ತಳಿಗಳೆಂಬಂತೆ ೩೪

ಅಸ್ತು ಭವ್ಯಾಸ್ಸಮುತ್ತಿಷ್ಠತಯೆಂದಾದಿ
ವಸ್ತು ನಿರೂಪಿಸಲೊಡನೆ
ಮಸ್ತಕವೆತ್ತಿ ನಿಂದರು ಕೆಲಬಲದ ಸು
ರಸ್ತೋಮ ಜಯಜಯಯೆನಲು ೩೫

ಹೊದೆದ ದುಕೂಲವ ಬಿಸುಟರು ತೆಗೆದರು
ಪದಕವ ಕಳೆದರು ಉಳಿಯ
ಒದೆದಾಡುತಿಹ ಕರ್ಣದಾಭರಣಗಳ ಶಾಂ
ತದೊಳು ಸಡಿಲಿಸಿ ಹಾಕಿದರು ೩೬

ಕೇಶಪಾಶವ ಪರಿದಿಟ್ಟರು ದುರ್ಮೋಹ
ಪಾಶವ ಪರಿದಿಡುವಂತೆ
ಆಶಾಪಾಶವ ಪರಿವಂತೆ ಮಾಯಾ
ಪಾಶವ ಪರಿದಿಡುವಂತೆ ೩೭

ಸ್ವಸ್ತಿಕದಿಂದೆಲ್ಲರೆದ್ದು ನಡೆದರಾದಿ
ವಸ್ತುವಿನಂಘ್ರಿಯುಗಲಕೆ
ಮಸ್ತಕವಿಟ್ಟೆರಗಿದರಾತ್ಮಸಿದ್ಧಿರೇ
ವಾಸ್ತುಯೆಂದನು ವೀತರಾಗ ೩೮

ಕರೆದರಾಗಳೆ ಸುರರಾಕಾಶದೊಳು ನಿಂದು
ನರುಗಂಪ ಕರೆವ ಪೂಮಳೆಯ
ತುರುಗಿ ಸೂಳೈಸಿದುವೆಲ್ಲ ವಾದ್ಯಗಳು ಲೇ
ಸರಿದು ಮಂಗಲವ ಪಾಡಿದರು ೩೯

ಮುಪ್ಪಾದ ಮಾಸೆಗೆ ಕಪ್ಪನಿಟ್ಟಾದರು
ಚಪ್ಪರಿದಾಡುವರುಂಟು
ತುಪ್ಪುಳುಮಾಸೆಯೊಳಗೆ ತೊರೆದತಿಥಿಗ
ಳಪ್ಪವರಾರಿವರಂತೆ ೪೦

ಒಡೆಯರೆಲ್ಲರು ದೀಕ್ಷೆಗೊಂಡಮೇಲೊಡನಿರ್ದ
ಕಡುಹಿತದೊಳಗದವರು
ಹಡಗ ನೀಗಿದ ಪರದರು ಮಗುಳ್ವಂತೂರ
ಕಡೆಗೆ ಮಗುಳ್ದರೇನೆಂಬೆ ೪೧

ಕಡೆಯ ಚಾವಡಿಯೊಳಿರ್ದನು ಚಕ್ರಧರನಾಗ
ನಡೆತಂದು ಪೊರ್ದಿ ಸೇವಕರು
ಪಿಡಿದ ಕರಾರಿ ಖಂಡೆಯಗಳ ಮುಂದಿಟ್ಟು
ಕೆಡೆದರು ಮೈನೀಡಿ ಮುಂದೆ ೪೨

ನೆರೆದರೆಲ್ಲರು ಸುಮ್ಮನಿರ್ದರಾಗರವಿಂದ
ಕರಗಳ ಮುಗಿದೆಲೆ ಸ್ವಾಮಿ
ಸಿರಿವೆತ್ತ ಕುವರರು ನೂರ್ವರು ದೀಕ್ಷೆಗೆ
ತೆರಳಿದರವಧಾನವೆಂದ ೪೩

ವೀಳೆಯದೆಲೆ ಹಸ್ತದಿಂ ಬಿದ್ದುದೆದೆಯಲ್ಲಿ
ಬಾಳ ಬೀಸಿದ ತೆರನಾಯ್ತು
ಗೋಳಿಟ್ಟುದಾಸ್ಥಾನ ಕೈಸನ್ನೆಯಿಂದ ಭೂ
ಪಾಲಕ ನಿಲಿಸಿ ಕೇಳಿದನು ೪೪

ಕವಿದ ಮೋಹಾಂಧಕಾರವನು ಸುಜ್ಞಾನದ
ರವಿಯ ಶಕ್ತಿಯೊಳೊತ್ತಿ ನಿಲಿಸಿ
ಅವನೀಶನೊಂದೆರಳ್ಪಳಿಗೆಯ ಮೇಲೆ ಸಂ
ತವಿಸಿಕೊಂಡೊಡನಿಂತು ನುಡಿದ ೪೫

ತುಪ್ಪುಳುಮಿಾಸೆ ರೇಖೆಗೆ ಬಂದುದಿಲ್ಲ ಮೈ
ದಪ್ಪ ಸಂಪೂರ್ಣವಾಯ್ತಿಲ್ಲ
ನೆಪ್ಪದೋರಿತು ಪ್ರಾಯ ನೆರೆವವರಿನ್ನಿವರೆನು
ತಿಪ್ಪನಿತರೊಳಿಂತುಟಾಯ್ತು ೪೬

ಅಣ್ಣ ತಮ್ಮಂದಿರ ಕೇಳಿಯೊಳಲ್ಲದೆ
ಹೆಣ್ಣೊಳೊಂದಿರುಳಿದ್ದುದಿಲ್ಲ
ಕಣ್ಣಹಬ್ಬವ ಕಾಣ್ಬೆನಿವರ ಮದುವೆಗೆಂದು
ಕಣ್ಣೊಳಿಟ್ಟದೇವಿಂತಾಯ್ತು ೪೭

ಕಳುಹಿದನೆಲ್ಲರನೊಡನೆದ್ದು ಮಂದಿರ
ದೊಳಹೊಕ್ಕನಾ ಸಾರ್ವಭೌಮ
ಬಲುಗಾಳಿ ಬಾಧಿಸಿದೆಳಲತೆಯಂತೆ ಹೆಂ
ಗಳು ಬಂದರಧಿಕ ಶೋಕದೊಳು ೪೮

ಬಂಬಳ ಬಾಡಿದ ದೇಹ ಕಟ್ಟೆದ ತು
ರುಂಬು ಕಂದಿದ ಮೊಗದಿಂದ
ಕಂಬನಿಬಿಡುತೆಯ್ದಿ ಕಾಲಮೇಲ್ಕೆಡೆದು ಪ
ಲುಂಬಿದರೇನ ಬಣ್ಣಿಪೆನು ೪೯

ನಂದನರಗಲಿದರರಸ ಕಣ್ಮನಸಿಗಾ
ನಂದನವ್ರೋದರು ಹಾ ಹಾ
ಮುಂದೆಮ್ಮ ಕಣ್ಣಾರ್ತಿಗೆಳಸಿರ್ದೆವವರಿಂದೆ
ಕೊಂದರೆಂದಳಲಿ ನುಡಿದರು ೫೦

ಕಾಣೆವು ಕಂದರ್ಪರೂಪಿನ ಮಕ್ಕಳ
ಮಾಣಿಕ್ಯಗಳನೇವೆ ಹಾ ಹಾ
ಕ್ಷೋಣೀಶ ಗತಿಯಾವುದೆಂದೆದೆ ಬಿರಿದರು
ಬಾಣ ತಾಗಿದ ಹುಲ್ಲೆಯಂತೆ ೫೧

ತೋಯಜಾಕ್ಷಿಯರಿರ ಸ್ವೈರಿಸಿಯವರೆಮ್ಮ
ನೋಯಿಸಿ ಹೋಗಬಂದವರು
ಬಾಯಳಿದಿನ್ನು ಶೋಕಿಸಿದರೇನಹುದೆಂದು
ರಾಯ ನುಡಿದನವರೊಡನೆ ೫೨

ನಾನಿವರಿಗೆ ತಕ್ಕ ಪೆಣ್ಗಳಿಲ್ಲುಂಟೆಂದು
ಜಾನಿಸುತಿರ್ದೆನಷ್ಟರೊಳು
ನಾನೊಲ್ಲೆ ಪೆಣ್ಣ ನಮ್ಮಯ್ಯನಾರಿಗೆ ಪೆಣ್ಣ
ತಾ ನೋಳ್ಪನೆಂಬ ಮಾತಾಯ್ತು ೫೩

ತಪಸಿಗೆಯ್ದಿದರ್ಪೈಸೆ ಲೇಸೆನ್ನಿ ಬೇರೊಂದು
ಕುಪಥಕೆ ಹೋದವರಲ್ಲ
ಅಪಕೀರ್ತಿಮಾಡಿದರಳಲಬೇಕಲ್ಲದೆ
ವಿಫುಲಾರ್ಥಕಿದಕೇಕೆ ನೋವು ೫೪

ಒರ್ವೊರ್ವರಿಗೆ ನಿಮಗೋರೊರ್ವ ಕುವರರು
ಪರ್ವುಗೆಯಿಂದಾದ ನೋವು
ನೂರ್ವರೆನಗೆ ಸರಿಯಲ್ತೆ ಸೈರಿಸಿದೆನೌ
ಬಿರ್ವಾಗಿ ನೊಂದರೇನಹುದು ೫೫

ನಾರಿಯರೆಲ್ಲರ ಸಂತೈಸಿ ನಿಜ ನಿಜಾ
ಗಾರಕೆ ಕಳುಹಿ ರಾಜೇಂದ್ರ
ಗೌರವ ಲೀಲೆಯೊಳಿರ್ದನೆಂಬೆಡೆಗೆ ಕು
ಮಾರ ವಿಯೋಗದ ಸಂಧಿ ೫೬

# ತೀರ್ಥೇಶ ಪೂಜಾ ಸಂಧಿ

ಹರುಷದೊಳಿಂತು ಕೆಲವು ಕಾಲ ಪೋಗಲೊಂ
ದಿರುಳಿನ ಕಡೆಯ ಜಾವದೊಳು
ಉರುಮಂದರಾದ್ರಿ ಲೋಕಾಗ್ರಕೆ ನೆಗೆವುದ
ಭರತೇಶ ಕಂಡ ಸ್ವಪ್ನದೊಳು ೧

ಶ್ರೀ ಹಂಸನಾಥಯೊಂದೊಡನೆದ್ದು ಕುಳಿತನಾ
ಬಾಹುದೆಕ್ಕೆಯ ಪಟ್ಟದರಸಿ
ಆ ಹೊತ್ತಿನೊಳೆ ರಾಯನಳುವ ಕನಸ ಕಂಡು
ದೇಹ ಕಂಪಿಸುತಿರ್ದಳೊಡನೆ ೨

ಅವಧಿವಿಜ್ಞಾನದಿಂದಾರೈದೆನಬಳಿ ಕೇ
ಳಿವು ವೃಷಭೇಶ್ವರನಿನ್ನು
ಶಿವಲೋಕಕೆಯ್ದುವ ಸೂಚನೆಯೆನಲಿನ್ನು
ನವಗಾರು ಶರಣೆಂದಳಾಕೆ ೩

ನವಗಿನ್ನು ಹಂಸನಾಥನೆ ಶರಣವನಂತೆ
ಶಿವಲೋಕಕೆಯ್ದುವ ನಾವು
ಭವದಲ್ಲಿ ಬಾಳ್ವುದೆಲ್ಲವು ಸ್ವಪ್ನವೀ ಸ್ವಪ್ನ
ದವಗಡಕೆಣಿಸಬೇಡೆಂದ ೪

ರಾಯ ಪೂಜಿಪೆನೆಂದು ನೆನೆದು ಸುವಸ್ತುನಿ
ಕಾಯಸಹಿತ ಬಹುದೆಂದು
ರಾಯಸಗಳ ದಿಕ್ಕುದಿಕ್ಕಿಗೆ ಬರೆಸಿ ನಿ
ರಾಯಸವನೆ ಕಳುಹಿದನು ೫

ಮಳೆಯ ಗಾಳಿಯವೋಲು ಬಿರ್ರನೆ ಬಂದು ತ
ಪ್ಪಲೊಳಿಷ್ಟು ನಿಂದು ಚಕ್ರೇಶ
ಚಲುವಿಕೆಯಾಗಿ ಪೂಜೆಯ ಮಾಳ್ಪೆನೆಂದು ತ
ನ್ನೊಳಗಿಂತು ನೆನೆದನೇನೆಂಬೆ ೬

ಗಗನದೊಳಿರ್ದುದು ಸಮವಸರಣ ದೇವ
ನಗಲಿದ ದೇಗುಲದಂತೆ
ಜಗದೀಶನದ್ರಿಯೊಳಿರ್ದನು ಮನೆಯ ದಂ
ಮುಗ ಬಿಟ್ಟ ನಿಸ್ಪೃಹನಂತೆ ೭

ಸಿದ್ಧಶಿಲೆಯವೊಲು ಶಿಲೆಯಿದ್ದುದದರಲ್ಲಿ
ಬದ್ಧಪಲ್ಯಂಕಯೋಗದೊಳು
ಸಿದ್ಧನಂತಿರ್ದ ದೇವನ ಕಂಡು ನೃಪ ಜಿನ
ಸಿದ್ಧಯೆಂದೊಲೆದನು ಶಿರನ ೮

ಮರುಕ ಪುಟ್ಟದು ಜಿನನಿದಿರಿನೊಳದರಿಂದ
ಮರುಗಿತಿಲ್ಲಾ ಚಕ್ರವರ್ತಿ
ಎರಗಿ ಮಹಾಪೂಜೆಗೆಸಗಿದನದನು ಬಾ
ಯ್ದೆರೆದು ಬಣ್ಣಿಪ ದಕ್ಷನಾರು ೯

ಕಡಲ ಮಾಗಧ ಮೊದಲೆನೆ ಹಿಮವಂತಾಂಕ
ಕಡೆಯೆನೆ ವ್ಯಂತರಾಧಿಪರು
ಕಡುಪಿನ ಖಗರು ಪೂಜಾವಸ್ತುಗಳ ತಂದು
ಹಿಡಿಯಲಾ ನೃಪನಳ್ತಿವಟ್ಟ ೧೦

ಫಲಪೂಜೆಗಳ ಮಾಡಿ ರನ್ನ ಚಿನ್ನದೊಳಾದ
ಫಲಗಳ ಮಂದರದಂತೆ
ನೆಲೆಗೊಳಿಸಿದನರ್ಘ್ಯಕೋಟಿಯನೆತ್ತಿದ
ನೊಲಿದೆಲ್ಲ ಜಯ ಜಯಯೆನಲು ೧೧

ಪರಮಾರ್ಘ್ಯವನೆತ್ತಿಯಿರಿಸಲವರು ತುದಿ
ಗಿರಿಸಿದ ಮೂಡೆಗರ್ಪುರವು
ಉರಿವುತಿರ್ದುವು ಮುಳ್ಳು ಕಪ್ಪುರಗಳ ಸಾಲು
ಗಿರಿಯ ಕಾಳ್ಕಿಚ್ಚುಗೊಂಡಂತೆ ೧೨

ರತ್ನದ ನಿಡುಗಿಂಡಿಗಳನೆತ್ತಿ ಭವದುಃಖ
ಯತ್ನಾಗ್ನಿ ಕೆಡಲೆಂದು ಜಗಕೆ
ನೂತ್ನಮಂತ್ರವನೋದಿ ಶಾಂತಿಧಾರೆಯ ರಾಜ
ರತ್ನ ಮಾಡಿದನಾದಿಜಿನಗೆ ೧೩

ದ್ವಾದಶಗಣಗೂಡಿ ತನ್ನವರೊಡಗೂಡಿ
ಯೋದುತ ಸ್ತೋತ್ರ ಮಂತ್ರಗಳ
ಆದಿನಾಥನ ಬಲಗೊಂಡನಾ ನೃಪತಿ ಪ್ರ
ಮೋದಕೆ ಸುರರರ್ತಿವಡಲು ೧೪

ಹಗಲಿಂತು ಹೋದುದು ಜಿನಸಂಗಪ್ರಭೆಯಿಂದ
ಹಗಲಿನಂತಿರ್ದುದು ರಾತ್ರಿ
ನೆಗಳಿದ ಘಳಿಗೆಯ ಸನ್ನೆಯಿಂದಿರುಳೆಂದು
ಬಗೆದುದು ಕೂಡಿದ ಪರಿಸೆ ೧೫

ಮೇರುವಿಗೆಂಟದ್ರಿ ಕೆಲದಲ್ಲಿ ಗೋಡೆಯಾ
ಕಾರದೊಳಿರಲವ ಜರೆದು
ತಾರಾದ್ರಿಗೆಂಟದ್ರಿ ನೇರದೊಳಿದ್ದಂತೆ
ತೇರಿದ್ದುವೆಂಟು ದಿಕ್ಕಿನೊಳು ೧೬

ಸುರಿವ ಪೂಮಳೆ ಸೂಸಲುರಿಬಾಣ ಗಗನದೊ
ಳುರವಣಿಸುವ ಪಾತ್ರದಿಂದ
ಗರಿಗರಿ ಗೀಕು ಗಿರ್ರೆಂಬ ಗಾಲಿಗಳಿಂದ
ಸರದೋರಿ ಹರಿದುವಾ ತೇರು ೧೭

ಹೊಸ ಹೊಸ ಪರಿಯ ತೇರೊಂದೊಂದು ದಿನಕೆ ಮ
ತ್ತ್ರಸಮ ನೂತನ ಪೂಜೆ ನೃತ್ಯ
ರಸ ರಸಾಯನದೂಟ ಪರಿಸೆಗೆ ಸಂದು ರಾ
ಜಿಸಿತಿಂತು ಪದಿನಾಲ್ಕು ದಿವಸ ೧೮

ಕಡೆಯ ದಿನದೊಳು ಮೂರನೆಯ ಜಾವದೊಳೆಲ್ಲ
ಕಡೆಯಿಂದ ಕೂಡಿದ ಪ್ರಜೆಗೆ
ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ
ತೊಡಗಿದನೇನ ಬಣ್ಣಿಪೆನು ೧೯

ಗಣಧರರೆಂಭತ್ತುನಾಲ್ವರ್ಗೆ ಭಕ್ತಿಯೊ
ಳ್ಮಣಿದು ಮತ್ತವರನುಮತದಿ
ಗಣನೆಯಿಲ್ಲದ ಭವ್ಯಗಣಕೆ ಚಕ್ರೇಶ ಮ
ನ್ನಣೆಗೈದನುಚಿತವೃತ್ತಿಯೊಳು ೨೦

ದಾರಿದ್ರ್ಯ ಜಗದೊಳಿಲ್ಲೆಂಬಂತೆ ಹೋಯ್ತು ಮ
ತ್ತಾ ರಾತ್ರಿ ಹರಿದುವು ತೇರು
ಭೂಮಾಮನೀ ಜನ್ಮಕಿನ್ನು ಪೂಜಿಪ ವ್ಯವ
ಹಾರಕುದ್ಯಾಪನೆಯಾಯ್ತು ೨೧

ಗಂಧ ಪನ್ನೀರು ಪುಷ್ಪಗಳಿಂದ ಭೂಮಿ ಸು
ಗಂಧವಾಯ್ತದ್ರಿ ಕಪ್ಪಾಯ್ತು
ಗಂಧವಾಹಕನೆಂದು ಗಾಳಿಗೆ ಪೆಸರೆಂದು
ಬಂಧುರವಾಯ್ತಲ್ಲಿ ಸುಳಿದು ೨೨

ಸ್ವರ್ಗಪಥವ ಬಹು ಪ್ರಜೆ ಗಳಿಸಿತು ಕೂಡೆ
ತಾಗೊಂಡು ನೃಪನ ಕೀರ್ತಿಸಿತು
ತೇರ್ಗಳು ಹರಿದವೋಲಾ ರಾತ್ರಿ ದೇವೇಂದ್ರ
ಸ್ವರ್ಗದಿಂದಿಳಿದನೇನೆಂಬೆ ೨೩

ಬಣ್ಣ ಹಾರದ ಪ್ರಾಯ ಜಾರದ ಮೈ ಬಿಡು
ಗಣ್ಣು ಗಳಿಸೆಯೆ ನೋಟಕರ
ಕಣ್ಣ ಕೈಸೆರೆವಿಡಿವುತ ಬಂದರಾ ಸಗ್ಗ
ವೆಣ್ಣುಗಳವನನೋಲೈಸಿ ೨೪

ದೇವಗೆ ಮುನಿಗಳ್ಗೆ ಸತಿಗೂಡಿ ಪೊಡಮಟ್ಟು
ಭಾವೆಯ ದೂರಕೆ ಸಾರ್ಚಿ
ದೇವೇಂದ್ರ ಬಂದು ಪೂಜಾವಿಭವಕೆ ಮೆಚ್ಚಿ
ದೇವನಾತ್ಮಜನನಪ್ಪಿದನು ೨೫

ಪಡೆದನೊ ದೇವರ ದೇವ ರೋಹಣಶೈಲ
ಪಡೆದಂತನರ್ಘ್ಯರತ್ನವನು
ಪೊಡವಿ ಮೂರನು ಪುರೆಯಿಡಿಸಿದ ಮಗನನೆಂ
ದೊಡನೆ ಬೋಳೈಸಿದನುಬ್ಬಿ ೨೬

## ಜಿನಮುಕ್ತಿಗಮನ ಸಂಧಿ

ಪರಮಪೂಜೋತ್ಸವದೊಳು ರಾತ್ರಿ ಹೋಯ್ತು ಮ
ತ್ತಿರದರುಣೋದಯವಾಯ್ತು
ಪುರುಪರಮೇಶ್ವರ ಜಯ ಜಯೆಂದೊಸೆದು
ಪರಿಸೆ ವಂದನೆಗೆಯ್ದುದೆಲ್ಲ ೧

ಪಳುಕಿನ ಕೊಡದಲ್ಲಿ ತುಂಬಿದ ಪಾಲ ನಿ
ರ್ಮಲತೆಯ ನಗುತ ದೇಹದೊಳು
ಜಳಜಳಿಸುವ ವಿಮಲಾತ್ಮನೊಳಗೆ ಮೂಡಿ
ಮುಳುಗಾಡುತಿರ್ದನಾ ಸ್ವಾಮಿ ೨

ಆಕಾಶವನ್ನೊಂದು ಮಾರಿಕ್ಕುವಂತೆ ಮೂ
ಲೋಕವ ಚೋಟಿಕ್ಕುವಂತೆ
ದಾಕೊಂದರೊಳು ಕೋಟಿ ವಾರ್ಧಿಯ ಪಾಯ್ವ ನಿ
ರಾಕುಲೋನ್ನತಿಯಿರ್ದುದೊಳಗೆ ೩

ಒಡಲೆಂಬ ಕುಂಭದೊಳಿರ್ದಾತ್ಮನೆಂಬ ಪಾ
ಲ್ಗಡಲಿಗೆ ಸಮ್ಯಕ್ತ್ವಗಿರಿಯ
ಕಡೆಗೋಲನಿಟ್ಟು ಚಿದ್ಭಾವದ ನೇಣಿಂದ
ಕಡೆವವೊಲಿರ್ದುದಾ ಧ್ಯಾನ ೪

ಬೆಳಗನೆ ಮೀವಂತೆ ಬೆಳಗನೆ ಪಾಯ್ವಂತೆ
ಬೆಳಗಿನೋಕುಳಿಯಾಡುವಂತೆ
ಬೆಳಗಿನೊಳೋಲಾಡಿ ತೇಂಕಾಡುವಂತೆ ತ
ನ್ನೊಳಗೆ ತಾನಿರ್ದನಾ ಪರಮ ೫

ಒಮ್ಮೆ ಯೆಪ್ಪತ್ತೆರಳ್ಕರ್ಮ ಜಾರಿದುವು ಕೊ
ಡೊಮ್ಮೆ ಬಿದ್ದುವು ಪದಿಮೂರು
ಜುಮ್ಮನೆ ಮೂರಂಗ ಬಯಲಾದುವಾ ಪರ
ಬೊಮ್ಮ ಲೋಕಾಗ್ರಕೆ ನೆಗೆದ ೬

ತಿರುಗದ ಪದವದು ತೀರದ ಘನಸುಖ
ನರಸುರೋರಗರಿಗಶಕ್ಯ
ವಿರಚಿಸಲರಿದಾದ ಮುಕ್ತಿಸಾಮ್ರಾಜ್ಯದೊ
ಳಿರುತಿರ್ದನಾ ಸಿದ್ಧನತ್ತ ೭

ಇತ್ತಲಾತನ ದೇಹ ಪರಿವೃದು ಮೇಲಿರ್ದ
ವೃತ್ತಸಮವಸರಣೋರ್ವಿ
ಎತ್ತ ಪೋದುದೊ ಮುಝು ಬಯಲಾಯ್ತು ಮುಗಿಲೊಡ್ಡು
ಮುತ್ತಿರ್ದು ಮಾಯವಾದಂತೆ ೮

ಸಮವಸರಣ ಬಯಲಪ್ಪುದು ಜಿನರ ಸಂ
ಭ್ರಮ ಗಂಧಕುಟಿಗಳಾಕ್ಷಣವೆ
ಗಮಿಸಿದುವಿಚ್ಛೆಬಂದತ್ತಲಾದೀಶನಿ
ಲ್ಲಮೆಯೊಳಿನ್ನಾರಿಹರಲ್ಲಿ ೯

ಅಯ್ಯನ ಯೋಗವ ನಿಟ್ಟಿಸುತಿರ್ದಿರ್ದು
ಮೆಯ್ಯಳಿದರ್ಹ ಲಂಘಿಸಲು
ರಯ್ಯವಳಿದು ಮೋರೆ ಕಂದಿತು ಚಕ್ರಿಗೆ
ಚುಯ್ಯನೇರಿತು ಶೋಕವೊಳಗೆ ೧೦

ಏರಿತು ಮೂರ್ಛೆ ಸರ್ವರ ಮುಂದೆ ಗಂಭೀರ
ಚಾರದಂದದೊಳೊತ್ತಿ ತಡೆದ
ಮೀರಿತು ಪಿತಮೋಹ ತಡೆದು ತಡೆದು ತಾಳ
ಲಾರದೆ ಮೂರ್ಛೆಗೆ ಸಂದ ೧೧

ಕೆಳೆಯರು ಶೈತ್ಯೋಪಚಾರದಿಂದೆಬ್ಬಿಸೆ
ಕುಳಿತು ಕಂಬನಿಕಣ್ಣೊಳೊಗುತ
ತಿಳಿವುಗೆಟ್ಟಾ ಚಕ್ರಿ ತನ್ನಯ್ಯ ಮೊದಲಿರ್ದ
ಶಿಲೆಯತ್ತ ನೋಡಿ ಶೋಕಿಸಿದ ೧೨

ಹಾ ಹಾ ಸ್ವಾಮಿ ನನ್ನೊಡೆಯ ನನ್ನಪ್ಪಾಜಿ
ಮೋಹಾಸುರದರ್ಪಮಥನ
ಬಾಹಿರದೊಳಗೆನ್ನನೀಡಾಡಿ ಮುಕ್ತಿಗೆ
ಹೋಹರೆ ಪುರುಪರಮೇಶ ೧೩

ಪಟ್ಟವೆಂದೊಂದು ಪಾಶವ ಕಟ್ಟಿ ರಾಜ್ಯವ
ಕೊಟ್ಟೊಂದು ಹೊರಿಗೊಡುವಂತೆ
ಕಟ್ಟಕಡೆಯೊಳೆನ್ನ ಮುಕ್ತಿಗೆಯ್ದಿಸದಿಂತು
ಬಿಟ್ಟು ಹೋಹರೆ ಮಹಾದೇವ ೧೪

ಎಲ್ಲಿ ಹೋದುದು ನಿನ್ನ ಸಭೆ ನಿನ್ನ ದಿವ್ಯಾಂಗ
ಚೆಲ್ಲಿರ್ದ ಗಂಧಕುಟಿಗಳು
ಬೆಳ್ಳಿಯ ಬೆಟ್ಟವೈಸಿರಿ ಮಾಯವಾದುದಿ
ನ್ನೆಲ್ಲಿಯದುಳಿದರ ಬದುಕು ೧೫

ಆಗಲಿನ್ನಳಲಿದರೇನಾಯ್ತು ನೀನಿತ್ತ
ಯೋಗಮಾರ್ಗದೊಳಾನು ಬಹೆನು
ಶ್ರೀಗುರುಹಂಸನಾಥಾಯ ನಮೋಸ್ತೆಂದು
ಬೇಗೆಯ ಕೂಡೆ ನಂದಿಸಿದ ೧೬

ವರಪುತ್ರ ಮಿತ್ರ ಪ್ರಧಾನ ಮುಂತಾದಾಪ್ತ
ಪರಿವಿತಾನವ ಮಾಡಿಕೊಂಡು
ಗುರುಹಂಸನಾಥನ ಭಾವಿಸುತಾ ಜಾಣ
ರರಸನೆದ್ದನು ತನ್ನ ಪುರಕೆ ೧೭

ಮಿಗೆ ಮಾಘ ಬಹಳ ಚತುರ್ದಶಿಯಂದು ಮು
ಕ್ತಿಗೆ ಸಂದನಾದಿತೀರ್ಥೇಶ
ಹಗಲಿರುಳೆನ್ನದಾ ದಿನ ಸರ್ವಜನಕರ್ತಿ
ಸೊಗಸಿತು ಮೂಲೋಕದಲ್ಲಿ ೧೮

## ರಾಜ್ಯಪಾಲನ ಸಂಧಿ

ಸುಮುಖದಿ ಸುಖದಲ್ಲಿ ಮತ್ತೆ ಕೆಲವು ಕಾಲ
ಗಮಿಸಲೊಂದಾನೊಂದು ಪಗಲು
ನಮಿರಾಜ ವಿನಮಿರಾಜರು ದೀಕ್ಷೆವಡೆದ ಸಂ
ಯಮವಾರ್ತೆ ಬಂದಿತು ನೃಪಗೆ ೧

ಉಗುಳ್ದನಾಕ್ಷಣವೆ ತಂಬುಲವ ಕೊರಳ ಸೆರೆ
ಬಿಗಿದು ಕಣ್ಣೀರ್ಗಳುಮ್ಮಿದುವು
ಒಗಲೀಯದೊತ್ತಿ ನಿಲ್ಲಿಸಿದನು ಮೈದುನ
ರಗಲೆ ನೋವಹುದು ಸೈರಿಸಿದ ೨

ಅರಮನೆಗೆದ್ದನಾಗಳೆ ಸುಭದ್ರಾದೇವಿ
ಪಿರಿದು ಶೋಕಿಸುತಿರಲವಳ
ಸುರುಚಿರೋಕ್ತಿಯೊಳು ಸಂತೈಸಿದನಾ ಜಾಣ್ಮೆ
ಭರತೇಶಗೇನೆಂದು ಪೊಸತೆ ೩

ಅಳಿಯಂದಿರೆಡೆಗೆ ನಾನಿದ್ದೆನಂಜಿದಿರಿಯೆಂ
ದೊಳನುಡಿದೋರಿ ರಾಯಸವ
ಕಳುಹಿ ಸಂತೈಸಿ ಸಂತೋಷದಿ ಕಾಲವ
ಕಳೆಯುತಿರ್ದನು ಮಹೋದಾತ್ತ ೪

ಸ್ಪೃಹೆಮಾಡಿದರ್ಥವ ಕೊಡುವ ಚಿಂತಾಮಣಿ
ಮಹಿತಾರ್ಥ ನವಸಿದ್ಧಿಯುಂಟು
ಗುಹೆಯಲ್ಲಿ ಪ್ರಭೆದೋರ್ಪ ಕಾಕಿಣಿಯುಂಟೆನ್ನ
ಗೃಹದೊಳಿರನೆ ಸುಖದಲ್ಲಿ ೫

ಪರಬಾಧೆ ತನಗಿಲ್ಲ ತಾನಿನ್ನು ದಂಡೆಯ್ದಿ
ಪರರ ಸಾಧಿಪ ಚಿಂತೆಯಿಲ್ಲ
ಪರವಿದು ತನ್ನದಿದೆಂದರಿದಾತ್ಮತ
ತ್ಪರನಾಗಿ ಭೋಗಿಸುತಿರ್ದ ೬

ಗಂಧಕುಟಿಗಳು ಚಾರಣರಡಿಗಡಿಗೆ ಸಂ
ಬಂಧಿಸುತಿಹೆರಲ್ಲಿಗಲ್ಲಿ
ಗಂಧೇಭ ಜಾತ್ಯಶ್ವವಲ್ಲಲ್ಲಿ ಹುಟ್ಟಿ ವ
ಸುಂಧರೆ ಸುಲಭವಾಗಿಹುದು ೭

ಅಲ್ಲಲ್ಲಿ ರತ್ನ ಹುಟ್ಟಿಹುವು ಹೂಳಿದ ನಿಧಿ
ಪಲ್ಲುಗಿರಿದು ತೋರುತಿಹುವು
ಅಲ್ಲದೆ ಕೊನೆಯಂತೆ ಚಿನ್ನ ಹುಟ್ಟಿಹುದೇನ
ಸೊಲ್ಲಿಪೆನವನ ಕಾಲದೊಳು ೮

ಕಾಡೆಲ್ಲ ಶ್ರೀಗಂಧ ವೃಕ್ಷ ಕಪ್ಪುರವಾಳೆ
ಕೂಡೆ ಕತ್ತುರಿಮಿಗದೊಡ್ಡು
ನಾಡೆಲ್ಲ ತ್ಯಾಗಿ ಭೋಗಿಗಳ ಸಂಪದದಲ್ಲಿ
ಕೋಡಿವರಿದುದೇನನೆಂಬೆ ೯

ನೀಲಾಬ್ಜ ತಾವರೆ ನೆರೆದ ನೀರ್ಗೆರೆ ಗಂಧ
ಶಾಲಿ ಜೋತೊಲೆದ ಗದ್ದೆಗಳು
ಗಾಳಿ ಘಮ್ಮೆಂಬ ನಾನಾ ವನಗಳು ರಸ
ದಾಳಿಯ ಮಲೆ ವಿರಾಜಿಪುದು ೧೦

ಊರೂರೊಳನ್ನವೃತಾನ್ನ ಛತ್ರ ದಾರಿಯೊಳೆಳೆ
ನೀರು ಸಕ್ಕರೆಯರವಟಿಗೆ
ವಾರ ತಿಥಿಗೆ ನೋಂಪು ಮುನಿಭುಕ್ತಿ ವಿಪ್ರಸ
ತ್ಕಾರ ಭೋರೆನಲೊಪ್ಪುತಿಹವು ೧೧

ಧರೆಗೆ ಸ್ವರ್ಗಕ್ಕೆ ಸುರನೋಪತಿ ನಡೆವುದು
ಸಿರಿ ಸರ್ವದೇಶ ತುಂಬಿಹುದು
ಧರೆಯನಾಳುವ ಚಿಂತೆ ತನಗಿಲ್ಲದಿಪ್ಪನಾ
ಭರತೇಶನೇನ ಬಣ್ಣಿಪೆನು ೧೨

ದೇಗುಲ ಭಾರವ ಗೋಡೆ ಕಂಭದ ಮುಂಡೆ
ಗಾಗಿಸಿ ದೇವರಿಪ್ಪಂತೆ
ಭಾಗಿಸಿ ಧರೆಯ ದಂಡುಗಪನಾಪ್ತರಿಗೆ ಸಂ
ಯೋಗಿಸಿ ಸುಖದಿ ತಾನಿಹನು ೧೩

ಪುಣ್ಯಫಲವನುಂಡು ತೀರಿಸುತಾತ್ಮ ಲಾ
ವಣ್ಯವನೊಳಗೆ ನಿಟ್ಟಿಸುತ
ಗಣ್ಯವೆ ಮುಕ್ತಿಯೆಂದೆಂಬಭಿಪ್ರಾಯವ
ರೇಣ್ಯದೊಳಿರ್ದನಾ ಧನ್ಯ ೧೪

ಒಪ್ಪುವ ಧ್ಯಾನಯೋಗಾನಿಲಬಲದಿಂದ
ಕಪ್ಪಿನ ಮುರಿಮೀಸೆ ಮೆರೆಯೆ
ಇಪ್ಪತ್ತೇಳೆಂಟು ವರಿಸದ ಜವ್ವನ
ತಪ್ಪದಿರ್ದನು ಬಹುಕಾಲ ೧೫

ಸರಸಿಜಾಕ್ಷಿಯರೊಡನರ್ತಿಮಾಡುತ ಮೂರು
ವರೆಕೋಟಿ ಬಂಧುವರ್ಗವನು
ಹರುಷವೇರಿಸುತ ಷಟ್ಖಂಡ ಜೀಯೆನೆ ಚಕ್ರ
ಧರನಿರ್ದನೊಲಿದಯೋಧ್ಯೆಯೊಳು ೧೬

# ಭರತೇಶ ನಿರ್ವೇಗ ಸಂಧಿ

ಕೀರ್ತಿಗೆ ತ್ರಿಭುವನ ಸಾಲದು ತೇಜಕೆ
ಮಾರ್ತಾಂಡ ಸಾಟಿಯಲ್ಲೆಂದು
ಕೀರ್ತಿಸೆ ನರ ಸುರರಾಳುತಿರ್ದನು ಚಕ್ರ
ವರ್ತಿ ಭೂತಳವನೇನೆಂಬೆ ೧

ಆ ವಿಭು ಮತ್ತೊಂದು ಮೂವತ್ತೆರ
ಳ್ಸಾವಿರ ಮುಕುಟವರ್ಧನರ
ತೀವಿದೊಡ್ಡೋಲಗಮೊಳಗಿರಲೊಂದು ಸು
ಖಾವಾಪ್ತಿ ತೋರಿತೇನೆಂಬೆ ೨

ನಿನ್ನಯ ಮುಖಕಿದು ಸರಿಯೊ ಮೇಣಲ್ಲವೊ
ಚನ್ನಿಗರರಸ ನೀನೊಲಿದು
ಚೆನ್ನಾಗಿ ನೋಡೆಂಬುವೊಲು ಮುಖಚಿತ್ರಕ
ಕನ್ನಡಿವಿಡಿದನಾ ನೃಪಗೆ ೩

ಹೊಳೆಹೊಳೆದರಸ ನಿಟ್ಟಿಸುವಾಗ ಮೊಗವೆಡ
ಬಲಕೊಲೆವಂದವೊಪ್ಪಿದುದು
ಇಳೆಯೊಡೆತನವಿನ್ನು ಸಾಕೆಂದು ಮನ ಹೇಸಿ
ತಲೆಗೊಡಹುವನೊಯೆಂಬಂತೆ ೪

ಚಿರಕಾಲ ಬೇಟವ ಮಾಡಿ ಮುಕ್ತ್ಯಂಗನೆ
ಕರೆಯುಟ್ಟಿದಾ ದೂತಿ ಬಂದು
ಪೊರೆಸಾರ್ದು ಪೇಳ್ವಂತೆ ನೃಪನ ಕೆನ್ನೆಯೊಳೊಂದು
ನರೆಯಿದ್ದುದಾ ಸಮಯದೊಳು ೫

ಮುಟ್ಟಿಲಾಗಿರ್ದುದಾಯುಷ್ಯ ಮುಕ್ತಿಗೆ ತಾನು
ತೊಟ್ಟನೆ ನಾಳೆ ಲಂಘಿಸುವ
ತಿಟ್ಟವಿರ್ದುದು ಘಾತಿಯಾ ದಿನ ಜಾರುವ
ಕಟ್ಟಣೆಯಿರೆ ಕಂಡನೊಳಗೆ ೬

ಮರೆದಿರ್ದೆನಹುದೆನ್ನನೀ ನರೆ ಜನಿಸಿಯೆ
ಚ್ಚರಿಸಿತಲ್ಲಾಯೆಂದು ನಕ್ಕ
ಹರಿದುದು ಸಂಸಾರಸುಖದಾಶೆ ಮನದಲ್ಲಿ
ನೆನೆದುದಾ ನೃಪಗೆ ವಿರಕ್ತಿ ೭

ಸುಡು ಸುಡು ನೆನ್ನ ನಡೆಯ ತಪಸೆಂಬ ಪಾ
ಲ್ಗಡಲೊಳು ಮೂಡಿ ಮುಳುಗದೆ
ಜಡದೇಹ ಸುಖವೆಂಬ ಲವಣಸಮುದ್ರವ
ಕುಡಿದು ಬಾಯಾರಿದೆನೆಂದ ೮

ನೋಡು ನೋಡೆನ್ನೊಡಹುಟ್ಟಿದವರು ಮೀಸೆ
ಮೂಡುವಂದೆ ದೀಕ್ಷೆವಡೆದು
ಕೂಡಿದರಮೃತವನಿಂದುವರೆಗೆ ಜೋಲಿ
ಮಾಡಿದೆ ನಾನೊಬ್ಬನೆಂದ ೯

ಒಡಹುಟ್ಟಿದವರ ವಾರ್ತೆಯದೇಕೆ ಮತ್ತೆಯೆ
ನ್ನೊಡಲೊಳು ಹುಟ್ಟಿದರ್ಭಕರು
ಕಡುದೀಕ್ಷೆಯೊಳು ಸಿದ್ಧಿವಡೆದರಲ್ಲವೆ ನನ್ನ
ಜಡತೆಯ ನೋಡು ನೋಡೆಂದ ೧೦

ಆಗಲಿ ನಮ್ಮವರೆಲ್ಲ ಮುಕ್ತಿಗೆ ಮುಂದೆ
ಹೋಗಲಿ ಹೋದರೇನಾಯ್ತು
ಹೋಗುತ ಹಾದಿಯನುಡೆ ಸುತ್ತಿಕೊಂಡರೆ
ಲಾಗಿಸಿದರೆ ಮಾರ್ಗವಿದೆಕೊ ೧೧

ಬುದ್ಧಿಸಾಗರನೊಡನೆದ್ದು ಕೈಮುಗಿದು ಸು
ವೃದ್ಧಿ ಸಂಪದವಿದರಿಂದ
ಉದ್ದಿದ ಸಿರಿಯುಂಟೆ ಸುಖಿಸೀಗ ತಪಸಿನ
ಸುದ್ದಿಯೇಕವನೀಶಯೆಂದ ೧೨

ಅಲ್ಲವೈ ಕೇಳೆಂದು ಪುರುನಾಥ ತನಗೇನು
ಮಿಲ್ಲದೆ ತಪಸಿಗೆಯ್ದಿದನೆ
ಬಲ್ಲವಗೀ ತನು ಸ್ಥಿರವಲ್ಲ ಕುಟ್ಟಿಗೊಂ
ಡಲ್ಲವೈಯೆಂದನಾ ಚಕ್ರಿ ೧೩

ಆರು ಖಂಡವ ಗೆಲ್ದರೇನಾಯ್ತು ಕರ್ಮದ
ಮೂರು ಕಾಂಡವ ಗೆಲ್ಲದೆನಗೆ
ಮೂರು ರನ್ನವೆ ಜೀವಹಿತವ್ವೆಸೆ ಹದಿನಾಲ್ಕು
ಸೋರೆಯು ಮಣಿಯೊಳೇನಂದ ೧೪

ಅರಿಯದಾನೊಂದನಾಡಿದೆನು ನೀ ಕಂಡುದೆ
ತೆರನೆನಗದು ತಾನೆ ಶರಣು
ಮರೆವುದೆಮ್ಮಯ ತಪ್ಪನೆಂದು ಚಕ್ರಿಯ ಪಾದ
ಕೆರಗಿ ಕುಳಿತನವನೊಡನೆ ೧೫

ಮಗನೆ ಬಾ ದೊಡ್ಡಣ್ಣ ರಾಜ್ಯವನಾಂತು ದೀ
ಕ್ಷೆಗೆ ನನ್ನ ಕಳುಹೆಂದು ಚಕ್ರಿ
ತೆಗೆದಪ್ಪಿ ನುಡಿದನಾ ನುಡಿಗೇಳ್ದು ಕಣ್ಣನೀ
ರೊಗುತ ಮೂರ್ಛೆಗೆ ಸಂದನವನು ೧೬

ಆನೆಯ ರಂಜಿಕೆ ಕಳಭಕಹುದೆ ದೇವ
ರಾನುವ ರಾಜ್ಯಭಾರವನು
ಆನಲಾಪೆನೆ ನಾನು ಸ್ವಾಮಿಯಿಂತೇಕೆ ಸಂ
ಧಾನಿಪುದೆಂದನಾ ಕುವರ ೧೭

ದೇವರಿಗಿಷ್ಟವಾದನ್ನ ಭೂಷಣ ವಸ್ತ್ರ
ವೀವುತ ಪೊರೆದಿಷ್ಟು ಕಾಲ
ಈ ವೇಳೆಯೊಳು ದೇವರೇಕೆ ಕೊಕ್ಕರಿಸಿದ
ಭೂವಲಯವನೀವುದೆಂದ ೧೮

ನುಡಿಜಾಣನೆಂಬುದ ಬಲ್ಲೆನ್ನೈ ಮಗನೆಯಿಾ
ಪೊಡವಿ ಹೆಡ್ಡಗೆ ಕಷ್ಟವಹುದು
ಕಡುಜಾಣಗಿದು ಕಷ್ಟವಲ್ಲಿಷ್ಟವಹುದೊಡಂ
ಬಡು ಪಟ್ಟಕೆಂದನು ಜನಕ ೧೯

ಮೋಕ್ಷರಾಜ್ಯಕೆ ದೇವರಿಂಚ್ಛೈಸಿ ನನಗೆ ಮ
ತ್ತೀ ಕ್ಷೇತ್ರವಿತ್ತರೇಕಹುದು
ದೀಕ್ಷೆಯೆ ಶರಣು ನಾನೂ ಬಪ್ಪೆನೆಂದವ
ನಾಕ್ಷೇಪವಿಲ್ಲದಾಡಿದನು ೨೦

ಅಪ್ಪಾಜಿ ನನಗೆ ರಾಜ್ಯವನಿತ್ತು ಮುನಿಯಾದ
ನೊಪ್ಪಿಸಬೇಕಾನು ನಿನಗೆ
ಒಪ್ಪಬೇಕದಕೆ ನೀನೀಗ ಸ್ವೈರಿಸಿ ಹಿಂದೆ
ಬಪ್ಪುದು ತಪಸಿಗೆಮ್ಮಂತೆ ೨೧

ಆ ನುಡಿಗೇಳ್ದಿದೆ ಹವ್ವನೆ ಹಾರಿ ಸು
ಮಾನಗುಂದಿರ್ದನಾ ಕುವರ
ನೀನುತ್ತರಂಗೊಟ್ಟರೆನ್ನಾಣೆ ನಿಲ್ಲೆಂದು
ಸೂನುವ ಮಾತ ಕಟ್ಟಿದನು ೨೨

ಕರವಿಡಿದೊಡನರ್ಕಕೀರ್ತಿರಾಜನನೆತ್ತಿ
ಹರಿಪೀಠದಲ್ಲಿ ಕುಳ್ಳಿರಿಸಿ
ದೊರೆ ತನ್ನ ಮಕುಟವನಾತಗಿಕ್ಕಿದನು ಭೂ
ಸುರವೃಂದ ಜಯ ಜಯಯೆನಲು ೨೩

ತೆಗೆದಾದಿರಾಜನ ಕೆಲದಲ್ಲಿ ಪುಟ್ಟ ಗ
ದ್ದುಗೆಗಿಟ್ಟು ಯುವರಾಜನೆಂದು
ಮಿಗೆ ಕಂಠಮಾಲೆಯನಿಕ್ಕಿ ಸೇಸೆಯನಿಟ್ಟು
ಸುಗುಣ ರಾಜೇಂದ್ರ ಮನ್ನಿಸಿದ ೨೪

ಕಂಬನಿಬಿಡುತಿರ್ದರಾ ಪುತ್ರರೊಡನೆನ್ನ
ಹಂಬಲ ಬಿಟ್ಟು ನೀವಿವರ
ಬೆಂಬಳಿವಿಡಿದಿಹುದೆಂದು ಭೂಪಾಲ ಕ
ದಂಬಕೆ ಕೈವೀಸಿ ಬಿಟ್ಟ ೨೫

ಮತ್ತೆ ನೋಡಿದನೆ ತನ್ನಯ ಪುತ್ರರಿಂದವ
ರತ್ತರಳಲಿಯೆಂದು ನೂಂಕಿ
ಮತ್ತೇಭದಂತೆ ಲೀಲೆಯೊಳು ತಪೋವನ
ದತ್ತೆಯ್ದುತಿರ್ದನಾ ಧೀರ ೨೬

ವಸುಧಾಧಿಪತಿ ದೀಕ್ಷೆಗಡಿಯಿಟ್ಟನೆನೆ ಕೇಳ್ದು
ಮಸಗಿತು ಸತಿಯರ್ಗೆ ವಿರಹ
ಬಿಸಿಲೊಳೀಡಾಡಿದ ಮಾಂದಳಿರಂತಾದ
ರಸುವಿಗೆ ಮೂರ್ಛೆ ತಟ್ಟಿದುದು ೨೭

ಅಕ್ಕಟ ಚಕ್ರವರ್ತಿಯ ಮಹಾಭಾಗ್ಯ ಕ
ಣ್ಣಿಕ್ಕುವಷ್ಟಕೆ ಮಾಯವಾಯ್ತು
ಕಕ್ಕುಲಿತೆಯ ಸುಡು ಸುಡು ಕಷ್ಟವೆಂದು ಹೆ
ಮ್ಮಕ್ಕಳೆತ್ತರು ತಮ ತಮಗೆ ೨೮

ಬಾಳ ಬೀಸಾಡಿ ಹೋದವನಲ್ಲ ಮುಕ್ತಿಗೆ
ನಾಳೆ ಪಯಣವೆಂಬುದರಿದು
ಪೇಳದೆಯಿದ್ದದನ್ನೈಸೆ ನಮಗೂ ದೀಕ್ಷೆಯೆ ಗತಿ
ಯೇಳಿರೆಂದನುವಾದರೆಲ್ಲ ೨೯

ಸುಖದಲ್ಲಿ ಬಾಳ್ದು ನಿಮ್ಮಯ್ಯನಂದದಿ ಮೋಕ್ಷ
ಸುಖವೆಯ್ದಿರೆಂದೊಲ್ದು ಪರಸಿ
ಸುಖಕಾಗಿ ನಾವು ದೀಕ್ಷೆಯನಾಂಪೆವೆಂದೊರೆ
ದಖಿಲ ನಾರಿಯರು ಸಾಗಿದರು ೩೦

ತಡೆಯಬಾರದು ತಮ್ಮ ಪತಿಯು ಕೈಯೊಳೆ ದೀಕ್ಷೆ
ವಡೆದು ಸುಖಿಗಳಾಗಲೆಂದು
ಒಡನೆ ಪನ್ನಂಗ ಪಲ್ಲಕ್ಕಿಯೊಳ್ತಾಯ್ಗಳ
ಬಿಡುಗೆಗೊಟ್ಟರು ಕುಮಾರಕರು ೩೧

ಪುರದ ಕಾಂತೆಯರೆಲ್ಲ ಮುದಿಲು ಮಾಡವನೇರಿ
ಪರಿಕಿಸಿ ಗೋಳಿಡುತಿರಲು
ಪರಿವಾರ ಪ್ರಜೆ ಶೋಕಗೈಯೆ ಪೆಂಗಳು ಹಿಂದೆ
ಬರೆ ರಾಯ ಮುಂದೆಯ್ದುತಿರ್ದ ೩೨

ಅಯ್ಯೋ ನಮ್ಮೊಡೆಯನೆ ಸಿರಿಯ ಕಾಮನ ಬಿಲ್ಲ
ರಯ್ಯವೊಲ್ತೋರಿ ಜಾರುವೆಯ
ಮೆಯ್ಯ ಪೊತ್ತವರ ಸುಖವ ಸುಡಲೆಂದು ಪೆ
ಣ್ಬುಯ್ಯಲೆದ್ದುದು ಪುರದೊಳಗೆ ೩೩

ಬೀದಿಯೊಳ್ನೀನೆಯ್ದುವಾಗ ಕಂಡರೆ ಸ್ವರ್ಗ
ವಾದಂತೆ ನಲವಪ್ಪುದೆಮಗೆ
ಹೋದುದೆ ನಮ್ಮ ಸಂಪತ್ತು ಹಾ ಹಾ ಯೆಂದು
ವೇದನೆಬಟ್ಟರಲ್ಲಲ್ಲಿ ೩೪

ಪೆಂಡಿರು ಮಕ್ಕಳು ಸೊಸೆಯರುವೆರಸಿ ಷ
ಟ್ಖಂಡವ ಜಯಿಸಿ ಮತ್ತವರ
ಕೊಂಡೊಯ್ಯುತಿರ್ದೆಯ ತಪಕೆಂದು ಪೆಂಗಳ
ತಂಡ ಗೋಳಿಟ್ಟುದಲ್ಲಲ್ಲಿ ೩೫

ಶೋಕಿಸುವವರತ್ತ ನೋಡದೆ ನೃಪತಿ ಪ
ರಾಕಿಂದ ಪುರವನು ದಾಂಟಿ
ಭೀಕರಾರಣ್ಯವ ಸಾರ್ದನು ಬಳಸಿರ್ದ
ನೇಕ ಪರಿಸ್ಪಂದವೆರಸಿ ೩೬

ಮಲಯಜತರುವಿರ್ದುದದರ ಮೂಲದೊಳೊಂದು
ಶಿಲೆಯಿರ್ದುದತಿ ತೆರಪಾಗಿ
ಕೆಲದವರ್ಜಯ ಜಯಯೆನಲು ಪಲ್ಲಕ್ಕಿಯಿಂ
ದಿಳಿದನಾ ನಿಶ್ಯಂಕಮಲ್ಲ ೩೭

# ಧ್ಯಾನ ಸಾಮರ್ಥ್ಯ ಸಂಧಿ

ಕೆರೆಯ ಮರೆಯೊಳು ಸಿದ್ಧಾಸನದಲ್ಲಿ ಬಂ
ಧುರಶಿಲೆಯೊಳು ರಾಯ ಕುಳಿತು
ಗುರುವಿಲ್ಲ ತನಗೆ ತಾನೆ ಗುರುವೆಂಬುದ
ಹೆರಹಿದನೇನ ಬಣ್ಣಿಪೆನು ೧

ದೇಹಕಲ್ಲದೆ ವಸ್ತ್ರಭೂಷಣದೊಪ್ಪ ನಿ
ರ್ದೇಹದಾತ್ಮನಿಗಿಲ್ಲವಿವರ
ಮೋಹವೇನೆಂದು ವಸ್ತ್ರಾಭರಣವ ಬಿಸು
ಟಾ ಹೇಮವರ್ಣನೊಪ್ಪಿದನು ೨

ಆಸನಾಯತ ಮುಚ್ಚಿದಕ್ಷಿಗಳಿಂದ ಮ
ಹಾ ಸಿದ್ಧಬಿಂಬದಂತೆಸೆವ
ಭಾಸುರ ಬಾಹ್ಯಸಾಮಗ್ರಿಯೊಳ್ಮುನಿ ಧ್ಯಾನ
ಬೇಸರಿಸದೆ ನಿಂದನೊಳಗೆ ೩

ನೋಡುತಿರ್ದನು ತನ್ನ ನಿಜವ ಕರ್ಮಗಳು ಕೆ
ಟ್ಟೋಡುತಿರ್ದುವು ಕಂಡ ಕಡೆಗೆ
ಕೂಡೆ ಕೂಡಾನಂದ ಸುಜ್ಞಾನ ಸುಪ್ರಭೆ
ಮೂಡುತಿರ್ದುವು ನಿಜಾತ್ಮನೊಳು ೪

ಎರಡು ಕಂಗಳ ಮುಚ್ಚಿ ಸುಜ್ಞಾನವೆಂಬ ದೊ
ಡ್ಡರಿಗಣ್ಣ ತೆಗೆದಾತ್ಮ ಶಿವನು
ಅರಿ ಕರ್ಮದನುಚರಿಪ್ಪಂಗ ಮೂರೆಂಬ ಮು
ಪ್ಪುರಗಳ ಸುಡುತಿರ್ದನಾಗ ೫

ಧ್ಯಾನವೆಂಬುದೆ ಧ್ಯೇಯವೆಂಬ ಧ್ಯಾನಿಪನೆಂಬ
ಧ್ಯಾನದ ಫಲನೆಂಬ ನಾಲ್ಕು
ತಾನೊಬ್ಬನಾಗಿ ತನ್ನೊಳಗೆ ತಾನಿರ್ದನಾ
ತ್ಮಾನಂದನಾ ದಿವ್ಯಯೋಗಿ ೬

ನಗುವಂತೆ ಮೊಗವಿರ್ದುದಲುಗದೆ ಮೈಯಿರ್ದು
ಮೊಗುವೊಲಿರ್ದುದು ಹೊಸ ಕಾಂತಿ
ಪ್ರಗುಣ ಯೋಗಿಯ ನೋಡಿ ತುಟಿ ಮಿಸುಕದೆ ಮಂದಿ
ತೆಗೆದಿರ್ದುದುರೆ ಬೆರಗಾಗಿ ೭

ಬಳಬಳನುದುರುತಿರ್ದುದು ಕರ್ಮ ಚಿತ್ಪ್ರಭೆ
ಚಳಚಳನೊಳಗೇರುತಿಹುದು
ಎಳನೇಸರೊಳಗೈಕ್ಯವಾದಂತೆ ಪರಮಾತ್ಮ
ಕಳೆಯೊಳಿರ್ದನು ಯೋಗಿರತ್ನ ೮

ತೊಳಲಿ ನಾಡೆಲ್ಲವ ತನ್ನಯ ಮನೆಯ ಹೊ
ಕ್ಕಲಸಿಕೆಗಳೆವನಂದದೊಳು
ಇಳೆಯ ಚಿಂತೆಯೊಳಾಡಿದವನೀಶ ತನ್ನಾತ್ಮ
ನೊಳು ನಿಂದು ವಿಶ್ರಮಿಸಿದನು ೯

ಎರವೆಂದು ಕಂಡು ಮುನ್ನಾಳ್ದನು ರಾಜ್ಯವ
ಸ್ಥಿರವೆಂದೆ ತನ್ನ ಕಂಡಿರ್ದ
ಎರವೆಂಬುದೆರವಾಯ್ತು ಸ್ಥಿರ ತಾನೆ ಸ್ಥಿರವಾಯ್ತು
ಭರತೇಶ ಕಂಡಲ್ಲಿ ಹುಸಿಯೆ ೧೦

ಗುರುಹಂಸನಾಥನೆಂಬಾನೆಂಬ ಸಂಕಲ್ಪ
ವೆರಡಿರುತಿರ್ದುದು ಮತ್ತೆ
ಎರಡಳಿದೊಂದಾಗಿ ನಿರ್ವಿಕಲ್ಪದೊಳು ಭಾ
ಸುರಯೋಗಿ ತನ್ನೊಳಗಿರ್ದ ೧೧

ತರುಣಿ ಪುಷ್ಪವ ನೀಡುತಿರೆ ಮಂಚವಲುಗಲಾ
ಕರೆದ ಪೂ ಜಗುಳಲಾರ್ದುದು
ಭರತೇಶ ಮುನಿಯಾದ ನಲ್ಲೆಯೆಂದಿಂದ್ರನ
ಚ್ಚರಿವಟ್ಟು ನುಡಿದನಂಗನೆಗೆ ೧೨

ಜಾರಿದುವರುವತ್ತು ಮೂರು ಕರ್ಮಗಳಾಗ
ಮೀರಿದನಂತರಾತ್ಮತೆಯಾ
ತೋರಿತು ಪರಮಾತ್ಮ ಸಂಪತ್ತು ಮುನಿಯಲ್ಲ
ಧೀರನಾಕ್ಷಣ ಜಿನನಾದ ೧೩

ಕವಿದ ಕರ್ಮದ ಮುಸುಕಳಿಯೆ ಶುದ್ಧಾತ್ಮನ
ಸ್ತ್ರುವಿನ ಚಿತ್ಪ್ರಭೆ ಪೊರಪೊಣ್ಮೆ
ರವಿ ಚಂದ್ರಕೋಟಿಪ್ರಕಾಶ ಮೆಯಿಂದುಕ್ಕಿ
ಭುವನವ ತುಂಬಿತಾಕ್ಷಣವೆ ೧೪

ವಿಲಸಿತ ಸಿದ್ಧಲೋಕಕೆ ದಾಳಿಯಿಡುವೆನೆಂ
ದೆಳಸಿ ಪ್ರಸ್ಥಾನಗೈದಂತೆ
ನೆಲದಿಂದ ಮೇಲೈದುಸಾವಿರ ಮಾರಿನೊ
ಳ್ನೆಲಸಿದನಾ ಪರಮಾತ್ಮ ೧೫

ತೆರವಿಡಿದೊತ್ತಿಲಿರ್ದವರಾಗ ದೂರವಾ
ದರು ಕೂಡೆ ಕೈಗಳ ಮುಗಿದು
ಶಿರವೆತ್ತಿ ನೋಡುತ ಜಯ ಜಯವೆನುತಿರೆ
ಭರತಜಿನೇಂದ್ರ ಮೇಲಿರ್ದ ೧೬

ಮೇಲಣಿಂದಿಂದ್ರನೆಯ್ತರುತಿರಲಿತ್ತ ಪಾ
ತಾಳದಿಂದುರಗೇಂದ್ರ ತನ್ನ
ಬಾಲೆವೆರಸಿ ಫಣಿಗಣಗೂಡಿ ಸುರವಾದ್ಯ
ಜಾಲದೊಳೆಯ್ತರುತಿರ್ದ ೧೭

ಸುರಪನು ಫಣಿಪನು ತಮ್ಮ ತಮ್ಮರಸಿಯ
ರ್ವೆರಸಿ ಪಾದಾನತರಾಗಿ
ಪರಿಪರಿಯಲಿ ಸ್ತುತಿಸಿದರು ಪೂಜಿಸಿದರಾ
ದುರಿತನಿರ್ಧೂಮಧಾಮನನು ೧೮

ಅರುಹ ನಮ್ಮಂಬಿಕೆಯರಿಗೆ ನಾದುನಿಯರ್ಗೆ
ಕರುಣಿಸು ದೀಕ್ಷೆಯನೆಂಧು
ಒರೆದರ್ಕಕೀರ್ತ್ಯಾದಿ ರಾಜರೆರಗೆ ಜಿನೇ
ಶ್ವರನೇಳಿರೆನಲೆದ್ದರೊಡನೆ ೧೯

ಉರಗೇಂದ್ರನರಸಿಯರಿಂದ್ರನ ಸತಿಯರು
ತೆರೆವಿಡಿದರು ನಲ್ಮೆಯಿಂದ
ಕರೆತಂದು ಮುನಿಗಳಾ ಪುಣ್ಯಕಾಂತೆಯರನಾ
ತೆರೆಯೊಳು ಪುಗಿಸಿದರಾಗ ೨೦

ಸುರವಾದ್ಯ ಮೊಳಗೆ ತೇಜೋರಾಶಿ ನೊದಲಾದ
ಗುರುಗಳು ಪೊರ್ದಿ ಸತ್ಕರಿಸೆ
ನಿರುಪಮ ದೀಕ್ಷೆಯನಾ ಪುಣ್ಯಸತಿಯರೆ
ಲ್ಲರಿಗಿತ್ತನಾ ಪರಂಜ್ಯೋತಿ ೨೧

# ಚಕ್ರೇಶ ಕೈವಲ್ಯ ಸಂಧಿ

ನಡುವಗಲಲ್ಲಿ ಘಾತಿಯನಿಕ್ಕಿ ಚಕ್ರಿ ಸಂ
ಗಡದವರ್ಗಿತ್ತು ದೀಕ್ಷೆಯನು
ಕಡುಚಿತ್ರ ವೃಷಭಯೋಗಿಗೆ ಘಾತಿಕರ್ಮವಾ
ಕಡೆವಗಲೊಳು ಕೆಟ್ಟುದೊಡನೆ ೧

ವಿರಚಿಸಿದರು ಕೂಡೆ ಗಂಧಕುಟಿಯನೊಲ್ದು
ನರಸುರೋರಗರರ್ಚಿಸಿದರು
ಭರತಜಿನನ ಸಾರೆ ವೃಷಭಜಿನೇಶ್ವರ
ನರಮನೆಗಟ್ಟಿದನಾಗ ೨

ಆ ರಾತ್ರಿ ಬೆಳಗಿನೊಳಗೆ ಹೋಯ್ತು ರವಿ ಮೂಡ
ಲಾರಾಧ್ಯ ಭರತ ಸರ್ವಜ್ಞ
ದೂರಿತ ನಿರ್ಘಾತಿಗಳನಿಕ್ಕಲನುವಾದ
ವೀರವನೇನ ಬಣ್ಣಿಪೆನು ೩

ಗಂಧಕುಟಿಯನುಳಿದನು ದೀಕ್ಷೆಗೊಂಡ ಶ್ರೀ
ಗಂಧವೃಕ್ಷದ ಮೊದಲ್ಗಿಳಿದು
ಬಂಧುರಶಿಲೆಯಲ್ಲಿ ಪಲ್ಯಂಕಯೋಗಾನು
ಬಂಧದಿ ಕುಳಿತನಾ ಸ್ವಾಮಿ ೪

ರಾಜಿಪ ಶಿಲೆಯಲ್ಲಿ ಬಾಹ್ಯಾಂಗವಿರ್ದುದು
ತೈಜಸ ಕಾರ್ಮಣಗೂಡಿ
ಮೂಜಗದುದ್ದದೊಳಾತ್ಮ ನಿಂದಿರ್ದನು
ಸೋಜಿಗವಲ್ತೆ ಚಿದ್ಘನತೆ ೫

ಎಳೆವಿಸಿಲೆಂತು ಬೆಳ್ಮುಗಿಲೆಂತು ಮಂಜೆಂತು
ಬೆಳುದಿಂಗಳೆಂತೊಮ್ಮೆ ಜಗವ
ಮುಳುಗಿಕೊಂಡಿಪ್ಪವಂತಾತ್ಮ ಮೂಜಗವನ
ಗ್ಗಳವೆತ್ತು ತುಂಬಿರ್ದನಾಗ ೬

ಕೆಡಿಸಿದುವೆಪ್ಪತ್ತೆರಡೊಮ್ಮೆ ಕರ್ಮಗಳವ
ರೊಡನೆ ಬಿದ್ದುವು ಪದಿಮೂರು
ಕಡುಮಿಂಚಿನಂತಂಗ ಒಯಲಾಗೆ ಜಗದ ಮೇ
ಲ್ಗಡೆಗೆ ಲಂಘಿಸಿದನಾ ಸ್ವಾಮಿ ೭

ಭರತೇಶನೆಂಬುದು ದೇಹ ಹೋದಂವೆ ಹೋ
ಯ್ತುರಕೆ ಸಿದ್ಧರ ಸಮೂಹದೊಳು
ತಿರುಗದ ಹಾದಿಯ ಹೋಗಿ ಮುಕ್ತಿಯೊಳು ನಿಂ
ದಿರುತಿರ್ದನಾ ಸಿದ್ಧನತ್ತ ೮

ಶ್ರೀ ಹಂಸ ಹಂಸ ನೋಡೇನೆಂಬೆನೊಡನಿತ್ತ
ಲಾ ಹೊತ್ತಿನೊಳು ಪಂಚಸುತರು
ಮೋಹದ ಘಾತಿಯನಿಕ್ಕಿ ಬಾಂಗಡೆಯೊಳು
ತ್ಸಾಹವೆತ್ತಿರ್ದರಾಶ್ಚರ್ಯ ೯

ತಂದೆ ಹೋದಳಲರ್ಕಕೀರ್ತ್ಯಾದಿ ರಾಜರ್ಗೆ
ಸಂದಿಸಿತಿಲ್ಲ ನೋದರರು
ಒಂವೆ ಬಾರುನ್ನತಿವೆತ್ತುಪಕೆದೆಯೊಳಾ
ನಂದಿಸುತಿರ್ದರಚ್ಚರಿಸಿ ೧೦

ಭರತಸರ್ವಜ್ಞ ಮುಕ್ತಿಗೆ ಸಂದ ಶಿಲೆಯ ಹೆ
ತ್ತಿರ ವಜ್ರ ಹೋಮವ ರಚಿಸಿ
ಹರುಷನೃತ್ಯವನಾಡಲರ್ಕಕೀರ್ತ್ಯಾದಿ ರಾ
ಜರು ನೋಡುತಿರ್ದರರ್ತಿಯೊಳು ೧೧

ಭೂವಲಯದ ಭಾರವೆತ್ತ ತೊಂಬತ್ತಾರು
ಸಾವಿರ ಹೆಣ್ಣಾಟವೆತ್ತ
ಕೈವಲ್ಯ ಕ್ಷಣಕಹುದೆತ್ತಲೆಂದುರಗೇಂದ್ರ
ಭಾವಿಸಿ ಪೊಗಳ್ದನಾ ವಿಭುವ ೧೨

ತನಗೆ ತಾಂ ಗುರುವಾಗಿ ದೀಕ್ಷೆಯನಾಂತು ತ
ನ್ನನು ತಾನೆ ತನ್ನಲ್ಲಿ ನೋಡಿ
ತನುವಳಿದಮೃತವೆಯ್ದಿದನಹೊ ಪೂತು ಭಾ
ಷೆನುತಿರ್ದ ಷೊಳಟವಲ್ಲಾಡೆ ೧೩

ಮೆಯ್ಯ ದಂಡಿಸಿದನೆ ಭಿಕ್ಷೆಗೆಂದೊರ್ವರ್ಗೆ
ಕೆಯ್ಯೊಡ್ಡಿದನ ಚಕ್ರಧರನು
ಉಯ್ಯಲ ತೂಗಿದಂತಪ್ಪುತಕೆ ಸಂದ ಬ
ಲ್ಗೆಯ್ಯನಲ್ಲವೆ ಪುರೆಯಿಂದ ೧೪

ಸಾಕಾಗವದ ಪೇಳುತಿರೆ ಕಲಿಯುಗದ ರ
ತ್ನಾಕರಸಿದ್ಧಗಿಷ್ಟಿರಲಿ
ಸಾಕು ನಿಲ್ಲೆಂದಸುರೇಂದ್ರ ವಿನೋದಾರ್ಥ
ವಾಕುದೋರಿದನಸಿತರೊಳು ೧೫

ನಾನೆಷ್ಟರವನೆನ್ನು ರತ್ನಾಕರಸಿದ್ಧ
ತಾನೆಷ್ಟರವನು ಬಣ್ಣಿಪೊಡೆ
ನೀನೆಷ್ಟರವನೆಂದು ನಾಗೇಂದ್ರ ಪೊಗಳ್ದನ
ತ್ಯಾನಂದ ಮಿಗೆ ಚಕ್ರಧರನ ೧೬

ಅಹುದಲಾ ಗುಣಕೆ ಮತ್ಸರವೆ ಚಕ್ರಿಯವೊಲು
ಒಹುಭಾರವಾಂತಿರ್ದು ಕ್ಷಣಕೆ
ಸಹಜದಿ ಮುಕ್ತರಾದವರಾರು ನೀನಾಡ
ಬಹುದೆಂದನೊಡನೆ ದೇವೇಂದ್ರ ೧೭

ಆತನಂದದಿ ಮುಕ್ತಿ ನವಗಾಗಲೆಂದು ತ
ದ್ಭೂತಳಹೋಮ ಭಸ್ಮವನು
ಪ್ರೀತಿಯಿಂದಸುರೇಂದ್ರ ಧರಿಸಿದನುರಗೇಂದ್ರ
ಸಾತುರದಿಂದಿಟ್ಟ ತಾನು ೧೮

ನರಿದರ್ಕಕೀರ್ತ್ಯಾದಿರಾಜ ಮುಂತಾದ ಸ
ರ್ವರು ಧರಿಸಿದರಕ್ಕರಿಂದ
ಭರತನಾಥನ ಮೋಕ್ಷಕಲ್ಯಾಣ ಜಗವನು
ದ್ಧರಿಸಿತು ಸುಖವೆತ್ತರೆಲ್ಲ ೧೯

ಶ್ರೀ ಜಿನಸಭೆಯ ಬೀಳ್ಕೊಂಡಿತ್ತ ತಮ್ಮೊಡ
ನೋಜೆಯಿಂದೋಲೈಸಿ ಬರ್ಪ
ಪೌಜನೆಲ್ಲವನು ಬೀಳ್ಕೊಟ್ಟರ್ಕಕೀರ್ತ್ಯಾದಿ
ರಾಜರು ಹೊಕ್ಕರು ಪುರವ ೨೦

ಬಿಮ್ಮಗಿದ್ದುದು ಪುರ ಪ್ರಜೆಗಳ ಕಂಗಳೊ
ಳುಮ್ಮುತಿರ್ದುದು ಕಣ್ಣ ನೀರು
ಸುಮ್ಮನೆ ನೋಡುತ ಸುಯ್ಯುತ ಸಾರ್ದರು
ತಮ್ಮ ಚಾವಡಿಯನಾ ನೃಪರು ೨೧

ತಂದೆ ಕುಳ್ಳಿರುವ ಗದ್ದುಗೆಯ ಕಾಣುತ ಭುಗಿ
ಲೆಂದೆದ್ದುದೆದೆಯಲ್ಲಿ ಶೋಕ
ಬಂದುವು ಕಣ್ಣೀರು ಸ್ವಾಮಿ ಹಾ ಹಾ ಕೆಟ್ಟೆ
ವೆಂದು ಬಾಯ್ಬಿಟ್ಟೊರಲಿದರು ೨೨

ಧೈರ್ಯ ಜಾರಿದುದೋಜೆ ಹಾರಿತು ನುಡಿಯ ಚಾ
ತುರ್ಯವೆಂಬುದು ಬಯಲಾಯ್ತು
ಸೂರ್ಯನಿದ್ದವರಿಗಾಗಿರುಳಾಯ್ತು ಪಿತನ ಸೌಂ
ದರ್ಯದ ರೂಪು ತೋರದಿರೆ ೨೩

ಆಲಸ್ಯ ನಿನಗಿಲ್ಲ ನಿನ್ನ ಚಾವಡಿಗನು
ಕೂಲಸಂದಣಿ ತಪ್ಪದಿಂದು
ಹಾಳುಸುರಿವುತಿದೆಯೆಂತು ನೋಡುವೆವೆಂದು
ಬಾಲೆಯರಂತೆ ಶೋಕಿಪರು ೨೪

ಇಂತಳುತಿದ್ದಿದ್ದು ತಮ್ಮ ಬೇಗೆಯ ತಾವೆ
ಸಂತೈಸಿಕೊಂಡರು ಕೂಡೆ
ಅಂತದಕೆಲ್ಲರರ್ತಿಸಿದರು ಭರತ ಭೂ
ಕಾಂತಪುತ್ರರಿಗದು ಸಹಜ ೨೫

# ಮಂಗಳ ಸಂಧಿ

ಮುಕ್ತರೆಲ್ಲರು ಸರಿಯಹುದಾದರೇನಾತ್ಮ
ಶಕ್ತಿಯನರಿದಿಲ್ಲಿ ಮೊದಲು
ವ್ಯಕ್ತಭೋಗದೊಳಿರ್ದು ಕ್ಷಣಕೆ ಮುಕ್ತಿಗೆ ಸಂದ
ಯುಕ್ತಿಗೆನ್ನೆದೆ ಸೂರೆಹೋಯ್ತು ೧

ಮರೆಯೇಕೆ ಪ್ರಥಮಾನುಯೋಗದಿ ಮುಖ್ಯವ
ಕುರಿತು ಶಲಾಕೆಗೆ ಬಂದ
ಅರವತ್ತುಮೂರರೊಳಾಯ್ದುಕೊಂಡೀ ಜಾಣ
ರೆರೆಯನ ಪೊಗಳ್ದೆನರ್ತಿಯೊಳು ೨

ಬಗೆ ಮೆಚ್ಚಿ ಹಂಸನಾಥನೊಳಿರ್ದು ಕ್ಷಣಕೆ ಮು
ಕ್ತಿಗೆ ಸಂದ ಭರತಭಾಸ್ಕರನ
ಪೊಗಳದಿರ್ದಾಗ, ರತ್ನಾಕರಸಿದ್ಧ ನಾ
ಡುಗನಲ್ಲದೇನಾತ್ಮ ಸುಖಿಯೆ ೩

ಶೃಂಗಾರಕಾಗಿ ಕಷ್ಟರ ಕಥೆಗೇಳ್ದು ಜ
ನಂಗಳು ಕೆಡಬೇಡವೆಂದು
ಅಂಗಸುಖಿಯ ಮೋಕ್ಷಸುಖಿಯ ಕಾವ್ಯವನಿಷ್ಟು
ಶೃಂಗಾರ ಕಟ್ಟಿ ಪೇಳಿದೆನು ೪

ದುರುಳರ ಪಾದರಿಯರ ನೀಚಸತಿಯರ
ವಿರಚಿಸಿತಿಲ್ಲ ಸಿಂಗರಕೆ
ಭರತಚಕ್ರಿಯ ಪೇಳ್ದನವರ ಪೆಂಡಿರ ಪೇಳ್ದಿ
ಸ್ಮರಿಸಿದರೆಲ್ಲರ್ಗೆ ಪುಣ್ಯ ೫

ಈ ಕಥೆಯನು ನಾನು ಪೇಳ್ದಾಗ ಧರೆಯೊಳ
ನೇಕರು ಹರುಷವೇರಿದರು
ಪೋಕರು ನಾಲ್ಕೆಂಟು ಮಂದಿ ಚಿತ್ತದೊಳತಿ
ವ್ಯಾಕುಲಬಟ್ಟರೆಂತೆನಲು ೬

ಕೀರ್ತಿಯ ಬಯಸಿ ನಾನುಸಿರಿತಿಲ್ಲೆನಗೆ ಸ
ತ್ಕೀರ್ತಿ ತಾನೆ ಬರುತಿಹುದು
ಕೀರ್ತಿಯ ಬಯಸಿ ಕಣ್ಣುಸುರಾಗಿ ಕೆಲಬರು
ಧೂರ್ತರು ಪೇಚಾಡುತಿಹರು ೭

ತೊಡಗುವರ್ತಾವು ಕವಿತ್ವವ ಕಡೆಗದು
ನಡೆಯದು ಕಿವಿಗೆ ಶೋಭಿಸದು
ಬಿಡು ಹೊಸಕವಿತೆಯನೆಂದು ಪೂರ್ವದ ಶಾಸ್ತ್ರ
ಗಡಬಡೆ ಮಾಡುವರೊಡನೆ ೮

ಧ್ಯಾನಕೆ ಬೇಸರಾದಾಗ ಸನ್ನಾತ್ಮಲೀ
ಲಾನುವೃದ್ಧಿಗೆ ಪೇಳ್ದೆನೈಸೆ
ನಾನೊಬ್ಬರೊಡನೆ ಮತ್ಸರಕೆ ಪೇಳ್ದವನಲ್ಲ
ಮೋನದೊಳಿಹೆನದು ಸಾಕು ೯

ಹಂಸನಾಥನ ಶಕ್ತಿಯೊಳು ಪೇಳ್ದ ಕಾವ್ಯಕೆ
ಸಂಶಯವುಂಟೆ ಲೋಕದೊಳು
ನಾಂ ಸೂಚಿಸಿದ ಮುನ್ನ ಮುನಿಗಳು ನೃಪರು ವಿ
ದ್ವಾಂಸರು ಕೊಂಡೊಯ್ದರೊಲಿದು ೧೦

ಗುರುಹಂಸನಾಥನಾಜ್ಞೆಯೊಳು ಸಿದ್ಧಾಂತದ
ತಿರುಳರಿದಾತ್ಮಲೀಲಾರ್ಥ
ಭರತೇಶವೈಭವವೆಂಬ ಕಾವ್ಯವನಿದ
ನೊರೆದೆನು ಸುಖಿಗಳಾಲಿಪುದು ೧೧

ಬೇಕಾದರಾಲಿಸುವುದು ಬೇಡವಾಗೆ ಪ
ರಾಕುಮಾಡುವುದೆನಗಲ್ಲಿ
ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿ
ರಾಕಾಂಕ್ಷಿ ಸಾಕದಂತಿರಲಿ ೧೨

ಈ ಜಿನಕಥೆಯನು ಕೇಳಿದವರ ಪಾಪ
ಬೀಜ ನಿರ್ನಾಶನವಹುದು
ತೇಜವಹುದು ಪುಣ್ಯವಹುದು ಮುಂದೊಲಿದಪ
ರಾಜಿತೇಶ್ವರನ ಕಾಣುವರು ೧೩

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ
 ರಾಮೋದವೈದುವರವರು
ನೇಮದಿ ಸುರರಾಗಿ ನಾಳೆ ಶ್ರೀ ಮಂದರ
 ಸ್ವಾಮಿಯ ಕಾಣ್ಬರರ್ತಿಯೊಳು ೧೪

ವೃಷಭಮಾಸದಿ ತೊಡಗಿತು ಕುಂಭಮಾಸ ಸ
 ದ್ವಿಷಯದಿ ಕೃತಿ ಪೂರ್ಣವಾಯ್ತು
ವೃಷಭಾಂಕ ಹಂಸನಾಥನೆ ಜಯ ಪರಮ ಪು
 ರುಷನೆ ಚಿದಂಬರ ಪುರುಷ ೧೫

ಭರತೇಶವೈಭವ ಸಂಗ್ರಹಂ ಸಂಪೂರ್ಣಂ

# ಶಬ್ದಕೋಶ

(ಸೂಚನೆ ಮೊದಲನೆಯ ಸಂಖ್ಯೆ ಪುಟಕ್ಕೂ, ಎರಡನೆಯ ಸಂಖ್ಯೆ ಪದ್ಯಕ್ಕೂ, ಸಂಬಂಧಿಸಿದ್ದು )

## ಅ

| | | |
|---|---|---|
| ಅಕಳಂಕ | ೨೨೫—೧೬ | ಕಳಂಕವಿಲ್ಲದ |
| ಅಕ್ಕರು | ೨೩೧—೨೬ | ಪ್ರೀತಿ |
| ಅಖಂಡಿತ | ೧೭೪—೩೧ | ಸಂಪೂರ್ಣವಾದ |
| ಅಗಲ | ೧೭೪—೩೧ | ತಪ್ಪಿ, ತಳಿಗೆ |
| ಅಗ್ಗ | ೩೯೧—೪೩ | ಶ್ರೇಷ್ಠ |
| ಅಗ್ರಣಿ | ೩೯೫—೧೮ | |
| ಅಚ್ಚರಿಸು | ೪೬೬—೧೦ | ಆಶ್ಚರ್ಯಪಡಿಸು |
| ಅಚ್ಚಜೊನ್ನ | ೩೩೮—೨೧ | ಸುಂದರವಾದ ಬೆಳದಿಂಗಳು |
| ಅಜಡ | ೨೬೮—೧೮ | ಜಡವಲ್ಲದ, ಚಲನೆಯುಳ್ಳ |
| ಅಟ್ಟು | ೩೯೪—೩೯ | ಕಳುಹಿಸು, ದೂಡು |
| ಅಡ್ಡಗೆಡೆ | ೨೭೮—೨೮ | ಅಡ್ಡಬೀಳು, ನಮಸ್ಕರಿಸು |
| ಅಡ್ಡತಿಗೆ | ೨೧೬—೨೨ | ಪಕ್ಕಕ್ಕೆ ತಿರುಗಿಸು, ಓರೆಮಾಡು |
| ಅಡ್ಡಪಿಡ್ಡಗೆ | ೩೩೦—೧೬ | ಅತ್ತ ಇತ್ತ, ಸೊಟ್ಟಪಟ್ಟಗೆ |
| ಅಣೆ | ೩೧೮— ೨ | ಕೀಲಿಸು, ಒತ್ತು |
| ಅಣೆದೋರು | ೩೭೪—೧೭ | ಸಿದ್ಧವಾಗಿರು |
| ಅತಿಜೋಲಿ | ೪೩೫—೨೮ | ಹೆಚ್ಚಾದ ಪ್ರೀತಿ |
| ಅಧ್ಯಾಯನ | ೩೧೦— ೪ | (ಅಧ್ಯಯನ) ? ಧ್ಯಾನ, ಅಪೇಕ್ಷೆ, ಪ್ರಯತ್ನ |
| ಅನುಮಿಸು | ೧೦೬—೧೪ | ಊಹಿಸು, ಅನುಮಾನಿಸು |
| ಅನುವಡಿಸು | ೩೭೬—೩೧ | ಅನುವಾದಮಾಡು, ಹೇಳು |
| ಅನುವೆತ್ತ | ೪೩೭— ೯ | ಉಚಿತವಾದ |
| ಅನ್ನಕ | ೩೯೫—೪೨ | ಅಲ್ಲಿಯವರೆಗೆ |
| ಅಪರ | ೨೯೪—೧೯ | ಪಶ್ಚಿಮ |
| ಅಪವರ್ಗ | ೧೭೨—೧೬ | ಮೋಕ್ಷ |
| ಅಬ್ಬೆ | ೮೯— ೩ | ಅಮ್ಮ |
| ಅಭವವಾಸ | ೪೩೧—೧೨ | ಗುಡಿ |
| ಅಮರಿಸು | ೩೧೪— ೪ | ಹೊಂದಿಕೆಗೊಳಿಸು |

| | | |
|---|---|---|
| ಅಮ್ಮಡು | ೯೮—೧೩ | ಆಗುವುದಿಲ್ಲ |
| ಅಮೃತ | ೪೬೭—೧೪ | ಮೋಕ್ಷ |
| ಅಮೃತಭಾಸ್ಕರ | ೧೯೧—೪೭ | ಚಂದ್ರ |
| ಅರಲಂಬ | ೩೯೬— ೫ | ಪುಷ್ಪಬಾಣ, ಮನ್ಮಥ |
| ಅರಳೆಲೆ | ೨೭೫— ೮ | ಅರಳೀ ಎಲೆ ಆಕಾರದ ಆಭರಣ |
| ಅರಾತಿ | ೨೭೪— ೧ | ಶತ್ರು |
| ಅರಿಕೆ | ೩೭೭—೩೭ | ಪ್ರಸಿದ್ಧಿ |
| ಅರಿದು | ೩೧೯—೧೨ | ಕಷ್ಟ, ಅಸಾಧ್ಯ |
| ಅರಿಗೋಲೆ | ೪೧೭—೧೧ | ಮೃತ್ಯುಕಾರಕವಾದ |
| ಅರ್ಘ್ಯ | ೨೨೩—೨೨ | ಪೂಜೆ |
| ಅರ್ತಿ | ೧೧೬—೨೦ | ಸಂತೋಷ |
| ಅರ್ಭಕ | ೪೫೬—೧೦ | ಮಗು |
| ಅಲಗೆ | ೫೮ | ಎಲೆ (ಸ್ತ್ರೀ ಸಂಬೋಧನೆ) |
| ಅಲಸು | ೨೩೦—೧೫ | ಸೋತುಹೋಗು |
| ಅವಗಡ | ೧೩೭—೨೯ | ಅಪಾಯ |
| ಅಸಿಯಳು | ೧೫೩—೪೩ | ಕತ್ತಿಯಂತೆ ಬಳುಕುವ ಹೆಣ್ಣು |
| ಅಸ್ತು | ೯೭— ೩ | ಆಗಲಿ |
| ಅಳಗು | ೨೯೬—೩೧ | ಆಗಳು, ಕಂದಕ |
| ಅಳ್ಕೆ | ೧೬೪—೫೩ | ಭಯ |
| ಅಳ್ತಿವಡು | ೪೪೬—೧೦ | ಸಂತೋಷಪಡು |
| ಅಂಕ | ೨೭೮— ೭ | ತೊಡೆ |
| ಅಂಕಮಾಲೆ | ೩೩೩—೧೯ | ಪ್ರಶಸ್ತಿ ಪದ್ಯ |
| ಅಂಕರು | ೩೯೭—೧೨ | ಹೆಸರಾದವರು, ಪ್ರಸಿದ್ಧರು |
| ಅಂಗಪಟ್ಟೆ | ೧೧೫—೧೦ | ಹೊದೆಯುವ ಪಂಚೆ |
| ಅಂಗುಲಿ | ೩೪೯—೧೦ | ಬೆರಳು |
| ಅಂತರಾಯ | ೨೫೭—೨೧ | ಭೇದ, ಪಕ್ಷಪಾತ |
| ಅಂತರಿಸು | ೧೪೭— ೬ | ವ್ಯತ್ಯಾಸಮಾಡು |
| ಅಂದಣ | ೨೬೧—೧೫ | ರಥ, ಪಲ್ಲಕ್ಕಿ |
| ಅಂಬರಚರ | ೩೯೭—೧೨ | ದೇವತೆ |
| ಅಂಶು | ೯೨—೨೭ | ಕಿರಣ |

ಆ

| | | |
|---|---|---|
| ಆಗಸ | ೨೮೯— ೧ | ಆಕಾಶ |

| | | |
|---|---|---|
| ಆಗಾರ | ೪೬೪—೫೬ | ವಾಸಸ್ಥಾನ, ಮನೆ |
| ಆಣ್ಮ | ೧೫೩—೪೬ | ಗಂಡ |
| ಆದಿದೇವ | ೨೨೨—೧೮ | ಪ್ರಥಮ ತೀರ್ಥಂಕರ |
| ಆದಿವಸ್ತು | ೨೩೯— ೧ | ಮೊದಲ ವಸ್ತು, ದೇವರು |
| ಆನಕ | ೧೮೭—೨೦ | ಭೇರಿ |
| ಆನೀಕ | ೨೨೨—೧೪ | ಸೈನ್ಯ |
| ಆನು | ೪೫೭—೧೭ | ಧರಿಸು, ಸ್ವೀಕರಿಸು |
| ಆಮೋದ | ೨೬೮—೧೪ | ಸಂತೋಷ |
| ಆಯತ | ೨೮೪—೨೦ | ಸಂಯಮಪೂರ್ಣ |
| ಆರಯ್ | ೩೬೭—೧೩ | ವಿಚಾರಿಸು |
| ಆಲವಟ್ಟ | ೧೭೪—೨೮ | ಬೀಸಣಿಗೆ |
| ಆಲಿವರಲ್ | ೩೨೧—೨೧ | ಆಲಿಕಲ್ಲು |
| ಆಲ್ದು | ೨೪೨—೨೩ | ದೃಷ್ಟಿಸಿ |
| ಆಸರ | ೨೬೪—೩೮ | ಅವಲಂಬನ |
| ಆಸನ್ನ | ೩೬೪—೪೩ | ಸಮೀಪಿಸಿದ |
| ಆಳಿ | ೩೫೩—೨೨ | ಸೇವಕಿ, ಸಖಿ |
| ಆಂಪು | ೪೫೯—೩೦ | ಆತುಕೊ |

### ಇ

| | | |
|---|---|---|
| ಇಕ್ಕು | ೨೭೬—೧೮ | ದಾನಮಾಡು, ಕೊಡು |
| ಇಟ್ಟಾಡು | ೨೪೨—೨೩ | ಚಲ್ಲು |
| ಇಡಿಕಿರಿ | ೨೪೩—೨೮ | ಒತ್ತಾಗಿ ಸೇರು |
| ಇಡು | ೨೭೨—೪೪ | ಹೊಡೆ |
| ಇಡುಗುಡ್ಡೆ | ೩೩೩—೧೭ | ಕಿರಿದಾದ ನಡುಗಡ್ಡೆಗಳು |
| ಇಂಗೋಲ | ೩೯೧—೧೪ | ಸಿಹಿಯಾದ ಬಾಣವುಳ್ಳವನು, ಮನ್ಮಥ |
| ಇಂಬು | ೨೫೦—೧೨ | ಅವಕಾಶ |

### ಈ

| | | |
|---|---|---|
| ಈರಾರು | ೩೫೦— ೫ | ಹನ್ನೆರಡು |

### ಉ

| | | |
|---|---|---|
| ಉಕ್ಕು | ೪೦೧—೪೧ | ಉಬ್ಬು |
| ಉಗ್ಗಡ | ೪೨೨—೧೧ | ಘೋಷಣೆ, ಗಟ್ಟಿಯಾಗಿ ಹೇಳುವುದು |
| ಉಚ್ಚಳಿಸು | ೨೯೬—೩೩ | ಮೇಲೆ ಚಿಮ್ಮು |

| | | |
|---|---|---|
| ಉಚ್ಚು | ೨೪೭—೬೦ | ಬಿಚ್ಚು |
| ಉಜ್ಜುಗಿಸು | ೪೩೧—೧೨ | ಪ್ರಾರಂಭಿಸು |
| ಉಡೆ | ೨೫[illegible]—೧೮<br>೩೦೪—೨೦ | ಉಡುವ ಬಟ್ಟೆ |
| ಉಣ್ಮು | ೩೫೨—೧೬ | ಉಬ್ಬು, ಉಕ್ಕು, ಹೆಚ್ಚಾಗು |
| ಉತ್ತುಂಗ | ೯೧—೧೯ | ಎತ್ತರ |
| ಉದ್ದವನೇರು | ೩೪೮— ೪ | ಕೊಬ್ಬು |
| ಉದ್ಯನ್ಮೋಕ್ಷಗಾಮಿ | ೪೦೨—೪೫ | ಶ್ರೇಷ್ಠವಾದ ಮೋಕ್ಷದತ್ತ ಹೋಗುತ್ತಿರುವವನು |
| ಉದ್ಯಾಪನೆ | ೪೪೮—೨೧ | ಕೊನೆಯ ಪೂಜೆ |
| ಉಮ್ಮು | ೩೨೦—೧೪ | ಉಬ್ಬು, ಉತ್ಸಾಹಿಸು |
| ಉರುಬು | ೩೭೭—೩೭ | ಮೇಲೆದ್ದು ಕುಣಿ |
| ಉರುವ | ೩೨೧—೨೬ | ಶ್ರೇಷ್ಠವಾದ |
| ಉರ್ವಿ | ೩೧೪— ೯ | ಭೂಮಿ |
| ಉರ್ವಿಂದ | ೧೯೮—೪೦ | ಉಬ್ಬಿನಿಂದ |
| ಉಲುಪೆ | ೨೮೦—೪೮ | ಕಾಣಿಕೆ |
| ಉಂಬಳಿ | ೩೬೪—೧೪ | ಜಹಗೀರು |

ಊ

| | | |
|---|---|---|
| ಊಡು | ೩೫೭—೨೫ | ಊಟಮಾಡು, ಉಣಿಸು |
| ಊಣೆಯ | ೨೧೦—೫೫ | ನ್ಯೂನತೆ, ಕೊರತೆ, ಕುಂದು |

ಎ

| | | |
|---|---|---|
| ಎಡೆಗಟ್ಟು | ೩೦೩—೧೧ | ನಿಯಮ, ನಿರ್ಬಂಧ |
| ಎಡೆಗುತ್ತಿ | ೨೬೫—೪೩ | ತೀರದ ಸಮೀಪದಲ್ಲಿ ಅಗಲ ಕಿರಿದಾಗಿ, ನಿಡಿದಾಗಿ ಚಾಚಿದ ದಿಣ್ಣೆ |
| ಎಡೆಯಾಡು | ೨೬೫—೪೩ | ಅಲ್ಲಿ ಇಲ್ಲಿ ಓಡಾಡು |
| ಎಡ್ಡ | ೩೯೫—೪೨ | ಮನೋಹರ |
| ಎರಕ | ೩೧೨—೧೪ | ಪ್ರೀತಿ |
| ಎರಳೆ | ೩೯೮—೧೪ | ಜಿಂಕೆ |
| ಎರೆಯ | ೧೫೦—೨೫ | ಪ್ರೀತಿಪಾತ್ರ |
| ಎಳೆವೆಂಗಳು | ೨೯೦—೧೩ | ಯುವತಿಯರು |
| ಎಳೆವರೆಯ | ೩೫೫—೧೧ | ಎಳೆಯ ಪ್ರಾಯ |

| | | |
|---|---|---|
| ಏಕಾರ್ಣವ | ೩೨೧—೨೪ | ಒಂದೇ ಸಮುದ್ರ |
| ಏಣಲೋಚನೆ | ೨೧೦—೫೦ | ಜಿಂಕೆಯ ಕಣ್ಣಿನಂತಹ ಕಣ್ಣುಳ್ಳವಳು |
| ಏಳಿಸು | ೧೮೦—೧೪ | ಹೀಯಾಳಿಸು |
| ಏಳಿಲೆವೋಗು | ೧೬೬—೬೬ | ಏಳಿಲೆ ಬಿಡು, ಬಲಿ |

ಐ

| | | |
|---|---|---|
| ಐಸೆ | ೩೭೪—೧೮ | ಅಲ್ಲವೆ |

ಒ

| | | |
|---|---|---|
| ಒಕ್ಕು | ೪೦೬— ೭ | ಚೆಲ್ಲು |
| ಒಗು | ೩೯೭—೨೧ | ಚೆಲ್ಲು |
| ಒಗುಮಿಗೆ | ೧೫೯—೧೯ | ಹೆಚ್ಚಾಗಿ |
| ಒಗ್ಗು | ೩೯೬— ೧ | ಒಟ್ಟಿಗೆ ಸೇರು |
| ಒಚ್ಚತಾಗಿರು | ೪೧೬— ೬ | ಹೊಂದಿಕೆಯಾಗು, ಸಮ್ಮೇಳನಗೊಳ್ಳು |
| ಒಚ್ಚಯ | ೩೭೮—೪೩ | ಅಪಮಾನ |
| ಒಟ್ಟೈಸು | ೩೩೮— ೨ | ಗುಂಪುಗೂಡು |
| ಒಡ್ಡು | ೩೨೦—೧೬ | ಗುಂಪು |
| ಒತ್ತಿನುಡಿ | ೧೪೯—೧೬ | ಚುಚ್ಚಿ ಮಾತನಾಡು |
| ಒಪ್ಪಚ್ಚಿ | ೧೧೧—೫೩ | ಸ್ವಲ್ಪ |
| ಒಬ್ಬುಳಿ | ೩೨೬— ೭ | ಗುಂಪು |
| ಒಸಗೆ | ೨೮೯— ೩ | ಸಂತೋಷ ಸಮಾಚಾರ |
| ಒಸಯೆ | ೨೮೭—೩೭ | ಸಂತೋಷಗೊಳ್ಳಲು |
| ಒಳನುಡಿ | ೨೦೧—೬೦ | ಒಳ್ಳೆಯ ಮಾತು |
| ಒಂದಿಸು | ೩೦೮—೪೬ | ಸೇರಿಸು |

ಓ

| | | |
|---|---|---|
| ಓತು | ೪೦೨—೪೬ | ಪ್ರೀತಿಸಿ |
| ಓಪ | ೨೬೪—೩೫ | ಪ್ರೀತಿಪಾತ್ರ |
| ಓವರಿ | ೪೧೯—೨೫ | ಕೋಣೆ, ಗುಹೆ |

ಕ

| | | |
|---|---|---|
| ಕಜ್ಜ | ೪೨೨—೧೩ | ಕಲಸ, ಕಾರ್ಯ (ತ್ಸ) |
| ಕಟಕ | ೨೬೨—೨೧ | ಸೈನ್ಯ, (ರಾಜಧಾನಿ) |
| ಕಟಿಸೂತ್ರ | ೧೨೫—೧೯ | ಉಡುದಾರ, ಡಾಬು |

| | | |
|---|---|---|
| ಕಟ್ಟೆಕ್ಕರು | ೩೫೫—೧೨ | ಹೆಚ್ಚಾದ ಪ್ರೀತಿ |
| ಕಟ್ಟಣೆ | ೧೭೯— ೭ | ಕಟ್ಟಪ್ಪಣೆ, ಕಟ್ಟಳೆ |
| ಕಟ್ಟಳಲು | ೨೬೪—೪೧ | ಅಲ್ಲೋಲ ಕಲ್ಲೋಲ |
| ಕಟ್ಟಾಯ | ೧೮೯—೩೧ | ಕಠಿಣವಾದ ಆಜ್ಞೆ |
| ಕಟ್ಟೆಗೆಗಾರ | ೧೮೭—೧೫ | ಹೊಗಳುಭಟ್ಟ |
| ಕಡುಗಿ | ೨೯೯— ೮ | ಉತ್ಸಾಹಗೊಂಡು |
| ಕಡುಪು | ೨೯೯—೧೨ | ಶೌರ್ಯ, ಧೈರ್ಯ, ಉತ್ಸಾಹ |
| ಕಣ್ಣಲ್ಲ | ೩೦೯—೫೦ | ಕಣ್ಣಿನ ಚಾಪಲ್ಯ |
| ಕಣ್ಣಿ | ೩೯೮—೧೪ | ದನಗಳ ಕೊರಳಿಗೆ ಹಾಕುವ ಹಗ್ಗ |
| ಕಣ್ಣೊಳಲು | ೧೯೭—೩೩ | ಕಣ್ಣಿನ ಓಡಾಟ, ಕಣ್ಣಿನ ಓಟ |
| ಕತ್ತರ | ೧೮೭—೧೮ | ಮದ್ದಲೆ ಬಾರಿಸುವ ಚದುರು |
| ಕದುಬು (ಕದಂಬು) | ೩೯೯— ೭ | ಇಕ್ಕಟ್ಟಾಗಿ |
| ಕನ್ನಡಹಕ್ಕಿ | ೧೪೫—೨೧ | ಗಿಳಿ |
| ಕನ್ನಡಿಸು | ೧೭೮— ೩ | ಪ್ರತಿಬಿಂಬಿಸು |
| ಕಬ್ಬಿಗ, ಕಬ್ಬ | ೮೯— ೩ | ಕವಿ, ಕಾವ್ಯ (ತ್ಸ) |
| ಕಮ್ಮಂಗಣೆಯ | ೩೮೧—೧೧ | ಮನ್ಮಥ |
| ಕಮ್ಮನೆ | ೧೦೧—೩೪ | ಸುವಾಸನೆಯಾಗಿ, ರುಚಿಯಾಗಿ |
| ಕರಡಿಗೆ | ೧೮೫— ೬ | ಭರಣಿ |
| ಕರುಮಾಡ | ೪೨೪—೨೫ | ಮಹಡಿ |
| ಕರ್ಣಾಟಿಸು | ೧೮೫— ೫ | ಕಿವಿಯನ್ನು ಹೊಗಿಸು |
| ಕಲಾಪ | ೨೭೧—೩೭ | ಸಮೂಹ, ನವಿಲಿನ ಗರಿ |
| ಕಲಿಲಾರಿ | ೨೭೯—೧೧ | ಕಳವಳ ವಿನಾಶಕ, ದೇವರು, ಜಿನ |
| ಕವುದಿ | ೩೭೭—೩೬ | ತೇಪೆಯ ಬಟ್ಟೆ, ಒಟ್ಟೆ |
| ಕವ್ವರಿಸು | ೧೯೯—೨೭ | ಕಾತರಗೊಳ್ಳು |
| ಕಷಾಯ | ೪೧೭—೧೦ | ವ್ಯಥೆ |
| ಕಳ | ೩೩೩—೧೪ | ಕಣ, ರಂಗ |
| ಕಲಕಂಠ | ೧೭೯—೧೩ | ಕೋಗಿಲೆ |
| ಕಳಾಸ | ೧೮೭—೧೮ | ಮದ್ದಳೆ ಬಾರಿಸುವ ಜಾಣ್ಮೆ |
| ಕಾದಲೆ | ೨೦೭—೩೪ | ಪ್ರಿಯೆ |
| ಕಾಹು (ಪು) | ೨೫೧—೧೬ | ರಕ್ಷಣೆ |
| ಕಾರ್ಗಾಲ | ೨೬೦—೧೧ | ಮಳೆಗಾಲ |
| ಕಾಲ್ದುಡುಕು | ೧೭೫—೩೮ | ಅಡ್ಡವಾಗು |

| | | |
|---|---|---|
| ಕಾಸರಕ | ೩೬೫—೨೧ | ಒಂದು ಜಾತಿಯ ಮರ |
| ಕಾಳಂಜಿ | ೧೨೩—೪ | ಪನ್ನೀರುದಾನಿ |
| ಕಿವಿಗಚ್ಚು | ೧೩೩—೧ | ಗುಟ್ಟಾಗಿ ಕೇಳು |
| ಕೀರ | ೧೩೮—೩೫ | ಗಿಳಿ |
| ಕೀಲಿಸು | ೨೨೦—೬ | ನೇರಿಸು, ನಡು |
| ಕುಡುಹು | ೯೫—೪೬ | ವಾದ್ಯವನ್ನು ನುಡಿಸುವ ಕೋಲು, ಕೋಣ |
| ಕುಡ್ಯ | ೨೪೪—೩೫ | ಗೋಡೆ |
| ಕುಪ್ಪಿಗೆ | ೧೩೮—೪೧ | ಸಣ್ಣಡಬ್ಬಿ, ಭರಣಿ |
| ಕುರು | ೨೬೨—೨೨ | ಚಿಕ್ಕ (ಮೋಟಾದ) |
| ಕುಲಿಶ | ೩೯೬—೩ | ವಜ್ರಾಯುಧ |
| ಕೂಪ | ೬೫೭—೧೬ | ಕೂರ್ಪ, ಪ್ರೇಮಾಸ್ಪದರಾದ |
| ಕೂರ್ | ೧೬೬--೪೩ | ಹರಿತ, (ಸ್ನೇಹ) |
| ಕೂರ್ಮ | ೨೬೭—೧೨ | ಆಮೆ |
| ಕೈಗಟ್ಟು | ೧೬೦—೪೨ | ಪ್ರಕ್ಷಾಳನೆ |
| ಕೈಲಾಗು | ೧೬೩—೨೬ | ಕಯ್ ಹಿಡಿಕೆ, ಕೈಚಳಕ |
| ಕೂರ್ಪು | ೩೫೪—೫ | ಕೊಬ್ಬು |
| ಕೊಲ್ಲಣಿ | ೭೮೭—೯ | ಆಟ, ವಿನೋದ |
| ಕೊಲ್ಲೈಸು | ೨೭೨—೪೩ | ಬಗ್ಗಿಸು |
| ಕೋವಿದ | ೧೬೫—೫೬ | ಜಾಣ |
| ಕೌಳಿಕ | ೧೫೨—೪೦ | ಮೋಸ |
| ಕಂಚುಮಿಂಚು | ೭೯೫—೧೯ | ತೋರಿ ಮಾಯವಾಗು |
| ಕಂತು | ೩೮೪—೨೯ | ಮನ್ಮಥ |
| ಕಂದ | ೩೦೦—೧೯ | ಕುತ್ತಿಗೆಯ ಕೆಳಭಾಗ |
| ಕಂಬಿ | ೨೩೭—೬೯ | ಅಡ್ಡಿ |
| ಕಾಂಡಪಟ | ೭೯೬—೨೧ | ಅಂತರ್ಪಟ, ತೆರೆ |
| ಕೆಂಗೂಳು | ೨೪೭—೬೨ | ಕೆಂಪಾದ ಅನ್ನ |
| ಕೆಂಬಜ್ಜೆ | ೪೦೧—೩೫ | ಕಂಪಾದ ಹೆಜ್ಜೆ ಅಥವಾ ಪಾದ |
| ಕ್ರಮ | ೭೧೦—೪೭ | ಪಾದ |

### ಖ

| | | |
|---|---|---|
| ಖೋಡಿ | ೩೯೦—೧೭ | ಕೊರತೆ |
| ಖಂಡೆಯ | ೯೨—೨೬ | ಕತ್ತಿ |
| ಖೇಂದ್ರ | ೬೪೧—೭೯ | ಆಕಾಶಕ್ಕೆ ಒಡೆಯ, ಗಂಧರ್ವ |

## ಗ

| | | |
|---|---|---|
| ಗದಕ | ೧೦೭—೨೪ | ಕೃತಕ (ತ್ಸ) |
| ಗನ್ನ | ೩೩೭—೧೬ | ಮೋಸ |
| ಗರಗರಿಕೆ | ೧೨೯—೪೩ | ಸ್ವಚ್ಛತೆ |
| ಗರುವಿಕೆ | ೩೨೯—೨೮ | ಹಿರಿಯತನ |
| ಗಳಗಳಿಸು | ೩೦೬—೩೩ | ಗಲಗಲ ಶಬ್ದಮಾಡು |
| ಗಳಧೌತಗಿರಿ | ೨೬೮— ೨ | ವಿಜಯಾರ್ಧಪರ್ವತ |
| ಗಳಗೆ | ೨೨೬—೪೫ | ಬುಟ್ಟಿ |
| ಗಾಜಗೋಜು | ೨೨೬—೪೩ | ಬಣ್ಣಬಣ್ಣದ ಗಾಜಿನ ಮಣಿಗಳನ್ನು ಗುಂಪು ಗುಂಪಾಗಿ ಎರಚಿದಂತೆ |
| ಗಾಡಿ | ೧೫೦—೨೮ | ರೀತಿ |
| ಗಾವಿಲ | ೨೭೮—೩೦ | ಮೂಢ |
| ಗಾಳಿವಟ್ಟೆ | ೪೨೪—೨೬ | (ಗಾಳಿಯ + ಬಟ್ಟೆ) ಆಕಾಶ |
| ಗೀರ್ವಾಣ | ೪೩೭—೧೦ | ಸಂಸ್ಕೃತ |
| ಗುಡಿ | ೨೪೦—೧೨ | ಬಾವುಟ |
| ಗುಡಿಕೇತು | ೩೬೦—೧೨ | ಕಟ್ಟಿಗೆಗೆ ಕಟ್ಟಿರುವ ಬಾವುಟ |
| ಗುಲ್ಫ | ೧೨೦—೪೩ | ಕಾಲಿನ ಹರಡು |
| ಗುಸುಟು | ೧೨೪—೧೩ | ಗುಟ್ಟು |
| ಗೃಹಜಾಲ | ೨೮೨— ೫ | ಮನೆಗಳ ಸಾಲು |
| ಗೇಣ್ದೋರು | ೨೧೭—೩೦ | ಗೇಣು ದೂರದಲ್ಲಿರುವಂತೆ ತೋರು, ಹತ್ತಿರದಲ್ಲಿರುವಂತೆ ತೋರು |
| ಗಂಥೆ | ೧೫೨—೩೯ | ತುರಿ, ತಿಂಡಿ |
| ಗಂಧಕುಟಿ | ೪೨೧— ೧ | ಗಂಧದ ಗುಡಿ |

## ಘ

| | | |
|---|---|---|
| ಘಟ | ೨೬೯—೨೬ | ಗಡಿಗೆ |
| ಘಟಿತ | ೩೮೯— ೧ | ಉಂಟಾದ, ಸೇರಿಕೊಂಡ |
| ಘನಮಾರ್ಗ | ೪೧೭— ೮ | ಆಕಾಶಮಾರ್ಗ |
| ಘೂರ್ಣಿಸು | ೧೫೭— ೧ | ಗರ್ಜಿಸು |
| ಘೀಳಿಡು | ೩೦೦—೧೫ | ಗರ್ಜಿಸು |

## ಚ

| | | |
|---|---|---|
| ಚಚ್ಚರ | ೩೬೧—೧೪ | ಬೇಗ, ಎಚ್ಚರಿಕೆ |
| ಚಡಾಳಿಸು | ೩೨೩—೩೯ | ಗವರಿಸು, ಮೇಲೆಬೀಳು |

ಚಪ್ಪರಿದಾಡು ೪೪೧—೪೦ ಬಾಯಿ ಚಪ್ಪರಿಸುತ್ತಾ ಆನಂದಪಡು
ಚಪ್ಪಳಿಸು ೨೧೦—೫೪ ದುಃಖಸೂಚಕ ಲೊಚಲೊಚ ಧ್ವನಿ ಮಾಡು
ಚಮ್ಮಾವುಗೆ ೩೬೭—೧೧ ಚರ್ಮಪಾದುಕಾ (ತ್ಸ) ಚರ್ಮದ ಜೋಡು
ಚರು ೩೫೩—೨೪ ಆಹುತಿಯ ಅನ್ನ
ಚಳಯ ೧೭೦— ೬ ನೀರು ಚಿಮುಕಿಸುವುದು
ಚಾಗಿ ೨೧೩— ೫ ತ್ಯಾಗಿ (ಸಂ)
ಚಾಟುಕಾತಿ ೧೨೯—೪೪ ಮೋಹಕಳಾದ ಹೆಣ್ಣು
ಚಾರಿವರಿ ೧೯೮—೩೫ ಜಾಣ್ಮೆಯಿಂದ ಓಡಾಡು
ಚಾಳಿಸು ೧೪೭— ೪ ಸೋಲಿಸು, ಮೋಸಮಾಡು
ಚಾಳೆಯ ೧೯೦—೩೭ ಕುಣಿಯುತ್ತಾ ಇಡುವ ಹೆಜ್ಜೆ, ಗತಿಲಾಘವ
ಚೀನಾಂಬರ ೨೨೦— ೩ ರೇಷ್ಮೆಯ ಬಟ್ಟೆ
ಚುನ್ನ ೩೪೪—೨೦ ಮೋಸದ ಮಾತು
ಚುಮ್ಮುರಿ ೯೨—೨೩ ಸುತ್ತಿ ಕಟ್ಟಿದ
ಚೌಕ ೧೧೮—೭೮ ಕೊರಡಿ
ಚೌಕುಳಿ ೧೮೩—೩೬ ಕಿವಿಯ ಆಭರಣ
ಚಂಪೆ ೧೯೮—೩೭ ಸಂಗೀತ ಸಾಧನ
ಚಂಬಕವರೆ ೩೨೨—೩೧ ವಾದನ ಸಾಮಗ್ರಿ
ಚಾಂಗು ೩೩೦—೩೬ (ಕೊಂಡಾಟದ ನುಡಿ), ಭಲೆ
ಚಾಂದಸಿಕೆ (ಛಾಂದಸಿಕೆ) ೧೨೯—೪೪ ವಿಳಂಬ, ನಿಧಾನವಾಗಿ ಕೆಲಸಮಾಡುವಿಕೆ

## ಛ

ಛದ್ಮ ೨೧೭—೩೧ ಮೋಸ
ಛಪ್ಪನ್ನ ೪೦೪— ೨ ಐವತ್ತಾರು
ಛವಿ ೯೧—೧೭ ಕಾಂತಿ

## ಜ

ಜಕ್ಕುಲಿಸು ೩೦೬—೩೩ ಬಿಕ್ಕಳಿಸುತ್ತಾ ಮಾತನಾಡು
ಜತನೆ ೨೪೯— ೨ ಜೋಕೆ
ಜಮ್ಮುದಟ್ಟಿಸು ೨೪೦—೧೩ ಜುಂ ಎನ್ನುವಂತೆ ಸಂತೋಷಗೊಳಿಸು
ಜರತಿ ೪೨೫—೩೨ ಮುದುಕಿ
ಜಸ ೩೯೯—೨೪ ಯಶಸ್ಸು (ತ್ಸ) ಕೀರ್ತಿ
ಜಾಗರ ೨೨೭—೫೦ ನಿದ್ರೆ ಕೆಡುವುದು

| | | |
|---|---|---|
| ಜಾನು | ೧೦೫—೧೨ | ತೊಡೆ |
| ಜಾಳಿಗೆ | ೨೭೮—೩೪ | ಸಮೂಹ, ಚೀಲ, ಜಾಲಂದ್ರ |
| ಜೂಟು | ೧೭೬—೪೫ | ಹುಡುಗಾಟ, ಸುಳ್ಳು |
| ಜೇವಡೆ | ೨೬೯—೨೩ | ಟಂಕಾರ ಮಾಡು |
| ಜೋಲಿ | ೧೫೫—೫೭ | ತೂಗಾಟ |

ಝು

| | | |
|---|---|---|
| ಝುಲ್ಲಿ | ೧೭೦— ೩ | ಕುಚ್ಚು |
| ಝುಂಕಣೆ (ಝುಂಕೆ) | ೩೭೪—೧೭ | ಗದರಿಕ |

ಟ

| | | |
|---|---|---|
| ಟವಣೆ | ೧೨೯—೪೮ | ಹೊಂದಿಕೆ |
| ಟಿಕ್ಕೆಯ (ಟಿಕ್ಕೆ) | ೨೫೯— ೩ | ವಾದ್ಯ ವಿಶೇಷ |
| ಟೌಳಿ | ೧೪೨— ೨ | ಮೋಸ |

ಡ

| | | |
|---|---|---|
| ಡಾಳ | ೯೩—೨೮ | ಹೊಳಪು |
| ಡಂಗುರಿಸು | ೩೬೦— ೯ | ಎಲ್ಲರಿಗೂ ಸಾರಿ ಹೇಳು |

ತ

| | | |
|---|---|---|
| ತಕ್ಕೈಸು | ೨೩೫—೪೯ | ಸಮಾಧಾನ ಮಾಡು |
| ತಗಹಿಕ್ಕು | ೩೨೨—೨೮ | ಅಡ್ಡಿಪಡಿಸು |
| ತರಲ | ೧೯೫—೧೪ | ಚಂಚಲ |
| ತರಹರಿಸು | ೩೫೯— ೫ | ಸಹಿಸು |
| ತಳರ್ | ೨೫೬—೧೯ | ಹೊರಡು |
| ತಳಹೊಳಗೊಳ್ಳು | ೩೫೫—೧೧ | ಗಾಬರಿಯಿಂದ ದಿಕ್ಕು ತೋಚದಂತಾಗು |
| ತಳಿ | ೧೯೫—೧೬ | ಬಳಿ, ಲೇಪಿಸು |
| ತಳ್ಳಂಕಗೊಳ್ಳು | ೩೦೦—೧೮ | ತಲ್ಲಣಗೊಳ್ಳು, ಭೀತಿಗೊಳ್ಳು |
| ತಳ್ಳಿ | ೪೨೪—೨೪ | ತಂಟೆ |
| ತಾಡ್ಯಮಾನ | ೨೬೪—೩೫ | ಬಾರಿಸಲ್ಪಟ್ಟ |
| ತಾರಾದ್ರಿ | ೩೫೧— ೩ | ಬೆಳ್ಳಿಯ ಬೆಟ್ಟ |
| ತಾರೆ | ೧೯೬—೨೬ | ನಕ್ಷತ್ರ |
| ತಾರ್ಗೊಳ್ | ೪೪೮—೨೩ | ತಾರಸ್ವರದಲ್ಲಿ |
| ತಾವರೆಯೋಪ | ೩೮೩—೨೬ | ಕಮಲದ ಪ್ರಿಯ, ಸೂರ್ಯ |

| | | |
|---|---|---|
| ತಿಟ್ಟ | ೨೫೬—೧೮ | ಉಪಾಯ |
| ತಿಟ್ಟವಿಕ್ಕು | ೧೮೯—೩೧ | ಚಿತ್ರವನ್ನು ಬರೆ |
| ತಿತ್ತಿ | ೧೯೮—೩೮ | ಚೀಲ |
| ತುಡುಮು | ೧೮೭—೨೦ | ಟಮಕಿ, ಸಣ್ಣ ನಗಾರಿ |
| ತುಪ್ಪುಳು | ೪೪೧—೪೦ | ತುಪ್ಪಟದಂತೆ ಕಪ್ಪಾದ |
| ತುರಿಹ | ೩೮೦— ೫ | ಆತುರ |
| ತುರುಗು | ೧೩೮—೩೬ | ತುಂಬು |
| ತೂಪಿರಿ | ೨೪೯— ೬ | ನೆತ್ತಿಯ ಮೇಲೆ ಊದು, ಆಘ್ರಾಣಿಸು |
| ತೂಳವೇಳು | ೨೭೦—೩೩ | ಅಟ್ಟಿಸಿಕೊಂಡು ಬಾ |
| ತೆಗಹು | ೩೨೨—೨೮ | ತೆರಪು, ಅವಕಾಶ |
| ತೆಟ್ಟಿ | ೨೪೭—೧೮ | ಚಪ್ಪಟೆಯಾದ ಪ್ರದೇಶ |
| ತೆತ್ತಿಸು | ೧೩೮—೩೯ | ಸೇರಿಸು |
| ತೆಮಳ್ | ೩೬೧—೧೯ | ಒಟ್ಟೊಟ್ಟಿಗೆ ಹೊಡೆದಟ್ಟು |
| ತೊಡಹಗಾರಿಕೆ | ೨೪೭—೫೨ | ಯುದ್ಧಮಾಡುವುದರಲ್ಲಿ ಜಾಣ್ಮೆ |
| ತೋಯದ | ೨೭೩—೫೪ | ಸಮುದ್ರ (ತೋಯ–ನೀರು) |
| ತೋರ | ೨೨೪—೩೩ | ದೊಡ್ಡದಾದ |
| ತೋಳ್ವಲ | ೩೯೯—೨೬ | (ತೋಳ್ + ಬಲ) ಭುಜಬಲ |
| ತಂತ್ರಾಂಗ | ೧೪—೨೦ | ಉಪಾಯದ ಮಾರ್ಗ |
| ತಂಬಟೆ | ೩೨೨—೩೧ | ತಮಟೆ |
| ತೂಂತಿಡು | ೨೬೫—೪೪ | ತುಂತುರುಗಳನ್ನು ಎರಚು |
| ತೂಂಬು | ೩೦೦—೧೬ | ತೂಬು |
| ತೊಂಡರು | ೩೦೩— ೯ | ಚಾಡಿಕೋರರು |
| ತೊಂಡಲಿಪಿ | ೩೩೪—೨೨ | ಅಯೋಗ್ಯವಾದ ಬರವಣಿಗೆ |
| ತೊಂಡಿಲು | ೩೪೦— ೯ | ಕುಚ್ಚು |

**ದ**

| | | |
|---|---|---|
| ದರ್ಪಕ | ೪೦೫—೯ | ಮನ್ಮಥ |
| ದಳವೇರು | ೨೦೯—೪೮ | ಸಂತೋಷದಿಂದ ಉಬ್ಬು |
| ದಿಬ್ಬ | ೧೨೮—೩೮ | ದಿವ್ಯ, ಸತ್ಯ ಪರೀಕ್ಷೆಗಾಗಿ ನಡೆಸುವ ಬೆಂಕಿ ಹಿಡಿಯುವುದೇ ಮೊದಲಾದ ಪವಾಡ |
| ದೀಕ್ಷಾಗಮ | ೩೫೫—೧೦ | ದೀಕ್ಷೆಗೆ ಸಂಬಂಧಿಸಿದ ಶಾಸ್ತ್ರ |
| ದೀವಿ | ೧೩೯—೬೫ | ದ್ವೀಪ, ನಡುಗಡ್ಡೆ |
| ದುಗ್ಗ | ೨೬೫—೪೩ | ಹಡಗು |

| | | |
|---|---|---|
| ದುಗುಲ | ೧೫೪—೫೫ | ದುಕೂಲ (ತ್ಸ) ಬಟ್ಟೆ |
| ದುರ್ವಹ | ೩೧೬—೨೪ | ಕಟ್ಟ |
| ದೊರಿತ | ೪೬೫— ೩ | ದೂರಮಾಡಲ್ಪಟ್ಟ |
| ದೂರಿಸು (ದೂನಿಸು) | ೩೯೦—೧೩ | ಚಿಂತಿಸು, ವ್ಯಥೆಪಡು |
| ದೂವಟೆ | ೩೬೨—೨೪ | ದುಪ್ಪಟೆ, ದುಪಟೆ |
| ದೇವಾಂಗ | ೯೬—೫೨ | ರೇಷ್ಮೆಯ ವಸ್ತ್ರ |
| ದೇಹಾರ | ೩೪೨— ೧ | ವಾಸಯೋಗ್ಯವಾದ ಪಟಗೃಹ (?) |
| ದಂಡಿಗೆ | ೧೩೦—೫೧ | ವೀಣೆ |
| ದಂದುಗ | ೨೩೧—೨೪ | ತೊಂದರೆ |
| ದುಂದುಭಿ | ೪೨೩—೨೦ | ನಗಾರಿ |
| ದ್ಯುಮಣಿ | ೧೧೦—೪೨ | ಸೂರ್ಯ |

## ಧ

| | | |
|---|---|---|
| ಧಾರೆಕೋರೆ | ೩೦೩—೧೦ | ಉಡಿಗೆ ತೊಡಿಗೆ, ಧರಿಸಿರುವ ಕತ್ತಿ, ಮುಖದ ಮೀಸೆ ಇವುಗಳೆಲ್ಲದರಿಂದ ಉಂಟಾಗುವ ಸಾಮೂಹಿಕ ಭಾವ ಭಂಗಿ |

## ನ

| | | |
|---|---|---|
| ನಚ್ಚು | ೩೭೮—೪೩ | ನಂಬು |
| ನಟ್ಟುವ | ೧೮೮—೨೪ | ನೃತ್ಯವನ್ನು ಕಲಿಸುವವನು |
| ನನೆಕೊನೆವೋಗು | ೨೪೦— ೯ | ಮೊಗ್ಗು, ಚಿಗುರುಗಳಿಂದ ತುಂಬು, ರೋಮಾಂಚಗೊಳ್ಳು |
| ನಯಕಾರ | ೧೯೪— ೭ | ನೀತಿಯನ್ನು ತಿಳಿದವನು |
| ನರುಗಬ್ಬು | ೯೫—೪೫ | ಸುವಾಸನೆಯಿಂದ ಕೂಡಿದ ಕಬ್ಬು |
| ನರುಗೋಲ | ೬೧೩— ೧ | ಮನ್ಮಥ |
| ನರುಗಂಪು | ೪೪೧—೩೯ | ಸುವಾಸನೆ |
| ನವ್ಯದೀಕ್ಷಾಂಗಿ | ೪೨೪—೨೨ | ಹೊಸದಾಗಿ ದೀಕ್ಷೆಯನ್ನು ವಹಿಸಿದ ಹೆಂಗಸು |
| ನಾಡುಗ | ೩೮೭—೫೧ | ಸಾಮಾನ್ಯ ಮನುಷ್ಯ |
| ನಾಳಿನವನು | ೨೭೯—೩೭ | ಉತ್ತರಾಧಿಕಾರಿ (?) |
| ನಿಕಾಯ | ೪೪೫— ೫ | ಸಮೂಹ |
| ನಿಕುರುಂಬ | ೪೩೦— ೩ | |
| ನಿಗರಣೆ | ೧೬೫—೬೨ | ಅಟ್ಟಹಾಸ |
| ಚಿತ | ೯೦—೧೦ | ನಿಶ್ಚಯಿಸಲ್ಪಟ್ಟ |

| | | |
|---|---|---|
| ನಿಚ್ಚ | ೨೪೪—೩೯ | ಪ್ರತಿದಿನ |
| ನಿಜದೋರು | ೩೧೦— ೩ | ಸತ್ಯವನ್ನು ತಿಳಿಸು |
| ನಿಟ್ಟಾಯತ | ೩೧೮— ೬ | (ನಿಡು+ಆಯತ) ಹೆಚ್ಚು ವಿಸ್ತಾರವಾದ |
| ನಿಟಲ | ೩೬೦—೧೦ | ಹಣೆ |
| ನಿಧಾನ | ೧೦೮—೩೧ | ನಿಧಿ |
| ನಿಯತ | ೨೫೭—೨೬ | ನಿಶ್ಚಿತವಾದ |
| ನಿರಾಕುಲ | ೪೪೯— ೩ | ವ್ಯಥೆಯಿಲ್ಲದ |
| ನಿರಾಮಯ | ೪೨೭— ೬ | ರೋಗವಿಲ್ಲದ |
| ನಿರುತ | ೪೧೯—೨೬ | ಯಾವಾಗಲೂ |
| ನಿರಂಗ | ೧೩೮—೪೧ | ? |
| ನಿಸ್ಸಾಳೆ | ೨೫೫—೧೦ | ಭೇರಿ |
| ನಿಹಾರ | ೯೧—೧೪ | ಮಲವಿಸರ್ಜನೆ |
| ನೀಟ | ೧೨೯—೪೪ | ನೇರವಾಗಿ |
| ನೀರಾಜನ | ೩೦೭—೩೫ | ಮಂಗಳಾರತಿ |
| ನೀರ | ೨೬೮—೧೬ | ಸುಂದರ |
| ನೀರೇಜಧೂಳಿ | ೨೨೬—೪೩ | ಕಮಲದ ಪರಾಗ |
| ನೀಲಾಂಬುಜ | ೯೩—೩೪ | ಕನ್ನೈದಿಲೆ |
| ನುಡಿವಕ್ಕಿ | ೧೫೩—೪೮ | ಗಿಳಿ |
| ನುಣ್ಚರ | ೩೦೯—೫೦ | ಇಂಪಾದ ಧ್ವನಿ |
| ನೆಗಳು | ೨೬೦—೧೦ | ಮೊಸಳೆ |
| ನೆಮ್ಮು | ೨೦೫—೧೪ | ಒರಗು |
| ನೆರವಿ | ೯೭— ೧ | ಗುಂಪು |
| ನೇಜಯು | ೨೫೯— ೩ | ಬಾಕು, ಸಣ್ಣ ಕತ್ತಿ |
| ನೊಸಲಿಡು | ೩೬೩—೩೨ | ನಮಸ್ಕರಿಸು |
| ನೋಂಪಿ | ೧೩೪—೧೦ | ವ್ರತ |
| ನಂದನ | ೩೫೪— ೪ | ಮಗ |
| ನಂಗಲ್ಲು | ೨೬೯—೨೧ | ಲಂಗರು |
| ನೋಂತರು | ೪೩೮—೧೩ | ವ್ರತವನ್ನು ಕೈಕೊಂಡರು |
| ನ್ಯಾಸ | ೪೩೭—೧೦ | ಪ್ರಭಾವಯುತ |

**ಪ**

| | | |
|---|---|---|
| ಪಗರಣೆ | ೧೬೫—೬೨ | ಅಹಂಕಾರ |
| ಪಚ್ಚೆವಿಲ್ಲಣ್ಣ | ೪೦೮—೨೯ | ಮನ್ಮಥ |

| | | |
|---|---|---|
| ಪಟಹ | ೨೫೫—೧೦ | ಭೇರಿ |
| ಪಟುಮತಿ | ೩೬೮—೧೦ | ಶಕ್ತವಾದ, ಅತಿಸೂಕ್ಷ್ಮವಾದ ಬುದ್ಧಿ |
| ಪಟ್ಟೆ | ೧೭೦— ೩ | ರೇಷ್ಮೆ |
| ಪಡಗು | ೨೬೦—೧೦ | ಹಡಗು |
| ಪಡಲಿಗೆ | ೧೩೬—೨೨ | ಪಟಲಕ (ಸಂ), ವ್ಯಾಸಪೀರ |
| ಪಡಿವಳ್ಳ | ೨೯೯— ೮ | ಸೈನ್ಯಾಧಿಪತಿ |
| ಪಣ್ಣೆ ಪಣ್ಣೆ | ೨೦೦—೫೨ | ಸುಂದರವಾಗಿ ಸಜ್ಜುಗೊಂಡು |
| ಪದುಳ | ೯೧—೧೯ | ಸುಖ |
| ಪದೆದು | ೧೪೭— ೨ | ಪ್ರೀತಿಸಿ |
| ಪನ್ನಗ | ೩೯೯—೨೪ | ಹಾವು |
| ಪನ್ನಂಗ | ೨೬೩—೩೨ | ರಥದಲ್ಲಿ ಛತ್ರಿಯಂತಿರುವ ಭಾಗ |
| ಪರಿಸ್ಪಂದ | ೪೩೫—೩೫ | ನಡುಗುವಿಕೆ |
| ಪರ್ವುಗೆ | ೪೬೪—೫೫ | ಹಬ್ಬುಗೆ |
| ಪಲೆರು | ೩೦೦—೧೭ | ಅನುಕರಣ ಶಬ್ದ |
| ಪಲುಂಬು | ೪೪೩—೪೯ | ಹಲುಬು, ಗೋಳಿಡು |
| ಪಲ್ಲವ | ೨೪೩—೨೯ | ಚಿಗುರು |
| ಪವನಾಭ್ಯಾಸ | ೨೦೧—೫೬ | ಯೋಗಾಭ್ಯಾಸ |
| ಪವಿ | ೩೨೨—೩೩ | ವಜ್ರಾಯುಧ |
| ಪಸರ | ೩೯೬— ೩ | ಅಂಗಡಿ |
| ಪಸೆ | ೩೧೧— ೭ | ಹಸೆ |
| ಪಳಮಂಜರಿ | ೩೪೦— ೫ | ಒಂದು ರಾಗ |
| ಪಳುಕು | ೧೦೧—೩೧ | ಸ್ಫಟಿಕ |
| ಪಳಂಚು | ೧೯೫—೧೮ | ಮುಟ್ಟು |
| ಪಾಗುಡ | ೩೨೭—೧೫ | ಪ್ರಾಭೃತ (ತ್ಸ) ಕಾಣಿಕೆ |
| ಪಾಟಿ | ೧೫೭— ೬ | ಸಮಾನ |
| ಪಾಟಿಸು | ೩೯೯—೨೩ | ವಿಸ್ತರಿಸು |
| ಪಾತ್ರಸತಿ | ೨೦೩— ೪ | ವೇಶ್ಯೆ, ನರ್ತಕಿ |
| ಪಾಯ್ದಳ | ೨೫೪— ೩ | ಮೇಲೆಬೀಳುವ ಸೈನ್ಯ |
| ಪಾರಣೆ | ೨೩೮—೭೨ | ಉಪವಾಸದ ಮರುದಿನ |
| ಪಾರಿವ | ೩೬೮—೧೮ | ಪಾರಿವಾಳ |
| ಪಾಲ | ೩೧೮— ೫ | ಸೇತುವೆ |
| ಪಾಸಟಿ | ೨೩೭—೩೪ | ಸಮಾನ |

| | | |
|---|---|---|
| ಪಾಸರೆ | ೩೦೦—೧೫ | ಹಾಸುಬಂಡೆ |
| ಪಿಸುಣ | ೨೬೩—೩೨ | ಚಾಡಿಕೋರ |
| ಪೀನ | ೨೮೭—೩೮ | ದೊಡ್ಡ |
| ಪುರೆಯಿಡು | ೨೮೭—೩೯<br>೪೩೧— ೯ | ನೊರೆಯಿಡು, ವ್ಯಥೆಯಿಂದ ಕೂಗಿಕೊಳ್ಳು |
| ಪುದಿ | ೯೨—೨೭ | ಹುದುಗಿಕೊ |
| ಪುದುವಾಳ್ | ೨೪೭—೫೬ | ಜೊತೆಗೂಡಿ ರಾಜ್ಯಭಾರಮಾಡು |
| ಪೂದುರುಬಿ | ೧೭೫—೩೫ | ಹೂಮುಡಿದ ಹೆಣ್ಣು |
| ಪೂಸರಲ | ೩೪೩—೧೧ | ಹೂ ಬಾಣ , ಮನ್ಮಥ |
| ಪೆಟಲು | ೨೫೫— ೯ | ಬಂದೂಕದಂತಹ ಆಯುಧ |
| ಪೆಂಡೆಯ | ೯೧—೨೦ | ಕಾಲಿನಲ್ಲಿ ಧರಿಸುವ ಬಿರುದಿನ ಬಾವುಲಿ |
| ಪೇತು | ೨೬೨—೨೫ | ಮನೋವಿಕಾರ (ಪ್ರೇತ) |
| ಪೈಸರ | ೧೦೯—೩೯<br>೪೦೧—೩೯ | ಜಾರಿಕೆ |
| ಪೊಚ್ಚರಿಸು | ೩೦೦—೧೫ | ಒಡೆ, ತುಂಡಾಗು |
| ಪೊನ್ನಂದಣ | ೨೬೧—೧೫ | ಚಿನ್ನದ ಪಲ್ಲಕ್ಕಿ |
| ಪೊರಪು | ೧೮೫— ೬ | ಹೊರಡುವಿಕೆ |
| ಪೊಳಲು | ೨೫೧—೧೭ | ಪಟ್ಟಣ |
| ಪಂಚವಿಂಶತಿ | ೩೯೯—೨೭ | ಇಪ್ಪತ್ತೈದು |
| ಪಿಂಜರಿತ | ೩೫೩—೨೧ | ದಟ್ಟವಾಗಿ ಕೆಂಬಣ್ಣದಿಂದ ತುಂಬಿದ |
| ಪುಂಖಾನು ಪುಂಖ | ೧೭೯—೧೨ | ಒಂದಾದ ಮೇಲೊಂದು |
| ಪುಂಡರೀಕ | ೧೦೨—೩೯ | ಹುಲಿ, ಶ್ರೇಷ್ಠ |
| ಪೊಂದುಡುಗೆ | ೩೩೮—೨೧ | ಬಂಗಾರದ ಉಡುಗೆ |
| ಪ್ರಗುಣ | ೪೩೨—೧೪ | ಶ್ರೇಷ್ಠವಾದ ಗುಣ |
| ಪ್ರಣುತ | ೨೦೦—೫೧ | ನಮಸ್ಕರಿಸಿದ |
| ಪ್ರಮುದ | ೩೫೦— ೪ | ಹೆಚ್ಚು ಸಂತೋಷ |
| ಪ್ರಸ್ತುತಾರ್ಚನೆ | ೪೩೪—೩೨ | ಸಮಯಕ್ಕೆ ತಕ್ಕ ಪೂಜೆ |
| ಪ್ರಸ್ಥಾನ | ೨೫೮—೨೯ | ಪ್ರಯಾಣ |
| ಪ್ರಾಜ್ಯ | ೩೪೬—೩೪ | ಮಹತ್ತಾದ |
| ಪ್ರೇರಣಿಸು | ೩೭೪—೧೭ | ಪ್ರೇರಿಸು, ಮಾಡುವಂತೆ ಹೇಳು |
| ಪ್ರಾಂಶು | ೨೯೮— ೪ | ಕಿರಣ |

## ಫ

| | | |
|---|---|---|
| ಫಣಿ | ೪೬೩—೧೭ | ಹಾವು |
| ಫಣಿಪ | ೪೬೩—೧೮ | ಹಾವುಗಳ ಒಡೆಯ, ಆದಿಶೇಷ |
| ಫುಲ್ಲ | ೩೬೦— ೭ | ಹೂವು |

## ಬ

| | | |
|---|---|---|
| ಬಜಾವಣೆ | ೯೩—೩೨ | ವಾದ್ಯವನ್ನು ಬಾರಿಸುವುದು |
| ಬಟ್ಟವರೆ | ೨೨೦— ೪ | ದುಂಡಾದ ಚಂದ್ರ |
| ಬಟ್ಟೆ | ೧೫೭— ೪ | ದಾರಿ |
| ಬಡಬಡಿಸು | ೩೧೫—೨೦ | ಸಿಕ್ಕಿದಂತೆ ಹರಟು |
| ಬಡಿಗೆ | ೩೨೦—೧೯ | ಕೋಲು |
| ಬಣ್ಣಗಾರಿಕೆ | ೨೦೫—೨೦ | ಜಾಣತನ |
| ಬದೆಗ | ೩೯೯—೨೫<br>೧೭೧—೧೧ | ಕೀಳು ಮನುಷ್ಯ |
| ಬನ್ನ | ೨೪೭—೫೭ | ಕಷ್ಟ, ಭಂಗ |
| ಬಯಲು ಮಾಡು | ೨೧೮—೪೧ | ಪ್ರತ್ಯಕ್ಷವಾಗಿ ತೋರಿಸು |
| ಬಲಗೊಳ್ | ೧೦೮—೩೩ | ಪ್ರದಕ್ಷಿಣೆ ಮಾಡು |
| ಬಲಿ | ೨೪೭—೬೦ | ಪೂಜೆ |
| ಬಲಿಹು | ೧೭೩—೨೪ | ಬಲವಂತ |
| ಬಲ್ಗಡಣೆ | ೨೬೪—೪೦ | ಗಣನೆ (ತ್ಸ) ದೊಡ್ಡ ಹರವು |
| ಬಲ್ಗಾರಿಕೆ | ೨೪೦— ೮ | ಶಕ್ತಿ |
| ಬಲ್ತೆರವು | ೨೮೯—೫ | ಹೆಚ್ಚು ಅವಕಾಶ |
| ಬಲ್ಲವಿಕೆ | ೩೧೪—೧೧ | ಜ್ಞಾನ |
| ಬಲ್ಲಿತು | ೧೪೯—೧೪ | ದೊಡ್ಡದು |
| ಬಲ್ವಿಡಿ | ೩೪೫—೨೪ | ಬಲವಾಗಿ ಹಿಡಿ |
| ಬವರ | ೩೯೭— ೮ | ಯುದ್ಧ |
| ಬವರಿ | ೧೩೮—೩೬ | ಭ್ರಮರ (ತ್ಸ) ದುಂಬಿ |
| ಬಸವಳಿ | ೩೮೧— ೮ | ಶಕ್ತಿಗುಂದು |
| ಬಳ್ಳೆ | ೯೪—೩೬ | ಅಳತೆಯ ಸಾಧನ |
| ಬಾಕುಳಿ | ೧೬೮—೭೭ | ಅತಿ ಆಸೆ |
| ಬಾದಳ | ೧೮೩—೩೭ | ಗವಾಕ್ಷಿ |
| ಬಾಯಳಿ | ೪೪೩—೫೨ | ಶಕ್ತಿಗುಂದು |

| | | |
|---|---|---|
| ಬಾಯ್ದೆರೆ | ೧೭೯—೧೦ | ತುಟಿ |
| ಬಾಲಾರ್ಕ | ೨೩೯— ೫ | ಬಾಲಸೂರ್ಯ |
| ಬಿಣ್ಣಿತು | ೩೬೫—೪೩ | ದೊಡ್ಡದು |
| ಬಿತ್ರಗ | ೨೦೭—೩೦ | ಜಾಣ |
| ಬಿನ್ನಣಿಸು | ೧೭೧— ೯ | ಜಾಣತನದಿಂದ ವರ್ಣಿಸು |
| ಬಿರುಬು | ೨೮೯— ೫ | ಆವೇಶ |
| ಬಿರ್ವಾಗಿ | ೪೪೪—೫೫ | ವಿಶೇಷವಾಗಿ |
| ಬುದ್ಧ | ೪೨೭— ೫ | ಜ್ಞಾನಿ |
| ಬೆಕ್ಕಸ | ೧೪೫—೨೬ | ಆಶ್ಚರ್ಯ |
| ಬೆಚ್ಚಂತೆ | ೧೬೩—೪೫ | ಬೆಸುಗೆ ಹಾಕಿದಂತೆ |
| ಬೆಟ್ಟಿಮಾಡದೆ | ೩೮೪—೩೩ | ಲಕ್ಷ್ಯಮಾಡದೆ |
| ಬೆರೆತುಕೊಳು | ೨೮೩— ೭ | ಗರ್ವಿಸು |
| ಬೆಲೆವೆಣ್ಣು | ೧೧೯—೪೫ | ವೇಶ್ಯೆ |
| ಬೆಸದವರು | ೨೬೩—೩೪ | ಕೆಲಸಗಾರರು, ಸೇವಕರು |
| ಬೆಸಗೊಳ್ | ೧೪೪—೧೯ | ಪ್ರಾರ್ಥಿಸು |
| ಬೆಸನ | ೩೨೨—೩೦ | ಕಾರ್ಯ |
| ಬೆಸಲಾದಳು | ೨೭೯—೪೧ | ಹೆತ್ತಳು |
| ಬೆಳ್ಪಾಗು | ೪೨೩—೧೬ | ಬೆಪ್ಪಾಗು |
| | ೧೬೬—೬೪ | |
| ಬೆಳ್ವೆಟ್ಟ | ೩೫೫—೧೨ | ಬೆಳ್ಳಿಯ ಬೆಟ್ಟ |
| ಬೆಳ್ಳಿಲೆ | ೧೭೬—೪೫ | ಬಿಳಿದಾದ ಎಲೆ |
| ಬೇಳುವೆ | ೧೬೬—೬೪ | ಮಂಕುಗೊಳಿಸುವ ಶಕ್ತಿ |
| ಬೋಳೈಸು | ೪೪೮—೨೬ | ಸಮಾಧಾನ ಮಾಡು, ಮುದ್ದಿಸು |
| ಬಂಟಮಾನಸ | ೩೪೩— ೯ | ದೂತ |
| ಬಂಬಳೆ | ೪೪೩—೪೯ | ಆಯಾಸ |
| ಬಾಂಬಟ್ಟೆ | ೩೦೧—೨೧ | ಆಕಾಶಮಾರ್ಗ |
| ಬಿಂಗ | ೧೩೮—೪೧ | ಬಂಗಾರ |
| ಬೆಂಚೆ | ೩೨೧—೨೪ | ಸಣ್ಣ ಸರೋವರ |

### ಭ

| | | |
|---|---|---|
| ಭಟ್ಟ | ೨೭೮—೩೧ | ಹೊಗಳುಭಟ್ಟ |
| ಭದ್ರ | ೨೫೧—೧೯ | ಮಂಗಳ |
| ಭರತ | ೯೪—೩೮ | ಅಲೆಯ ಶಬ್ದ |

| | | |
|---|---|---|
| ಭರ್ತೃ | ೧೯೧—೪೭ | ಸ್ವಾಮಿ |
| ಭವನಕೃತ್ಯ | ೧೬೩—೬೫ | ಮನೆಕೆಲಸ |
| ಭವಮಾಲೆ | ೪೩೯—೨೩ | ಜನ್ಮಾಂತರಗಳು |
| ಭವ್ಯಗಣ | ೪೪೭—೨೦ | ಶ್ರೇಷ್ಠರ ಸಮೂಹ |
| ಭಾನು | ೯೧—೧೯ | ಸೂರ್ಯ |
| ಭಿತ್ತಿ | ೩೬೮—೧೫ | ಗೋಡೆ |
| ಭಿನ್ನಕುಂತಳ | ೧೭೪—೩೪ | ಬೈತಲೆ |
| ಭುಕ್ತಿ | ೧೫೨—೩೭ | ಊಟ |
| ಭೂಚಕ್ರ | ೩೭೦—೨೮ | ಜಗತ್ತು, ಭೂಮಿ |
| ಭೂಧವ | ೨೧೧—೫೭ | ರಾಜ |
| ಭೂಭಾಗೇಂದ್ರ | ೨೦೫—೧೬ | ಭೂದೇವೇಂದ್ರ, ರಾಜ |
| ಭೂರಿ | ೨೪೩—೨೮ | ದೊಡ್ಡ |
| ಭೂವರಾವಳಿ | ೩೦೩— ೭ | ರಾಜಸಮೂಹ |
| ಭಂಗುರ | ೪೦೫— ೮ | ಕ್ಷಣಿಕವಾದ |
| ಭಂಜಿತ | ೩೯೩—೨೧ | ಸೋಲಿಸಲ್ಪಟ್ಟ |
| ಭಂಡು | ೧೬೫—೫೯ | ಗೇಲಿ |
| ಭೃಂಗ | ೩೯೧—೧೪ | ದುಂಬಿ |

## ಮ

| | | |
|---|---|---|
| ಮಕರಾಂಕ | ೧೯೪— ೯ | ಮೊಸಳೆಯ ಗುರುತುಳ್ಳವನು, ಮನ್ಮಥ |
| ಮಕುಟವರ್ಧನ | ೪೫೫— ೨ | ರಾಜ |
| ಮಜ್ಜನ | ೨೨೦— ೧ | ಸ್ನಾನ |
| ಮಡ | ೧೮೯—೩೦ | ಹಿಮ್ಮಡಿ |
| ಮಡಿ | ೨೬೮—೨೦ | ಬಗ್ಗಿಸು |
| ಮತಂಗರಿಪು | ೩೫೨—೨೦ | ಆನೆಯ ಶತ್ರು, ಸಿಂಹ |
| ಮತ್ತಾಳಿ | ೪೦೯—೩೮ | ಮದಿಸಿದ ದುಂಬಿ |
| ಮತ್ತೇಭ | ೪೫೮—೨೬ | ಮದಿಸಿದ ಆನೆ |
| ಮದಧಾರೆ | ೩೩೩—೧೬ | ಆನೆಯು ಮದಿಸಿದಾಗ ಪ್ರವಹಿಸುವ ರಸ |
| ಮದವಕ್ಕಳು | ೩೪೮—೩೫ | ಮದುವೆಯಾಗುವ ಮಕ್ಕಳು |
| ಮದಿಲು | ೪೫೯—೩೨ | ಕೋಟೆಯ ಗೋಡೆ |
| ಮಧುಮಾಸ | ೩೩೪—೨೩ | ವಸಂತಮಾಸ |
| ಮಧುವ್ರತ | ೯೭— ೩ | ದುಂಬಿ |
| ಮಯೂಖ | ೧೯೪—೧೨ | ಕಿರಣ |

| | | |
|---|---|---|
| ಮಲಯಜ | ೧೫೮—೮ | ಶ್ರೀಗಂಧ |
| ಮಲಹರಿ | ೨೨೧—೯ | ಸಂಗೀತದಲ್ಲಿ ಒಂದು ರಾಗ |
| ಮಲ್ಲಿಕಾ | ೧೨೮—೩೫ | ಮಲ್ಲಿಗೆ |
| ಮಲ್ಲಿಗೆಗೋಲ | ೩೭೩—೮ | ಮನ್ಮಥ |
| ಮಸ್ತಕ | ೨೦೯—೪೫ | ತಲೆ |
| ಮಾಗಾಯಿ | ೨೭೫—೮ | ಮಾವಿನಕಾಯಿ ಆಕಾರದ ಒಡವೆ |
| ಮಾಡ | ೨೬೫—೪೫ | ಉಪ್ಪರಿಗೆ |
| ಮಾತುಗುಟ್ಟು | ೩೮೩—೨೪ | ಹರಟೆ ಹೊಡಿ |
| ಮಾತುಳ | ೩೦೩—೧೧ | ಸೋದರಮಾವ, ತಾಯಿಯ ಸೋದರ |
| ಮಾರಾಂಕದಲ್ಲಣ | ೩೧೨—೧೬ | ಎದುರಾಳಿಯನ್ನು ನಡುಗಿಸುವವನು |
| ಮಾರ್ಕೊಂಡು | ೧೦೨—೩೭ | ಇದಿರಾಗಿ |
| ಮಾರ್ತಾಂಡ | ೨೩೯—೫ | ಸೂರ್ಯ |
| ಮಾಸಾಳು | ೨೮೪—೧೬ | ತಿಂಗಳು ಸಂಬಳದ ಸೇವಕ |
| ಮಿಸುನಿ | ೩೮೪—೩೪ | ಬಂಗಾರ |
| ಮೀಟಾಗಿ | ೪೯೬—೨೮ | ಅತಿಶಯವಾಗಿ |
| ಮೀನಾಂಕ | ೩೬೬—೫ | ಮನ್ಮಥ |
| ಮುಕ್ಕೊಡೆಯೊಡೆಯ | ೨೭೮—೨೯ | ಮೂರು ಕೊಡೆಗಳ ನಡುವೆ ಪ್ರಕಾಶಿಸುವವನು, ತೀರ್ಥಂಕರ |
| ಮುಕ್ತಾಂಶು | ೩೫೨—೧೯ | ಮುತ್ತಿನ ಕಾಂತಿ |
| ಮುಗುಳಂಬ | ೩೫೯—೩ | ಮನ್ಮಥ |
| ಮುದ್ರಿಕೆ | ೩೪೧—೯ | ಉಂಗುರ |
| ಮೂಗವಡು | ೩೭೯—೫೦ | ಮೂಕನಾಗು |
| ಮೂಡೆ | ೨೭೪—೩ | ಒರಗುದಿಂಬು |
| ಮೃದುಲ | ೩೯೬—೭ | ಮೃದುವಾದ |
| ಮೆರಹು | ೧೩೮—೩೬ | ಕಾಂತಿ |
| ಮೇಲ್ಗವಿ | ೩೬೧—೧೬ | ಮೇಲೆ ನುಗ್ಗು |
| ಮೈಗೊಂಡು | ೧೦೮—೩೧ | ನಮಸ್ಕರಿಸು |
| ಮೊಗ್ಗೆಗೋಲ | ೩೬೮—೧೭ | ಮನ್ಮಥ |
| ಮೊನೆದೋರು | ೩೧೨—೨ | ಯುದ್ಧಮಾಡು |
| ಮೋಡಿ | ೯೦—೯ | ಜಾಣತನ |
| ಮೋಹರ | ೨೭೭—೨೪ | ಸೈನ್ಯ |
| ಮೌಕ್ತಿಕ | ೨೮೬—೩೩ | ಮುತ್ತು |

| | | |
|---|---|---|
| ಮಂಗಲಯಾನ | ೩೩೯—೨೮ | ಶುಭಪ್ರಯಾಣ, ಮಂಗಳ ವಾಹನ |
| ಮಂಗಳಾಸನ | ೪೩೨—೨೦ | ಸಿಂಹಾಸನ |
| ಮಂಚಿದಿ | ೮೯— ೪ | ಒಳ್ಳೆಯದು |
| ಮಂಡಿತ | ೧೨೩— ೫ | ಅಲಂಕರಿಸಿದ |
| ಮಾಂದಳಿರು | ೨೨೪—೩೧ | ಮಾವಿನ ಚಿಗುರು |
| ಮಿಂಟಿ | ೩೯೨—೨೩ | ಆಯುಧ ವಿಶೇಷ |
| ಮೀಂಬುಳು | ೧೨೮—೩೭ | ಮಿಣುಕು ಹುಳು |
| ಮುಂಡಾಡು | ೧೮೧—೨೫ | ಮುದ್ದಾಡು |
| ಮುಂಡಾಸು | ೧೯೪— ೮ | ತಲೆಗೆ ಸುತ್ತುವ ರುಮಾಲು |
| ಮುಂಬಗಲು | ೩೪೨— ೫ | ಬೆಳಗ್ಗೆ |
| ಮುಂಬಟ್ಟೆ | ೩೭೫—೨೨ | ಮುಂದಿನ ಹಾದಿ |

ರ

| | | |
|---|---|---|
| ರಯ್ಯ | ೮೯— ೪ | ಮನೋಹರ |
| ರವ | ೧೯೪— ೭ | ಶಬ್ದ |
| ರಾಗ | ೧೧೨—೫೯ | ಪ್ರೀತಿ |
| ರಾಜಮಾರ್ತಾಂಡ | ೨೮೯— ೧ | ರಾಜರಲ್ಲಿ ಸೂರ್ಯನ ಸಮಾನ |
| ರಾಜಿ | ೩೦೧—೨೩ | ಶ್ರೇಣಿ, ಸಾಲು |
| ರಾಯಸ | ೬೪೫— ೫ | ಓಲೆ |
| ರಾಯಸದಂಬು | ೨೭೩—೫೪ | ಓಲೆಯನ್ನು ಕೊಂಡೊಯ್ಯುವ ಬಾಣ |
| ರುಜೆ | ೩೪೧—೩೨ | ರೋಗ |
| ರೂಹಿಸು | ೧೩೯—೪೨ | ರೂಢಿಸು |
| ರಿಂಚೆಯ | ೧೧೫—೨೦ | ವಾದ್ಯ ವಿಶೇಷ |

ಲ

| | | |
|---|---|---|
| ಲಗ್ಗೆ | ೨೫೫— ೯ | ಮುತ್ತಿಗೆ |
| ಲಹರಿ | ೩೧೬—೨೪ | ಪ್ರವಾಹ |
| ಲಾಗು | ೨೦೫—೧೬ | ಚಮತ್ಕಾರ |
| ಲಾಲಿತ | ೧೭೦— ೧ | ಆಟವಾಡಿಸಲ್ಪಟ್ಟ |
| ಲಾಸಿಕೆ | ೨೦೪—೧೦ | ಕುಣಿತ |
| ಲುಳಿ | ೪೪೧—೩೬ | ಆಭರಣ ವಿಶೇಷ, ಕಾಲರುಳಿ |
| ಲೋಗರು | ೩೧೫—೧೭ | ಸಾಮಾನ್ಯ ಮನುಷ್ಯರು |
| ಲೌಡಿ | ೨೪೮—೬೩ | ಲಗುಡಾ, ಆಯುಧ ವಿಶೇಷ |

## ವ

| | | |
|---|---|---|
| ವಕ್ರಿ | ೨೮೬—೩೪ | ಅಡ್ಡದಾರಿ ಹಿಡಿಯುವವ |
| ವಜ್ರಿ | ೪೬೬—೧೧ | ಇಂದ್ರ |
| ವರ್ಣಕ | ೮೯— ೬ | ಷಟ್ಪದಿ, ಸಾಂಗತ್ಯ ಇತ್ಯಾದಿ ದೇಶೀ ಕಾವ್ಯಗಳು |
| ವನಜಗಂಧಿನಿ | ೩೦೭—೩೯ | ಕಮಲದಂತೆ ಸುವಾಸನಾಯುಕ್ತಳು |
| ವನಧಿ | ೨೪೦— ೯ | ಸಮುದ್ರ |
| ವರೇಣ್ಯ | ೪೫೪—೧೪ | ಶ್ರೇಷ್ಠ |
| ವಲಯ | ೪೫೭—೧೮ | ಭಾಗ |
| ವಸುಮತಿ | ೩೧೯—೧೧ | ಭೂಮಿ |
| ವಸ್ತುಕ | ೮೯— ೬ | ಚಂಪೂ, ಕಾವ್ಯ |
| ವಾಗ್ಜಾಲ | ೧೪೩—೧೨ | ಮಾತುಗಳ ಸಮೂಹ |
| ವಾಜಿ | ೨೬೮—೧೯ | ಕುದುರೆ |
| ವಾಗ್ಮಧುರ | ೨೭೭—೨೨ | ಮಾತಿನ ಸವಿ |
| ವಾರಣ ಗಮನ | ೩೧೦— ೫ | ಆನೆಯ ನಡಿಗೆ |
| ವಾರಣ ವೈರಿ | ೨೪೧—೧೭ | ಆನೆಯ ವೈರಿ, ಸಿಂಹ |
| ವಾರಿಜ | ೨೩೫—೪೯ | ಕಮಲ |
| ವಾರ್ಧಿತಟ | ೨೭೩—೫೦ | ಸಮುದ್ರದ ದಡ |
| ವಾಹಿನಿ | ೩೨೮—೨೭ | ಸೈನ್ಯ |
| ವಿಕಳ | ೮೯— ೬ | ಮತಿಗೆಟ್ಟ |
| ವಿಕ್ರಾಂತಲಗ್ನ | ೨೪೮—೬೬ | ಸಿಂಹಲಗ್ನ |
| ವಿಗುರ್ವಣೆ | ೩೧೯—೧೦ | ಗೆಲ್ಲಲು ಅಸಾಧ್ಯ |
| ವಿಜಿತ | ೪೨೦—೨೮ | ಗೆದ್ದ |
| ವಿಡಾಯ | ೧೧೪— ೧ | ಶೌರ್ಯ |
| ವಿತ್ತ | ೨೮೫—೨೭ | ಹಣ |
| ವಿದ್ಧಿ | ೨೫೬—೧೬ | ಶಿಲ್ಪಿ |
| ವಿನ್ಯಾಸ | ೩೪೦— ೪ | ಹೊಂದಿಕೆ |
| ವಿಪ್ರ | ೩೪೨— ೨ | ಬ್ರಾಹ್ಮಣ |
| ವಿಭಾಡ | ೨೪೯— ೨ | ಭಂಗಿಸುವವನು |
| ವಿಭ್ರಾಜಿಪ | ೧೪೭—೧೪ | ಹೊಳೆವ |
| ವಿಭು | ೯೧—೧೬ | ಸ್ವಾಮಿ |
| ವಿಷ | ೩೨೦—೨೦ | ನೀರು |
| ವಿಷ್ಟರಾಧ್ಯ | ೩೫೨—೨೦ | ಸಿಂಹಾಸನವನ್ನು ಅಲಂಕರಿಸುವವನು |
| ವಿಸರ | ೩೧೨—೫೬ | ಸಮೂಹ |
| ವಿಹಗ (ವಿಹಂಗ) | ೧೩೯—೪೮ | ಪಕ್ಷಿ |
| ವೀಟಿಕಾ | ೧೫೮— ೮ | ವೀಳೆಯ |
| ವೀತರಾಗ | ೯೭— ೬ | ಆಶೆ ನೀಗಿದವನು |
| ವೃತ್ಯನುಮತ | ೨೫೦—೧೧ | ಅಭ್ಯಾಸಕ್ಕೆ ಯೋಗ್ಯವಾದ |
| ವೃಷ್ಟಿ | ೨೨೯—೧೨ | ಮಳೆ |

| | | |
|---|---|---|
| ವೆಗ್ಗಳಿಸು | ೧೬೯—೮೪ | ಹೆಚ್ಚಾಗು |
| ವೆಟ್ಟಿತಟ್ಟಿ | ೧೬೮—೭೮ | ಹೆಚ್ಚು ಕಡಿಮೆ |
| ವೇತ್ರಧಾರಿಣಿ | ೧೫೩—೪೭ | ಬೆತ್ತ ಹಿಡಿದವಳು |
| ವೇಧಿಸು | ೧೬೮—೮೨ | ಹೇಳು |
| ವೇದ್ಯ | ೯೫—೪೮ | ಗೊತ್ತಾದ |
| ವೈಶಿಕ | ೨೭೬—೨೨ | ವೇಶ್ಯೆಗೆ ಸಂಬಂಧಿಸಿದ |
| ವೈಹಾಳಿ | ೨೯೯— ೭ | ಕುದುರೆ ಸವಾರಿ |
| ವ್ಯಲೀಕ | ೩೧೩— ೪ | ಸುಳ್ಳು, ಮಾಡಬಾರದುದು |
| ವ್ಯಾಕುಲ | ೪೧೦—೪೫ | ವ್ಯಥೆ |
| ವ್ಯೋಮ | ೧೦೯—೩೯ | ಆಕಾಶ |
| ವೃಂದ | ೨೯೬—೩೨ | ಸಮೂಹ |
| ವ್ರಜ | ೩೦೦—೨೦ | ಸಮೂಹ |
| ವ್ರತಿಕೆ | ೨೩೧—೨೭ | ಜೈನ ಅಣುವ್ರತ ಸ್ವೀಕರಿಸಿದ ಹೆಣ್ಣು |
| | ಶ | |
| ಶರಧಿ (ಶರನಿಧಿ) | ೨೬೬— ೩ | ಸಮುದ್ರ |
| ಶಲಾಕೆ | ೪೬೯— ೨ | ಶ್ರೇಷ್ಠ ಮಂಗಲಸಂಧಿಯಲ್ಲಿ |
| ಶಶಿಕಾಂತ | ೩೩೨— ೭ | ಚಂದ್ರಕಾಂತ ಶಿಲೆ |
| ಶಾಲಿ | ೯೩—೨೮ | ಬತ್ತ |
| ಶಿಖರಿ | ೪೩೧—೧೩ | ಶಿಖರವುಳ್ಳದ್ದು, ಪರ್ವತ |
| ಶೀತಾಂಶು | ೪೨೯—೧೭ | ತಂಪು ಕಿರಣಗಳುಳ್ಳವನು, ಚಂದ್ರ |
| ಶುಕಾವಳಿ | ೨೧೪—೧೨ | ಗಿಳಿಗಳ ಸಮೂಹ |
| ಶೇಷಾನ್ನ | ೧೧೬—೧೫ | ಊಟಮಾಡಿ ಉಳಿದ ಅನ್ನ |
| ಶೈಲ | ೨೯೯— ೭ | ಬೆಟ್ಟ |
| | ಷ | |
| ಷೋಡಶ | ೪೩೦— ೧ | ಹದಿನಾರು |
| | ಸ | |
| ಸಘಾಟಿಕೆ | ೧೨೯—೪೪ | ಧೈರ್ಯ. ಹರಮಾರಿತನ |
| ಸಜ್ಜನಾರ್ಚಿತೆ | ೪೨೩—೧೩ | ಸಜ್ಜನರಿಂದ ಪೂಜಿಸಲ್ಪಡುವವಳು |
| ಸಟೆ | ೧೩೭—೬೦ | ಸುಳ್ಳು |
| ಸಡ್ಡಕ | ೩೯೧—೧೭ | ಹೆಂಡತಿಯ ಸೋದರಿಯ ಗಂಡ |
| ಸತ್ತಿಗೆ | ೩೬೨—೭೧ | ಛತ್ರಕಾ (ಸಂ), ಕೊಡೆ |
| ಸದನ | ೧೦೯—೪೦ | ಮನೆ |
| ಸದ್ಮ | ೨೧೭—೩೧ | ಮನೆ |
| ಸನಿಹ | ೧೨೫—೧೫ | ಹತ್ತಿರ |
| ಸಬಳ | ೨೪೮—೬೩ | ಕತ್ತಿ |
| ಸಬ್ಬವ | ೧೯೦—೩೫ | ಹಾಸ್ಯ ಹುಡುಗಾಟ |
| ಸಭಾವಾಸ | ೩೮೩—೨೭ | ಸಭಾಗೃಹ |
| ಸಯ್ಯಮ | ೪೯೯—೨೪ | ಮನೋನಿಗ್ರಹ |

| | | |
|---|---|---|
| ಸಯ್ಯರಿದು | ೫೯— ೫ | ಉಚಿತವರಿತು |
| ಸರಲು | ೧೩೯—೪೩ | ಬಾಣ |
| ಸರಿಗೆ | ೧೯೫—೧೫ | ಜರತಾರಿ |
| ಸಲ್ಲಲಿತ | ೨೮೩—೧೨ | ಮನೋಹರ |
| ಸಲ್ಲೆಹ | ೨೪೮—೬೩ | ಆಯುಧ ವಿಶೇಷ, ಶಲ್ಯ (ತ್ಸ) |
| ಸಾಕೇತಪುರ | ೨೫೯— ೧ | ಅಯೋಧ್ಯೆ |
| ಸಾಟಿ | ೧೩೯—೪೭ | ಸಮಾನ |
| ಸಾಮಜ | ೬೫೫—೧೧ | ಆನೆ |
| ಸಾಲಭಂಜಿಕೆ | ೧೨೩— ೪ | ಪ್ರತಿಮೆ |
| ಸಿಬ್ಬದಿಗೊಳು | ೧೧೬—೧೪ | ಕಳವಳಗೊಳ್ಳು |
| ಸಿಹಿವಿಲ್ಲ | ೩೮೨—೧೫ | ಮನ್ಮಥ |
| ಸುಗಿ | ೩೬೧—೧೭ | ಎಳೆ, ಹೊರತೆಗೆ |
| ಸುಗತ ನಿವಾಸ | ೧೩೪—೧೦ | ಜಿನ ದೇವಾಲಯ |
| ಸುತ್ರಾಮ | ೨೨೯—೧೦ | ಇಂದ್ರ |
| ಸುಧಾಂಗ | ೧೧೮—೨೮ | ಸುಣ್ಣ ಬಳಿದಿರುವುದು |
| ಸುಪ್ರಭೆ | ೪೬೧— ೪ | ಒಳ್ಳೆಯ ಕಾಂತಿ |
| ಸುಮ್ಮಾನ | ೧೬೫—೫೮ | ಸಂತೋಷ |
| ಸುರಗುರು | ೧೯೪—೧೧ | ಬೃಹಸ್ಪತಿ |
| ಸುರಪಶು | ೯೩—೩೩ | ಕಾಮಧೇನು |
| ಸುರಭಿ | ೨೭—೫೮ | ಕಾಮಧೇನು |
| ಸುರವೇತ್ರಧಾರರು | ೩೫೨—೧೫ | ದೇವಲೋಕದ ಹೊಗಳುಭಟ್ಟರು |
| ಸುರಸೋಪತಿ | ೪೫೩—೧೨ | ದೇವತೆಗಳಿಗೆ ತಕ್ಕ ಉಪಚಾರ |
| ಸುವರ್ಣಾದ್ರಿ | ೩೩೩—೧೬ | ಮೇರು ಪರ್ವತ |
| ಸೂನು | ೨೫೦— ೭ | ಮಗ |
| ಸೂಳೈಸು | ೨೬೧—೧೮ | ಶಬ್ದಮಾಡು |
| ಸೆಜ್ಜೆವನೆ | ೨೯೩— ೧ | ಮಲಗುವ ಮನೆ |
| ಸೆರೆ | ೨೭೨—೪೫ | ಹೆದರು |
| ಸೆಳೆವೆ | ೧೯೪— ೮ | ಕೋಲು (?) |
| ಸೇತುಗಟ್ಟಾಗಿ | ೩೩೧— ೩ | ಜೋಡಿಸು |
| ಸ್ಟೈವೆರಗಾಗಿ | ೨೫೨—೨೭ | ಅಶ್ಚರ್ಯಗೊಂಡು |
| ಸೋಟಿಗೆ | ೧೧೮—೩೩ | ಸೌಟು |
| ಸೊಪ್ಪು ಸೊಪ್ಪನೆ | ೧೯೭—೩೪ | ತಡೆದು ತಡೆದು |
| ಸೊಮ್ಮು | ೨೫೦—೧೦ | ಐಶ್ವರ್ಯ (ವಿವೇಕ ಜ್ಞಾನ) |
| ಸೊರಟ | ೪೨೧— ೧ | ಸೌರಾಷ್ಟ್ರ |
| ಸೋಹೆ | ೪೨೭— ೩ | ಜಾಡು, ಕ್ರಮ |
| ಸೌರಭಾನಿಲ | ೩೬೭—೧೨ | ಸುವಾಸನೆಯ ಗಾಳಿ |
| ಸಂಕುಲ | ೧೬೪—೧೮ | ಸಮೂಹ |
| ಸಂಕ್ರಮಿಸು | ೧೩೪— ೭ | ಸೇರು |

| | | |
|---|---|---|
| ಸಂಗ್ರಾಮ | ೩೨೫— ೩ | ಯುದ್ಧ |
| ಸಂಚಯಸಭೆ | ೨೯೩—೧೧ | ಒಟ್ಟು ಸೇರಿದ ಸಭೆ |
| ಸಂತಾನ ವಾಕ್ಯ | ೪೧೧—೫೫ | ಆಶೀರ್ವಚನ |
| ಸಾಂಬ್ರಾಣಿ | ೨೬೮—೧೮ | ಶ್ರೇಷ್ಠವಾದ ಕುದುರೆ, ಸುವಾಸನಾ ಸಾಮಗ್ರಿ |
| ಸಿಂಗಳ | ೯೬೧—೩೩ | ಸಿಂಹಳ |
| ಸಿಂಗಾಡಿ | ೩೨೩—೩೫ | ಬಿಲ್ಲು |
| ಸಿಂಧೂರ | ೩೪೫—೨೫ | ಆನೆ, ಕೆಂಪುಬಣ್ಣ |
| ಸ್ಮರಪುರ | ೩೭೨— ೪ | ಕೈಲಾಸ |
| ಸ್ಯಂದನ | ೨೬೧—೯೫ | ರಥ |
| ಸ್ವರ್ಗಸರಣಿ | ೧೧೬—೧೫ | ಸ್ವರ್ಗಕ್ಕೆ ಸಮಾನ |
| ಸ್ಪೃಹೆ | ೪೫೨— ೫ | ಆಸೆ |
| ಸ್ತೋಮ | ೨೮೦—೪೮ | ಗುಂಪು |
| | | **ಹ** |
| ಹಗರಣ | ೧೭೭—೫೨ | ಕ್ಷುಲ್ಲಕ ರಗಳೆ |
| ಹದನ | ೩೭೯—೫೦ | ವಿಚಾರ |
| ಹಮ್ಮೈಸು | ೪೨೪—೨೪ | ಮೈಮರೆ |
| ಹರಣ | ೨೧೬—೨೩ | ಪ್ರಾಣ |
| ಹರಿಗೆ | ೩೬೧—೧೮ | ಫಲಕಾ (ತ್ಸ), ಹಲಗೆ |
| ಹರುವ | ೨೬೨—೩೬ | ದಾರಿ, ರೀತಿ |
| ಹರೆದುಪ್ಪ | ೨೨೫—೩೭ | ಹೆತ್ತ ತುಪ್ಪ |
| ಹವಣಿಸು | ೨೪೦—೧೧ | ಸಿದ್ಧಗೊಳಿಸು |
| ಹಳಹಳಚು | ೧೮೬— ೮ | ಫಳ ಫಳ ಹೊಳೆ |
| ಹಾರು | ೧೦೬—೧೭ | ನಿರೀಕ್ಷಿಸು, ನೋಡು |
| ಹಾರುವ | ೯೩—೩೩ | ಬ್ರಾಹ್ಮಣ |
| ಹಾವುಗೆ | ೯೧—೨೦ | ಪಾದುಕ (ತ್ಸ) |
| ಹಿಕ್ಕು | ೧೫೩—೪೫ | ಬೆದಕು, ಹುಡುಕು |
| ಹೂಣಿದ | ೧೪೭— ೪ | ಹೊತ್ತ |
| ಹೂಣಿಸು | ೨೮೪—೧೭ | ಪ್ರತಿಜ್ಞೆಮಾಡಿಸು |
| ಹೆಗ್ಗಾರ | ೨೬೮—೯೭ | ಭರದ್ವಾಜಪಕ್ಷಿ |
| ಹೆದ್ದೊರೆ | ೩೨೧—೨೪ | ನದಿ |
| ಹೆಮ್ಮಗ | ೪೦೬—೧೭ | ಹಿರಿಯ ಮಗ |
| ಹೆರೆ | ೨೨೦— ೩ | ಪೆರೆ, ಚಂದ್ರ |
| ಹೇಮ | ೯೧—೯೫ | ಚಿನ್ನ |
| ಹೊಗರು | ೪೪೧—೩೪ | ಕಾಂತಿ |
| ಹೊತ್ತಗೆ | ೧೩೬—೨೧ | ಪುಸ್ತಕ |
| ಹೊನ್ನೊರೆ | ೯೨—೨೧ | ಬಂಗಾರದಿಂದ ಮಾಡಿದ ಕತ್ತಿಯ ಚೀಲ |